# ಇತಿಹಾಸ ದರ್ಶನ

ಸಂಪುಟ ೬/೧೯೯೧






ಕರ್ನಾಟಕ ಇತಿಹಾಸ ಅಕಾದೆಮಿ (ರಿ) ಬೆಂಗಳೂರು

# ಇತಿಹಾಸ ದರ್ಶನ

ಸಂಪುಟ ೬/೧೯೯೧






೧೯೯೦ರಲ್ಲಿ ದಾವಣಗೆರೆಯಲ್ಲಿ ಸಮಾವೇಶಗೊಂಡ ಅಕಾದೆಮಿಯ
ನಾಲ್ಕನೆಯ ವಾರ್ಷಿಕ ಸಮ್ಮೇಳನದಲ್ಲಿ ಸಾದರಪಡಿಸಿದ ಪ್ರಬಂಧಗಳ ಸಂಪುಟ

ಸಂಪಾದಕರು

ಡಾ|| ಸೂರ್ಯನಾಥ ಕಾಮತ್
ದೇವರ ಕೊಂಡಾರೆಡ್ಡಿ
ಎಸ್. ಎ. ಜಗನ್ನಾಥ್




ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು

ITIHASA DARSHANA
Proceedings of the Fourth Annual
Conference of the Karnataka Itihasa
Academy (Regd.) held at Davanagere
on July 21 & 22, 1990

Volume 6, 1991

Edited by Dr. Suryanath Kamath
Devara Konda Reddy & S. A. Jagannath
Published by Karnataka Itihasa Academy (Regd.)
'Ranganatha Nilaya' No. 13, (Old No. 4)
15th Cross, New Temple Road
Malleswaram, Bangalore-560 003



ರೂ. 100-00 (ನೂರು ರೂಪಾಯಿಗಳು)

ಲಕ್ಷ್ಮಿ ಮುದ್ರಣಾಲಯ
ಸಂಖ್ಯೆ ೧೧೭, ೫ನೇ ಮುಖ್ಯರಸ್ತೆ, ೬ನೇ ತಿರುವು
ಚಾಮರಾಜಪೇಟೆ, ಬೆಂಗಳೂರು ೫೬೦ ೦೧೮
ದೂರವಾಣಿ : ೬೨೭೬೪೫




# ಸಂಪಾದಕೀಯ

'ಇತಿಹಾಸ ದರ್ಶನ'ದ ಆರನೆಯ ಸಂಪುಟವನ್ನು ಓದುಗರ ಕೈಗಿಡಲು ಸಂತಸಪಡುತ್ತಿದ್ದೇವೆ. ದಾವಣಗೆರೆಯಲ್ಲಿ ಪೂಜ್ಯಶ್ರೀ ಸದ್ಯೋಜ್ಯಾತ ಶಿವಾಚಾರ್ಯ ಮಹಾಸ್ವಾಮಿಗಳವರ ಮುಂದಾಳ್ತನದಲ್ಲಿ ೧೯೯೦ರಲ್ಲಿ ನಡೆದ ಉತ್ಸಾಹಪೂರ್ಣವಾದ ಸಮ್ಮೇಳನದಲ್ಲಿ ಮಂಡಿಸಲಾದ ೬೦ಕ್ಕೂ ಮೀರಿದ ಪ್ರಬಂಧಗಳಲ್ಲಿ ೫೦ಕ್ಕೂ ಮೇಲ್ಪಟ್ಟ ಪ್ರಬಂಧಗಳು ಇಲ್ಲಿ ಪ್ರಕಟವಾಗಿವೆ. ಕಳೆದ ವರ್ಷ 'ಇತಿಹಾಸ ದರ್ಶನ'ವನ್ನು ಏಕಾಂಗ ವೀರರಂತೆ ಸಂಪಾದಿಸಲು ಶ್ರಮಿಸಿದ ಶ್ರೀ ಲಕ್ಷ್ಮಣ್ ತೆಲಗಾವಿ ಈ ಬಾರಿ ಸಂಪಾದಕ ಮಂಡಳಿಯಲ್ಲಿ ಇಲ್ಲ. ಶ್ರೀ ಟಿ. ಜಿ. ನರಸಿಂಹಮೂರ್ತಿ ಈ ಬಾರಿ ಕೆಲವು ಬಾರಿ ಕರಡುತಿದ್ದಲು ನೆರವಾಗಿದ್ದಾರೆ. ಚಿತ್ರಗಳ ವಿನ್ಯಾಸ ರಚನೆಗೆ ಕಲಾವಿದ ಶ್ರೀ ಅ. ಲ. ನರಸಿಂಹನ್ ಸಹಕರಿಸಿದ್ದಾರೆ. ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್‌ಕುಮಾರ್ ಮತ್ತು ಸಿಬ್ಬಂದಿ ಉತ್ಸಾಹದಿಂದ ಸಹಕರಿಸಿದ್ದಾರೆ. ಇವರಿಗೆಲ್ಲ ನಮನಗಳು.

ಇತಿಹಾಸ ಅಕಾದೆಮಿ ತನ್ನ ಚಟುವಟಿಕೆಗಳನ್ನು ವಿಸ್ತರಿಸಿದೆ. ಕರ್ನಾಟಕ ಪ್ರಶಸ್ತಿ ಪರೀಕ್ಷೆಗೆ ಈ ವರ್ಷ ಹಾಜರಾದವರ ಸಂಖ್ಯೆ ಐದು ಸಾವಿರವನ್ನು ಸಮೀಪಿಸಿದೆ. ಡಾ|| ಎಂ. ಎಚ್. ಕೃಷ್ಣ ಅವರ ಶತಮಾನೋತ್ಸವ ಆಚರಣೆಗೆ ಅಕಾದೆಮಿ ಪ್ರೇರಣೆ ನೀಡಿದೆ. 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮ ಎಲ್ಲೆಡೆ ಮೆಚ್ಚುಗೆ ಪಡೆದಿದೆ. ಈ ಬಾರಿ ಆಗಸ್ಟ್ ೧೬ರಿಂದ ಒಂದು ವಾರ ಆ ಕಾರ್ಯಕ್ರಮ ನಡೆಸಬೇಕೆಂದಿದ್ದೇವೆ. ಡಾ|| ಚೂಡಾಮಣಿ ನಂದಗೋಪಾಲ್ ಅವರ ಅಧ್ಯಕ್ಷತೆಯ ಬೆಂಗಳೂರು ನಗರ ಸಮಿತಿ ಡಾ|| ಎಂ. ಎಚ್. ಕೃಷ್ಣ ಅವರ ಬಗ್ಗೆ ವಿಚಾರ ಸಂಕಿರಣ ನಡೆಸಿ, ಹಂಪೆ ಮತ್ತು ಇತರ ಐತಿಹಾಸಿಕ ಸ್ಥಳಗಳಿಗೆ ಶೈಕ್ಷಣಿಕ ಪ್ರವಾಸ ಏರ್ಪಡಿಸಿ, ಉಪಯುಕ್ತ ಕಾರ್ಯ ಮಾಡಿದೆ. ಚಿತ್ರದುರ್ಗದ ಶ್ರೀ ಬೃಹನ್ಮಠದ ಮಹಾಸ್ವಾಮಿಗಳವರ ಆಶ್ರಯದಲ್ಲಿ ನಡೆದ ಐದನೆಯ ವಾರ್ಷಿಕ ಸಮ್ಮೇಳನವಂತೂ ಸಕಲ ವಿಧದಲ್ಲೂ ಉತ್ಸಾಹದಾಯಕವಾಗಿರುವುದರ ಜೊತೆಗೆ ೭೦ಕ್ಕೂ ಮೀರಿದ ಪ್ರಬಂಧಗಳ ಮಂಡನೆಯಿಂದ ದಾಖಲೆ ಸ್ಥಾಪಿಸಿತು. ಅಕಾದೆಮಿ ತನ್ನ ಅಸ್ತಿತ್ವವನ್ನು ಸಾರ್ಥಕಗೊಳಿಸುತ್ತದೆಯೆಂದು ನಿಮಗೆಲ್ಲ ಹೆಮ್ಮೆಯಾಗಿಲ್ಲವೆ ?

ಬೆಂಗಳೂರು

ಸೂರ್ಯನಾಥ ಕಾಮತ್
ದೇವರಕೊಂಡಾರೆಡ್ಡಿ
ಎಸ್. ಎ. ಜಗನ್ನಾಥ

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

ಬೆಂಗಳೂರು

## ಕಾರ್ಯಕಾರಿ ಸಮಿತಿ

(ದಿನಾಂಕ ೨೨ ಜುಲೈ ೧೯೯೦ ರಲ್ಲಿದ್ದಂತೆ)

ಡಾ॥ ಜಿ. ಎಸ್. ದೀಕ್ಷಿತ್, ಬೆಂಗಳೂರು
ಅಧ್ಯಕ್ಷರು

ಡಾ॥ ಸದ್ಯೋಜಾತ ಶಿವಾಚಾರ್ಯ ಸ್ವಾಮಿಗಳು, ದಾವಣಗೆರೆ
ಡಾ॥ ಎ. ವಿ. ನರಸಿಂಹಮೂರ್ತಿ, ಮೈಸೂರು
ಉಪಾಧ್ಯಕ್ಷರುಗಳು

ಎಚ್. ಎಸ್. ಗೋಪಾಲರಾವ್, ಬೆಂಗಳೂರು
ಪ್ರಧಾನ ಕಾರ್ಯದರ್ಶಿ

ಡಾ॥ ಅ. ಸುಂದರ, ಧಾರವಾಡ
ಕೆ. ಎನ್. ಹಿರಣ್ಣಯ್ಯ, ಬೆಂಗಳೂರು
ಕಾರ್ಯದರ್ಶಿಗಳು

ಎಂ. ಬಿ. ಪಾಟೀಲ, ಬೆಂಗಳೂರು
ಕೋಶಾಧ್ಯಕ್ಷರು

ಡಾ॥ ಸೂರ್ಯನಾಥ ಕಾಮತ್, ಬೆಂಗಳೂರು
ಡಾ॥ ರಾಜಾರಾಮ ಹೆಗಡೆ, ಶಿವಮೊಗ್ಗ
ಡಾ॥ ಎಂ. ವಿ. ಕೃಷ್ಣಪ್ಪ, ಮೈಸೂರು
ಡಾ॥ ಆರ್. ಎಂ. ಷಡಕ್ಷರಯ್ಯ, ಧಾರವಾಡ
ಡಾ॥ ಬಿ. ವಸಂತಶೆಟ್ಟಿ, ಬ್ರಹ್ಮಾವರ
ಪ್ರೊ॥ ಜಿ. ಎಂ. ಶ್ರೀನಿವಾಸಯ್ಯ, ತುಮಕೂರು
ಬಿ. ರಾಜಶೇಖರಪ್ಪ, ಚಿತ್ರದುರ್ಗ
ಸಿ. ಎಸ್. ಶ್ಯಾಮಲಾಂಬಿಕಾ, ದಾವಣಗೆರೆ
ಕೆ. ಎಚ್. ಎಂ. ವಿಜಯಕುಮಾರ್, ಕೂಡ್ಲಿಗಿ
ಪ್ರೊ॥ ಸಿ. ವಿ. ಮಠದ್, ಬೆಳಗಾವಿ
ಲಕ್ಷ್ಮಣ್ ತೆಲಗಾವಿ, ಬೆಂಗಳೂರು
ಎಂ. ಜಿ. ನಾಗರಾಜ್, ಬೆಂಗಳೂರು
ಪ್ರೊ॥ ಕೆ. ಅಭಿಶಂಕರ್, ಬೆಂಗಳೂರು
ಪ್ರೊ॥ ವಸಂತ ಕುಷ್ಟಗಿ, ಗುಲ್ಬರ್ಗ
ಪರ್ವೀನ್ ರುಕ್ಸಾನಾ, ಗುಲಬರ್ಗ
ಡಾ॥ ಕೆ. ಶ್ರೀನಿವಾಸ ಹಾವನೂರ್, ಪುಣೆ
ಸದಸ್ಯರು



ಡಾ॥ ಎಸ್. ಆರ್. ರಾವ್ ಅವರು

ಕರ್ನಾಟಕ ಇತಿಹಾಸ ಅಕಾದೆಮಿಯ ನಾಲ್ಕನೆಯ ಅಧಿವೇಶನದ ಅಧ್ಯಕ್ಷರು

(ಚಿತ್ರ: ಶ್ರೀ ಕೆ. ಎಲ್. ರಾಜಶೇಖರ್)



ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಮಲ್ಲಿಕಾರ್ಜುನ
ಮುರುಘರಾಜೇಂದ್ರ ಮಹಾಸ್ವಾಮಿಗಳು

ಶ್ರೀ ಬೃಹನ್ಮಠ, ಚಿತ್ರದುರ್ಗ

(ಚಿತ್ರ : ಕೆ. ಎಲ್. ರಾಜಶೇಖರ್)



ಡಾ॥ ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ
ಹಿರೇಮಠ, ದಾವಣಗರೆ



ಸಮ್ಮೇಳನಾಧ್ಯಕ್ಷರ ಮೆರವಣಿಗೆ



ಸನ್ಮಾನ್ಯ ಶ್ರೀ ಎಸ್. ನಿಜಲಿಂಗಪ್ಪ ಅವರಿಂದ ಸಮ್ಮೇಳನದ ಉದ್ಘಾಟನೆ



ಶ್ರೀ ಶಾಮನೂರು ಶಿವಶಂಕರಪ್ಪ ಅವರಿಂದ
'ಇತಿಹಾಸ ದರ್ಶನ' ಸಂಪುಟ ೬ರ ಬಿಡುಗಡೆ



‘ಐತಿಹಾಸಿಕ ಪರಂಪರೆ ಉಳಿಸಿ’

ಕಾರ್ಯಕ್ರಮದ ವಾಚನ: ಡಾ|| ಸೂರ್ಯನಾಥ ಕಾಮತರಿಂದ



ಸರ್ವಸದಸ್ಯರ ವಾರ್ಷಿಕ ಸಭೆಯಲ್ಲಿ ಅಕಾದೆಮಿಯ ಕಾರ್ಯದರ್ಶಿಗಳಿಂದ ವರದಿ ವಾಚನ:



[illegible] ಭಾಷಣ ಮಾಡುತ್ತಿರುವುದು

ಪಕ್ಷಿಯನ್ನು ಹೋಲುವ ಮಾನವ ಶಿಲ್ಪ : ತಮಿಳುನಾಡಿನ ಮೊಟ್ಟೂರು



ಬನವಾಸಿಯಲ್ಲಿ ದೊರೆತ ಶಾತವಾಹನರ ನೆಲೆಯಲ್ಲಿ
ಕಂಡುಬಂದ ಕೆಲವು ಪ್ರಾಚ್ಯಾವಶೇಷಗಳು





ಬನವಾಸಿಯಲ್ಲಿ ಪತ್ತೆಯಾದ ರೋಮನ್ ಕ್ಯಾಮಿಯೋ



ಗುಂಡಬಾಳ, ತೀರ್ಥಂಕರ ವಿಗ್ರಹ



ಜೈನ ಶಾಸನಗಳು ಮತ್ತು ಪಾದಗಳು ಗುಡಿಬಂಡೆ



ಜೈನ ಶಾಸನಗಳ ಮಧ್ಯೆ ಇರುವ ಮಂಟಪ ಗುಡಿಬಂಡೆ, ಕೋಲಾರ ಜಿಲ್ಲೆ





ಬೇಲೂರಿನ ದೇವಾಲಯದ ಯಕ್ಷ–ಯಕ್ಷಿ ಭಿತ್ತಿಶಿಲ್ಪ
















ಹೊಯ್ಸಳರ ಕಾಲದ ಸಂಚಾರ ಮಾಧ್ಯಮ








೧. ಶಿಗ್ಗಾವಿ ಕೆರೆಯ ಹತ್ತಿರ ರಸ್ತೆ ಪಕ್ಕದಲ್ಲಿ ಕಂಡುಬಂದ
ಇಟ್ಟಿಗೆಯ ಗೋಡೆಯ ಅವಶೇಷ



೨. ಸಾತೇನಹಳ್ಳಿ ಈಶ್ವರನ ಗುಡಿ



೩. ಸಾತೇನಹಳ್ಳಿ ಈಶ್ವರನ ಗುಡಿ
ಹಿಂಭಾಗದ ಇಟ್ಟಿಗೆ ಗೋಡೆ



೪. ಸಾತೇನಹಳ್ಳಿ ಈಶ್ವರನ ಗುಡಿ ಮುಂಭಾಗ



೫. ಸಾತೇನಹಳ್ಳಿ ಈಶ್ವರನ ಗುಡಿ ಶಿವಲಿಂಗ



೬. ಸಾತೇನಹಳ್ಳಿ ಈಶ್ವರನ ಗುಡಿ
ಸಭಾಮಂಟಪದ ಕಂಬ



೭. ಸಾತೇನಹಳ್ಳಿ ಈಶ್ವರನ ಗುಡಿ ನಂದಿಮಂಟಪ



೮. ಹುಲಗೂರು ಶಿವದೇವಾಲಯದ ಅವಶೇಷ



೯. ಹುಲಗೂರು ಶಿವಲಿಂಗ, ತಳಪಾಯ ಅವಶೇಷಗಳು



೧೦. ಹುಲಗೂರು ಪ್ರನಾಳ ಮತ್ತು ಇಟ್ಟಿಗೆಗೋಡೆ



೧೧. ಬನ್ನಿಯೂರು ಪಾಂಡವರ ಗುಡಿ ಮುಂದಿನ ಮಂಟಪ



೧೨. ಬನ್ನಿಯೂರು ಇಟ್ಟಿಗೆಯ ಭೀಮೇಶ್ವರನ ಗುಡಿ



೧೩. ಬನ್ನಿಯೂರು ಇಟ್ಟಿಗೆಯ ಗೋಡೆ



ಮೈಸೂರರಸರ ಕಾಲದ ಶಾರದಾ ಚಿತ್ರ



ಸಾಲಿಗ್ರಾಮ ಬಸ್ತಿಯ ಶಾರದಾ



ಶೃಂಗೇರಿ ಶಾರದಾಂಬಾ



ಬೆಂಗಳೂರು ಗವೀಪುರದ ೩೨ ಕೈಗಳ ವೀರಭದ್ರ



ಬಾದಾಮಿಯಲ್ಲಿನ ವೀರಭದ್ರ ಮೂರ್ತಿ



ಹಂಪಿಯ ವೀರಭದ್ರ

ನವ ವೃಂದಾವನ, ಆನೇಗೊಂದಿ (ಚಿತ್ರ. ಎ.ಎಲ್. ನರಸಿಂಹನ್.

ಚಾಡ್ಲುವಿನ ಹರಿಸೇವೆಕಟ್ಟೆ - ಇನ್ನೊಂದು ನೋಟ

ಚಾಡ್ಲುವಿನ ಹರಿಸೇವೆ ಕಟ್ಟೆ (ವೀರಗಲ್‌ಕಟ್ಟೆ) ಚೌಡ್ಲು



ಪಂಚಮಲಕಪ್ಪನ ಬಾವಿ



ಗೋವರ್ಧನಗಿರಿಯಲ್ಲಿನ ಕಾಳಿ
ಗುಡಿಯಲ್ಲಿರುವ ಕಾಳಿ ರುಂಡ



ಚಿಗಟೇರಿ ಶಿವನಪ್ಪನಾಯಕನ ಬಾವಿ



ಉಚ್ಚಂಗಮ್ಮನ ದೇವಾಲಯದಲ್ಲಿರುವ ಗಂಟೆ

1



2



3



4



5



6



ಭಿತ್ತಿಚಿತ್ರಗಳಲ್ಲಿ ಐತಿಹಾಸಿಕ ವ್ಯಕ್ತಿಗಳು

ಸುರಾಪಾನನಿಷೇಧಾರ್ಥ

# ಚಿತ್ರಬೋಧ

೧ನೇ ಭಾಗ.

೧ನೇ ಆವೃತ್ತಿ.

ಸುರಾಪಾನ ನಿಷೇಧಕ ಸಂಸ್ಥೆ, ಧಾರವಾಡ.




## ಮದ್ಯಪಾನ ನಿಷೇಧಕಸಂಸ್ಥೆ ಧಾರವಾಡ.

ದಿನದಿನಕ್ಕೆ ಹೆಚ್ಚುತ್ತಿರುವ ಈ ಮದ್ಯಪಾನ ವ್ಯಸನದಿಂದ ದೇಶದ ಹಾನಿಯು ಎಷ್ಟು ಆಗುತ್ತ ನಡೆದದೆಂಬದು ಸುಜ್ಞವಾಚಕರಿಗೆ ಚನ್ನಾಗಿ ತಿಳಿದು ಹೋಗಿದೆ.

ಈ ಸಂಸ್ಥೆಯು ಈ ಸ್ಥಿತಿಯು ಸುಧಾರಿಸಬೇಕೆಂದು ಊರೂರಿಗೆ ಸಭೆಗಳನ್ನು ಸ್ಥಾಪಿಸಿ ಅವುಗಳ ದ್ವಾರದಿಂದ ಉಪದೇಶ ಮಾಡಿ ಶರೆ ಕುಡಿಯುವದನ್ನು ಬಂದು ಮಾಡುವ ಉಪಾಯ ನಡೆಸಿರುತ್ತದೆ

ಈ ಚಿತ್ರಬೋಧವನ್ನು ಮೇಲಿನ ಸಂಸ್ಥೆಯವರು ಪ್ರಸಿದ್ಧ ಮಾಡಿರುತ್ತಾರೆ. ಈ ಭಾಗದಲ್ಲಿ ಕನಿಷ್ಠ ವರ್ಗದವರ ಸ್ಥಿತಿಯನ್ನು ತೋರಿಸಿರುತ್ತದೆ. ಎರಡನೇ ಭಾಗದಲ್ಲಿ ಶ್ರೇಷ್ಠ ವರ್ಗದವರ ಸ್ಥಿತಿಯನ್ನು ತೋರಿಸುವ ವಿಚಾರವದೆ.

ಈ ಪುಸ್ತಕವನ್ನು ಊರೂರಿಗೆ ಪುಕಟವಾಗಿ ಹಂಚುವದಕ್ಕೆ ಮುದ್ರಿಸಿರುತ್ತದೆ. ಇಂಥ ಪುಸ್ತಕಗಳನ್ನು ಹೆಚ್ಚಿಗೆ ಛಾಪಿಸಿ, ಅವನ್ನು ಪುಕಟವಾಗಿ ಹಂಚುವದು ಹಣದ ಕೆಲಸವಿರುತ್ತದೆ. ಆದದರಿಂದ ದ್ರವ್ಯದ್ವಾರದಿಂದ ಸಹಾಯ ಮಾಡಬೇಕೆಂದು ಈ ಸಂಸ್ಥೆಯವರು ಎಲ್ಲ ಜನರಿಗೆ ಬೇಡಿಕೊಳ್ಳುತ್ತಾರೆ.

ಅಂಚೆವೆಚ್ಚಕ್ಕಾಗಿ ಅರ್ಧ ಆಣೆಯನ್ನು ಕಳಿಸಿದರೆ ಒಂದು ಪ್ರತಿಯನ್ನು ಪುಕಟವಾಗಿ ಕೊಡುವೆವು. ಹೆಚ್ಚಿಗೆ ಪ್ರತಿಗಳು ಬೇಕಾದರೆ ಬಳ್ಳಿಗೊಂದು ಪ್ರತಿಯು ಸಿಗುವದು. ಅಂಚೆವೆಚ್ಚ ಬೇರೆ.

ಪತ್ರವ್ಯವಹಾರವನ್ನು- ಟಿ. ಕೆ. ಪಿತ್ರೆ ವಕೀಲ, ಧಾರವಾಡ ಇವರ ಕೂಡ ಮಾಡಬೇಕು.



ಶ್ರೀ ಕರ್ನಾಟಕ ಪ್ರಿಂಟಿಂಗ ಪ್ರೆಸ, ಗಿರಗಾಂವ ಬೆಕರೋಡ, ಮುಂಬಯಿ.

ಧಾರವಾಡದ ಸುರಾಪಾನ ನಿಷೇದ ಸಂಸ್ಥೆ ಪ್ರಕಟಿಸಿದ ಚಿತ್ರಬೋಧ



ಲಾಲ್‌ಬಾಗ್ ಗಾಜಿನಮನೆ– ಬೆಂಗಳೂರು.



ಜೋಸೆಫ್ ಪ್ಯಾಕ್ಸ್‌ಟನ್ ಕ್ರಿಸ್ಟಲ್ ಪ್ಯಾಲೇಸ್– ಲಂಡನ್ (ಚಿತ್ರ ಎ. ಎಲ್. ನರಸಿಂಹನ್)



೧. ಚಿತ್ರದುರ್ಗ ಕೋಟೆಯ ಪಶ್ಚಿಮದಿಕ್ಕಿನಲ್ಲಿರುವ 'ವನಕೆಕಿಂಡಿ' ಬಾಗಿಲು (ಹಿಮ್ಮುಖ)



೨. 'ವನಕೆಕಿಂಡಿ' ಬಾಗಿಲು ಸುತ್ತಿನ ಕೋಟೆ ಮತ್ತು 'ಓಬವ್ವನಕಿಂಡಿ'ಯೆಂದು ಕರೆಯಲಾದ ಕಲ್ಲುಪೊಟರೆಯಿರುವ ಎಡೆ (ವೃತ್ತದಲ್ಲಿ)



೩. 'ಓಬವ್ವನಕಿಂಡಿ'ಯೆನಿಸಿಕೊಂಡ ಕಲ್ಲುಪೊಟರೆಯ ಸಮೀಪ ನೋಟ



೪. ಮೂಲದಲ್ಲಿ ಶ್ರೀ ಲಕ್ಷ್ಮೀನರಸಿಂಹನ ನೆಲೆಯಾಗಿದ್ದಿತೆಂದು ಗುರುತಿಸಲಾದ ಈಗಿನ ತುಂಗಭದ್ರೇಶ್ವರ ದೇವಾಲಯ (ಚಿತ್ರದಲ್ಲಿ : ಎ.ಡಿ. ನರಸಿಂಹಯ್ಯ ಮತ್ತು ಲ. ನಾಗರಾಜ ಹೊಯ್ಸಳ)



೬. ಓಬವ್ವೆಯು ಸಾಹಸ ತೋರಿದ ಎಡೆಯೆಂ
ಈಗ ನಿರ್ಧರಿಸಲ್ಪಟ್ಟಿರು
ದಿಡ್ಡಿಬಾಗಿಲಿನ ಸಮೀಪ ನೋ

೫. 'ವನಕೆಕಿಂಡಿ' ಬಾಗಿಲು ಮತ್ತು ಸಿಹಿನೀರಿನ ಹೊಂಡದ ಬಾಗಿಲು ಸುತ್ತಿನ ಕೋಟೆಯಲ್ಲಿ ಅಳವಡಿಸಲಾಗಿರುವ ದಿಡ್ಡಿಬಾಗಿಲು (ಮೇಲಿನ ವೃತ್ತ) ಕುಮಾರ ಹೊರಕೆನಾಯಕನ ಕಾವಲು ಗವಿ (ಕೆಳಗಿನ ವೃತ್ತ) ಮತ್ತು ಕಂದಕದ ಬುರುಜು

# ಪರಿವಿಡಿ

# ಜಟಿಂಗರಾಮೇಶ್ವರದಲ್ಲಿಯ ಪ್ರಾಗೈತಿಹಾಸಿಕ ಪುರಾತತ್ವ ಅವಶೇಷಗಳು ಮತ್ತು ಐತಿಹ್ಯ: ಒಂದು ವಿವೇಚನೆ

ಡಾ॥ ಅ. ಸುಂದರ

ಜಟಿಂಗರಾಮೇಶ್ವರವು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ಒಂದು ಸಣ್ಣ ಹಳ್ಳಿ. ೧೮೯೨ರಲ್ಲಿ ಬಿ.ಎಲ್. ರೈಸ್ ಮತ್ತು ಅವರ ಸಹೋದ್ಯೋಗಿಗಳು ಇಲ್ಲಿ ಮತ್ತು ಇಲ್ಲಿಗೆ ಸುಮಾರು ೫ ಕಿ.ಮೀ. ದೂರದಲ್ಲಿಯ ಬ್ರಹ್ಮಗಿರಿ ಮತ್ತು ಸಿದ್ದಾಪುರದಲ್ಲಿ ಮೌರ್ಯ ಚಕ್ರವರ್ತಿ ಅಶೋಕ (ಸು.ಕ್ರಿ.ಪೂ. ೨೭೩-೨೩೪)ನ ಒಂದು ಮತ್ತು ಎರಡನೇ ಬಂಡೆಗಲ್ಲು ಚಿಕ್ಕ ಶಾಸನಗಳನ್ನು ಶೋಧಿಸಿದರು. ಇವರು ೧೯೦೩ರಲ್ಲಿ ಪ್ರಕಟಿಸಿದ 'ಎಪಿಗ್ರಾಫಿಯಾ ಕರ್ನಾಟಿಕ' ೧೧ನೇ ಸಂಪುಟದಲ್ಲಿ ಇವುಗಳನ್ನು ಸಂಪಾದಿಸಿದ್ದಾರೆ.

೧೯೩೦ರಲ್ಲಿ ಎಂ.ಎಚ್. ಕೃಷ್ಣ ಅವರು ಇಲ್ಲಿಯ 'ಜಟಿಂಗರಾಮೇಶ' ಬೆಟ್ಟದ ಬುಡದಂಚಿನಲ್ಲಿ ಗಣೇಶ ದೇವರ ಗುಡಿ ಮತ್ತು ಬೆಟ್ಟದ ಮೇಲಿರುದ ಜಟಿಂಗ ರಾಮೇಶ್ವರ, ಗಣಪತಿ, ಪಂಪಾಪತಿ, ವೀರಭದ್ರ, ಜನಾರ್ಧನ, ಸೂರ್ಯ, ಜಂಬುಕೇಶ್ವರ, ಅರ್ಕೇಶ್ವರ, ಚಂದಿಕೇಶ್ವರ ದೇವರ ಗುಡಿಗಳನ್ನೂ ದೀಪಸ್ತಂಭ, ಮಹಾದ್ವಾರ ಮತ್ತು ಕೆಲವು ಶಿಲಾಶಾಸನಗಳೇ ಮೊದಲಾದ ಪ್ರಾಚೀನ ಸ್ಮಾರಕಗಳನ್ನೂ ಪರಿಶೀಲಿಸಿ ಸಂಕ್ಷಿಪ್ತವಾಗಿ ವರದಿ[1] ಮಾಡಿದ್ದಾರೆ. ೧೯೭೮ರಲ್ಲಿ ನಾನು ಈ ಪ್ರದೇಶದಲ್ಲಿ ಪುರಾತತ್ವ ಶೋಧನೆಯನ್ನು ಮಾಡುತ್ತಿದ್ದಾಗ, ಬೆಟ್ಟದ ಬುಡದಂಚಿನಲ್ಲಿಯ ಗಣೇಶ ದೇವರ ಗುಡಿಯ ಅನತಿ ದೂರದಲ್ಲಿ ಬಾಗಿ ನಿಂತ ಒಂದು ದೊಡ್ಡ ಬಂಡೆಗಲ್ಲಿನ ಮೇಲೆ ಒಂದು ಪ್ರಾಣಿ(ಜಿಂಕೆ ?)ಯ ರೇಖಾಚಿತ್ರವು, ಮತ್ತು ಬೆಟ್ಟದ ಮೇಲಿನ ಅಶೋಕ ಚಕ್ರವರ್ತಿಯ ಶಾಸನದ ಹತ್ತಿರ ಒಂದು ಜನ ವಾಸ್ತವ್ಯದ ಪ್ರಾಚೀನ ನೆಲೆಯಲ್ಲಿ ನೂತನ ಶಿಲಾಯುಗ–ಇತಿಹಾಸ ಆರಂಭಕಾಲದ ಮೃತ್ಪಾತ್ರೆ ಅವಶೇಷಗಳು ಗೋಚರ ವಾದವು. ಆ ಸಮಯದಲ್ಲಿ ಇಲ್ಲಿಯ ದೇವಾಲಯ ಗಳನ್ನು ಮತ್ತು ಮೂರ್ತಿಗಳನ್ನು ಪರಿಶೀಲಿಸಿದೆ. ಪ್ರಸ್ತುತ ಲೇಖನದಲ್ಲಿ ಮುಖ್ಯವಾಗಿ ಪ್ರಾಚೀನ ನೆಲೆಯ ಮತ್ತು ಸ್ಥಳೀಯ ಐತಿಹ್ಯದ ಕೆಲವು ಮುಖ್ಯಾಂಶ ಗಳನ್ನು ವಿವೇಚಿಸಲಾಗಿದೆ.

**ಪ್ರಾಗಿತಿಹಾಸದ ನೆಲೆ ಮತ್ತು ಐತಿಹ್ಯ :**

ಈ ಸ್ಥಳನಾಮದ ಐತಿಹ್ಯದಂತೆ, ರಾಮಾಯಣದ ಜಟಾಯು ಸೀತಾದೇವಿಯನ್ನು ಕದ್ದೊಯ್ಯುತ್ತಿದ್ದ ಲಂಕಾಧಿಪತಿ ರಾವಣನನ್ನು ಇಲ್ಲಿ ಎದುರಿಸಿ ಮಡಿದನು. ದೊಡ್ಡ ಜಟಿಂಗರಾಮೇಶ ದೇವಾಲಯದ ಹತ್ತಿರ ದೋಣಿಯಾಕಾರದ ಒಂದು ತಗ್ಗು ಇದೆ. ಇದರಲ್ಲಿ ಜಟಾಯುವಿಗೆ ಅಗ್ನಿಸಂಸ್ಕಾರ ಮಾಡಲಾಯಿತೆಂದು

1 ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ೧೯೩೦ರ ವಾರ್ಷಿಕ ವರದಿ, ೧೯೩೪ ಮೈಸೂರು, ೨೭-೩೦.

2 ಅ. ಸುಂದರ, "ಚಿತ್ರದುರ್ಗ ಪರಿಸರ : ಇತ್ತೀಚಿನ ಪುರಾತತ್ವ ಶೋಧನೆಗಳು", ಮಾನವಿಕ ಭಾರತಿ, ಸಂಪುಟ ३, ಸಂಚಿಕೆ ೧, ೧೯೭೮, ೧-೧೫.

ಪ್ರತೀತಿ. ಇಲ್ಲಿ ಒಂದು ನೈಸರ್ಗಿಕ ದೊಣೆಯಿದೆ. ಪಕ್ಕದಲ್ಲಿ ಸೀತಾದೇವಿಯ ಪಾದಗಳೆಂದು ನಂಬಲಾದ ಎರಡು ಪಾದಗಳ ಶಿಲ್ಪವಿದೆ. ರಾವಣನೊಡನೆ ಜಟಾಯು ಹೋರಾಡುತ್ತಿದ್ದಾಗ ಸೀತೆಯು ಅಲ್ಲಿ ನಿಂತಿದ್ದಳಂತೆ. ಆದ್ದರಿಂದ ಈ ದೊಣೆಗೆ ಸೀತಮ್ಮ ಹೊಳೆ (ದೊಣೆ) ಯೆಂದು ಹೆಸರು. ಈ ದೇವಾಲಯದ ಉತ್ತರಕ್ಕೆ ನೀರಿನ ಕೊಳವುಳ್ಳ ಒಂದು ಗವಿಯಿದೆ. ಈ ಕೊಳಕ್ಕೆ 'ಏಕಾಂತತೀರ್ಥ' ಎಂದು ಹೆಸರು. ಸೀತೆಯನ್ನು ಅರಸುತ್ತ ಬಂದ ರಾಮ ಲಕ್ಷ್ಮಣರು ಇಲ್ಲಿಯೇ ಇದ್ದರಂತೆ. ಹೀಗೆ ಈ ಐತಿಹ್ಯದ ಪ್ರಕಾರ ಇದು ರಾಮಾಯಣದ ಒಂದು ಮುಖ್ಯ ಘಟನೆಯ ಸ್ಥಳ. ಆದ್ದರಿಂದ ಎಂ.ಎಚ್. ಕೃಷ್ಣ ಅವರು, "ಜಟಾಯುವಿನಂಥ ಪಕ್ಷಿಗಳು ಈ ಬೆಟ್ಟದ ಮೇಲೆ ಪ್ರಾಗಿತಿಹಾಸದ ಒಂದು ಕಾಲದಲ್ಲಿ ವಾಸಿಸಿದ್ದರೆ ಅವುಗಳ ವಾಸಕ್ಕೆ ಅತ್ಯಂತ ಸಾಧ್ಯವಾಗಿರುವ ಸ್ಥಳಗಳಲ್ಲಿ ಇದು ಒಂದು"[3] ಎಂದು ಅಭಿಪ್ರಾಯಪಟ್ಟಿದ್ದಾರೆ. ಸಮೀಪದಲ್ಲಿ ಅಶೋಕ ಚಕ್ರವರ್ತಿಯ ಶಾಸನವಿದ್ದು, ಅದರ ಹತ್ತಿರ ಕೃಷ್ಣರವರು ಮೌರ್ಯ ಕಾಲದ ಯಾವುದೇ ನಿರ್ಮಿತಿಗಳಲ್ಲದಿದ್ದರೂ ಮೃತ್‌ಪಾತ್ರೆ ಅವಶೇಷಗಳಿರುವುದನ್ನು ಗುರುತಿಸಿ ಅವುಗಳು ನೊಳಂಬ-ವಿಜಯನಗರ ಕಾಲದ್ದೆಂದು[4] ಅಭಿಪ್ರಾಯಪಟ್ಟಿದ್ದಾರೆ. ಮೇಲೆ ಹೇಳಿದಂತೆ, ನನ್ನ ಅನ್ವೇಷಣೆಯಲ್ಲಿ ಇದೇ ನೆಲೆಯಲ್ಲಿಯೇ ಬ್ರಹ್ಮಗಿರಿಯಲ್ಲಿ ಕೃಷ್ಣರವರು ೧೯೩೦ರಲ್ಲಿ ಅಶೋಕನ ಶಾಸನದ ಹತ್ತಿರ ನಡೆಸಿದ ಪೂರ್ವ ಸಿದ್ಧತೆಯ ಉತ್ಖನನದಲ್ಲಿ, ಅನಂತರ ೧೯೪೨ರಲ್ಲ ವ್ಯವಸ್ಥಿತ ದೊಡ್ಡ ಪ್ರಮಾಣದ ಉತ್ಖನನದಲ್ಲಿ[5] ೧೯೪೭ರಲ್ಲಿ ಸರ್ ಮಾರ್ಟಿಮರ್ ವ್ಹೀಲರ್ ಕೈಕೊಂಡ ಕ್ರಮಬದ್ಧ ಉತ್ಖನನದಲ್ಲಿ[6] ನೂತನ ಶಿಲಾಯುಗ, ಕಬ್ಬಿಣಯುಗದ ಬೃಹತ್‌ಶಿಲಾ ಮತ್ತು ಇತಿಹಾಸ ಆರಂಭ ಕಾಲದ ಅನುಕ್ರಮದಲ್ಲಿ ಶೋಧವಾದ ಜನವಸತಿಯ ಸಾಂಸ್ಕೃತಿಕ ಅವಶೇಷಗಳಂತೆ ಮಣ್ಣಿನ ಪಾತ್ರೆಗಳ ಚೂರುಗಳು ಕೂಡ ದೊರಕಿದವು. ಬಂಡೆಗಲ್ಲಿನ ಮೇಲಿರುವ ಲೋಹದ ಚಾಣದಿಂದ ಮೂಡಿಸಿದ ಪ್ರಾಣಿಯ ರೇಖಾಚಿತ್ರವು ನೂತನ ಶಿಲಾಯುಗ ಸಂಸ್ಕೃತಿಯ ಕಾಲದ್ದಾಗಿರಬಹುದು. ವ್ಹೀಲರವರ ಉತ್ಖನನದಲ್ಲಿ ನಯವಾದ ಹೊಳಪಿನ ಕಲ್ಲಿನ ಕೊಡಲಿಯನ್ನು ವಿಶೇಷವಾಗಿ ಉಪಯೋಗಿಸುತ್ತಿದ್ದ ಸಂಸ್ಕೃತಿ (Polished stone-axe culture) ಅಂದರೆ ಸುಧಾರಿಸಿದ ನೂತನಶಿಲಾ-ತಾಮ್ರಯುಗ (Advanced Neolithic culture in chailcolithlic stage) ಸಂಸ್ಕೃತಿಯ ಕುರುಹುಗಳಲ್ಲಿ ತಾಮ್ರದ ಉಳಿಯೂ ದೊರೆತಿದೆ. ಲೋಹದ ಇಂಥ ಉಪಕರಣದಿಂದ ಚಿತ್ರವನ್ನು ಮೂಡಿಸಿರಬೇಕು. ಇದರಿಂದ ಬ್ರಹ್ಮಗಿರಿ, ಮಸ್ಕಿ, ಕೊಪ್ಪಳದಲ್ಲಿರುವಂತೆ, ಇಲ್ಲಿಯೂ ಕೂಡ ನೂತನ ಶಿಲಾಯುಗ (ಕ್ರಿ.ಪೂ. ಸು. ೨೦೦೦-೮೦೦) ದಿಂದಲೂ ನಿರಂತರವಾಗಿ ಜನವಾಸ್ತವ್ಯವಿದ್ದಿತು. ಆದ್ದರಿಂದ ಜಟಾಯುವಿನ ಕಥೆಯ ಘಟನೆಯ ಮೂಲ ಇಲ್ಲವೆ ಇದಕ್ಕೆ ಸಂಬಂಧಿಸಿದ ಜನರ ಮೌರ್ಯಕಾಲಪೂರ್ವದ ಪ್ರಾಗಿತಿಹಾಸ ಸಮಾಜದಲ್ಲಿದ್ದಿರಬಹುದೇನೊ ಎಂಬ ಕುತೂಹಲ ವಿಚಾರಕ್ಕೆ ಎಡೆಮಾಡಿಕೊಡುತ್ತದೆ.

**ಅಶೋಕನ ಶಾಸನಗಳು ಮತ್ತು ನೆಲೆಗಳು :**

ಮೌರ್ಯರ ಕಾಲದಲ್ಲಿ ಬ್ರಹ್ಮಗಿರಿಯು ಆ ಸಾಮ್ರಾಜ್ಯದ ಒಂದು ಪ್ರಾಂತವಾದ ಸುವರ್ಣಗಿರಿಯ ಆಡಳಿತ ಕೇಂದ್ರಗಳಲ್ಲಿ ಒಂದಾಗಿತ್ತು. ಏಕೆಂದರೆ ಚಕ್ರವರ್ತಿಯ 'ಮಹಾಮಾತ್ರರು' ಇಲ್ಲಿ ಇದ್ದು ಈ ಭಾಗವನ್ನು ಆಳುತ್ತಿದ್ದರು. ಇದರ ಆಗಿನ ಹೆಸರು 'ಇಸಿಲಾ'. ಇದರಂತೆಯೆ ಜಟಿಂಗರಾಮೇಶ್ವರದಲ್ಲೂ ಶಾಸನದ ಹತ್ತಿರ ಅದೇ ಕಾಲದಲ್ಲಿ ಜನವಸತಿ ಇತ್ತು.

ಜಟಿಂಗರಾಮೇಶ್ವರದ ಉತ್ತರಕ್ಕೆ ಸುಮಾರು ೧೦೦-೧೨೦ ಕಿ.ಮೀ. ದೂರದಲ್ಲಿ ೧೯೭೭ರಲ್ಲಿ ಶೋಧವಾದ ನಿಟ್ಟೂರು ಮತ್ತು ಉಡೆಗೊಳಂದಲ್ಲಿಯ ಅಶೋಕನ ಶಾಸನಗಳ ಹತ್ತಿರವೂ ನಮ್ಮ ಅನ್ವೇಷಣೆಯಲ್ಲಿ ಮೇಲೆ ಹೇಳಿದ ಸಂಸ್ಕೃತಿಗಳ ಅವಶೇಷಗಳು ದೊರೆತವು.

---

3 ೧೯೩೦ರ ವಾರ್ಷಿಕ ವರದಿ, ಪು. ೩೦

4 ಅದೇ

5 ೧೯೪೦ನೇ ವಾರ್ಷಿಕ ವರದಿ, ಪು. ೬೩-೭೪, ಮತ್ತು ೧೯೪೨ನೇ ವಾರ್ಷಿಕ ವರದಿ, ಪು. ೧೦೦-೧೦೯

6 ಏನ್ಸಿಯೆಂಟ್ ಇಂಡಿಯಾ, ಸಂಪುಟ ೪ ಪು. ೧೮೧-೨೬೮

ನಿಟ್ಟೂರಿನಲ್ಲಿ ಈ ಶಾಸನದ ಹತ್ತಿರ ಸ್ಥಳೀಕರು ಅಗೆದ ಒಂದು ಗುಂಡಿಯ ಬದಿಯಲ್ಲಿ ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಯ ಮೃತ್ಪಾತ್ರೆಗಳುಳ್ಳ ಒಂದು ಶವ ಗುಣಿಯ ಅಡ್ಡ ಭಾಗವು ಕಾಣುತ್ತಿತ್ತು. ಆದ್ದರಿಂದ ಮಸ್ಕಿಯಲ್ಲಿ ಮೌರ್ಯ ಚಕ್ರವರ್ತಿ "ದೇವಾನಂಪಿಯ ಪಿಯದಸಿ" (ದೇವಾನಾಂ ಪ್ರಿಯ ಪ್ರಿಯದರ್ಶಿ)ಯ 'ಅಸೋಕ'(ಅಶೋಕ)ಎಂಬ ವೈಯಕ್ತಿಕ ಹೆಸರುಳ್ಳ ಬಂಡೆ ಶಾಸನದಸಮೀಪದಲ್ಲಿಯೇ ಶಿಲಾ-ತಾಮ್ರಯುಗ-ಬೃಹತ್ ಶಿಲಾ–ಇತಿಹಾಸ ಆರಂಭಕಾಲದ ಸಂಸ್ಕೃತಿಗಳ ಅವಶೇಷ ಗಳುಳ್ಳ ನೆಲೆಯಿರುವುದು ಈಗಾಗಲೆ ಸಾಮಾನ್ಯವಾಗಿ ತಿಳಿದ ವಿಷಯ. ಕೊಪ್ಪಳದಲ್ಲಿಯ ಈ ಚಕ್ರವರ್ತಿಯ ಬಂಡೆಗಲ್ಲು ಶಾಸನಗಳ ಸಮೀಪದಲ್ಲಿ ಇತಿಹಾಸ ಆರಂಭ ಕಾಲದ ಒಂದು ಜನ ವಾಸ್ತವ್ಯದ ನೆಲೆ, ಅನತಿ ದೂರದಲ್ಲಿಯೇ ಕಬ್ಬಿಣಯುಗದ ಬೃಹತ್‌ಶಿಲಾ ಗೋರಿ ಗಳು (ಕಂಡಿ ಕೋಣೆ ಗೋರಿಗಳು) ಇರುವುದು ತಿಳಿದ ವಿಷಯವೆ. ಸುಮಾರು ೧೯೭೪–೭೫ರಲ್ಲಿ ನನ್ನ ಅನ್ವೇಷಣೆಯಲ್ಲಿ ಇತಿಹಾಸ ಆರಂಭ ಕಾಲದ ನೆಲೆಯಲ್ಲಿ ಈ ಕಾಲದ ಒಂದು ಭಗ್ನ ಶಿಲಾ(sedimentary lime stone)ಮೂರ್ತಿಯು ಮತ್ತು ನೂತನ ಶಿಲಾಯುಗದ ಮೃತ್ಪಾತ್ರೆ ಚೂರುಗಳು ಕಲ್ಲಿನ ಉಜ್ಜಿದ ನಯ ಕೊಡಲಿ ಗಳು ದೊರೆತವು. ೧೯೮೯ರಲ್ಲಿ ಸುಮಾರು ೧-೨ನೇ ಶತಮಾನದ ಅನೇಕ ಬೌದ್ಧ ಶಿಲ್ಪಗಳು, ಶಾಸನಗಳು, ಸ್ತೂಪಾವಶೇಷಗಳು, ಇಟ್ಟಿಗೆ ಕೋಟೆ ಕಟ್ಟಡಗಳುಳ್ಳ ಅತಿ ಮಹತ್ವದ ವಿಶಾಲವಾದ ಜನವಾಸ್ತವ್ಯದ ನೆಲೆಯುಳ್ಳ ಸನ್ನತಿಯಲ್ಲಿಯೂ ಈ ಚಕ್ರವರ್ತಿಯ ೧೨ನೇ ಮತ್ತು ೧೪ನೇ ಪ್ರಧಾನ ಮತ್ತು ಎರಡು ಬಿಡಿ ಶಾಸನ ಗಳು[7] ಶೋಧವಾದವು. ಈ ಪ್ರಕಾರದ ಶಾಸನಗಳು ಶೋಧವಾಗುತ್ತಿರುವುದು ದಕ್ಷಿಣಭಾರತದಲ್ಲಿ ಇದೇ ಮೊದಲು. ಈ ನೆಲೆಯಲ್ಲಿ ನೂತನ ಶಿಲಾಯುಗದ ಇದಕ್ಕೂ ಹಿಂದಿನ ಮಧ್ಯ ಹಳೆಶಿಲಾಯುಗದ (ಸು. ೭೦,೦೦೦–೪೦,೦೦೦ ವರ್ಷಗಳಷ್ಟು ಹಿಂದಿನ) ಮಧ್ಯ ಹಳೆಶಿಲಾಯುಗದ ಕಲ್ಲಿನ ಚಕ್ಕೆ ಉಪಕರಣಗಳು[8] ಶೋಧವಾಗಿವೆ.

ಇಲ್ಲಿ ಗಮನಿಸಬೇಕಾದ ಒಂದು ಅಂಶವಿದೆ. ಸುಮಾರು ೧೯೫೭ ರಿಂದ ಉತ್ತರ ಕರ್ನಾಟಕದಲ್ಲಿಯ ಭೀಮಾ, ಕೃಷ್ಣಾ, ಮಲಪ್ರಭಾ, ಘಟಪ್ರಭಾ ಮತ್ತು ತುಂಗಭದ್ರಾ ಮತ್ತು ಇವುಗಳ ಉಪನದಿಗಳ ಬಯಲು ಗಳಲ್ಲಿ ಮೇಲೆ ವಿವೇಚಿಸಿದ ನೆಲೆಗಳಂಥ ನೂತನ (ಇಲ್ಲವೆ ಶಿಲಾ ತಾಮ್ರಯುಗದ)–ಬೃಹತ್‌ಶಿಲಾ-ಇತಿಹಾಸ ಆರಂಭ ಕಾಲದ ಸಾಂಸ್ಕೃತಿಕ ಅವಶೇಷಗಳುಳ್ಳ ನೂರಾರು ಜನವಾಸ್ತವ್ಯದ ನೆಲೆಗಳು[9] ಶೋಧವಾಗಿವೆ. ನೂತನ ಶಿಲಾಯುಗದಿಂದ ನಿರಂತರವಾಗಿ ಜನವಸತಿಯುಳ್ಳ ಇಂಥ ಕೆಲವು ನೆಲೆಗಳಲ್ಲಿ ಈ ಶಾಸನಗಳಿವೆ. ಬಹುಶಃ ಈ ನೆಲೆಗಳಲ್ಲಿಯ ಜನರು ಪ್ರಬಲ ವರ್ಗದವರಾಗಿದ್ದಿರಬೇಕು. ಮತ್ತು ಈ ನೆಲೆಗಳು ನಮಗೆ ಈಗ ತಿಳಿದಮಟ್ಟಿಗೆ ಈ ಚಕ್ರವರ್ತಿಯ ಸಾಮ್ರಾಜ್ಯದ (ದಕ್ಷಿಣ) ಗಡಿಯಲ್ಲಿವೆ. ಆದ್ದರಿಂದ ಗಡಿ ನಿಯಂತ್ರಣಕ್ಕೋಸ್ಕರ ಈ ನೆಲೆಗಳಲ್ಲಿ ತನ್ನ ಮಹಾಮಾತ್ರರನ್ನು ಈ ಪ್ರದೇಶದಲ್ಲಿ ಅಲ್ಲಲ್ಲಿ ನಿಯಮಿಸಿದನೆಂದು ತೋರುತ್ತದೆ.

ಸನ್ನತಿಯ ೨ನೇ ಬಿಡಿ ಶಾಸನವಿರುವುದು ಈ ದೃಷ್ಟಿಯಿಂದ ಮಹತ್ವದ್ದು ಮತ್ತು ಅರ್ಥಗರ್ಭಿತ. ಇದರಲ್ಲಿಯ ಮೂರು ಅಂಶಗಳು ಈ ಸಂದರ್ಭದಲ್ಲಿ ಗಮನಾರ್ಹ : (೧) ಚಕ್ರವರ್ತಿಯು ಕ್ಷಮ್ಯವಾದುದನ್ನು ಮಾತ್ರ ಕ್ಷಮಿಸುವನೆಂಬ ಗಂಭೀರ ಪರೋಕ್ಷ ಎಚ್ಚರಿಕೆ ; (೨) ಇವನು ಪ್ರಜೆಗಳಿಗೆ (ಇಲ್ಲಿ ಗಡಿಯ ಜನರಿಗೆ) ತಂದೆಯ ಹಾಗೆ ಮತ್ತು ಅವರು ಅವನ ಮಕ್ಕಳಂತೆ ಎಂಬ ಜನರಲ್ಲಿ ( ವಿಶ್ವಾಸ ಮತ್ತು ಗೌರವವನ್ನು ಹುರಿದುಂಬಿಸುವ ಆಶ್ವಾಸನೆ, ಮತ್ತು (೩) 'ಗಡಿ

---

7 ಕೆ.ವಿ. ರಮೇಶ, "ದಿ ಅಶೋಕನ್ ಇನಸ್ಕ್ರಿಪ್ಷನ್ಸ್ ಆ್ಯಟ್ ಸನ್ನತಿ", ದಿ ಇಂಡಿಯನ್ ಹಿಸ್ಟಾರಿಕಲ್ ರಿವ್ಯೂ, ಸಂ. ೧೪, ಸಂಖ್ಯೆ ೧-೨, ೧೯೯೦ ದೆಹಲಿ, ಪು. ೩೬-೪೨.

8 ಅ. ಸುಂದರ 'ಎಕ್ಸ್‌ಕವೇಶನ್ಸ್ ಆ್ಯಟ್ ಸನ್ನತಿ ೧೯೮೬-೮೭' ಪುರಾತತ್ವ, ಸಂ. ೧೭, ಇಂಡಿಯನ್ ಆರ್ಕಿಯಾಲಾಜಿಕಲ್ ಸೊಸೈಟಿ, ಡೆಲ್ಲಿ೧೯೮೬-೧೯೮೭ ಪು. ೨೨-೨೫.

9 ಅ. ಸುಂದರ 'ಪ್ರೋಟೊ ಹಿಸ್ಟಾರಿಕ್ ಸೈಟ್ ಇನ್ ಬಿಜಾಪುರ ಡಿಸ್ಟ್ರಿಕ್ಟ್', ಜರ್ನಲ್ ಆಫ್ ಕರ್ನಾಟಕ ಯೂನಿವರ್ಸಿಟಿ (ಸೋಷಿಯಲ್ ಸೈನ್ಸ್), ಸಂ. ೪, ೧೯೬೪, ಧಾರವಾಡ, ಪು. ೧-೨೩.

ಜನರಲ್ಲಿ' ವಿಶ್ವಾಸವನ್ನು ತುಂಬಲು ಅವರಿಗೆ ಅವರು ನಡೆದುಕೊಳ್ಳಬೇಕಾದ ರೀತಿ ನೀತಿಗಳನ್ನು ಮತ್ತು ತನ್ನ ಆಶ್ವಾಸನೆಗಳನ್ನು ಕಾಲ ಕಾಲಕ್ಕೂ ಮಹಾಮಾತ್ರರು ಘೋಷಿಸುವ ಸಲುವಾಗಿ ಈ ಶಾಸನಗಳನ್ನು ಅಲ್ಲಲ್ಲಿ ಬರೆಸಿದುದು. ಇದೇ ತರಹದ ಎರಡು ಬಿಡಿ ಶಾಸನಗಳು ಮೊದಲು ಬೆಳಕಿಗೆ ಬಂದುದು ಕಳಿಂಗದಲ್ಲಿಯ ಧೌಲಿಯಲ್ಲಿ. ಈ ಶಾಸನಗಳುಳ್ಳ ಸನ್ನತಿಯು ಎರಡನೇ ಸ್ಥಳವಾಗಿದೆ. ಅಶೋಕನು ಬಲಾಢ್ಯ ಕಳಿಂಗವನ್ನು ಗೆದ್ದನಂತರ ಅಲ್ಲಿಯ ಸ್ವಾಭಿಮಾನಿ ಜನರಲ್ಲಿ ಗೆದ್ದ ಶತ್ರು ರಾಜನಲ್ಲಿ ವಿಶ್ವಾಸ ಮೂಡಿಸಲು ಇಂಥ ಶಾಸನವನ್ನು ಹೊರಡಿಸಿದನು. ಇದರಂತೆಯೇ, ಸನ್ನತಿ-ಬ್ರಹ್ಮಗಿರಿ ಪ್ರದೇಶವನ್ನೂ ಅಶೋಕನೆ ಗೆದ್ದು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿದ್ದರಿಂದಲೋ ಏನೋ ಈ ಪ್ರದೇಶದ ಜನರಿಗೂ ತನ್ನ ಪರಿಚಯು ಮಾಡಿಕೊಡುವ ಸಲುವಾಗಿಯೋ ಎಂಬಂತೆ ತನ್ನ ವೈಯಕ್ತಿಕ ಹೆಸರು ಪದೇ ಪದೇ ಬರುವಂತೆಯೂ ಹೊಸದಾಗಿ ತನ್ನ ಪ್ರಜೆಗಳಾದ ಜನರಿಗೆ ಕಳಿಂಗದ ಜನರಿಗೆ ಹೇಳಿದಂತೆ ಮೇಲಿನ ಮೂರು ಅಂಶಗಳುಳ್ಳ ಇವೆರಡು ಬಿಡಿ ಶಾಸನಗಳನ್ನು ನಿಯತ ಕಾಲಗಳಲ್ಲಿ ಘೋಷಿಸುವುದಕ್ಕೋಸ್ಕರ ಬರೆಯಿಸಿದನೆಂದು ಕಾಣುತ್ತದೆ. ಆದ್ದರಿಂದಲೋ ಏನೋ ಜನರಲ್ಲಿ ಧರ್ಮ ಜಾಗೃತಿಯನ್ನುಂಟುಮಾಡಲು ರಾಜ್ಯದಲ್ಲೆಲ್ಲ ತಾನು ಎಷ್ಟು ದಿನಗಳ ತನಕ (೨೫೬ ದಿನಗಳು) ಧರ್ಮಯಾತ್ರೆಯನ್ನು ಮಾಡಿದನೆಂಬುದನ್ನು ಬ್ರಹ್ಮಗಿರಿ ಶಾಸನದಲ್ಲಿ ಹೇಳಿಕೊಂಡಿದ್ದಾನೆ.

**ಮೌರ್ಯಕಾಲ ಪೂರ್ವದ ಜನರು ಮತ್ತು ಜಟಾಯು :** ಈ ಪ್ರದೇಶದಲ್ಲಿ ಅಶೋಕನು ಈ ಪ್ರದೇಶವನ್ನು ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿಕೊಳ್ಳುವ ಮೊದಲೇ ಬಹುಶಃ ನೂತನ ಶಿಲಾಯುಗದಿಂದಲೂ ಇಲ್ಲಿ ಅಲ್ಲಲ್ಲಿ ಪ್ರಬಲರಾದ ಜನಾಂಗಗಳಿದ್ದವೆಂಬುದು ಸ್ಪಷ್ಟವಾಗುತ್ತದೆ. ಪುಣೆಯ ಹತ್ತಿರ ಇನಾಂಗಾವ್‌ನಲ್ಲಿಯ ಶಿಲಾತಾಮ್ರ ನೆಲೆಯ (ಕ್ರಿ.ಪೂ. ಸು. ೧೭೦೦-೮೦೦) ಉತ್ಖನನದಲ್ಲಿ ದೊರೆತ ಸಾಮಾಜಿಕವಾಗಿ, ಆರ್ಥಿಕವಾಗಿ ಚೆನ್ನಾಗಿ ಬೆಳೆದಂಥ ಹಂತ ಹಂತವಾಗಿ ಸುಧಾರಿಸುತ್ತಿದ್ದ ಒಂದು ದೊಡ್ಡ ಗ್ರಾಮದಂತೆ[10] ಇಲ್ಲಿಯೂ ಜನವರ್ಗಗಳ ಪ್ರಬಲ ಗ್ರಾಮಗಳಿದ್ದಿರಬೇಕು. ಅಂಥ ಒಂದು ಗ್ರಾಮ ಜಟಂಗರಾಮೇಶ್ವರ. ಜಟಾಯು ಅಯೋಧ್ಯೆ ರಾಜ ದಶರಥನ ಮೇಲಿನ ಗೌರವದಿಂದ ರಾಮನಿಗೆ ಸಹಾಯ ಮಾಡಲು ಮುಂದಾದನು. ಇವನು ಸಾಂಕೇತಿಕವಾಗಿ ರೆಕ್ಕೆಗಳನ್ನು ಧರಿಸುವ ಇಲ್ಲವೆ ಬೃಹತ್ ಪಕ್ಷಿಗಳ ಪೂಜಿತರಾದ ಇಲ್ಲವೆ ಲಾಂಛನವುಳ್ಳ ಜನವರ್ಗದ(ಉದಾ: ಇತಿಹಾಸ ಕಾಲದಲ್ಲಿ ಗಿಡುಗವನ್ನು ಲಾಂಛನವಾಗಿಟ್ಟುಕೊಂಡ ರೋಮನ್ನರು, ಭಾರತದಲ್ಲಿ ಗರುಡ, ಗಂಡಭೇರುಂಡವನ್ನು ಕ್ರಮವಾಗಿ ಲಾಂಛನವಾಗಿಟ್ಟುಕೊಂಡ ದಖನ್ನಿನ ಸೇವುಣರು ಮತ್ತು ಮೈಸೂರು ಅರಸರು) ನಾಯಕನಾಗಿದ್ದು ತನ್ನ ಜನರೊಡನೆ ಈ ಬೆಟ್ಟ ಪ್ರದೇಶದಲ್ಲಿ ಇದ್ದಿರಬಹುದು. ಆದ್ದರಿಂದ 'ಜಟಾಯು' ಎಂದು ಈ ಬೆಟ್ಟಕ್ಕೆ ಹೆಸರು ಬಂದಿರಬಹುದು. ಇಲ್ಲಿ ಜಟಾಯು ಪಕ್ಷಿ ನಾಯಕನ ಕುಲಕ್ಕೆ ಸೇರಿದ ಜನರು ಬಂದು ನೆಲೆಸಿರಬಹುದು. ಬ್ರಹ್ಮಗಿರಿಯ ಉತ್ಖನನದಲ್ಲಿ ನೂತನ ಶಿಲಾಯುಗದ ಜನರೊಡನೆ ಭಿನ್ನ ಸಂಸ್ಕೃತಿಯ ಕಬ್ಬಿಣ ಯುಗದ ಬೃಹತ್ ಶಿಲಾಯುಗದ ಜನರು ಸೇರಿ ಸಹಬಾಳ್ವೆ ಮಾಡಿದ ಕುರುಹುಗಳು ದೊರಕಿವೆ. ಜಟಾಯು ಪಕ್ಷಿ ನಾಯಕನ ಸಾಹಸ ಕಥಾನಕ ಪರಂಪರೆಯ ಜನರು ಗೋದಾವರಿ ಪ್ರದೇಶ ದಿಂದ ಬಂದ ಶಿಲಾ-ತಾಮ್ರಯುಗ ಇಲ್ಲವೆ ಬೃಹತ್‌ಶಿಲಾ ಸಂಸ್ಕೃತಿಯವರಾಗಿದ್ದಿರಬಹುದೆಂಬ ಸಂಶಯವೂ ಬರುತ್ತದೆ.

**ಮನುಷ್ಯಾಕೃತಿಯ (ಪಕ್ಷಿಯ ?) ಬೃಹತ್ ಕಲ್ಗೊಂಬೆಗಳು :** ಕೆಲವೊಂದು ಬೃಹತ್‌ಶಿಲಾ ಸಂಸ್ಕೃತಿ ಕಲ್ಗೋರಿ ನೆಲೆಗಳಲ್ಲಿ ಕಲ್ಲಿನ ಅಸ್ಪಷ್ಟ ಸಾಂಕೇತಿಕ ಮನುಷ್ಯಾಕಾರ ಬೃಹತ್ ದಪ್ಪ ಕಲ್ಲುಹಲಗೆಯ ಆಕೃತಿ[11]ಗಳನ್ನು ನಿಲ್ಲಿಸಲಾಗಿದೆ. ಇಂಥ ಆಕೃತಿಗಳು ಐಹೊಳೆ[12]

---

10 ಧವಳಿಕರ್ ದಿ ಫಸ್ಟ್ ಫಾರ್ಮರ್ಸ್ ಆಫ್ ದಿ ಡೆಕ್ಕನ್, ಪುಣೆ, ೧೯೮೮

11 ಕೆ.ಪಿ. ರಾವ್: ದಿ ಮೆಗಲಿತ್ಸ್ ಆಫ್ ದಿ ಡೆಕ್ಕನ್, ನ್ಯೂ ಡೆಲ್ಲಿ ೧೯೮೮

12 ಅ. ಸುಂದರ: ದಿ ಅರ್ಲಿ ಛೆಂಬರ್ ಟೂಂಬ್ಸ್ ಆಫ್ ಸೌತ್ ಇಂಡಿಯಾ, ಡೆಲ್ಲಿ, ೧೯೭೫

ಹಿರೆಬೆನಕಲ್[13] ಮಡಿಕೇರಿ ಹತ್ತಿರ ರಾಮಸ್ವಾಮಿ[14] ಕಣಿವೆಯಲ್ಲಿವೆ. ಆಂಧ್ರ, ತಮಿಳುನಾಡು ಪ್ರದೇಶದಲ್ಲೂ ಅಲ್ಲಲ್ಲಿ ಇವೆ. ಇವು ಎರಡು ಕೈಗಳನ್ನು ಅಡ್ಡಲಾಗಿ ಹಿಡಿದು ಹಸ್ತಗಳನ್ನು ಕೆಳಗೆ ಬಾಗಿಸಿ ನಿಂತ ಮನುಷ್ಯಾಕಾರದಂತಿವೆ. ಹುಡುಗರು ಆಟದಲ್ಲಿ ಹಕ್ಕಿಯಂತೆ ಹಾರುವುದನ್ನು ತೋರಿಸಲು ಕೈಗಳನ್ನು ಈ ರೀತಿ ಸಹಜವಾಗಿ ಬಿಚ್ಚಿ ಹಿಡಿದು ಓಡಾಡುತ್ತಾರೆ. ಆದ್ದರಿಂದ ಇಂಥ ಕಲ್ಲಿನ ಆಕೃತಿಗಳನ್ನು ಬೃಹತ್ ಪಕ್ಷಿಯೆಂದು ಸಾಮಾನ್ಯ ಜನರು ಗುರುತಿಸುತ್ತಾರೆ. ಆದರೆ ಮನುಷ್ಯ ಆಕೃತಿಗಳೆಂದು ಪುರಾತತ್ವ ಶಾಸ್ತ್ರಜ್ಞರು ಸರಿಯಾಗಿ ಗುರುತಿಸಿದ್ದಾರೆ. ಈ ಬೃಹತ್ ಕಲ್ಲಿನ ಗೊಂಬೆಗಳಲ್ಲಿ ಗಮನಿಸಬೇಕಾದ ಒಂದು ಅಂಶವಿದೆ. ಉತ್ತರಭಾರತದ ಗಂಗಾ ನದಿ ಬಯಲಿನ ಸಯರಾಜಪುರ, ಮಧ್ಯಪ್ರದೇಶದ ಗುಂಗೇರಿಯು ಮೊದಲಾದ ಸ್ಥಳಗಳಲ್ಲಿ ದೊರೆತ ವಿವಿಧ ಅಪೂರ್ವ ತಾಮ್ರದ ಆಕೃತಿಗಳಲ್ಲಿ[15] ಕಾಲುಗಳನ್ನು ಅಗಲಿಸಿ ನಿಂತ ಸಾಂಕೇತಿಕ ಮನುಷ್ಯಾಕಾರದ ಗೊಂಬೆಗಳಂತೆ ಇವುಗಳಿಲ್ಲ. ಬದಲಾಗಿ ಗಿಡುಗ ಮೊದಲಾದ ಪಕ್ಷಿ ಚಿತ್ರಗಳಂತೆ ಪುಕ್ಕದ ಗರಿಗಳನ್ನು ಅಗಲವಾಗಿ ಪಸರಿಸಿದಂತೆ ಕೆಳಭಾಗವು ಇರುತ್ತದೆ. ಆದ್ದರಿಂದ ಇವು ನಿಜಕ್ಕೂ ಪಕ್ಷಿಯ ಸಂಕೇತವಿರಬಹುದೆ ? ಇಲ್ಲವೆ ಹಾರುವ ಹಕ್ಕಿಯಂತೆ ಮನುಷ್ಯನನ್ನು ತೋರಿಸುವ ಪ್ರಯತ್ನವಿರಬಹುದೆ ಎಂಬ ಪ್ರಶ್ನೆಯೂ ಏಳಬಹುದು. ಜಟಿಂಗ ರಾಮೇಶ್ವರದ ಸುಮಾರು ೧೦೦-೧೨೦ ಕಿ.ಮೀ. ಉತ್ತರಕ್ಕಿರುವ ಹಿರೆಬೆನಕಲ್ಲಿ (ಗಂಗಾವತಿ ತಾಲ್ಲೂಕು ರಾಯಚೂರು ಜಿಲ್ಲೆ)ನ ಬೃಹತ್‌ಶಿಲಾ ಕಲ್ಗೋರಿಗಳ ನೆಲೆಯಲ್ಲಿ ಇಂಥ ಒಂದು ಬೃಹತ್ ಆಕೃತಿಯಿರುವುದು ಗಮನಾರ್ಹ. ಇದರಲ್ಲಿ ತೋಳುಗಳನ್ನು ಅಡ್ಡಲಾಗಿ ಹಿಡಿದು ಕೈಗಳನ್ನು ಮೇಲಕ್ಕೆತ್ತಿ, ಹಸ್ತವನ್ನು ಹೊರಬಾಗಿಸಿದ ಹಾಗೆ ರೂಪವಿದೆ.

**ವಿವೇಚನೆ :** ಬ್ರಹ್ಮಗಿರಿ, ಸಂಗನಕಲ್ಲು[16] ಮಸ್ಕಿ[17] ತೆಕ್ಕಲಕೋಟೆ[18] ಮೊದಲಾದ ನೆಲೆಗಳ ಸಣ್ಣ ಪ್ರಮಾಣದ ಲಂಬ ಉತ್ಖನನಗಳಿಂದ ಕಂಡುಬಂದ ಜನಜೀವನವು ತೀರ ಸಾಧಾರಣ ಮತ್ತು ಸಾಮಾನ್ಯ. ರಾಮಾಯಣ ಮಹಾಕಾವ್ಯಕ್ಕೆ ವಸ್ತುವಾದ ಪ್ರಾಚೀನ ಐತಿಹ್ಯಗಳ ವ್ಯಕ್ತಿಗಳು ಸಾಮಾಜಿಕ ಮೌಲ್ಯಗಳು ಉದಾತ್ತವಾಗಿದ್ದು ಒಂದು ಉತ್ತಮವರ್ಗದ ಸಮಾಜವನ್ನು ಬಿಂಬಿಸುತ್ತವೆ. ಆದ್ದರಿಂದ ತೋರುಗಾಣಿಕೆಗೆ ಒಂದು ಪ್ರದೇಶದ ಭಿನ್ನ ಆಕರಗಳಿಂದ ತಿಳಿಯಬಹುದಾದ ಸಾಮಾಜಿಕ ಚಿತ್ರಗಳಲ್ಲಿ ಪರಸ್ಪರ ಹೊಂದಾಣಿಕೆ ಕಾಣಿಸುವುದಿಲ್ಲ. ಇಲ್ಲಿ ಕೆಲವೊಂದು ವಿಷಯಗಳನ್ನು ಗಮನಿಸಬೇಕು. ಪ್ರಾಕ್ತನ ಆಕರಗಳಿಂದ ವಿಶೇಷವಾಗಿ ಒಂದು ಸಮಾಜದ ನಿತ್ಯ ಜೀವನಕ್ರಮ ಮತ್ತು ಸ್ವರೂಪ ತಿಳಿಯುತ್ತದೆ. ಐತಿಹ್ಯ ಕಥೆ ಆಕರಗಳಿಂದ ನೈತಿಕ ಮತ್ತು ಧಾರ್ಮಿಕ ವಿಷಯಗಳನ್ನು ತಿಳಿಯಲು ಸಾಧ್ಯ. ಆದ್ದರಿಂದ ಇವು ಒಂದಕ್ಕೊಂದು ಪೂರಕವೇ ಹೊರತು ವಿರೋಧಾಭಾಸವಲ್ಲ. ಆದರೆ ಈ ಸಾಮಾನ್ಯ ಜೀವನಕ್ರಮವುಳ್ಳ ಸಮಾಜದಲ್ಲಿ ಇಂಥ ಉತ್ತಮ

---

13 ಡಾ॥ ರು.ಮ. ಷಡಕ್ಷರಯ್ಯನವರು ಕೊಟ್ಟ ಮಾಹಿತಿ.

14 ಕೆ.ಪಿ. ಪೂಣಚ್ಚರವರು ಕೊಟ್ಟ ಮಾಹಿತಿ.

15 ಏನ್ಸಿಯೆಂಟ್ ಇಂಡಿಯಾ, ಸಂಪುಟ ೯, ನ್ಯೂ ಡೆಲ್ಲಿ, ೯೧-೯೩ ಮತ್ತು ಎಚ್.ಡಿ. ಸಾಂಕಳಿಯಾ : ದಿ ಪ್ರಿ ಹಿಸ್ಟ್ರಿ ಆ್ಯಂಡ್ ಪ್ರೋಟೊ ಹಿಸ್ಟ್ರಿ ಆಫ್ ಇಂಡಿಯಾ ಆ್ಯಂಡ್ ಪಾಕಿಸ್ತಾನ, ಪುಣೆ ೧೯೭೪, ಪು. ೨೬೨ 'ಮನುಷ್ಯಾಕೃತಿ'ಯ ತಾಮ್ರದ ಗೊಂಬೆಯನ್ನು ಹಾರುವ ಹಕ್ಕಿಯನ್ನು ಹೊಡೆದುರುಳಿಸಲು ಈ ತಾಮ್ರದ ವಸ್ತುಗಳನ್ನು ಬಳಸುತ್ತಿದ್ದ ಜನರು (Copper Hoard people) ಉಪಯೋಗಿಸುತ್ತಿದ್ದರೆಂದು ಡಿ.ಪಿ. ಅಗ್ರವಾಲರವರು ದಿ ಕಾಪರ್-ಬ್ರಾಂಜ್ ಏಜ್ ಇನ್ ಇಂಡಿಯಾ, ನ್ಯೂ ಡೆಲ್ಲಿ ೧೯೭೧) ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಸಾಂಕಳಿಯಾ ಅವರು (ಅದೇ, ಪು. ೩೯೮) ಇದನ್ನು ಒಪ್ಪುವುದಿಲ್ಲ.

16 ಬಿ. ಸುಬ್ಬರಾವ್ : ದಿ ಸ್ಟೋನ್ ಏಜ್ ಕಲ್ಚರ್ ಆಫ್ ಬಳ್ಳಾರಿ, ಪುಣೆ, ೧೯೪೮ ; ಎಂ.ಎಸ್. ನಾಗರಾಜರಾವ್ ಮತ್ತು ಜಡ್.ಎ. ಅನ್ಸಾರಿ ದಿ ಎಕ್ಸ್‌ಕವೇಶನ್ಸ್ ಆ್ಯಟ್ ಸಂಗನಕಲ್ ೧೯೬೪-೬೫, ಪುಣೆ, ೧೯೬೯

17 ಏನ್ಷಿಯೆಂಟ್ ಇಂಡಿಯಾ, ಸಂ. ೧೩, ೪-೧೪೧,

18 ಎಂ.ಎಸ್. ನಾಗರಾಜರಾವ್ : ದಿ ಸ್ಟೋನ್ ಏಜ್ ಹಿಲ್ ಡ್ವೆಲರ್ಸ್ ಆಫ್ ತೆಕ್ಕಲಕೋಟ, ಪುಣೆ. ೧೯೬೫

ಮೌಲ್ಯಗಳು ಬೆಳೆಯುವ ಅವಕಾಶವಿದ್ದಿತೆ? ಬ್ರಹ್ಮಗಿರಿ ಮತ್ತು ಇತರ ಸ್ಥಳಗಳಲ್ಲಿ ಸಮಕಾಲೀನ ನೈತಿಕಮೌಲ್ಯಗಳನ್ನು ಬೋಧಿಸುವ ಅಶೋಕನ ಶಾಸನಗಳಿಲ್ಲದಿದ್ದಲ್ಲಿ ಇಲ್ಲಿಯ ಉತ್ಖನನಗಳಲ್ಲಿ ತೋರಿಬಂದ ಮೌರ್ಯಕಾಲದ ಸಾಂಸ್ಕೃತಿಕ ಅವಶೇಷಗಳಿಂದ ತಿಳಿಯುವ ಸಮಾಜದಲ್ಲಿ ಇಂಥ ಮೌಲ್ಯಗಳ ಅನುಷ್ಠಾನದ ಸಾಧ್ಯತೆ ಬಗ್ಗೆ ಕಲ್ಪನೆಯೆ ಬರಲು ಸಾಧ್ಯವಿರುತ್ತಿರಲಿಲ್ಲ. ಆದ್ದರಿಂದ ಮೌರ್ಯಕಾಲದ ಈ ಸಮಾಜದ ಜನರ ಬಗ್ಗೆ ಸತ್ಯಕ್ಕೆ ದೂರವಾದ ತೀರ ಸಾಮಾನ್ಯ ತಿಳುವಳಿಕೆಯಿರುತ್ತಿತ್ತು.

ಎರಡನೆಯದಾಗಿ, ಇನಾಂಗಾವ ದೈಮಾಬಾದ್ (ಅಹಮ್ಮದ್‌ನಗರ ಜಿಲ್ಲೆ, ಮಹಾರಾಷ್ಟ್ರ)ಗಳಲ್ಲಿಯ ಶಿಲಾತಾಮ್ರನೆಲೆಗಳ (ಕ್ರಮವಾಗಿ ಕ್ರಿ. ಪೂ. ಸು. ೧೮೦೦-೮೦೦ ಮತ್ತು ಸು. ೨೨೦೦-೮೦೦) ಉತ್ಖನನಗಳ ಮೂಲಕ ಬೆಳಕಿಗೆ ಬಂದ ಗ್ರಾಮಗಳಲ್ಲಿ ನಗರೀಕರಣದ ಆರಂಭ ಲಕ್ಷಣಗಳು ಆಗಲೆ ಕಾಣಿಸಿಕೊಂಡಿವೆ. ಕೆಲವು ದೊಡ್ಡ ಮನೆಗಳ ಮಾದರಿ ವಿನ್ಯಾಸ, ಕೃಷಿಗೆ ಕಾಲುವೆ ನೀರಿನ ಪೂರೈಕೆ, ಧಾನ್ಯದ ಕಣಜಗಳು, ಲೋಹ ತಂತ್ರಜ್ಞತೆ, ಜನ ನಾಯಕತ್ವ ಮೊದಲಾದವು ಈ ಸಮಾಜವು ಸಾಮಾನ್ಯವಾಗಿ ತಿಳಿದಂತೆ ಸಾಧಾರಣ ಮಟ್ಟದ್ದಾಗಿರಲಿಲ್ಲವೆಂದು ತೋರಿಸುತ್ತದೆ. ಉತ್ತರ ಭಾರತ ಪಾಕಿಸ್ತಾನದಲ್ಲಿ ಕ್ರಿ.ಪೂ.ಸು. ೨೫೦೦ - ೨೦೦೦ ಹರಪ್ಪಾ, ಮೊಂಹೆಜೊದಾರೊ, ಲೋಥಾಲ್, ಕಾಲಿಬಂಗನ್, ದೋಲಾವೀರಾ(ಕಚ್ ಪ್ರದೇಶ)ಗಳಲ್ಲಿ ಆಧ್ಯಾತ್ಮಿಕ ಮೌಲ್ಯಗಳನ್ನುಳ್ಳ ದೊಡ್ಡ ನಗರಗಳೇ ಇದ್ದವು. ಆದ್ದರಿಂದ ಬ್ರಹ್ಮಗಿರಿ, ಮಸ್ಕಿ ಮೊದಲಾದ ಸ್ಥಳಗಳಲ್ಲಿಯೂ ಸುಮಾರು ಕ್ರಿ.ಪೂ. ೨೦೦೦ - ೧೬೦೦ ರಲ್ಲಿ ಇಂಥ ಸುಧಾರಿತ ಗ್ರಾಮಗಳಿದ್ದ ಸಾಧ್ಯತೆಯಿದೆ. ಇವುಗಳು ಮೌರ್ಯಕಾಲದ ಹೊತ್ತಿಗೆ ಸುಧಾರಿಸಿ ಪ್ರಬಲವಾಗಿರಬೇಕು.

ಮೂರನೆಯದಾಗಿ, ಸೀತೆಯನ್ನರಸುತ್ತಾ ಬಂದ ಶ್ರೀರಾಮ ಲಕ್ಷ್ಮಣರು ಪ್ರಾಣಾಂತಿಕ ಸ್ಥಿತಿಯಲ್ಲಿದ್ದ ಜಟಾಯುವನ್ನು ನೋಡಿದ್ದ ನಂತರವೆ ಮತ್ತು ಅವನ ಸೂಚನೆಯಂತೆ ಕಿಷ್ಕಿಂಧೆಗೆ ಹೋಗಿ ವಾನರರ ನಾಯಕ ಸುಗ್ರೀವಾದಿಗಳನ್ನು ನೋಡಿದರು. ಅಂದರೆ ಭೌಗೋಳಿಕವಾಗಿ ಜಟಾಯುವಿನ ಸ್ಥಳವು ಕಿಷ್ಕಿಂಧೆಯ ಉತ್ತರ ದಿಕ್ಕಿಗೆ ಇರುವ ಸಾಧ್ಯತೆ ಇದೆ. ಆದರೆ ಜಟಾಯುವು ರಾವಣನನ್ನು ಎದುರಿಸಿದ ಸ್ಥಳವೆಂದು ನಂಬಲಾದ ಜಟಂಗರಾಮೇಶ್ವರವು ಕಿಷ್ಕಿಂಧೆಯೆಂದು ನಂಬಲಾದ ಹಂಪಿ-ಆನೆಗೊಂದಿ ದಕ್ಷಿಣಕ್ಕೆ ಇದೆ. ಆದರೆ ಈ ವ್ಯತ್ಯಾಸಕ್ಕೆ ಒಂದು ಸಮಾಧಾನವನ್ನು ಹೇಳಬಹುದು. ಜಟಾಯುವಿನ ಜನರು ತಮ್ಮ ನಾಯಕನ ಸಾಹಸದ ಕಥೆಯನ್ನು ಬಳುವಳಿಯಾಗಿಟ್ಟುಕೊಂಡು ತಮ್ಮ ಮೂಲ ಪ್ರದೇಶದಿಂದ ಕ್ರಮೇಣ ಬೇರೆ ಬೇರೆ ಪ್ರದೇಶಗಳಿಗೆ ಹೋಗಿರಬಹುದು. ಅಂಥ ಒಂದು ಪ್ರದೇಶ ಜಟಂಗರಾಮೇಶ್ವರವೂ ಆಗಿರಬಹುದು. ಈ ಸ್ಥಳದಲ್ಲಿಯ ಮೌರ್ಯಕಾಲದ ಹಿಂದಿನ ಸಾಂಸ್ಕೃತಿಕ ಕುರುಹುಗಳು ಈ ಜನರದ್ದಾಗಿದ್ದರೆ ಜಟಾಯುವಿನ ನೈಜಕಥೆ ಇನ್ನೂ ಹಿಂದಿನದು. ಅಂದರೆ ನೂತನ ಶಿಲಾಯುಗ ಕಾಲದ್ದಿರಬಹುದೆಂದು ಊಹಿಸಬಹುದು.

ಕಿಷ್ಕಿಂಧೆಯೆಂದು ನಂಬಲಾದ ಹಂಪಿ ಪ್ರದೇಶದಲ್ಲಿಯ ವಾನರರು, ಜಟಂಗರಾಮೇಶ್ವರದ ಜಟಾಯುವಿನ ಜನರು ಭಿನ್ನ ಭಿನ್ನ ನೈತಿಕ ಮೌಲ್ಯಗಳುಳ್ಳವರಾಗಿದ್ದು ಉದಾತ್ತ ನೈತಿಕ ಮೌಲ್ಯಗಳನ್ನು ಅನುಷ್ಠಾನದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದ ಸೂರ್ಯ ವಂಶಸ್ಥರಾದ ದಶರಥ ರಾಮನಿಂದ ಪ್ರಭಾವಿತರಾದವರು ಮತ್ತು ಇವರಲ್ಲಿ ಭಕ್ತಿ ಗೌರವಗಳನ್ನಿಟ್ಟುಕೊಂಡವರು. ಮೌರ್ಯ ಚಕ್ರವರ್ತಿ ಅಶೋಕನು ಪ್ರಯತ್ನಪೂರ್ವಕವಾಗಿ ಈ ಪ್ರದೇಶದಲ್ಲಿ ಕೆಲವೊಂದು ನೀತಿ ನಿಯಮಗಳ ಬೋಧನೆ ಮೂಲಕ ಜನರಲ್ಲಿ ಅನುಷ್ಠಾನಕ್ಕೆ ಬರುವಂತೆ ಮಾಡಿದ ಪ್ರಯತ್ನವು ಹಿಂದಿನ ಸಾಮಾಜಿಕ ಸಂದರ್ಭವನ್ನು ನೆನಪಿಗೆ ತರುತ್ತದೆ.

ಮೇಲಿನ ವಿಶ್ಲೇಷಣೆಯಿಂದ ಜಟಂಗರಾಮೇಶ್ವರ ಪ್ರದೇಶದಲ್ಲಿಯ ಕಥೆಯು ಕೇವಲ ಕಾಲ್ಪನಿಕವಾಗಿಯೂ ಭೌಗೋಳಿಕವಾಗಿಯೂ ಅಸಂಬದ್ಧವಾಗಿ ಕಾಣುವುದಿಲ್ಲ. ಇದರಲ್ಲಿ ಐತಿಹಾಸಿಕ ಅಂಶವು ಅಡಗಿದೆಯೆಂದು ತೋರುತ್ತದೆ. ಮತ್ತು ಈ ಕಥೆಗೂ ಇಲ್ಲಿಯ ಪುರಾತತ್ವ ಅವಶೇಷಗಳಿಗೂ ಅಸ್ಪಷ್ಟ ಸಂಬಂಧವಿದೆಯೆಂದು ತೋರುತ್ತದೆ. ಈ ಸಾಧ್ಯಾಸಾಧ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ಈ ಪ್ರದೇಶದಲ್ಲಿ ಕೂಲಂಕಷ ಅನ್ವೇಷಣೆಯನ್ನು ದೊಡ್ಡ ಪ್ರಮಾಣದಲ್ಲಿ ವಿಸ್ತೃತ ಉತ್ಖನನವನ್ನು ಕೈಗೊಳ್ಳುವುದು ಅವಶ್ಯ ○

# ಬನವಾಸಿಯಲ್ಲಿ ದೊರೆತ ಕೆಲವು ರೋಮನ್ ಅವಶೇಷಗಳು : ಒಂದು ಟಿಪ್ಪಣಿ

**ಡಾ|| ಎಚ್. ಆರ್. ರಘುನಾಥ ಭಟ್**

ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಬನವಾಸಿಯಲ್ಲಿ ಈವರೆಗೆ ಹಲವು ಪ್ರಾಚ್ಯಾವಶೇಷಗಳು ದೊರೆತಿವೆ. ಅವುಗಳಲ್ಲಿ ಕೆಲವು ರೋಮನ್ ಅವಶೇಷಗಳು ಕುತೂಹಲಕಾರಿಯಾಗಿವೆ. ರೋಮನ್ ಮಡಕೆ, ರೋಮನ್ ನಾಣ್ಯ–ಪದಕದ ಕಲ್ಲಚ್ಚು, ಮಣಿಗಳು, 'ಕ್ಯಾಮಿಯೊ' ಮುಂತಾದವುಗಳನ್ನಿಲ್ಲಿ ವಿಶೇಷವಾಗಿ ಹೆಸರಿಸಬೇಕು.

ಬನವಾಸಿ ಶೋಧನೆಯ ಇತಿಹಾಸದಲ್ಲಿ ೧೯೭೦-೭೧ರಲ್ಲಿ ಆರಂಭಿಸಿದ ಬನವಾಸಿ-ಉತ್ಖನನ ಒಂದು ಮಹತ್ವೂರ್ಣ ಘಟ್ಟವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗವು ರಾಜ್ಯ ಸರ್ಕಾರದ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯಗಳ ಇಲಾಖೆಯ ಸಹಭಾಗಿತ್ವದಲ್ಲಿ ಪರಿಣತ ಪುರಾತತ್ವಜ್ಞರಾಗಿದ್ದ ಪ್ರೊ|| ಎಂ. ಶೇಷಾದ್ರಿಯವರ ನಿರ್ದೇಶಕತ್ವದಲ್ಲಿ ನಡೆಸಿದ ಉತ್ಖನನಗಳಲ್ಲಿ (ಬಿಎಸ್‌ವಿ-II ನಿವೇಶನದ ಐದು ಮತ್ತು ಆರನೆಯ ಪದರಗಳಲ್ಲಿ ಹಾಗೂ ಬಿಎಸ್‌ವಿ-VI ನೆಯ ನಿವೇಶನದಲ್ಲಿ) ರಸೆಟ್ ಕೋಟೆಡ್ ಕೆಯೊಲಿನ್ ಪೇಂಟೆಡ್ ಮಡಕೆ ಮತ್ತು ರೋಮನ್ ಅನುಕರಣೆಯ ರೌಲೆಟೆಡ್ ಮಡಕೆ ಚೂರುಗಳು ಪತ್ತೆಯಾದವು. ಶಾತವಾಹನರ ನೆಲೆಯಲ್ಲಿ ಈ ಬಗೆಯ ಮಡಕೆ ಕುಡಿಕೆಗಳು ಪತ್ತೆಯಾಗಿರುವುದು ಮಹತ್ವೂರ್ಣವಾದುದೆಂದು ತಿಳಿಯಲಾಗಿದೆ.[1]

೧೯೭೫-೭೬ರ ಸುಮಾರಿಗೆ ಬನವಾಸಿ ಕೋಟೆಯ ಹೊರವಲಯದಲ್ಲಿ ರೋಮನ್ ನಾಣ್ಯ-ಪದಕದ ಕಲ್ಲಚ್ಚೊಂದು ಅಕಸ್ಮಾತ್ತಾಗಿ ಸಿಕ್ಕಿತ್ತು. ಇದನ್ನು ಮ.ಚ. ವಡೆಯರು ಸಂಗ್ರಹಿಸಿದರು. ಆಗಲೇ ಅದನ್ನು ಪರೀಕ್ಷಿಸಿ ಅದರ ಪಡಿಯಚ್ಚನ್ನ ಛಾಯಾಚಿತ್ರವನ್ನು ತೆಗೆದು ಅಭ್ಯಾಸ ಮಾಡಿ ಪ್ರಕಟಿಸಿದೆನು.[2] ಅನಂತರ ಡಾ|| ಎ. ವಿ. ನರಸಿಂಹಮೂರ್ತಿಯವರು ಅದನ್ನು ನಾಣ್ಯದಚ್ಚೆಂದು ಭಾವಿಸಿ ಲೇಖನವನ್ನು ಪ್ರಕಟಿಸಿದರು. ಇದನ್ನು ಸ್ಥಳೀಯವಾಗಿ ತಯಾರಿಸಿದರೋ ರೋಮ್ ದೇಶದಿಂದ ಆಮದು ಮಾಡಿಕೊಂಡರೋ ತಿಳಿಯದೆಂದು ಹೇಳಿದರು.[3] ಅದರ ಪುನರಾವಲೋಕನದಿಂದ ಅದು ಸ್ಥಳೀಯವಾಗಿ ತಯಾರಿಸಿರಬಹುದಾದ ಕಲ್ಲಚ್ಚು ; ಮೂಲ ರೋಮನ್ ನಾಣ್ಯದ ಚಿತ್ರವನ್ನು ಇದರಲ್ಲಿ ಅನುಕರಿಸಲಾಗಿದೆ ಎಂಬುದು ಸ್ಪಷ್ಟವಾಯಿತು. ರೋಮನ್ ಸಾಮ್ರಾಟ ಟೈಬೀರಿಯಸ್‌ನ ನಾಣ್ಯದ ಹಿಮ್ಮುಖದಲ್ಲಿ ಕಂಡುಬರುವ ಚಿತ್ರ-ಬರಹಗಳನ್ನೂ ಅದಷ್ಟೂ ಪ್ರಾಮಾಣಿಕವಾಗಿ ಅನುಕರಿಸಲಾಗಿದೆ. ಮೂಲ ರೋಮನ್ ನಾಣ್ಯದ ಚಿತ್ರ-ಬರಹಗಳೊಡನೆ

---

1 ಪುರಾತತ್ವ, ಸಂ. ೪, ೧೯೭೦-೭೧, ಪು. ೫೬-೫೭

2 ಕರ್ನಾಟಕ ಶಾಸನ ಕಲೆ, ಮೈಸೂರು, ೧೯೭೭, ಪು. ೧೨೦

3 ಎ.ವಿ. ನರಸಿಂಹಮೂರ್ತಿ, ಬಿ.ಕೆ ಗುರುರಾಜರಾವ್ (ಸಂ) : ರಂಗವಲ್ಲಿ, ನವದೆಹಲಿ, ೧೯೮೩, ಪು. ೧೪೬-೭

ಇದನ್ನು ಹೋಲಿಸಿದರೆ ಇದು ಇನ್ನೂ ಸ್ಪಷ್ಟವಾಗುತ್ತದೆ. ಸ್ತ್ರೀ ದೇವತೆ ಎತ್ತರವಾದ ಸ್ಟೂಲಿನ ಮೇಲೆ ಕುಳಿತಿದ್ದಾಳೆ. ಎತ್ತಿದ ಬಲಗೈಯಲ್ಲಿ ಉದ್ದನೆಯ ದಂಡ ಹಿಡಿದಿದ್ದಾಳೆ. ಎಡಗೈಯಲ್ಲಿ ಗಿಡದ ಟೊಂಗೆಯನ್ನು ಹಿಡಿದುಕೊಂಡಿದ್ದಾಳೆ. ಈ ಚಿತ್ರದ ಬಲಭಾಗದಲ್ಲಿ, ಪುಟ್ಟ ಮಣಿಚುಕ್ಕೆಗಳಿಂದುಂಟಾದ ವೃತ್ತದಲ್ಲಿ ನಾಣ್ಯ ಬರಹವಿದೆ, (Maxim Pontif) ಇವಿಷ್ಟನ್ನೂ ಒಳ್ಳೆಯ ಬಳಪದ ಮೃದು ಕಲ್ಲಿನಲ್ಲಿ ಸೂಕ್ಷ್ಮವಾಗಿ ಕೆತ್ತಲಾಗಿದೆ. ಈ ನಾಣ್ಯ ಪದಕಕ್ಕೆ ತೊಟ್ಟು ಇಡಲು ಅನುಕೂಲವಾಗುವಂತೆ ತುದಿಯಲ್ಲಿ ಪುಟ್ಟ ಕೊಳವೆಯನ್ನು ಅಚ್ಚಿಸಲಾಗಿದೆ. ಇದರಿಂದ ದಾರ ಪೋಣಿಸಲು ಅನುಕೂಲವಾಗುತ್ತದೆ.

ಶಾತವಾಹನರ ನೆಲೆಯಲ್ಲಿ ಈ ಬಗೆಯ ನಾಣ್ಯದ ಪಡಿಯಚ್ಚು ಸಾಮಾನ್ಯವಾಗಿ ಸಿಗುತ್ತಿರುತ್ತದೆ. ಕೆಲವೊಮ್ಮೆ ಮೂಲ ರೋಮನ್ ನಾಣ್ಯಗಳ ಜೊತೆ ಜೊತೆಯಲ್ಲೇ ಸಿಕ್ಕಿದ್ದುಂಟು. ಈ ರೀತಿಯ ನಾಣ್ಯಗಳಿಂದ ತಯಾರಿಸಿದ ಕಂಠಹಾರ ಅಥವಾ 'ಪವನ್‌ಸರ' ಹಿಂದಿದ್ದಂತೆ ಇಂದಿಗೂ ಜನಪ್ರಿಯ ಹಾಗೂ ಪ್ರತಿಷ್ಠಿತ ಆಭರಣವಾಗಿದೆ. ಜೈನ ಕಲ್ಪಸೂತ್ರದಲ್ಲಿ 'ಉರತ್ಥ ದಿನಾರ ಮಾಲೆ'ಯೆಂದೇ ಕರೆಯಲಾಗಿದೆ.[4] ಅಂದರೆ ಇದು ರೋಮನ್ ದಿನಾರುಗಳಿಂದ ತಯಾರಾದ ಸರವೆಂಬುದು ಸ್ಪಷ್ಟವಾಗುವುದು. ಮೊದಮೊದಲು ಮೂಲ ರೋಮನ್ ದಿನಾರ್‌ಗಳನ್ನೇ ಬಳಸಿ ಕಂಠಹಾರವನ್ನು ತಯಾರಿಸುತ್ತಿದ್ದಿರಬೇಕು. ಕಾಲಾಂತರದಲ್ಲಿ ಆ ಬಗೆಯ ಅನುಕರಣೆಯ ಸರವನ್ನೂ ದಿನಾರಮಾಲೆಯೆಂದು ಕರೆಯುವುದು ರೂಢಿಯಾಗಿ ಹೋಯಿತು. ರೋಮನ್ ನಾಣ್ಯಗಳ ಸರವಷ್ಟೇ ಅಲ್ಲ, ಅವುಗಳ ಅನುಕರಣೆಯನ್ನು ಮಾಡಿ ಸರ ತಯಾರಿಸುತ್ತಿದ್ದರೆಂದೂ ಇದರಿಂದ ಗೊತ್ತಾಗುತ್ತದೆ. ಇದಕ್ಕೆ ಕಾರಣವೇನು ?

ಮೂಲತಃ ಚಿನ್ನದ ರೋಮನ್ ನಾಣ್ಯಗಳ ಬಗೆಗಿನ ಮೋಹ ಅಥವಾ ಆಕರ್ಷಣೆ ನಮ್ಮಲ್ಲಿ ವಿಶೇಷವಾಗಿತ್ತು. ಅದರಿಂದಾಗಿ ಬೆಳೆದು ಬಂದ ಬೇಡಿಕೆ ವಿಶೇಷವಾಗಿದ್ದಿರಬೇಕು. ಹೀಗಾಗಿ ಹಲವೆಡೆ ಸ್ಥಳೀಯ ಸೊನಗಾರರು ತಮ್ಮ ಮನೆಗಳಲ್ಲೇ ರೋಮನ್ ನಾಣ್ಯಗಳನ್ನು ಅನುಕರಿಸಿ ಅಚ್ಚುಗಳನ್ನು ತಯಾರಿಸಿಕೊಳ್ಳುತ್ತಿದ್ದಿರಬೇಕು. ಬನವಾಸಿಯಲ್ಲಿ ಪತ್ತೆಯಾದ ನಾಣ್ಯ ಪದಕದ ಕಲ್ಲಚ್ಚು ಇಂಥ ಒಂದು ನಿದರ್ಶನವಾಗಿದೆ. ಇಷ್ಟಾಗಿಯೂ ಇವುಗಳು ತಮ್ಮ ಐತಿಹಾಸಿಕ ಮಹತ್ವವನ್ನು ಕಳೆದುಕೊಂಡಿಲ್ಲ. ಅನುಕರಣೆಯ ಹಂತದಲ್ಲಿ ಮೂಲ ರೋಮನ್ ನಾಣ್ಯಗಳ ಪರಿಚಯ ಇರಬೇಕಲ್ಲ ? ಬನವಾಸಿ ಪ್ರದೇಶದಲ್ಲಿ ಪ್ರಾಚೀನ ಕಾಲದಲ್ಲಿ ರೋಮನ್ ನಾಣ್ಯಗಳು ಪರಿಚಿತವಾಗಿದ್ದಿರಬೇಕು. ಈ ಹಿನ್ನೆಲೆಯಲ್ಲಿ ಬನವಾಸಿಯಿಂದ ತೀರ ದೂರವಿಲ್ಲದ ಅಕ್ಕಿ ಆಲೂರಲ್ಲಿ ಅಗಸ್ಟಸ್ ಮತ್ತು ಟೈಬಿರಿಯಸ್ ಸಾಮ್ರಾಟರ ನಾಣ್ಯಗಳಲ್ಲದೆ, ಅವರ ನಂತರದ ಅಂಟೊನಿಯಸ್ ಪಯಸ್ (೧೩೮-೬೧), ಥಿಯೊಡೊಸಿಯಸ್ (೪೦೮-೪೫೦), ಮೆಸಿಯನ್ (೪೫೦-೪೫೭), ಲಿಯೊ I (೪೫೭-೪೭೪), ಝಿನೊ (೪೭೪-೪೯೧), ಅನಾಸ್ತಸಿಯಸ್ (೪೯೧-೫೧೮), ಜಸ್ಟಿನಸ್ I (೫೧೮-೫೨೭) ಅರಸರ ಸುವರ್ಣ ನಾಣ್ಯಗಳೂ ಬೆಳಕಿಗೆ ಬಂದಿದ್ದು ಗಮನಾರ್ಹವಾಗಿವೆ.[5] ಅದಕ್ಕಿಂತ ಸ್ವಾರಸ್ಯಕರವಾಗಿ ಶಿರಸಿ ತಾಲೂಕಿನ ಹುಲೇಕಲ್ಲಿನಲ್ಲಿ ರೋಮನ್ ಚಕ್ರವರ್ತಿಗಳಾದ ಲಿಸಿಯಸ್, ಡೆಮಿಟ್ರಿಯಸ್, ಟೋಲೆಮಿ, ಅಗಥೆಕ್ಲೆಸ್‌ರ ನಾಣ್ಯಗಳು ಪತ್ತೆಯಾಗಿರುವುದು ವರದಿಯಾಗಿದೆ.[6] ವಡಗಾಂವ್ ಮಾಧವ ಪುರದಲ್ಲಿ (ಬೆಳಗಾಂವ್ ಜಿಲ್ಲೆ) ರೋಮನ್ ದಿನಾರಿಗಳು ಸಿಕ್ಕಿರುವುದೂ ಇಲ್ಲಿ ಸ್ಮರಣೀಯ.[7] ಬನವಾಸಿಯೊಡನೆ ಸಾಂಸ್ಕೃತಿಕ ಸಂಬಂಧವಿಟ್ಟುಕೊಂಡ ನಾಗಾರ್ಜುನಕೊಂಡದಲ್ಲಿರುವ ದಾನಶಾಸನಗಳಲ್ಲೂ ದಿನಾರಿ

---

4 ಕೆ. ಕೃಷ್ಣಮೂರ್ತಿ : ನಾಗಾರ್ಜುನಕೊಂಡ, ನವದೆಹಲಿ, ೧೯೭೭, ಪು. ೮೦

5 ಎಂ.ಎಸ್. ನಾಗರಾಜರಾವ್ : ಪ್ರೊಗ್ರೆಸ್ ಆಫ್ ಆರ್ಕಿಯೊಲಜಿ ಇನ್ ಕರ್ನಾಟಕ, ಮೈಸೂರು, ೧೯೭೮ ; ಎಚ್ಚೆಸ್ಕೆ (ಸಂ) : ಅವಲೋಕನ, ಬೆಂಗಳೂರು, ೧೯೮೫, ಪು. ೫೬

6 ಎಆರ್‌ಇಎ., ೧೯೩೯-೪೦, ೧೯೬೨-೬೩

7 ಅವಲೋಕನ

ಗಳನ್ನು ಹೆಸರಿಸಲಾಗಿದೆ.[8] ಇದುವರೆಗೆ ನನಗೆ ತಿಳಿದು ಬಂದಿರುವಂತೆ ದಖನಿನಲ್ಲಿ ದಿನಾರಿಗಳೇ ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿವೆ.

ರೋಮನ್ 'ಕ್ಯಾಮಿಯೊ' (Cameo) ಎಂದು ಹೇಳಲಾದ ಬೆಲೆಯುಳ್ಳ ಹರಳುಕಲ್ಲಿನ ಅವಶೇಷ ತುಂಬ ಕುತೂಹಲಕಾರಿಯಾಗಿದೆ. ಕೋಟೆಯ ಒಳಭಾಗದಲ್ಲಿ (ಬಿಎನ್‌ವಿ VI ನೆಲೆಯ ಬಳಿ) ಮನೆಯ ಗೋಡೆ ಕಟ್ಟುವುದಕ್ಕಾಗಿ ಮಣ್ಣು ಅಗೆಯುತ್ತಿದ್ದಾಗ ಅಕಸ್ಮಾತ್ತಾಗಿ ಸಿಕ್ಕ ಈ ಅಮೂಲ್ಯ ವಸ್ತುವನ್ನು ಪರೀಕ್ಷಿಸಿ ಮೊದಲ ಬಾರಿಗೆ ಇಲ್ಲಿ ಟಿಪ್ಪಣಿಸಲಾಗಿದೆ. ಇದನ್ನು ಸಾಮಾನ್ಯವಾಗಿ ಇಂಟಾಗ್ಲಿಯೊ (Intaglio) ಎಂದು ಕರೆಯಲಾಗುತ್ತದೆ. ವಾಸ್ತವವಾಗಿ ಮತ್ತು ತಾಂತ್ರಿಕ ಪರಿಭಾಷೆಯಲ್ಲಿ ಇದನ್ನು 'ಕ್ಯಾಮಿಯೊ' (Cameo) ಎಂದೇ ಕರೆಯಬೇಕು. ಬಿಳಿ ಮತ್ತು ಕಂದು ಮಣ್ಣು ಬಣ್ಣವುಳ್ಳ ಎರಡು ಪದರುಗಳುಳ್ಳ ಹರಳುಕಲ್ಲಾಗಿದ್ದು (Semi Precious Stone) ಇದನ್ನು ಚಾಲ್ಸಿಡೊನಿಯ ಪ್ರಭೇದವಾದ ಅಗೇಟ್ ಅಥವಾ ಸಾರ್ಡೊನಿಕ್ಸ್ ಎಂದು ಕರೆಯುತ್ತಾರೆ. ಇದರ ಮೇಲ್ಪದರಲ್ಲಿ ಉಬ್ಬುಶಿಲ್ಪವನ್ನು ಸೂಕ್ಷ್ಮವಾಗಿ ಕಂಡರಿಸಲಾಗಿದೆ. ಇದರ ಬಹುಭಾಗ ತಿಳಿ ಬಿಳಿ ಬಣ್ಣದಲ್ಲಿದೆ ; ಕೆಲ ಭಾಗ ಕಂದು ಬಣ್ಣದಲ್ಲಿದೆ. ಬೆಂಗಡೆ ನುಣುಪಾಗಿದೆ ಅಂಡಾಕೃತಿಯಲ್ಲಿರುವ ಈ ಪುಟ್ಟ ಕಲಾಕೃತಿ ನೋಡಲು ತುಂಬ ಸೊಗಸಾಗಿದೆ. ರೋಮನ್ ಚಕ್ರವರ್ತಿ ಅಗಸ್ಟಸ್ ಈ ಬಗೆಯ ಕ್ಯಾಮಿಯೊವನ್ನು ಚಾಲ್ಸಿಡೊನಿಯಲ್ಲಿ ಕಂಡರಿಸಿದ್ದುಂಟು.

ಬನವಾಸಿ ಕ್ಯಾಮಿಯೋದ ಮೇಲೆ ರಾಜಗಾಂಭಿರ್ಯವುಳ್ಳ ರೋಮನ್ ಗಣ್ಯ ವ್ಯಕ್ತಿ ರೂಪಶಿಲ್ಪವು (Portraitute) ಸೂಕ್ಷ್ಮವಾಗಿ ಎದ್ದು ಕಾಣುತ್ತದೆ. ಬಲಕ್ಕೆ ಮುಖ ಮಾಡಿದ ಈ ಪ್ರಧಾನ ಪುರುಷನ ಶಿಲ್ಪವನ್ನು 'ಪ್ರೊಫೈಲ್' ಮಾದರಿಯಲ್ಲಿ ಕೆತ್ತಲಾಗಿದೆ. ಇದರ ವೇಷಭೂಷಣ, ನಿಲುವು ಭಂಗಿ ಸ್ವಾರಸ್ಯಕರವಾಗಿದೆ. ರೋಮನ್ 'ಗಾಲಾ' (ಪುಚ್ಛಗಳಿಂದ ಅಲಂಕೃತವಾದ ಟೊಪ್ಪಿ), ಅಲಂಕೃತ ಎದೆಪಟ್ಟಿ, ವಿಶಿಷ್ಟವಾದ ರೋಮನ್ ಶಿರೋಭಾಗ, ನೀಳಗರುಡಮೂಗು, ಚೂಪುಗದ್ದ, ಚುರುಕು ನೇತ್ರ ಮುಂತಾದವು ರೋಮನ್ ರಾಜಪುರುಷನ ಮೆರುಗನ್ನು ಹೆಚ್ಚಿಸುತ್ತವೆ. ಇವೆಲ್ಲ ಅಗಸ್ಟನ ರೂಪಚಿತ್ರ ಕಲೆಯ ಕೆಲವು ಪ್ರಧಾನ ಲಕ್ಷಣಗಳೆನ್ನಬಹುದು. ಕ್ರಿಸ್ತಶಕಾರಂಭದ ಶತಕಗಳಲ್ಲಿ ಈ ಬಗೆಯ ಕಲಾತ್ಮಕ ಪೆಂಡೆಂಟ್‌ಗಳನ್ನು ಪ್ರಚಾರ ಮಾಧ್ಯಮವಾಗಿ ಅಗಸ್ಟಸ್ ದೊರೆ ಬಳಕೆಯಲ್ಲಿ ತಂದನೆಂದು ಹೇಳಲಾಗಿದೆ.

ಬನವಾಸಿಯ ಕ್ಯಾಮಿಯೊ ರೋಮನ್ ಸ್ಫುರದ್ರೂಪಿ ರಾಜಪುರುಷನ ಚಿತ್ರಸ್ವರೂಪದಲ್ಲಿ, ಶೈಲಿ ಮತ್ತು ತಂತ್ರಗಳಲ್ಲಿ, ಅಂದಚಂದದಲ್ಲಿ ವಿಶಿಷ್ಟ ಕಲಾಸೃಷ್ಟಿಯಾಗಿದೆ. ರೋಮಕ ವ್ಯಕ್ತಿಚಿತ್ರಕಲೆ ಎಷ್ಟು ಸೊಗಸಾಗಿ ರೂಪುತಳೆಯಿತೆಂಬುದು ಇಂಥ ನಿದರ್ಶನಗಳಿಂದ ಮನದಟ್ಟಾಗುತ್ತದೆ. ಇದರಲ್ಲಿ ಮೂಡಿಬಂದ ವಾಸ್ತವಿಕತೆ, ನಿಖರತೆ, ಸೂಕ್ಷ್ಮತೆ ನಮ್ಮನ್ನು ಬೆರಗುಗೊಳಿಸುವಂಥದ್ದು. ಗ್ರೀಕ್ ಕಲೆಯ ಆದರ್ಶವಾದಿತ್ವ, ಸರಳೀಕೃತ ಸಾರ್ವತ್ರಿಕತೆಗಿಂತ ಭಿನ್ನವಾದ ಈ ರೋಮನ್ ಕಲೆಯಲ್ಲಿ ದೈಹಿಕ ಅಂಗಲಕ್ಷಣಗಳನ್ನು ತುಂಬ ಪ್ರಾಮಾಣಿಕವಾಗಿ, ಆದಷ್ಟೂ ಯಥಾವತ್ತಾಗಿ ಪಡಿಮೂಡಿಸಲಾಗಿದೆ. ಒಬ್ಬ ಬಲಿಷ್ಠ ಸೇನಾನಿಯ ಸ್ಫುರದ್ರೂಪ ಸೂಕ್ಷ್ಮ ತೀಕ್ಷ್ಣ ದೃಷ್ಟಿ, ಬಿಗಿ ಹಿಡಿದ ತುಟಿ, ನಿಖರವಾದ ಚೂಪುಗದ್ದ ಮುಂತಾದ ದೈಹಿಕ ಲಕ್ಷಣಗಳು ರೇಖಾಪ್ರಧಾನವಾಗಿ ಮೂಡಿಬಂದಿದೆ. ಇವುಗಳಿಂದಾಗಿ ಇದೊಂದು ಉತ್ತಮ ಕಿರುಕಲಾಕೃತಿಯೆನ್ನಿಸಿಕೊಳ್ಳುತ್ತದೆ.

ಬನವಾಸಿಯಲ್ಲೇ ಇನ್ನೂ ಹೆಚ್ಚಿನ ಅನ್ವೇಷಣೆ ನಡೆಸಿದಲ್ಲಿ ರೋಮನ್ ಅವಶೇಷಗಳು ಇನ್ನೂ ಸಿಗುವ ಸಾಧ್ಯತೆಯಿದೆ. ಇದರಿಂದ ಈ ಪ್ರದೇಶವು ರೋಮನ್ ಸಂಪರ್ಕಕ್ಕೆ ಒಳಗಾಗಿದ್ದರ ಬಗೆಗೆ ಹೆಚ್ಚಿನ ವಿವರಗಳು ಸಿಗುವವು. ಬನವಾಸಿಯು ರೋಮನ್ ಸಾಂಸ್ಕೃತಿಕ–ವಾಣಿಜ್ಯಕ ಸಂಬಂಧ–ಸಂಪರ್ಕಕ್ಕೊಳಗಾಗಿದ್ದಿರಬಹುದು; ಒಂದು ಕಾಲದಲ್ಲಿ ಈ ವ್ಯವಹಾರ ಚುರುಕಾಗಿದ್ದಿರಬಹುದು. ಕಾರಣ ಪ್ರಾಚೀನ ವ್ಯಾಪಾರಮಾರ್ಗದಲ್ಲಿ ಬನವಾಸಿ ಅಂತರ್ಗತವಾಗಿತ್ತು. ○

---

8 ಪಿ.ಟಿ. ಹಿಮಾಂಶು : ಮೊನಾಸ್ಟರಿ ಎಂಡ್‌ಗಿಲ್ಡ್, ದೆಹಲಿ, ೧೯೮೬, ಪು. ೧೪೬

# ಕದಂಬರ ಶಾಸನಗಳಲ್ಲಿ ಮಂಗಳವಾಚಕ ಪದ್ಯಗಳು [ಸ್ತುತಿ]

ಡಾ|| ಮಂದಾಕಿನಿ ಪುರೋಹಿತ

ಕರ್ನಾಟಕದ ಇತಿಹಾಸದ ಪುನಾರಚನೆಗೆ ಇದು ವರೆಗೆ ದೊರೆತ ಪ್ರಾಚೀನ ಕಾಲದ ಅವಶೇಷಗಳು, ಶಿಲಾ ಶಾಸನಗಳು, ದೇವಾಲಯುಗಳು, ಕಾವ್ಯಗಳು ಇವೇ ಮೊದಲಾದವು ಆಧಾರಗಳಾಗಿವೆ. ಕರ್ನಾಟಕದಲ್ಲಿ ದೊರೆತ ಪ್ರಾಚೀನ ಕಾಲದ ಶಾಸನಗಳೆಂದರೆ ಅಶೋಕನು ಪ್ರಾಕೃತ ಭಾಷೆಯಲ್ಲಿ ಬರೆಸಿದ 'ಧರ್ಮಲಿಪಿ'ಗಳು.

ಕರ್ನಾಟಕದಲ್ಲಿ ಮೌರ್ಯರ ನಂತರ ರಾಜ್ಯಭಾರ ಮಾಡಿದ ಶಾತವಾಹನರ ಪ್ರಾಕೃತ ಶಾಸನಗಳು ಬನವಾಸಿ (ನಾಗ ಪ್ರತಿಮೆ ಶಾಸನ), ಶಿವಸಿರಿಪುಳು ಮಾವಿಯ ಶಾಸನ ಬನವಾಸಿ ಹಾಗೂ ಮಳವಳ್ಳಿಯಲ್ಲಿ ದೊರೆತಿವೆ.

ಕರ್ನಾಟಕದಲ್ಲಿ ಮೊಟ್ಟ ಮೊದಲಿಗೆ ಸ್ವತಂತ್ರ ರಾಜ್ಯ ಸ್ಥಾಪನೆ ಮಾಡಿದವರು ಕದಂಬರು. ಮಯೂರ ಶರ್ಮ(ವರ್ಮ) ಕದಂಬ ಕುಲದ ಸಂಸ್ಥಾಪಕ. ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ ಬಂಡೆಗಲ್ಲು ಶಾಸನದಲ್ಲಿ ಮಂಗಳವಾಚಕ ಪದ್ಯಗಳಿಲ್ಲ.

ಕದಂಬ ವಂಶದ ಇತಿಹಾಸ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಾಳಗುಂದ ಶಾಸನದಿಂದ ತಿಳಿದು ಬರುತ್ತದೆ. ಈ ಶಾಸನದ ಪ್ರಕಾರ ಕದಂಬರು ಹಾರೀತಿಯ ಸಂತಾನದ ಮಾನವ್ಯ ಸಗೋತ್ರದವರು. ಇವರು ಕಟ್ಟಾ ವೈದಿಕರು. ಇವರ ಮನೆಯ ಹತ್ತಿರ ಕದಂಬ ವೃಕ್ಷ ಬೆಳೆದು ನಿಂತದ್ದರಿಂದ ಈ ಮನೆತನಕ್ಕೆ 'ಕದಂಬ' ವಂಶ ವೆಂಬ ಹೆಸರು ಪ್ರಾಪ್ತವಾಯಿತು. ಈ ವಂಶದಲ್ಲಿ ಮಯೂರಶರ್ಮನೆಂಬ ದ್ವಿಜೋತ್ತಮನಿದ್ದನು. ಅವನು ವೇದವಿದ್ಯಾ ವ್ಯಾಸಂಗಕ್ಕೆಂದು ಪಲ್ಲವರ ರಾಜಧಾನಿ ಕಾಂಚಿಯಲ್ಲಿದ್ದಾಗ ಪಲ್ಲವರ ಅಶ್ವದಳದೊಂದಿಗೆ ನಡೆದ ಕಲಹದಲ್ಲಿ ಕೋಪಗೊಂಡು "ಅಕಟಾ ಈ ಕಲಿಯುಗದಲ್ಲಿ ವಿಪ್ರತ್ವವು ಕ್ಷಾತ್ರವೃತ್ತಿಗೆ ಕೀಳಾಯಿತಲ್ಲ. ಗುರುಕುಲ ದಲ್ಲಿ ಬಹುಕಾಲ ಅಧ್ಯಯನ ಮಾಡಿದರ್ಭಾದಿಗಳನ್ನು ಧರಿಸಿದ್ದ ಕೈಯಲ್ಲಿ ಖಡ್ಗವನ್ನು ಹಿಡಿಯಬೇಕಾಯಿತಲ್ಲ !" ಎಂದುಕೊಂಡು ಖಡ್ಗವನ್ನು ಝಳಪಿಸಿದನು. ಈ ಶಾಸನ ದಿಂದ ಕದಂಬ ರಾಜ್ಯದ ಸಂಸ್ಥಾಪಕ ಮಯೂರಶರ್ಮನು ಕಟ್ಟಾ ವೈದಿಕ ಧರ್ಮವನ್ನು ಅವಲಂಬಿಸಿ ವೇದವಿದ್ಯಾ ಪಾರಂಗತನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಈ ವಂಶ ದಲ್ಲಿ ಕಂಗವರ್ಮ, ಭಗೀರಥ, ಕಾಕುಸ್ಥ, ಇವರು ರಾಜ್ಯ ಭಾರ ಮಾಡಿದರೆಂಬುದನ್ನು ಶಾಸನವು ತಿಳಿಸುತ್ತದೆ. ಈ ಶಾಸನವು "ಸಿದ್ಧಮ್ । ನಮಃಶಿವಾಯ" ಎಂದು ಪ್ರಾರಂಭವಾಗುತ್ತದೆ. ಇವರ ಮೂಲಸ್ಥಾನ 'ಸ್ಥಾನ ಕುಂದೂರು' ವೈಜಯಂತಿ ಇವರ ರಾಜಧಾನಿಯಾಗಿದ್ದಿತು. ಶಾಸನವು 'ನಮೋ ಭಗವತೇ ಸ್ಥಾನಕುಣ್ದೂರ ವಾಸಿನೇ ಮಹಾದೇವಾಯ ನನ್ದತು ಸರ್ವ ಸಮನ್ವಾಗತೋಯ ಮಧಿವಾಸಃ ಸ್ವಸ್ತಿ ಪ್ರಜಾಭ್ಯ ಇತಿಃ'ಎಂದು ಮುಕ್ತಾಯ ವಾಗುತ್ತದೆ.

ಶಿವಸ್ಕಂದವರ್ಮನ ಮಳವಳ್ಳಿ ಶಾಸನವು "ಸಿದ್ಧಂ! ಜಯತಿ ಭಗವಾನ್ ಮಳಪಳ್ಳಿ ದೇವೋ' ಎಂದು ಪ್ರಾರಂಭವಾಗಿ "ಜಯತಿ ಲೋಕನಾಥೋ ನನ್ದತು ಗೋ ಬ್ರಾಹ್ಮಣ ಸಿದ್ಧಿರಸ್ತು, ಶ್ರೀರಸ್ತು" ಎಂದು ಕೊನೆ ಗೊಳ್ಳುತ್ತದೆ.

ಕದಂಬರ ಶಾಸನಗಳಲ್ಲಿಯು ಶಿವಮಾಂಧಾತವರ್ಮನ

ಕೊಡಿಗೆರೆ ಶಾಸನ, ಮೃಗೇಶವರ್ಮನ ಎರಡನೆಯ ವರ್ಷದ ತಾಮ್ರ ಶಾಸನ, ಹರಿವರ್ಮನ ನಾಲ್ಕನೆಯ ವರ್ಷದ ತಾಮ್ರಶಾಸನ ಇವು 'ಸಿದ್ಧಂ' ಎಂಬ ಮಂಗಳ ವಾಚಕ ಪದದಿಂದ ಪ್ರಾರಂಭವಾದರೆ, ಹರಿವರ್ಮನ ಐದನೆಯ ವರ್ಷದ ಹಲಸಿ ತಾಮ್ರಶಾಸನ, ವಿಜಯ ಶಿವ ಮೃಗೇಶವರ್ಮನ ಎಂಟನೆಯ ವರ್ಷದ ಶಾಸನ 'ಸ್ವಸ್ತಿ' ಎಂಬ ಮಂಗಲ ಸೂಚಕಪದಗಳೊಂದಿಗೆ ಆರಂಭ ವಾಗುತ್ತದೆ. ಇನ್ನುಳಿದ ಅರಸರ ಶಾಸನಗಳಲ್ಲಿ ಹೆಚ್ಚಾಗಿ ಶಿವ, ವಿಷ್ಣು, ಜಿನ, ಬ್ರಹ್ಮ, ಬುದ್ಧನನ್ನು ಸ್ತುತಿಸುವ ಶ್ಲೋಕಗಳಿಂದ ಆರಂಭಗೊಂಡಿವೆ.

ಕದಂಬರ ಶಾಸನಗಳಲ್ಲಿ ಬರುವ ಮಂಗಳವಾಚಕ ಪದ್ಯಗಳು ಕರ್ನಾಟಕದ ಅಂದಿನ ಧಾರ್ಮಿಕ ಸ್ಥಿತಿಯನ್ನು ತಿಳಿದುಕೊಳ್ಳುವಲ್ಲಿ ಸಹಾಯಕವಾಗಬಹುದೆಂದು ಭಾವಿಸಿ ಅವುಗಳನ್ನೆಲ್ಲ ಕಾಲಾನುಕ್ರಮದಲ್ಲಿ ವ್ಯವಸ್ಥಿತವಾಗಿ ಒಂದೆಡೆ ಸಂಗ್ರಹಿಸಿ ಅಧ್ಯಯನ ಮಾಡುವ ಪ್ರಯತ್ನದ ಫಲ ಈ ಪ್ರಬಂಧ.

### ಕದಂಬ ಅರಸರ ಶಾಸನಗಳಲ್ಲಿ ಬರುವ ಶಿವಸ್ತುತಿ

ಅ (೧) ಭಟರಿ ಕಾಕುಸ್ಥನ ಶಾಸನ (ಕಾಲ ಸುಮಾರು ಕ್ರಿ.ಶ. ೪೦೫–೪೩೦)

'ಸ್ವಸ್ತಿ ಮೂರ್ಧನ್ಯಸ್ತಮ್ ಶಶಿನಸಕಲಂ
ಗಙ್ಗಸಙ್ಗಾಚ್ಛಿಶಿರತರತರಮ್
ಯೋ ವೈದಗ್ಧ್ಯಾದ್ವಹತಿ ಸಲಲಿ....ಜಯತಿ
ಪಶುಪತಿಃ

ತಲೆಯಲ್ಲಿ ಗಂಗೆಯನ್ನೂ ಚಂದ್ರನನ್ನೂ ಧರಿಸಿದ ಪಶುಪತಿಯ ಸ್ತೋತ್ರದಿಂದ ಆರಂಭವಾಗುವ ಈ ಶಾಸನ ಭಟರಿ ಕಾಕುಸ್ಥನು ಮೂವತ್ತು ಜನ ಬ್ರಾಹ್ಮಣರಿಗೆ ಅಶ ನಾರ್ಥವಾಗಿ ಧನವನ್ನು ದಾನ ಮಾಡಿದನೆಂದು ಹೇಳು ತ್ತದೆ.

ಅ (೨) ಕಾಕುಸ್ಥವರ್ಮನ ತಾಳಗುಂದ ಶಾಸನ.

"ಸಿದ್ಧಮ್
ನಮಶ್ಶಿವಾಯ ॥ ಜಯತಿ ವಿಶ್ವದೇವ ಸಂಘಾತ
ನಿಶ್ಚೈತ್ಯೈಕ
ಮೂರ್ತಿಸ್ಸನಾತನ್ಧಸ್ಥಾನುರಿನ್ದುರಶ್ಮಿ
ವಚ್ಛುರಿತದ್ಯುತಿಮಜ್ಜಟಾಭಾರ ಮಣ್ಡನಃ ॥
ತಂಭೂಸೂರಾದ್ವಿಜ ಪ್ರವರಸ್ಸಾಮಗ್ಯರ್ಜು
ರ್ವೇದ ವಾದಿನಃ
ಯತ್ಪ್ರಸಾದ ಸ್ತ್ರಾಯತೇ ನಿತ್ಯಂ ಭುವನ
ತ್ರಯಂ ಪಾಪನೋಭೂಯಾತ್ ॥

ಸ್ಥಾನಕುಂದೂರಿನ ಮಹಾದೇವನನ್ನು ಈ ಶಾಸನವು ಸ್ತುತಿಸುತ್ತದೆ. ಯಜ್ಞಯಾಗಾದಿಗಳಲ್ಲಿ ನಿರತ ರಾಗಿದ್ದ ಈ ವಂಶಸ್ಥರಿಗೆ 'ಕದಂಬ' ಹೆಸರು ಹೇಗೆ ಬಂತೆಂ ಬುದನ್ನು ಶಾಸನವು ಉಲ್ಲೇಖಿಸುತ್ತದೆ.

ಅ (೩) ಹರಿವರ್ಮನ ಎಂಟನೆಯ ವರ್ಷದ ಶಾಸನ (ಕಾಲ ಕ್ರಿ.ಶ.ಸು. ೫೧೯–೫೨೬)

"ಜಯತಿ ದ್ರುವ ಬಾಲೇನ್ದು ಜಟಾ ಮುಕುಟ
ಮಣ್ಡನಃ
ಅನಾದ್ಯ ನಿಧಾನಶ್ಶಂಬುರ್ವ್ವಿಶೇಷಾಙ್ಗ
(ತಾ)ಮ್ದತಿಃ."

ನಾನಾ ಗೋತ್ರದ ಮೂವತ್ತುಮೂರು ಜನ ಬ್ರಾಹ್ಮಣರಿಗೆ ಹದಿನೆಂಟು ವಿಭಾಗಗಳನ್ನೊಳಗೊಂಡ ತೇದಾವ ಗ್ರಾಮವನ್ನು ದಾನ ಮಾಡಿದ್ದನ್ನು ಈ ಶಾಸನವು ತಿಳಿಸುತ್ತದೆ.

### ವಿಷ್ಣು ಸ್ತುತಿ

ಅ (೧) ಕ್ರಿ.ಶ. ೪೫೦ರ ಕಾಕುಸ್ಥವರ್ಮನ ಹಲ್ಮಿಡಿ ಶಾಸನ

ಜಯತಿ ಪರಿಷ್ವಂಗ ಶಾಙ್ಗರ್ (ವ್ಯಾ) ನತಿ
ರಚ್ಯುತಃ
ದಾನವಾಕ್ಷ್ಣೋರ್ಯುಗಾನ್ತಾಗ್ನಿಃ (ಶಿಷ್ಟಾ
ನಾನ್ತು) ಸುದರ್ಶನಃ[1]

ಈ ಶಾಸನದಲ್ಲಿ ದಾನವರಿಗೆ ಅಗ್ನಿರೂಪನಾಗಿಯೂ

1 ಹಲ್ಮಿಡಿ ಶಾಸನದ ಈ ಶ್ಲೋಕವು 'ಪದ್ಮ ಪುರಾಣ'ದ ಶ್ಲೋಕಕ್ಕೆ ಸಮಿಾಪವಾಗಿದೆ.

ಶಿಷ್ಯರಿಗೆ ಜ್ಞಾನಾನಂದ ರೂಪನಾಗಿಯೂ ಇರುವ ವಿಷ್ಣುವನ್ನು ಸ್ತುತಿಸಲಾಗಿದೆ. ಹಲ್ಮಿಡಿ, ಮೂಳವಳ್ಳಿ ಗ್ರಾಮಗಳನ್ನು ಸರಿದಾವಳಿ ಪ್ರಾಂತ್ಯವನ್ನು ಮೃಗೇಶ–ನಾಗೇಂದ್ರ ಇಬ್ಬರೂ ಆಳುತ್ತಿದ್ದಾಗ ಪಲ್ಲವರನ್ನು, ಕೇಕೆಯರನ್ನು ಹಣಿದು ಗೆದ್ದ ಎಲ್ಲ ಭಟಾರಿಯ ಮಗ ವಿಜ ಅರಸನಿಗೆ ಬಾಳ್ಗಳ್ಚಾಗಿ ಕೊಟ್ಟಿದನ್ನು ಈ ಶಾಸನವು ತಿಳಿಸುತ್ತದೆ.

ಅ (೨) ಮೃಗೇಶವರ್ಮನ ಬನವಾಸಿ ಸ್ತಂಭ ಶಾಸನ
(ಕಾಲ ಸು. ಕ್ರಿ.ಶ. ೪೫೫-೪೮೦)

ತ ಮಂತ್ರ ಘೋಷ ಸಿದ್ಧಮ್ ॥ ಸ್ವಸ್ತಿ,
ಜಿತಂ ಭಗವತಾ
ಜ್ಯೋತಿರ್ಮಯಂ ಬ್ರಹ್ಮವಿದಾಂ ಶರಣ್ಯಂ
ವಿಶ್ವಸ್ಯ ಕರ್ತಾರಮನೇಕ
ರೂಪಂ ವಿಭುಮ್ಪ್ರತಿಂ ಸ್ಥಾವರಜಙ್ಗ
ಮಾನಾಮ್ ವಿಷ್ಣುನ್ನಸ್ಯಾಮಿ ತದೇಕ
ಚಿ(ತ್ರಮ್ ॥)

ಗದ್ಯ ರೂಪದಲ್ಲಿ ಈ ಶಾಸನವು ಸ್ತುತಿಸುತ್ತದೆ. ಈ ಶಾಸನವು ಕಕುಸ್ಥ, ಶಾಂತಿವರ್ಮರನ್ನು ಉಲ್ಲೇಖಿಸಿ ಮೃಗೇಶನು ಗಂಗರನ್ನೂ ಪಲ್ಲವರನ್ನೂ ಸೋಲಿಸಿದ್ದನ್ನು ತಿಳಿಸುತ್ತದೆ.

ಅ (೩) ಎರಡನೆಯ ಕೃಷ್ಣವರ್ಮನ ಏಳನೆಯ ವರ್ಷದ ಬನ್ನಹಳ್ಳಿ ತಾಮ್ರ ಶಾಸನ
(ಕಾಲ ಕ್ರಿ.ಶ. ೫೧೬–೫೪೦)

ಓಂಃ ಸ್ವಸ್ತಿ ಜಯತ್ಯುದ್ರಿಕ್ತ ದೈತೇನ್ದ್ರ
ಬಲ ವೀರ್ಯ ವಿಮರ್ಧನಃ
ಜಗತುತ್ಪತ್ತಿ ಸಂಹಾರ ಸೃಷ್ಟಿ ಮಾಯಾ
ಧರೋಹರಿಃ[2]

ಈ ಅರಸನು ಹರಿದತ್ತ ಎಂಬ ಶ್ರೇಷ್ಠಿಯ ಬಿನ್ನಹದ ಮೇರೆಗೆ ಕೌಶಿಕ ಗೋತ್ರದ ಅಹಿತಾಗ್ನಿ ವಿಷ್ಣುಶರ್ಮನಿಗೆ ವಳ್ಳಾವಿ ವಿಷಯದ ಕೊಳನೆಲ್ಲೂರು ಗ್ರಾಮವನ್ನು ಸರ್ವ ಪರಿಹಾರಾರ್ಥವಾಗಿ ದಾನ ಮಾಡಿದ್ದನ್ನು ತಿಳಿಸುತ್ತದೆ.

ಅ (೪) ಭೋಗಿವರ್ಮನ ತಗರೆ ತಾಮ್ರಶಾಸನ :
ಸ್ವಸ್ತಿಃ ಜಯತ್ಯಮ್ಬುಜಗೇಯಾ ಪತಿರ್ವಿಷ್ಣೋ೯
ಸನಾತನ ವರಾಹ ರೂಪೇಣ ದಾನ ಯೋಗಃ ।

ಅರಸನು ಕಾಶ್ಯಪ ಗೋತ್ರದ ಭೂತಶರ್ಮನಿಗೆ ತಗರೆ ಮಹಾಗ್ರಾಮಕ್ಕೆ ಸೇರಿದ ಹಳ್ಳಿಗಳಲ್ಲೊಂದಾದ ಕಿವಿ ಕೊಲೂರನ್ನು ದಾನ ಮಾಡಿದ್ದನ್ನು ಈ ಶಾಸನವು ದಾಖಲಿಸುತ್ತದೆ.

ಅ (೫) ವಿಷ್ಣುವರ್ಮನ ಐದನೆಯ ವರ್ಷದ ಹೆರ್ಬಟ ತಾಮ್ರ ಶಾಸನ
(ಕಾಲ–ಕ್ರಿ.ಶ. ೪೬೦-೪೯೦)

"ಸ್ವಸ್ತಿ ॥ ಜಿತಂ ಭಗವತಾತೇನ ವಿಷ್ಣುನಾ ಯಸ್ಯ
ವಕ್ಷಸಿ ಶ್ರೀಸ್ವಯಂ ಭಾತಿ ದೇವಶ್ಚ, ನಾಭಿ ಪದ್ಮೇ
ಪಿತಾಮಹಃ"

ಯಾವನ ವೃಕ್ಷಸ್ಥಳದಲ್ಲಿ ಲಕ್ಷ್ಮಿಯು ಶೋಭಿಸುತ್ತಾಳೋ ಯಾವನ ನಾಭಿ ಕಮಲದಲ್ಲಿ ಬ್ರಹ್ಮನು ಇದ್ದಾನೋ ಆ ವಿಷ್ಣು ಶ್ರೇಷ್ಠನು ಎಂದು ವಿಷ್ಣುವನ್ನು ಗದ್ಯತ್ಮಾಕವಾಗಿ ಸ್ತುತಿಸಲಾಗಿದೆ.

ಅಶ್ವಮೇಧಯಾಜಿ ಎನಿಸಿದ ಕೃಷ್ಣವರ್ಮನ ಜೇಷ್ಠ ಪ್ರಿಯತನಯ ವಿಷ್ಣುವರ್ಮ ತನ್ನ ಶ್ರೇಯಸ್ಸಿಗಾಗಿ ಕೂಡಲೂರಿನಲ್ಲಿ ನೆಲಸಿದ್ದಾಗ ಹೆರ್ಬಟ ಗ್ರಾಮವನ್ನು ಬ್ರಹ್ಮದೇಯವಾಗಿ ದಾನಕೊಟ್ಟ ವಿಷಯವನ್ನು ಈ ಶಾಸನವು ತಿಳಿಸುತ್ತದೆ.

### ಬ್ರಹ್ಮಸ್ತುತಿ

ಕ (೧) ವಿಜಯ ಶಿವ ಮೃಗೇಶವರ್ಮನ ಏಳನೆಯ ವರ್ಷದ ಆಳ್ವಿಕೆಯ ಹಿಟ್ನ ಹೆಬ್ಬಾಗಿಲ ತಾಮ್ರ ಶಾಸನ ;
ಸಿದ್ಧಮ್॥ಜಯತಿ ಸುರಾಸುರ ಮಣಿ
ಮಕುಟ ಪ್ರಣಹಿತ
ಮಣಿಕಿರಣ ಖಚಿ (ತ ಚರಣಯುಗಃ)
ದಣ್ಡಕಮಣ್ಡಲು ಹಸ್ತಃಪ್ಪದ್ಮ ಪ್ರವರಾಸನೇ
ಬ್ರಹ್ಮಾ ॥

2 ಈ ಮೇಲಿನ ಶ್ಲೋಕವು 'ಹರಿವಂಶ'ದಲ್ಲಿ ಕೆಲವು ವ್ಯತ್ಯಾಸಗಳೊಂದಿಗೆ ದೊರೆಯುತ್ತದೆ—ಪ್ರೊ॥ ಜಯತೀರ್ಥಾಚಾರ್ಯ ಮಳಗಿ, ಸಂಸ್ಕೃತ ವಿಭಾಗ ಕ.ವಿ.ವಿ. ಧಾರವಾಡ.

ಬ್ರಹ್ಮನನ್ನು ಸ್ತುತಿಸುವ ಸಂಖ್ಯೆ ತೀರ ವಿರಳ ಆದ್ದರಿಂದ ಈ ಶಾಸನ ಗಮನಾರ್ಹವಾದುದು.

ಅರಸನು ಔಪಗಹನಿ ಗೋತ್ರದ ಅಥರ್ವಣ ಶಾಖೆಗೆ ಸೇರಿದ ಪಿಂಗಳ ಸ್ವಾಮಿಯ ಮಗ ಸರ್ವ ಸ್ವಾಮಿಗೆ ಬ್ರಹ್ಮದೇಯವಾಗಿ ದಾನ ಮಾಡಿದ್ದನ್ನು ಈ ಶಾಸನವು ಉಲ್ಲೇಖಿಸಿದೆ.

## ತ್ರಿಮೂರ್ತಿಗಳ ಸ್ತುತಿ

೧) ವಿಷ್ಣುವರ್ಮನ ಮೂರನೆಯ ವರ್ಷದ ಬೀರೂರು ತಾಮ್ರಶಾಸನ

(ಕಾಲ ಕ್ರಿ.ಶ. ೪೬೦–೪೯೦)

ಸಿದ್ಧಮ್ । ಹರ ನಾರಾಯಣ ಬ್ರಹ್ಮ
ತ್ರಿತಯಾ ನಮಸ್ಸದಾ ।
ಶೂಲ ಚಕ್ರಾಕ್ಷ ಸೂತ್ರೋದ್ಭಾವ ಭಾಸಿತ
ಪಾಣಿನೇ ॥
ಸುಕೃತಶತೋಪಚಿತ ವಿಪುಲ ಪುಣ್ಯಸ್ಕನ್ದೇನ
ಆಹವಾರ್ಜ್ಜಿತ ಶೌ
ರ್ಯ ಪ್ರತಾಪಾವಪಾತ ಯಶಸ್ವಿನಾ
ಪರಮ ಬ್ರಹ್ಮಣ್ಯ ಶರಣ್ಯೇನ ॥

ತ್ರಿಮೂರ್ತಿಗಳನ್ನು ಒಂದೇ ಶ್ಲೋಕದಲ್ಲಿ ಸ್ತುತಿಸಿರುವ ಶಾಸನಗಳಲ್ಲಿ ಇದು ಮೊದಲನೆಯದೆಂದು ತೋರುತ್ತದೆ. ಆ ದೃಷ್ಟಿಯಿಂದ ಇದು ಗಮನಾರ್ಹ ಶ್ಲೋಕವಾಗಿದೆ.

ನಾನಾ ಗೋತ್ರದ ಬ್ರಾಹ್ಮಣರಿಗೆ ನೂರು ನಿವರ್ತನ ಭೂಮಿಯನ್ನು ದಾನವಾಗಿ ಕೊಟ್ಟದ್ದನ್ನು ಶಾಸನ ದಾಖಲಿಸುತ್ತದೆ.

## ಮನ್ಮಥ ಸ್ತುತಿ

೧) ರವಿವರ್ಮನ ಗುಡ್ನಾಪುರ ಶಿಲಾಶಾಸನ

(ಕಾಲ ಕ್ರಿ.ಶ. ೪೮೫)

ಜಯತಿ ಸುರವಧೂನಾಮ್ ಮನ್ಮಥ
ಕಾಮಿನಿದಾ....

ಅರಸನು ಅರಮನೆಯ ಸಮೀಪದಲ್ಲಿ ಮನ್ಮಥನಿಗೆ ಕಾಮ ಜಿನಾಲಯವನ್ನು ಕಟ್ಟಿಸಿ ಅಲ್ಲಿ ಪೂಜಾ ಸಂಸ್ಕಾರಗಳಿಗೆ ಹಲವಾರು ಗ್ರಾಮಗಳಲ್ಲಿನ ಭೂಮಿಯನ್ನು ದಾನ ಮಾಡಿದನು. ಮಧು ಮಾಸದಲ್ಲಿ ಮತ್ತು ಅನೇಕ ಸಲ ಉತ್ಸವಗಳನ್ನು ಮಾಡಬೇಕೆಂದು ನಿಯಮಿಸಿದನು. ಇದು ಅತ್ಯಂತ ಪ್ರಾಚೀನ ಕಾಮ ಜಿನಾಲಯವನ್ನು ಉಲ್ಲೇಖಿಸುತ್ತದೆ. ಮತ್ತು ಮನ್ಮಥನನ್ನು ಗದ್ಯರೂಪದಲ್ಲಿ ಸ್ತುತಿಸಲಾಗಿದೆ.

## ಬುದ್ಧನ ಸ್ತುತಿ

ರವಿವರ್ಮನ ೩೪ನೆಯ ವರ್ಷದ ದಾವಣಗೆರೆಯ ತಾಮ್ರಶಾಸನ

ಕ (೧) ಸಿದ್ಧಮ್ ॥ (ಸೂ)ರ್ಯಾಂಶುದ್ಯುತಿ
ಪರಿಷಿಕ್ತ ಪಙ್ಕಜಾನಾಮ್
ಶೋಭಾಂ ಯದ್ವಹತಿ ಸದಾಸ್ಯ ಪಾದ
ಪದ್ಮಮ್
ದೇವಾನಾಮ್ಮಕುಟಮಣಿ ಪ್ರಭಾಭಿಷಿಕ್ತ
ಸರ್ವಜ್ಞಸ್ಸ ಜಯತಿ
ಸರ್ವಲೋಕ ನಾಥಃ

ಸಿದ್ಧಾಯತನ ಪೂಜಾರ್ಥವಾಗಿ ಹರಿದತ್ತನ ಆಜ್ಞಾಪನೆಯಂತೆ ಅರಸನು ಸಿದ್ಧಾಯತನ ಸಂಘಗಳ ಪೂಜೆಗಾಗಿ ಭೂ ದಾನ ಮಾಡಿದನು.

ಕ (೨) ಕೇಕೆಯ ಚಿತ್ರಸೇನನ ಆಳ್ವಿಕೆಯ ಮೊದಲ ವರ್ಷದ ತಾಮ್ರಶಾಸನ

ಸಿದ್ಧಮ್ ॥ ಜಯತ್ಯ ಅಮಿತ ಗುಣಬದ್ರಿ
ಬುದ್ಧ
ಸತ್ವ ಸಮಾಶ್ರಯಃ ಶುದ್ಧೋಧನ ಕಲೋ
ದ್ಭುತಃ
ಪದ್ಮಪತ್ರ ನಿಭೇಕ್ಷಣಃ

ಬುದ್ಧನನ್ನು ರವಿಮಹಾರಾಜನನ್ನು ಉಲ್ಲೇಖಿಸುತ್ತದೆ. ನಿವಿತಾ ಪಲ್ಲಿಯ ಕರ್ಣಸಕಪುಕೇಲ್ಲಾ ಉಪವನವನ್ನು ಆರ್ಯ ಸಂಘಕ್ಕೆ ದಾನ ಕೊಟ್ಟದ್ದನ್ನು ತಿಳಿಸುತ್ತದೆ.

## ಜಿನಸ್ತುತಿ

ಖ (೧) ಮೃಗೇಶವರ್ಮನ ಎರಡನೆಯ ವರ್ಷದ ದೇವಗಿರಿ ತಾಮ್ರಶಾಸನ

(ಕಾಲ ಕ್ರಿ.ಶ. ೩೩೩-೪೮೦)

ಸಿದ್ಧಂ ಜಯತ್ಯರ್ಹಂ ಸ್ತ್ರೀಲೋಕೇಶಃ
ಸರ್ವಭೂತೇರತಃ
ರಾಗಾದ್ಯ ರಹಿತೋನನ್ತೋನನ್ತ ಜ್ಞಾನಗ್ನೀ
ಶ್ವರಃ ಸ್ವಸ್ತಿ ||

ಶಾಂತಿವರ್ಮನ ಮಗ ಮೃಗೇಶನು ಬೃಹತ್ಪರಲೂರಿನಲ್ಲಿ ಚೈತ್ಯಾಲಯದ ಸಮಾರ್ಜನ, ಉಪಲೇಪನ, ಭಗ್ನ ಸಂಸ್ಕಾರಗಳಿಗೆಂದು ಅರ್ಹಂತರಿಗೆ ನಲವತ್ತು ನಿವರ್ತನ ಭೂಮಿಯನ್ನು ಚೈತ್ಯಾಲಯದ ಅಂಗಳಕ್ಕಾಗಿ ಒಂದು ನಿವರ್ತನ ಭೂಮಿಯನ್ನು ದಾನ ಮಾಡಿದ್ದನ್ನು ಈ ಶಾಸನದಿಂದ ತಿಳಿಯಬಹುದು. ದೇವಗಿರಿ ತಾಮ್ರ ಶಾಸನದ ಲೇಖಕ ದಾಮಕೀರ್ತಿ ಹಾಗೂ ನಾಲ್ಕನೆಯ ವರ್ಷದ ದೇವಗಿರಿ ತಾಮ್ರಶಾಸನ–ಸೇನಾಪತಿ ನರವರ.

ರವಿವರ್ಮನ ಹನ್ನೊಂದನೆಯ ವರ್ಷದ ಹಲಸಿ ತಾಮ್ರ ಶಾಸನಗಳು :

i) ಖ(೨) ಸ್ವಸ್ತಿ ಭಗವಾನ್ ಜಿನೇಂದ್ರೋ ಗುಣ ರುಂದ್ರ ಪ್ರತಿಥ ಪರಮಕಾರುಣಿಕಃ ತ್ರೈಲೋಕ್ಯ ಆಶ್ವಾಸಕರೀ ದಯಾ ಪತಾಕಾ ಉಚ್ಚರಿಯ.
ii) ಖ(೩) ,, ,, ,,
iii) ಖ(೪) ,, ,, ,,
ಇದೇ ಶ್ಲೋಕವಿದೆ.

ರವಿವರ್ಮನು ಖ (೨) ತನ್ನ ಆಳ್ವಿಕೆಯ ಹನ್ನೊಂದನೆಯ ವರ್ಷ ಹೇಮಂತ ಋತು ಆರನೆಯ ಪಕ್ಷ ದಶಮಿಯಂದು ಪಲಾಶಿಕೆಯ **ಕದಮ್ರ್ಪಪಟಿ** ಎಂಬಲ್ಲಿ ಜಿನಾಭಿಷೇಕ ತಪ್ಪದೇ ನಡೆಯಲೆಂದು ದಾನ ಮಾಡಿದನು.

ಖ (೩) ಪಲಾಶಿಕೆಯಲ್ಲಿದ್ದಾಗ ದಾಮಕೀರ್ತಿಯ ಮಾತೆಯ ಪ್ರಸಾದದಿಂದ ಜೀನೇಂದ್ರಪೂಜೆಗಾಗಿ ನಾಲ್ಕು ನಿವರ್ತನ ಭೂಮಿಯನ್ನು ದಾನ ಮಾಡಿದನು.

ಖ (೪) ಮೊದಲು ನೀಡಲಾಗಿದ್ದ ದತ್ತಿಯನ್ನೇ ಪುನರ್ದತ್ತಿಯಾಗಿ ನೀಡಿದ ಕುತೂಹಲಕಾರಿ ವಿಷಯ ವನ್ನು ದಾಖಲಿಸುತ್ತದೆ. ಪುರುಖೇಟ ಎಂಬ ಗ್ರಾಮ ವನ್ನೇ ಈ ಮೊದಲು ಕಾಕುಸ್ಥನು ಶ್ರುತಕೀರ್ತಿ ಎಂಬ ಜೈನ ಸನ್ಯಾಸಿಗೆ ದಾನ ಮಾಡಿದ್ದನು. ನಂತರ ಶಾಂತಿ ವರ್ಮ ಅವನ ಮಗ ಮೃಗೇಶ ಇಬ್ಬರೂ ದಾಮ ಕೀರ್ತಿಯ ಮಗ ಪ್ರತೀಹಾರ ಜಯಕೀರ್ತಿಗೆ ಪುನರ್ದತ್ತಿ ಮಾಡಿದರು. ಗ್ರಾಮದ ಆದಾಯವನ್ನು ಪಲಾಶಿಕಾದ ಜಿನಾಲಯದಲ್ಲಿ ಪ್ರತಿವರ್ಷ ಎಂಟು ದಿನಗಳವರೆಗೆ ಉತ್ಸವಗಳನ್ನು ಏರ್ಪಡಿಸಿ ಅದಕ್ಕಾಗಿ ವೆಚ್ಚ ಮಾಡ ಬೇಕೆಂದು, ಮಳೆಗಾಲದಲ್ಲಿ ನಾಲ್ಕು ತಿಂಗಳು ಯಾಪನೀಯ ಜೈನಸಂಘದ ಜೈನಯತಿಗಳ ಪೋಷಣೆ ಹಾಗೂ ಕುಮಾರದತ್ತನಂತಹ ಜ್ಞಾನಿಗಳೂ ಆದ ಅಪೋಧನರನ್ನು ಸಂರಕ್ಷಿಸಲು ನಿರಂತರವಾಗಿ ಜಿನ ಪೂಜೆ ಮಾಡಲು ವಿನಿಯೋಗಿಸುತ್ತಿರಬೇಕೆಂದು ಆಜ್ಞೆ ಮಾಡ ಲಾಗಿತ್ತು.

ಎಲ್ಲೆಲ್ಲಿ ಜಿನೇಂದ್ರಪೂಜೆ ಸಾಂಗವಾಗಿ ನಡೆ ಯುತ್ತದೋ ಅಲ್ಲೆಲ್ಲ ದೇಶದಲ್ಲಿ ಅಭಿವೃದ್ಧಿಯಾಗುತ್ತ ದೆಂದು ಶಾಸನದಲ್ಲಿ ಹೇಳಲಾಗಿದೆ.

ಕರ್ನಾಟಕದಲ್ಲಿ ಮೊಟ್ಟಮೊದಲು ಸ್ವತಂತ್ರ ರಾಜ್ಯ ಸ್ಥಾಪನೆ ಮಾಡಿದ ಕದಂಬರ ಶಾಸನಗಳಲ್ಲಿಯೇ ಶಿವ, ವಿಷ್ಣು, ಬ್ರಹ್ಮ, (ತ್ರಿಮೂರ್ತಿಗಳ ಸ್ತುತಿ) ಮನ್ಮಥ, ಜಿನ ಹಾಗೂ ಬುದ್ಧನನ್ನು ಸ್ತುತಿಸುವ ಶ್ಲೋಕಗಳ ವೈವಿಧ್ಯತೆ ನಮ್ಮನ್ನು ಬೆರಗುಗೊಳಿಸುತ್ತದೆ.

ಯಜ್ಞ ಯಾಗಾದಿಗಳಲ್ಲಿ ನಿರತರಾಗಿ ವೇದವಿದ್ಯಾ ವ್ಯಾಸಂಗ ಪರಿಣಿತರಾಗಿದ್ದ, ಕಟ್ಟಾ ವೈದಿಕ ಧರ್ಮ ವನ್ನು ಅವಲಂಬಿಸಿದ ಕದಂಬ ಕುಲದ ಅರಸರು ಬೌದ್ಧ– ಜೈನ ಧರ್ಮಗಳಿಗೆ ಪ್ರೋತ್ಸಾಹವನ್ನಿತ್ತು ಜೈನ ಹಾಗೂ ಬೌದ್ಧ ಸಂಘ ಸಂಸ್ಥೆಗಳಿಗೆ-ಚೈತ್ಯಾಲಯಗಳಿಗೆ ದಾನ ದತ್ತಿಗಳನ್ನು ನೀಡಿದ್ದು ಅತ್ಯಂತ ಗಮನಾರ್ಹ. ಇವರ ಕಾಲದಲ್ಲಿ ಜೈನ ಧರ್ಮವು ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದಿತೆಂಬುದು ಸ್ಪಷ್ಟವಾಗುತ್ತದೆ. ಬೌದ್ಧ ಧರ್ಮದ ಪ್ರಭಾವವು ಸಾಕಷ್ಟಿದ್ದಿತು. ಬೌದ್ಧರ ಸಂಘ ಗಳಿಗೆ ರವಿವರ್ಮ, ಕೇಕೆಯ ಚಿತ್ರಸೇನ ಇವರು ಭೂ ದಾನ ಮಾಡಿದ್ದನ್ನು ನೆನಪಿಸಿಕೊಳ್ಳಬಹುದು. ಪಲಾಶಿಕೆ ಅಂದರೆ ಈಗಿನ ಹಲಸಿಗೆಯಲ್ಲಿ ಜೈನರ ಅವಶೇಷಗಳಿವೆ. ಶೈವ, ವೈಷ್ಣವ, ಜೈನ, ಬೌದ್ಧ ಧರ್ಮಗಳ ಪ್ರಚಾರವು ಸುಮಾರು ನಾಲ್ಕನೆಯ ಶತಮಾನದಿಂದ ಸಾಕಷ್ಟು ರೂಢಿಯಲ್ಲಿದ್ದಿತು.

ಈ ಮಂಗಳ ಶ್ಲೋಕಗಳಲ್ಲಿ ಬರುವ ವಿಷ್ಣು ಪರವಾದ ಸ್ತುತಿಗಳು ಕ್ರಿಸ್ತಶಕ ಪೂರ್ವದಲ್ಲಿಯೇ ಇದ್ದ ವಿಷ್ಣು ಪುರಾಣ, ವರಾಹ ಪುರಾಣ, ಹರಿವಂಶ, ಪದ್ಮ ಪುರಾಣಗಳಿಂದ, ಬ್ರಹ್ಮನ ಸ್ತುತಿ ಬ್ರಹ್ಮಪುರಾಣದಿಂದ, ಶಿವಪರವಾದ ಸ್ತುತಿ ಶಿವ ಪುರಾಣದಿಂದ ಸ್ಫೂರ್ತಿ ಪಡೆದಿರಬಹುದು. ಪಂಡಿತರಾದ ಶಾಸನ ಕವಿಗಳು ಈ ಪುರಾಣಗಳಲ್ಲಿ ಬರುವ ಶ್ಲೋಕಗಳಿಂದ ಪ್ರೇರಣೆ ಪಡೆದು ಈ ಶ್ಲೋಕಗಳನ್ನು ರಚಿಸಿರುವ ಸಾಧ್ಯದೆ ಇದೆ.

ಈ ಶ್ಲೋಕಗಳು ಮುಂದೆ ಬರುವ ಚಾಲುಕ್ಯರ ಮೂರ್ತಿಶಿಲ್ಪ ನಿರ್ಮಾಣಕ್ಕೆ ಪ್ರೇರಕವಾಗಿವೆ ಎಂದು ಹೇಳಬಹುದು. ಚಾಲುಕ್ಯರ ಕಾಲದಲ್ಲಿ ಶೈವ, ವೈಷ್ಣವ, ಬೌದ್ಧ, ಜೈನ ಗುಹಾ ದೇವಾಲಯಗಳ ನಿರ್ಮಾಣವಾದವು ಎಂಬ ವಿಚಾರಕ್ಕೆ ಕದಂಬರ ಶಾಸನಗಳಲ್ಲಿ ದೊರಕುವ ಮಂಗಳವಾಚಕ ಪದ್ಯಗಳು (ಶ್ಲೋಕ) ಎಡೆ ಮಾಡಿಕೊಡುತ್ತವೆ. ಈ ಬಗ್ಗೆ ಇನ್ನೂ ವ್ಯವಸ್ಥಿತ ಅಧ್ಯಯನ ಆಗಬೇಕಾಗಿದೆ.

## ಕೆಲವು ಟಿಪ್ಪಣೆಗಳು

1) ಬನವಾಸಿಯಲ್ಲಿ (೪-೫ನೆಯ ಶತಮಾನದ) ಚಕ್ರವನ್ನು ಹಿಡಿದಿರುವಂಥ ಒಂದು ಹಸ್ತವು ದೊರೆತಿದೆ. ಇದು ಪ್ರಾಯಶ ವಿಷ್ಣು ಮೂರ್ತಿಯದೆಂದೂ, ಅಲ್ಲಿರುವ ಸ್ತಂಭವು ದೇವಾಲಯದ ಮುಂದೆ ಇದ್ದ ಗರುಡಧ್ವಜವೆಂದು ಇತಿಹಾಸ - ಹಾಗೂ ಶಾಸನ ತಜ್ಞರಾದ ಡಾ॥ ಅ. ಸುಂದರ ಅಭಿಪ್ರಾಯ ಪಡುತ್ತಾರೆ.

2) ವೇದ ಕಾಲದಲ್ಲಿ ದೇವತೆಗಳನ್ನು ವ್ಯಕ್ತಿಗಳಂತೆ ಕಾಣದೆ ತತ್ವಗಳಂತೆ ಕಾಣುತ್ತಿದ್ದರು. ಆ ಬೌದ್ಧಿಕತೆ ಕಡಿವೇಯಾದಂತೆ ಆ ತತ್ವಗಳು ವ್ಯಕ್ತಿಗಳಾದರು, ಗುಣವಾಚಕ ಪದಗಳು ದೇವತಾ ವಾಚಕ ಪದಗಳಾದವು. ಪ್ರೊ॥ ಜಯತೀರ್ಥಾಚಾರ್ಯ ಮಳಗಿ—ಸಂಸ್ಕೃತ ವಿಭಾಗ, ಕ.ವಿ.ವಿ. ಧಾರವಾಡ ಇವರಿಂದ ಈ ವಿಷಯವನ್ನು ತಿಳಿದುಕೊಳ್ಳಲಾಗಿದೆ.

## ಗ್ರಂಥ ಋಣ


೧) ಬನವಾಸಿಯ ಕದಂಬರು—ಬಾ.ರಾ. ಗೋಪಾಲ್, ಇತಿಹಾಸ ಮಾಲೆ೧, ಶಿರಸಿ ೧೯೬೩

೨) Corpus of Kadamba Inscriptions Vol I Dr, B.R. Gopal. Kadamba Institute of Cultaral Studies, Sirsi 1985,



(ಕದಂಬರ ಶಾಸನಗಳಲ್ಲಿ ಬರುವ ಮಂಗಳ ವಾಚಕ ಶ್ಲೋಕಗಳನ್ನು ಅಧ್ಯಯನ ಮಾಡಲು ಪ್ರೇರೇಪಿಸಿದ ಗುರುಗಳಾದ ಡಾ॥ ಅ. ಸುಂದರ ಅವರಿಗೆ ಗೌರವ ಪೂರ್ವಕ ವಂದನೆಗಳು ಮತ್ತು ಶಾಸನಗಳನ್ನು ಟಿಪ್ಪಣಿ ಮಾಡುವಾಗ ಸಹಕರಿಸಿದ ಸೋದರ ಪ್ರೊ॥ ಸುಧೀರ ಕುಲಕರ್ಣಿಯವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.)

# ಬಾದಾಮಿ ಚಲುಕ್ಯರ ಕಾಲದ ಇತ್ತೀಚಿನ ಕೆಲವು ಶಾಸನಗಳು

ಎನ್. ಹವಳಯ್ಯ

ಇತ್ತೀಚಿನ ವರ್ಷಗಳಲ್ಲಿ ಬಾದಾಮಿ ಚಲುಕ್ಯರಿಗೆ ಸಂಬಂಧಿಸಿದ ಕೆಲವು ಶಾಸನಗಳು ಪ್ರಕಟವಾಗಿವೆ.[1] ಅವು ವಿಶೇಷವಾಗಿ ಹಾಳಾಗಿದ್ದು, ರಾಜಕೀಯ ಇತಿಹಾಸಕ್ಕೆ ಅಂತಹ ಮಹತ್ತರವಾದ ಕೊಡುಗೆಗಳನ್ನು ನೀಡುವುದಿಲ್ಲವೆಂಬ ಕಾರಣದಿಂದಾಗಿ, ಅವುಗಳನ್ನು ಸಂಶೋಧಕರು ಗಮನಿಸಿದಂತೆ ಕಾಣಬರುವುದಿಲ್ಲ[2] ಅಂತಹ ಏಳು ಶಾಸನಗಳನ್ನು ಈ ಲೇಖನದ ಮೂಲಕ ಸಂಶೋಧಕರ ಗಮನಕ್ಕೆ ತರಲಾಗಿದೆ.

ಮೊದಲನೆಯ ಶಾಸನ ಚಲುಕ್ಯ ಒಂದನೆಯ ವಿಕ್ರಮಾದಿತ್ಯನಿಗೆ ಸಂಬಂಧಿಸಿದ್ದು (ಹಾವೇರಿ ತಾಲ್ಲೂಕು ದೇವಗೇರಿ). ಸಂಸ್ಕೃತ ಭಾಷೆಯಲ್ಲಿರುವ ಈ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಆದರೆ ಲಿಪಿಯ ಆಧಾರದ ಮೇಲೆ ಇದು ಏಳನೆಯ ಶತಮಾನಕ್ಕೆ ಸೇರಬಹುದೆಂದು ಭಾವಿಸಲಾಗಿದೆ. 'ಜಯತ್ಯಾವಿಷ್ಕೃತಂ' ಎಂದು ಪ್ರಾರಂಭವಾಗುವ ಈ ಶಾಸನದ ಐದನೆಯ ಸಾಲಿನಲ್ಲಿ ವಿಕ್ರಮಾದಿತ್ಯನನ್ನು ಹೆಸರಿಸಲಾಗಿದೆ. ಕಲಿಸಿಂದ ಎಂಬ ಸಾಮಂತನ ಕೋರಿಕೆಯ ಮೇರೆಗೆ ದಾನವನ್ನು ಕೊಟ್ಟ ವಿಷಯವನ್ನು ಈ ಶಾಸನ ಪ್ರಸ್ತಾಪಿಸುತ್ತದೆ. ಕಲಿಸಿಂದನು ಒಂದನೆಯ ವಿಕ್ರಮಾದಿತ್ಯನ ಆಶ್ರಯದಲ್ಲಿ ಸಾಮಂತನಾಗಿದ್ದನೆಂಬ ಹೊಸ ವಿಷಯ ಈ ಶಾಸನದಿಂದ ತಿಳಿದು ಬರುತ್ತದೆ. ಹೆಸರಿನ ಆಧಾರದ ಮೇಲೆ ಇವನು ಸಿಂದವಂಶದವನಿರಬೇಕೆಂದು ಹೇಳಬೇಕಾಗುತ್ತದೆ. ಆದರೆ ನಮಗೆ ತಿಳಿದಿರುವ ಎಲ್ಲ ಸಿಂದವಂಶಗಳ ಇತಿಹಾಸವು ಇಷ್ಟೊಂದು ಪ್ರಾಚೀನವಾಗಿದ್ದಂತೆ ತೋರುವುದಿಲ್ಲ. ಬೆಳಗುತ್ತಿಯ ಸಿಂದರ ವಂಶಾವಳಿಯಲ್ಲಿ ಅಯ್ಯಣ ಜೋಗರಸನೆಂಬುವನು ಕ್ರಿ.ಶ. ೧೦೬೦ರಲ್ಲಿ ಸಾಮಂತನಾಗಿದ್ದನು. ಇವನಿಗಿಂತ ಹಿಂದೆ ಪಿರಿಯಾಚಟ್ಟರಸ ಮತ್ತು ನಿಡುದೋಳಸಿಂದ ಎಂಬ ಇಬ್ಬರು ಸಾಮಂತರಿದ್ದರು.[3] ಅಂದರೆ ಈ ವಂಶದ ಆರಂಭವನ್ನು ಸುಮಾರು ಕ್ರಿ.ಶ. 1000ಕ್ಕಿಂತ ಹಿಂದೆ ಕೊಂಡೊಯ್ಯುವುದು ಕಷ್ಟವಾಗುತ್ತದೆ. ಇನ್ನೊಂದು ಸಿಂದರವಂಶವು ಹೆಂಜೇರು ಅಂದರೆ ಈಗಿನ ಬೀದರ್ ಜಿಲ್ಲೆಯ ಭಾಲ್ಕಿ ತಾಲೂಕಿನಲ್ಲಿ ರಾಜ್ಯವಾಳುತ್ತಿದ್ದಿತು.[4] ಇದರಲ್ಲಿ ಹಜ್ಜರಸನು 1090ರಲ್ಲಿ ಆಳುತ್ತಿದ್ದನು. ಇವನ ಹಿಂದೆ ಗೊಂಕ, ಗೊಣ್ಣ, ಒದ್ದೆಗ ಮತ್ತು ಅಲ್ಲಮ ಎಂಬ ನಾಲ್ಕು ಜನರಿದ್ದರು. ಅಂದರೆ ಇವರ ವಂಶವನ್ನೂ ಸುಮಾರು ಕ್ರಿ.ಶ. 950ಕ್ಕಿಂತ ಹಿಂದಕ್ಕೆ ತೆಗೆದುಕೊಂಡು ಹೋಗುವುದು ಕಷ್ಟವಾಗುತ್ತದೆ. ಮತ್ತೊಂದು ಸಿಂದವಂಶವು ಎರಂಬರಗೆಯಲ್ಲಿ ಆಳುತ್ತಿದ್ದಿತು.[5] ಇದರಲ್ಲಿ ಬಮ್ಮ

1 ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂ. ೧೮ (ಸಂಪಾದಿತ) ಎನ್. ಲಕ್ಷ್ಮೀನಾರಾಯಣ ರಾವ್. ಶಾಸನಗಳು ೧-೭.

2 ಕೆ.ವಿ. ರಮೇಶ್ : ಚಲುಕ್ಯಾಸ್ ಆಫ್ ವಾತಾಪಿ. ೧೯೮೪. ಇದೇ ಬಾದಾಮಿ ಚಲುಕ್ಯರನ್ನು ಕುರಿತಾದ ಅತ್ಯಂತ ಈಚಿನ ಗ್ರಂಥ. ಈ ಗ್ರಂಥದಲ್ಲಿ ರಾಜಕೀಯ ಇತಿಹಾಸವನ್ನು ಚರ್ಚಿಸುವಲ್ಲಿಯಾಗಲೀ, ಅಥವಾ ಕೊನೆಯಲ್ಲಿ ಕೊಟ್ಟಿರುವ ಶಾಸನಗಳ ಪಟ್ಟಿಯಲ್ಲಾಗಲೀ ಈಗ ಚರ್ಚಿಸಲಿರುವ ಶಾಸನಗಳು ಸೇರಿಲ್ಲ.

3 ಕರ್ನಾಟಕ ಕನ್ನಡ ವಿಷಯ ಕೋಶ. ಪು, ೧೪೯೯

4 ಆದೇ

5 ಆದೇ ಪು. ೧೪೫೦

ರಸನೆಂಬುವನು ಕ್ರಿ.ಶ. ೧೦೮೩ರಲ್ಲಿ ಆಳುತ್ತಿದ್ದನು. ಅವನಿಗೂ ಹಿಂದೆ ಚಾವು, ಚಾವುಂಡ, ದ್ವಾಣ, ದಾಸ, ನಾಕ ಮತ್ತು ಆಚುಗಿ ಎಂಬ ಏಳು ಜನರಿದ್ದರೆಂದು ತಿಳಿದು ಬರುತ್ತದೆ. ಅಂದರೆ ಇವರೂ ಕ್ರಿ.ಶ. ೯೫೦ಕ್ಕಿಂತ ಹಿಂದೆ ಇದ್ದರೆಂಬುದು ಒಪ್ಪುವುದು ಕಷ್ಟ. ಬಾಗಡಗೆ, ಅಂದರೆ ಈಗಿನ ಬಿಜಾಪುರದ ಸಮೀಪದ ಬಾಗಲಕೋಟೆಯಲ್ಲಿ ಆಳುತ್ತಿದ್ದ ಸಿಂದವಂಶದ ಇತಿಹಾಸವು ಕಲ್ಯಾಣದ ಚಾಲುಕ್ಯ ದೊರೆ ಇಮ್ಮಡಿ ತೈಲಪನಿಂದ ಪ್ರಾರಂಭವಾಗುತ್ತದೆ. ಆದುದರಿಂದ ಈ ಶಾಸನ ಕಲಿಸಿಂದನು ಈ ಯಾವ ಸಿಂದವಂಶಕ್ಕೂ ಸೇರಿದವನಲ್ಲವೆಂದು ಹೇಳಬೇಕಾಗುತ್ತದೆ. ಬಹುಶಃ ಇವನೊಬ್ಬ ಸಿಂದವಂಶದ ಸಾಮಂತನಿರಬೇಕೆಂದು ಮಾತ್ರ ಹೇಳಬೇಕಾಗುತ್ತದೆ.

ಬಂಕಾಪುರ ತಾಲೂಕಿನ ಬನ್ನಿಕೊಪ, ಎಂಬಲ್ಲಿ ದೊರಕಿರುವ ವಿಜಯಾದಿತ್ಯನ ಶಾಸನದಲ್ಲಿ[6] ಕಾಲದ ಉಲ್ಲೇಖವಿಲ್ಲದಿದ್ದರೂ, ಲಿಪಿಯ ಆಧಾರದ ಮೇಲೆ ಇದನ್ನು ಕ್ರಿ.ಶ. ಎಂಟನೆಯ ಶತಮಾನದ್ದೆಂದು ತೀರ್ಮಾನಿಸಲಾಗಿದೆ. ಉತ್ತರಾಪಥದ ಒಬ್ಬನು (ಹೆಸರು ಹಾಳಾಗಿದೆ) ಅರ್ಜುನೇಶ್ವರ ದೇವರಿಗೆ ದೇವಾಲಯವನ್ನು ಕಟ್ಟಿಸಿದನು. ಜೊತೆಗೆ ಆ ದೇವಾಲಯದಲ್ಲಿ ನಂದೀಶ್ವರನ ವಿಗ್ರಹವನ್ನು ಸ್ಥಾಪಿಸಿದನು ಮತ್ತು ಇವುಗಳಿಗೋಸ್ಕರವಾಗಿ ಭೂದಾನವನ್ನು ಮಾಡಿ, ಆ ಸ್ಥಳದ ಮಹಾಜನಗಳಿಗೆ ಇದನ್ನು ಒಪ್ಪಿಸಿದನು ಎಂಬ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಕುತೂಹಲಕರವಾದ ವಿಷಯವೆಂದರೆ ಉತ್ತರಾಪಥದಿಂದ ಚಲುಕ್ಯ ರಾಜ್ಯಕ್ಕೆ ಒಬ್ಬನು ಬಂದು ದೇವಾಲಯವನ್ನು ಕಟ್ಟಿಸಿರುವುದು. ಬಹುಶಃ ಇಮ್ಮಡಿ ಪುಲಕೇಶಿಯ ಉತ್ತರಾಪಥದ ದಿಗ್ವಿಜಯದ ನಂತರ ಈ ಎರಡೂ ಪ್ರದೇಶಗಳಿಗೂ ಸಂಬಂಧಗಳು ವಿಶೇಷವಾಗಿ ಉಂಟಾಗಿರಬೇಕು. ಇದರಿಂದಾಗಿ ಉತ್ತರಾಪಥದಿಂದ ಅನೇಕರು ಚಲುಕ್ಯರಾಜ್ಯಕ್ಕೆ ಬಂದಿರಬೇಕು. ಈ ರೀತಿಯ ಸಂಬಂಧಗಳಲ್ಲಿ ಒಂದನ್ನು ಈ ಶಾಸನ ಸೂಚಿಸುತ್ತದೆ ಎಂದು ಊಹಿಸಬಹುದು. ಎರಡನೆಯದಾಗಿ ಅರ್ಜುನೇಶ್ವರ ಎಂಬ ದೇವಾಲಯ ಗಮನಾರ್ಹ. ಕ್ರಿ.ಶ. ಎಂಟನೆಯ ಶತಮಾನದ ಹೊತ್ತಿಗೆ ಮಹಾಭಾರತದ ವ್ಯಕ್ತಿಗಳಲ್ಲಿ ಒಬ್ಬನಾದ ಅರ್ಜುನನ ಹೆಸರಿನಲ್ಲಿ ಈಶ್ವರನ ಲಿಂಗವನ್ನು ಸ್ಥಾಪಿಸುವ ಪದ್ಧತಿಯು ಪ್ರಚಲಿತವಾಗಿದ್ದಿತು. ಎಂಬುದನ್ನು ಇದು ದೃಢಪಡಿಸುತ್ತದೆ. ಈ ದೇವಾಲಯವನ್ನು ಕಟ್ಟಿಸಿದವನು ಉತ್ತರಾಪಥದಿಂದ ಬಂದವನು ಎನ್ನುವ ಅಂಶವು ಗಮನಾರ್ಹ. ಬನ್ನಿಕೊಪದ ಪ್ರಾಚೀನ ಹೆಸರು ಬನ್ನಿಯೂರು ಎಂಬುದು ಈ ಶಾಸನದಿಂದ ತಿಳಿಯುಬರುತ್ತದೆ. ಇಲ್ಲಿ ಬನ್ನಿಮರವೇನಾದರೂ ಇದ್ದಿತ್ತೇ, ಅದರಿಂದ ಈ ಹೆಸರು ಬಂದಿತೇ ಎನ್ನುವುದು ಸ್ಥಳನಾಮದೃಷ್ಟಿಯಿಂದ ವಿಚಾರಿಸಬೇಕಾದ ಅಂಶ. ಏಕೆಂದರೆ ಅರ್ಜುನನ ಹೆಸರಿನ ದೇವಾಲಯವು ಇಲ್ಲಿ ಇರುವುದರಿಂದ, ಮಹಾಭಾರತದಲ್ಲಿ ಉಲ್ಲೇಖಿತವಾಗಿರುವ ಆ ಘಟನೆಯನ್ನು ಇದು ಪ್ರತಿಧ್ವನಿಸುತ್ತದೆಯೋ ಎನ್ನುವುದು ಗಮನಿಸಬೇಕಾದ ಅಂಶ. ಹಾಗಾದಲ್ಲಿ ಬನ್ನಿಮರದ ಮಹತ್ವವನ್ನು ತಿಳಿಸುವ ಪ್ರಾಚೀನ ಶಾಸನಗಳಲ್ಲಿ ಇದೊಂದು ಎಂದು ಗಮನಿಸಬೇಕಾಗುತ್ತದೆ.

ಹಾಲವಡ್ಡರಗೇರಿಯ ವಿಜಯಾದಿತ್ಯನ ಹೆಸರನ್ನು ಹೇಳುವ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ.[7] ಆದರೆ ಲಿಪಿದೃಷ್ಟಿಯಿಂದ ಇದನ್ನು ಕ್ರಿ.ಶ. ಎಂಟನೆಯ ಶತಮಾನಕ್ಕೆ ಹಾಕಬಹುದು. ಇದೊಂದು ವೀರಗಲ್ಲು ಶಾಸನ. ವೀರನೊಬ್ಬನು ಸತ್ತು ಸ್ವರ್ಗ ಸೇರಿದುದನ್ನು ಈ ಶಾಸನ ಪ್ರಸ್ತಾಪಿಸುತ್ತದೆ. ಈ ಶಾಸನದಲ್ಲಿ ಸಿರಿಸಾಗರ ಎಂಬುವನ ಹೆಸರು ಕಂಡು ಬರುತ್ತದೆ. ಇವನು ಯಾರು ಎಂದು ಉಲ್ಲೇಖಿತವಾಗಿಲ್ಲ. ಆದರೆ ಹೆಸರಿನ ಸಾಮ್ಯದಿಂದ ಹೇಳುವುದಾದರೆ ಇವನೊಬ್ಬ ಆಳುಪವಂಶದವನಿರಬೇಕು. ಏಕೆಂದರೆ ಸಮಕಾಲೀನ ಆಳುಪರಾಜ್ಯದಲ್ಲಿ ಗುಣಸಾಗರ, ರಣಸಾಗರ, ಪೃಥ್ವೀಸಾಗರ ಎಂಬ ಅರಸರು ಇದ್ದರು[8]. ಗುಣಸಾಗರನು ಇಮ್ಮಡಿ ಪುಲಕೇಶಿಯ ಸಾಮಂತನಾಗಿದ್ದನು. ಅನಂತರ ಅವನು ಸಾಮಂತನಲ್ಲದೇ ಹೋದರೂ

---

6 ಸೌ.ಇಂ. ಇ ಸಂ. ೧೮ ಶಾಸನ ೩

7 ಅದೇ ; ಶಾಸನ ೪

8 ಕೆ.ವಿ. ರಮೇಶ್: ಎ ಹಿಸ್ಟರಿ ಆಫ್ ಸೌತ್ ಕೆನರ : ಪು. ೪೪, ೭೮, ೮೧

ಚಾಲುಕ್ಯರಾಜರೊಡನೆ ಸ್ನೇಹದಿಂದ ಇದ್ದನು. ಆದರೆ ಚಲುಕ್ಯರ ಪ್ರಭಾವ ಕಡಿಮೆಯಾಗುತ್ತಿರುವುದನ್ನು ಗಮನಿಸಿದ ಆಳುಪರು, ಇವರನ್ನು ಕಡೆಗಣಿಸಿ, ರಾಷ್ಟ್ರಕೂಟರೊಡನೆ ಸ್ನೇಹವನ್ನು ಬೆಳೆಸಲು ಆತುರರಾಗಿದ್ದರು[9]. ಇಂತಹ ಪರಿಸ್ಥಿತಿಯಲ್ಲಿ ಆಳುಪ ಸಿರಿಸಾಗರ ಎಂಬುವವನ ಮೇಲೆ ವಿಜಯಾದಿತ್ಯನು ಸೈನ್ಯವನ್ನು ಕಳುಹಿಸಿರಬೇಕು. ಈ ಯುದ್ಧದಲ್ಲಿ ವಿಜಯಾದಿತ್ಯನ ಸೈನಿಕನೊಬ್ಬನು ಮಡಿದಿರಬೇಕು, ಅದಕ್ಕಾಗಿ ಈ ವೀರಗಲ್ಲು ಶಾಸನವನ್ನು ನೆಡಿಸಲಾಯಿತು. ಬಹುಶಃ ರಣಸಾಗರನು ಗುಣಸಾಗರನ ಮಗ ಅಥವಾ ರಣಸಾಗರನ ತಮ್ಮನಾಗಿರಬಹುದು ಎಂದು ಊಹಿಸಬಹುದು. ಸಿರಿಸಾಗರನನ್ನು ಹೆಸರಿಸುವ ಮತ್ತೊಂದು ಶಾಸನವು ಸಿಗುವವರೆಗೆ, ಸದ್ಯಕ್ಕೆ ಇಷ್ಟನ್ನು ಮಾತ್ರ ಹೇಳಬಹುದು.

ಹಾವೇರಿ ತಾಲೂಕಿನ ದೇವಗಿರಿಯಲ್ಲಿ ದೊರೆತಿರುವ ಮತ್ತೊಂದು ಶಾಸನದಲ್ಲಿಯೂ ಕಾಲದ ಉಲ್ಲೇಖವಿಲ್ಲ. ಆದರೆ ಲಿಪಿಯ ದೃಷ್ಟಿಯಿಂದ ಅದು ಕ್ರಿ.ಶ. ಏಳು–ಎಂಟನೆಯ ಶತಮಾನಕ್ಕೆ ಸೇರುತ್ತದೆ. ಇದರಲ್ಲಿ ರಾಜನ ಹೆಸರು ಬರೆದಿರುವ ಜಾಗ ಹಾಳಾಗಿ ಹೋಗಿರುವುದರಿಂದ, ಇದು ಚಲುಕ್ಯರ ಯಾವ ದೊರೆಯ ಶಾಸನವೆಂದೂ ತಿಳಿಯುವುದಿಲ್ಲ. ಇದು ಒಂದು ಸ್ಮಾರಕ ಶಾಸನ. ಎರಿಂಚೋಳರಸರೊಡನೆ ನಡೆದ ಯುದ್ಧದಲ್ಲಿ ಚೆಂದೂರು ಎಂಬಲ್ಲಿ ಮಡಿದ ವೀರನ ಸ್ಮಾರಕಾರ್ಥವಾಗಿ ನೀಡಿದ ದಾನಗಳನ್ನು ಈ ಶಾಸನ ಹೆಸರಿಸುತ್ತದೆ. ಎರಿಂಚೋಳರಸ ಯಾರು ಎನ್ನುವುದನ್ನು ಶಾಸನದಲ್ಲಿ ಹೇಳಿಲ್ಲ. ಅವನ ಹೆಸರನ್ನು ಗಮನಿಸಿದರೆ ಅವನು ರೇನಾಡು ಚೋಳರಲ್ಲಿ ಒಬ್ಬನಿರಬೇಕೆಂದು ತಿಳಿದು ಬರುತ್ತದೆ. ರೇನಾಡು ಚೋಳರು ಪಲ್ಲವರ ಸಾಮಂತರಾಗಿದ್ದರು. ಇಮ್ಮಡಿ ಪುಲಕೇಶಿಯು ಪಲ್ಲವರ ಮೇಲೆ ವಿಜಯವನ್ನು ಸಂಪಾದಿಸಿದ ಅನಂತರ, ಇವರು ಚಲುಕ್ಯರ ಸಾಮಂತರಾಗದೇ ಹೋದಾಗ, ಇವರ ಮೇಲೆ ಸೈನ್ಯವನ್ನು ಕಳುಹಿಸಲಾಯಿತು. ಅಂತಹ ಒಂದು ಯುದ್ಧ ಎರಿಂಚೋಳರಸನ ಮೇಲೆ ನಡೆದಿರಬೇಕು. ಆ ಯುದ್ಧದಲ್ಲಿ ಚೆನ್ದೂರಿನ ವೀರನೊಬ್ಬನು ಮಡಿದಿರಬೇಕು. ಅವನ ಸ್ಮಾರಕಾರ್ಥವಾಗಿ ಈ ಶಾಸನವನ್ನು ನೆಡಿಸಲಾಗಿರಬೇಕು ಎಂದು ಊಹಿಸಬಹುದು.

ಸಿರುಗುಪ್ಪಿಯ ಶಾಸನದಲ್ಲಿಯೂ ಕಾಲದ ಉಲ್ಲೇಖವಿಲ್ಲ. ಆದರೆ ಲಿಪಿಶಾಸ್ತ್ರದ ದೃಷ್ಟಿಯಿಂದ ಈ ಶಾಸನ ಆರು–ಏಳನೆಯ ಶತಮಾನಕ್ಕೆ ಸೇರುತ್ತದೆ ಎಂದು ಹೇಳಬಹುದು.[10] ಇದರಲ್ಲಿ ವಾಣಸತ್ತಿ ಅರಸ ಮತ್ತು ಕುಂದಸತ್ತಿ ಅರಸ ಎನ್ನುವ ಇಬ್ಬರು ಅರಸರ ಉಲ್ಲೇಖವಿದೆ. ಈ ಶಾಸನವನ್ನು ಗಮನಿಸಿರುವ ಡಾ|| ರಮೇಶ್‌ರವರು ವಾಣಸತ್ತಿಯು ಸೇಂದ್ರಕ ಭಾನುಶಕ್ತಿಯೆಂದು ಸಮಂಜಸವಾಗಿ ಊಹಿಸಿದ್ದಾರೆ.[11] ಅಷ್ಟೇ ಅಲ್ಲದೆ ಇವನು ಕದಂಬರ ಸಾಮಂತನಾಗಿದ್ದು ಹರಿವರ್ಮನ ಹಲಸಿ ಶಾಸನದಲ್ಲಿ ಕಾಣಿಸಿಕೊಳ್ಳುತ್ತಾನೆ; ಇವನೇ ಮೊದಲನೆಯ ಕೀರ್ತಿವರ್ಮನಿಂದ ಪರಾಜಿತನಾದ ಭಾನುಶಕ್ತಿ ಎಂದೂ ತರ್ಕಿಸಿದ್ದಾರೆ. ಕುಂದಸತ್ತಿಯು ಈ ವಾಣಸತ್ತಿಯ ಮಗ ಎನ್ನುವ ಹೊಸ ವಿಚಾರ ಈ ಶಾಸನದಿಂದತಿಳಿದುಬರುತ್ತದೆ. ಇವನೂ ಕೂಡ ಬಾದಾಮಿ ಚಲುಕ್ಯರ ಸಾಮಂತನಾಗಿದ್ದನೆಂದು ಹೇಳಬಹುದು. ಇದೇ ಶಾಸನದಲ್ಲಿ ಹೆಸರಿಸಿರುವ ವಾಕ್ಕಟಕಣದೇವಿಯು ಕುಂದಸತ್ತಿಯ ರಾಣಿಯಿರಬೇಕು. ಆಕೆಯ ಹೆಸರನ್ನು ನೋಡಿದರೆ ಆಕೆ ವಾಕಾಟಕವಂಶದವಳು ಎನ್ನುವ ಸಂದೇಹ ಬರುತ್ತದೆ. ಒಟ್ಟಿನಲ್ಲಿ ಈ ಶಾಸನಗಳು ಚಲುಕ್ಯರ ಇತಿಹಾಸದ ಮೇಲೆ ಸಾಕಷ್ಟು ಬೆಳಕನ್ನು ಚಲ್ಲುತ್ತವೆ.

○

9 ಅದೇ : ಪು. ೭೮

10 ಸೌ. ಇಂ.ಇ. ಸಂ. ೧೮ ಶಾಸನ ೭.

11 ಕೆ.ವಿ. ರಮೇಶ್ : ಚಲುಕ್ಯಾಸ್ ಆಫ್ ವಾತಾಪಿ : ಪು. ೪೩, ಇವರ ಪ್ರಕಾರ ಭಾನುಶಕ್ತಿ < ವಾಣಸತ್ತಿ < ಬಾಸತ್ತಿಯಾಗಿ ಕೊನೆಗೆ ಬಾಣಂತಿ ಗುಡಿ ಎನ್ನುವ ಪ್ರಯೋಗಕ್ಕೆ ಎಡೆಮಾಡಿಕೊಟ್ಟಿತು.

# ಸೋಮನಾಥಪುರದ ಎರಡು ಶಾಸನಗಳು

**ಎಂ. ಪಿ. ಮಹದೇವಯ್ಯ**

ಸೋಮನಾಥಪುರದ ಕೇಶವ ದೇವಾಲಯಕ್ಕೆ ಸಂಬಂಧಿಸಿದಂತೆ ಎರಡು ಶಾಸನಗಳು ಬಹಳ ಪ್ರಮುಖವಾಗಿವೆ. ಕೇಶವ ದೇವಾಲಯಕ್ಕೆ ಕೊಟ್ಟ ದಾನ, ದತ್ತಿ ಮತ್ತು ವಿವಿಧ ಉತ್ಸವಗಳನ್ನು ತಿಳಿಸುವುದು ಈ ಶಾಸನಗಳ ಮುಖ್ಯ ಉದ್ದೇಶವಾದರೂ ಹೊಯ್ಸಳ ಕಾಲದ ಆರ್ಥಿಕ-ಸಾಮಾಜಿಕ ಸ್ಥಿತಿಗಳನ್ನು ತಿಳಿಯುವಲ್ಲಿ ಮುಖ್ಯವಾಗಿವೆ. ಮೊದಲನೆಯ ಶಾಸನ ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿವೆ. ಇದು ಹೊಯ್ಸಳ ಮೂರನೆಯ ನರಸಿಂಹನ ಶಾಸನ.[1] ಇದರಲ್ಲಿ ಎರಡು ತೇದಿಗಳು ಕೊಡಲ್ಪಟ್ಟಿವೆ. ಒಂದು ಕ್ರಿ.ಶ. ೧೨೬೯, ಮತ್ತೊಂದು ಕ್ರಿ.ಶ. ೧೨೭೬. ಸೋಮಯ್ಯ ದಂಡನಾಯಕನ ಸೋದರಳಿಯಂದಿರಾದ ಮಲ್ಲಿದೇವ ದಂಡನಾಯಕ ಮತ್ತು ಚಿಕ್ಕಕೇತಯ ದಂಡನಾಯಕರು ಈ ದೇವಾಲಯದ ಪೂಜೆಪುನಸ್ಕಾರಗಳಿಗೆ ಕೊಟ್ಟ ದತ್ತಿಗಳನ್ನು ದೀರ್ಘವಾಗಿ ಈ ಶಾಸನ ವಿವರಿಸುತ್ತದೆ. ಎರಡನೆಯ ಶಾಸನವೂ ಇದೇ ರಾಜನ ಕಾಲದ್ದು. ಹೆಚ್ಚು ಕಡಿಮೆ ಇದರಲ್ಲಿ ಪ್ರಸ್ತಾಪಿಸಲಾಗಿರುವ ವಿಷಯಗಳೂ ಮೊದಲನೆಯ ಶಾಸನದಲ್ಲಿರುವಂತೆಯೇ ಇವೆ[2] ಈ ಎರಡೂ ಶಾಸನಗಳ ಮೊದಲಿನಲ್ಲಿ ಹೊಯ್ಸಳ ರಾಜರ ವಂಶಾವಳಿಯು ವಿವರವಾಗಿ ಹೇಳಲ್ಪಟ್ಟಿದೆ. ಇದರಲ್ಲಿ ವಿಶೇಷವೇನೂ ಕಾಣಬರುವುದಿಲ್ಲ. ಈ ದೇವಾಲಯವನ್ನು ಸ್ಥಾಪಿಸಿದ ಸೋಮದಂಡನಾಯಕ ಹಾಗೂ ಅವನ ಸೋದರಳಿಯಂದಿರಾದ ಮಲ್ಲಿದೇವ ದಂಡನಾಯಕ ಹಾಗೂ ಚಿಕ್ಕಕೇತಯ ದಂಡನಾಯಕ ಅವರುಗಳ ವಿಷಯವೂ ಉಕ್ತವಾಗಿದೆ. ಆದರೆ ಈ ಶಾಸನಗಳ ಮಹತ್ವ, ಅವು ಸಾಂಸ್ಕೃತಿಕ ಇತಿಹಾಸಕ್ಕೆ ಒದಗಿಸುವ ಮಾಹಿತಿಗಳಿಂದ. ಅವುಗಳನ್ನು ಕೆಳಗೆ ಕಂಡಂತೆ ವಿಭಾಗಿಸಬಹುದು.

ವ್ಯವಸಾಯಕ್ಕೆ ಸಂಬಂಧಿಸಿದಂತೆ ತೋಟ, ಗದ್ದೆ, ಬೆದ್ದಲು, ಕಾಲುವೆ, ಕೃಷಿ ವ್ಯವಸಾಯ ಎಂಬ ಪದಗಳು ಕಾಣಸಿಗುತ್ತವೆ. ವ್ಯವಸಾಯದ ಭೂಮಿಯನ್ನು ತೋಟ, ಗದ್ದೆ, ಬೆದ್ದಲು ಎಂದು ವಿಭಾಗಿಸುತ್ತಿದ್ದರು ಎಂಬ ಅಂಶ ಇತರ ಅನೇಕ ಶಾಸನಗಳಿಂದಲೂ ತಿಳಿದು ಬರುತ್ತದೆ. ಕಾಲುವೆಗಳಿಗೆ ಅವರು ವಿಶೇಷ ಗಮನವನ್ನು ಕೊಡುತ್ತಿದ್ದುದು ಮಾತ್ರವಲ್ಲದೆ ಅದಕ್ಕಾಗಿಯೇ ಅನೇಕ ತೆರಿಗೆಗಳನ್ನು ಬಿಡುತ್ತಿದ್ದರು.

ಕಂದಾಯ ತೆರಿಗೆಗಳಿಗೆ ಸಂಬಂಧಿಸಿದ ಪದಗಳಾದ ಸುವರ್ಣಾಯ, ಸಿದ್ಧಾಯ, ಸೇಸೆ, ಮಳಬ್ರಯ, ಅಪೂರ್ವಾಯ ಇಲ್ಲಿ ಪ್ರಾಸಂಗಿಕವಾಗಿ ಹೇಳಲ್ಪಟ್ಟಿವೆ. ರಾಜ್ಯದ ಆದಾಯವನ್ನು ಧಾನ್ಯಾದಾಯ ಮತ್ತು ಸುವರ್ಣಾಯ ಎಂದು ಎರಡು ಭಾಗಗಳಾಗಿ ಮಾಡುತ್ತಿದ್ದರು. ಮೊದಲನೆಯದು, ರಾಜ್ಯಕ್ಕೆ ಸಲ್ಲಬೇಕಾದ ಕಂದಾಯ, ತೆರಿಗೆ ಮುಂತಾದವುಗಳನ್ನು ದವಸ-ಧಾನ್ಯದ ರೂಪದಲ್ಲಿ ಕೊಡಲು ಅವಕಾಶವಿದ್ದಿತು. ಆದರೆ ಮತ್ತೆ ಕೆಲವು ವಿಷಯಗಳಲ್ಲಿ ಇದಕ್ಕೆ ಅವಕಾಶವಿರುತ್ತಿರಲಿಲ್ಲ. ಅಂತಹ ಸಮಯಗಳಲ್ಲಿ ಚಿನ್ನ ಅಂದರೆ ಚಿನ್ನದ ನಾಣ್ಯದ

---

1 ಎಪಿಗ್ರಾಫಿಯ ಕರ್ನಾಟಿಕ : (ಪರಿಷ್ಕೃತ) ಸಂಪುಟ-೫, ಸಂಖ್ಯೆ ೮೮.

2 ಅದೇ : ೯೬

ರೂಪದಲ್ಲಿ ಕಂದಾಯ ಮತ್ತು ತೆರಿಗೆಗಳನ್ನು ಕೊಡಬೇಕಾಗಿದ್ದಿತು. ಕೆಲವು ಇತಿಹಾಸಕಾರರ ಅಭಿಪ್ರಾಯದ ಪ್ರಕಾರ ಹೊಯ್ಸಳರ ಕಾಲವೂ ಸೇರಿದಂತೆ ಮಧ್ಯಕಾಲದ ಮೊದಲ ಭಾಗದಲ್ಲಿ ನಾಣ್ಯಗಳ ಚಲಾವಣೆ ಬಲು ಕಡಿಮೆ ಇತ್ತು. ಅದರಿಂದಾಗಿ ಆ ಕಾಲದ ಚಿನ್ನದ ನಾಣ್ಯಗಳು ಹೇರಳವಾಗಿ ದೊರಕಿಲ್ಲ ಆದರೆ ಈ ಶಾಸನವನ್ನು ಗಮನಿಸಿದಾಗ, ಇಲ್ಲಿ ಬರುವ ಸುವರ್ಣಾಯ ಎನ್ನುವ ಪದವನ್ನು ಗಮನಿಸಿದಾಗ ಹಾಗೂ, ಈ ಶಾಸನದಲ್ಲಿ ಕೊನೆಯ ಪಕ್ಷ ೬೦-೭೦ ಸಾರಿ ಕಂಡುಬರುವ ಗದ್ಯಾಣ, ಹಣ, ಹಾಗ, ಬೇಳೆ ಎಂಬ ನಾಣ್ಯಗಳನ್ನು ಗಮನಿಸಿದರೆ, ಹೊಯ್ಸಳರ ಕಾಲದಲ್ಲಿ ಚಿನ್ನದ ನಾಣ್ಯಗಳಿಗೇನೂ ಕೊರತೆ ಇರಲಿಲ್ಲ ಎಂದು ತಿಳಿಯಬರುತ್ತದೆ. ಹೆಚ್ಚಿನ ಸಂಖ್ಯೆಯಲ್ಲಿ ಹೊಯ್ಸಳ ಚಿನ್ನದ ನಾಣ್ಯಗಳು ದೊರಕಿಲ್ಲವೆಂಬುದು ನಿಜವಾದರೂ, ನಾಣ್ಯ ಚಲಾವಣೆ ಕಡಿಮೆ ಇದ್ದಿತೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸಾಮಾನ್ಯವಾಗಿ ಪ್ರತಿ ಶಾಸನದಲ್ಲಿಯೂ ಚಿನ್ನದ ನಾಣ್ಯಗಳಾದ ಗದ್ಯಾಣ, ಹಣಗಳ ಪ್ರಸ್ತಾಪ ಪದೇ ಪದೇ ಬರುತ್ತವೆ. ಹೊಯ್ಸಳ ಶಾಸನಗಳಲ್ಲಿ ಕಾಣಬರುವ ನಾಣ್ಯಗಳ ಚಲಾವಣೆಗಳೆಲ್ಲವನ್ನೂ ಈ ದೃಷ್ಟಿಯಿಂದ ಪಟ್ಟಿಮಾಡಿ ಅಭ್ಯಾಸ ಮಾಡಿದರೆ ಈ ವಿಷಯದಲ್ಲಿ ಉತ್ತಮವಾದ ಮಾಹಿತಿಯು ದೊರೆಯುವುದರಲ್ಲಿ ಸಂದೇಹವಿಲ್ಲ.

ಸಿದ್ಧಾಯ ಎನ್ನುವುದು ಭೂಕಂದಾಯ. ಆದರೆ ಕೆಲವು ಕಡೆ ಇದು ಮನೆ ಕಂದಾಯವನ್ನು ಸೂಚಿಸುತ್ತದೆ ಎಂದು ಡಾ॥ ಚಿದಾನಂದಮೂರ್ತಿಯವರು ಹೇಳಿದ್ದಾರೆ.[3] ಸೇಸೆ ಎನ್ನುವುದು ತೆರಿಗೆ. ಸೇಸೆ, ಕುದುರೆಯ ಸೇಸೆ, ಮುಂತಾದ ತೆರಿಗೆಗಳನ್ನು ಈ ಕಾಲದಲ್ಲಿ ಕಾಣುತ್ತೇವೆ. ಮಳಬ್ರಯ ಎನ್ನುವುದು ಒಂದು ತೆರಿಗೆಯ ಹೆಸರು. ಹಾಗೆಯೇ ಅಪೂರ್ವಾಯ ಎನ್ನುವುದೂ ಒಂದು ತೆರಿಗೆಯ ಹೆಸರು.

ಇಲ್ಲಿ ನಾಲ್ಕು ವಿವಿಧ ನಾಣ್ಯಗಳ ಹೆಸರುಗಳು ಕಾಣಬರುತ್ತವೆ. ಅವೇ ಗದ್ಯಾಣ, ಹಣ, ಹಾಗ ಮತ್ತು ಬೇಳೆ. ೬೧ ಗ್ರೇನ್ ತೂಕದ ಚಿನ್ನದ ನಾಣ್ಯಗಳೇ ಇವರ ಗದ್ಯಾಣಗಳು. ತಲಕಾಡುಗೊಂಡ ಹಾಗೂ ನೊಳಂಬವಾಡಿಗೊಂಡ ಎಂಬ ಬರಹವುಳ್ಳ ವಿಷ್ಣುವರ್ಧನನ ಚಿನ್ನದ ಗದ್ಯಾಣಗಳು ದೊರಕಿವೆ[4]. ಗದ್ಯಾಣದ ಹತ್ತನೇ ಒಂದು ಭಾಗದ ನಾಣ್ಯವೇ ಪಣ ಅಥವಾ ಹಣ. ಇದರ ತೂಕ ೬ ಗ್ರೇನುಗಳು. ಒಂದು ಪಣಕ್ಕೆ ನಾಲ್ಕು ಹಾಗಗಳು ಅಂದರೆ ಅದರ ತೂಕ ಒಂದುವರೆ ಗ್ರೇನ್‌ಗಳು. ಬೇಳೆಯ ತೂಕತಿಳಿದುಬಂದಿಲ್ಲ. ಸಲಗೆ, ಬಳ್ಳ, ಕೊಳಗ ಮತ್ತು ಮಾನ ಎಂಬ ನಾಲ್ಕು ವಿವಿಧ ರೀತಿಯ ಅಳತೆಗಳು ಇಲ್ಲಿ ಹೆಸರಿಸಲ್ಪಟ್ಟಿವೆ.

ವಿದ್ಯಾಭ್ಯಾಸಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲವಾದರೂ, ಸರ್ವಶಾಸ್ತ್ರದ ಉಪಾಧ್ಯಾಯನ ಪ್ರಸ್ತಾಪ ಈ ಶಾಸನದಲ್ಲಿ ಸಿಗುತ್ತದೆ. ಪ್ರತ್ಯೇಕ ಶಾಸ್ತ್ರಗಳಿಗೋಸ್ಕರ ಇದ್ದ ಉಪಾಧ್ಯಾಯರಿಗೆ ಭಿನ್ನವಾಗಿ ಇವರು ಎಲ್ಲ ಶಾಸ್ತ್ರಗಳನ್ನೂ ಬೋಧಿಸುವ ಉಪಾಧ್ಯಾಯರು ಎನ್ನುವುದು ವಿದಿತವಾಗುತ್ತದೆ.

ಊಟ ಉಪಚಾರಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿಯು ಈ ಶಾಸನಗಳಲ್ಲಿ ಕಾಣಬರುತ್ತವೆ. ಅಕ್ಕಿ, ಹಿಟ್ಟಿನ ಅಕ್ಕಿ, ಎಣ್ಣೆ, ಎಳ್ಳು, ತುಪ್ಪ, ಮೊಸರು, ಉಪ್ಪು, ಮೆಣಸು, ಗೋಧುವೆ, ಬೆಲ್ಲ, ಉದ್ದು, ತೊಗರಿ, ಕಡಲೆ ಇವುಗಳನ್ನು ಇಲ್ಲಿ ಹೆಸರಿಸಲಾಗಿದೆ. ಇಲ್ಲಿ ಕಾಣಬರುವ ಇತರ ವಸ್ತುಗಳೆಂದರೆ ಹುಗ್ಗಿ, ಚರು, ಚಕ್ಕುಲಿ, ಪಕ್ವಾನ್ನ; ಹುಗ್ಗಿ ಎಂದರೆ ಅಕ್ಕಿ ಮತ್ತು ಹೆಸರುಬೇಳೆಯಿಂದ ಮಾಡುವ ಅನ್ನ (ಪೊಂಗಲ್). ಅದು ವಿಶೇಷವಾಗಿ ದೇವಾಲಯಗಳಲ್ಲಿ ನೈವೇದ್ಯಕ್ಕೆ ಮಾಡುವ ಪದಾರ್ಥ. ಚರು ಅಂದರೆ ಹೋಮಕ್ಕಾಗಿ ಮಾಡುವ ಅನ್ನ ಕೆಲವು ದೇವಾಲಯಗಳಲ್ಲಿ ಇಂದಿಗೂ ಚಕ್ಕುಲಿಯನ್ನು ದೇವರಿಗೆ ಸಮರ್ಪಿಸುವ ಪದ್ಧತಿ ಉಂಟು. ಪಕ್ವಾನ್ನ ಗೋಧಿಯಿಂದ ತಯಾರಾಗುವ ಅಡಿಗೆ. ಬಹುಶಃ ಬೆಲ್ಲ ಮತ್ತು ಗೋಧಿಯ ರವೆಯಿಂದ ತಯಾರಾಗುವ ಭಕ್ಷ್ಯವಿದ್ದಿರಬೇಕು. ದೇವಾಲಯದಲಿ ಹಾಗೂ ಮನೆಗಳಲಿ

---

3 ಡಾ॥ ಎಂ. ಚಿದಾನಂದಮೂರ್ತಿ : ಕರ್ನಾಟಕ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೪೦೩ : ಎ.ಕ. ೭, ಶಿಕಾರಿಪುರ ೧೧೩

4 ಡಾ॥ ಎ.ವಿ. ನರಸಿಂಹಮೂರ್ತಿ : ಕಾಯಿನ್ಸ್ ಆಫ಼ ಕರ್ನಾಟಕ, ಪು. ೯೮

ಕುಡಿಯುವ ನೀರಿಗೆ ಏಲಕ್ಕಿಯನ್ನು ಬೆರೆಸುವ ಪದ್ಧತಿ ಆಗಿನ ಕಾಲದಿಂದಲೂ ಇದ್ದಿತೆಂದು ಗೊತ್ತಾಗುತ್ತದೆ. ಇದಕ್ಕಾಗಿ ಒಬ್ಬ ಮನುಷ್ಯನನ್ನೇ ನಿಯಮಿಸಿ ಆತನಿಗೆ ಸಂಬಳವನ್ನು ಕೊಡುತ್ತಿದ್ದರು. ಅಡಕೆ ಮತ್ತು ವೀಳ್ಯೆದೆಲೆಗಳು ದೇವಾಲಯದಲ್ಲಿ ಅವಶ್ಯವಾಗಿ ಬೇಕಾಗುವ ವಸ್ತುಗಳಾಗಿದ್ದವು. ಎಣ್ಣೆ ನೀರು ಹಾಕಿಕೊಳ್ಳುವುದಕ್ಕಾಗಿ ಸೀಗೇಕಾಯಿಯನ್ನು ಬಳಸುತ್ತಿದ್ದರು. ಅದಕ್ಕಾಗಿ ದೇವಾಲಯದಲ್ಲಿ ದತ್ತಿಯನ್ನು ಸ್ಥಾಪಿಸಿದ್ದರು. ಕಸ್ತೂರಿ, ಕುಂಕುಮ, ಗೋರೋಚನಗಳಿಗಾಗಿ ಪ್ರತ್ಯೇಕ ವ್ಯವಸ್ಥೆ ಮಾಡಿದ್ದರು. ದೇವಾಲಯದಲ್ಲಿ ಬಳಕೆಗೋಸ್ಕರ ಬಿದುರಿನಿಂದ ಮಾಡಲಾದ ಚಿಬ್ಬಲು, ಹೆಡಗೆ ಮತ್ತು ಗೆರಸಿಗಳನ್ನು ಬಳಸುತ್ತಿದ್ದರು. ದೇವಾಲಯದಲ್ಲಿ ಆರತಿಗೆ ಮತ್ತು ದೀಪಕ್ಕಾಗಿ ಹತ್ತಿಯಿಂದ ಮಾಡಿದ ಬತ್ತಿಗಳನ್ನು ಬಳಸುತ್ತಿದ್ದರು. ಇದೇ ರೀತಿಯ ದೀವಟಿಗೆಯ ಬತ್ತಿಯನ್ನೂ ಈ ಶಾಸನದಲ್ಲಿ ಹೇಳಲಾಗಿದೆ.

ಈ ಶಾಸನದಲ್ಲಿ ವಸ್ತ್ರ, ಸೀರೆ ಎಂಬ ಪದಗಳು ಕಾಣಬರುತ್ತವೆ. ಹಾಗೆಯೇ ಪಟ್ಟೆ, ಪಟ್ಟೆವಸ್ತ್ರ ಅಂದರೆ ರೇಷ್ಮೆಯ ವಸ್ತ್ರವೂ ಪ್ರಸ್ತಾಪಿತವಾಗಿದೆ. ದೇವರ ವಸ್ತ್ರ ಅಂದರೆ ದೇವರ ಬಟ್ಟೆ. ಸೀರೆ ಕೇವಲ ಹೆಂಗಸರ ಬಟ್ಟೆಯಾಗಿರಲಿಲ್ಲ ಎಂದು ಇಲ್ಲಿಯ ಶಾಸನದಿಂದ ತಿಳಿಯಬಹುದು. ಇಲ್ಲಿ ಯೋಗನಾರಾಯಣ ದೇವರಿಗೆ ಎರಡು ಸೀರೆಗಳನ್ನು ಕೊಡಲಾಗಿದೆ. ಆದುದರಿಂದ ಸೀರೆಯನ್ನು ಪುರುಷದೇವತೆಗಳಿಗೂ ತೊಡಿಸುತ್ತಿದ್ದರು ಎಂದು ಅರ್ಥವಾಗುತ್ತದೆ. ತಾಳಗುಂದ ಅಗ್ರಹಾರದಲ್ಲಿ ವಿದ್ಯಾರ್ಥಿಗಳಿಗೆ ಸೀರೆಗಾಗಿ ವ್ಯವಸ್ಥೆ ಮಾಡಿದ್ದರು ಎಂಬುದನ್ನು ಗಮನಿಸಿದಾಗ, ಅದು ವಿದ್ಯಾರ್ಥಿಗಳಿಗೆ ಎಂದಾಗ ಬಹುಶಃ ಅದು ಇನ್ನೂ ಸ್ತ್ರೀಯರ ವಸ್ತ್ರವಾಗಿರಲಿಲ್ಲವೆಂಬುದು ಗಮನಿಸಬೇಕಾದ ಅಂಶ.[5]

ದೇವಾಲಯದಲ್ಲಿ ಅನೇಕ ಉತ್ಸವಗಳು ಹಾಗೂ ವಿಶೇಷ ಸೇವೆಗಳು ನಡೆಯುತ್ತಿದ್ದವು. ಅವುಗಳಲ್ಲಿ ಈ ಶಾಸನ ಹೆಸರಿಸುವುದು ಪವಿತ್ರ-ಚೈತ್ರ, ಸಂಕ್ರಮಣ, ಉತ್ಥಾನದ್ವಾದಶಿ, ಶ್ರೀ ಜಯಂತಿ, ದೀಪಾವಳಿ, ನವಗ್ರಹಹೋಮ, ಮಂಡಲೋದ್ಧಾರ, ಪುಣ್ಯಾಹವಾಚನ, ಕಳಶ ಸ್ಥಾಪನೆ, ಕರ್ಪೂರದಾರತಿ, ಅರಿಶಿನದ ಓಕುಳಿ, ಪಾರಣೆ ಮುಂತಾದವುಗಳು ಉಲ್ಲೇಖಿತವಾಗಿವೆ. ಈ ಎಲ್ಲ ಸೇವೆಗಳೂ, ಪೂಜೆಗಳೂ ಇಂದಿಗೂ ಆಚರಣೆಯಲ್ಲಿವೆ. ಹೊಸ ವರುಷದ ಪ್ರಾರಂಭದಿಂದ ಅಂದರೆ ಚೈತ್ರ ಮಾಸದ ಯುಗಾದಿಯ ಪಾಡ್ಯದಿಂದ ಹುಣ್ಣಿಮೆಯವರೆಗೆ ಪವಿತ್ರ ಚೈತ್ರವೆಂದು ಪರಿಗಣಿಸಲ್ಪಟ್ಟಿದೆ. ಆ ದಿನಗಳಲ್ಲಿ ದೇವರಿಗೆ ವಿಶೇಷ ಪೂಜೆಗಳು ನಡೆಯುತ್ತವೆ. ಉತ್ಥಾನ ದ್ವಾದಶಿ ಇಂದಿಗೂ ನಡೆಯುತ್ತಿರುವ ಹಬ್ಬ-ತುಳಸಿಯ ಮದುವೆಯೆಂದು ಕೆಲವರು; ಕೃಷ್ಣನ ಪೂಜೆಯೆಂದು ಕೆಲವರು ಇಂದಿಗೂ ಈ ಪೂಜೆಯನ್ನು ನಡೆಸುತ್ತಾರೆ. ಶ್ರೀ ಜಯಂತಿ ಅಥವಾ ಶ್ರೀ ಪಂಚಮಿ ವಿಶೇಷವಾಗಿ ಲಕ್ಷ್ಮಿಯನ್ನು ಕುರಿತಾದ ಪೂಜೆ ಇಂದಿಗೂ ನಡೆಯುತ್ತಿರುವ ಹಬ್ಬ. ದೀಪಾವಳಿಯ ದೀಪಮಾಲಿಕೆಗಾಗಿ ಈ ದೇವಾಲಯದಲ್ಲಿ ದತ್ತಿಯನ್ನು ಕೊಡಲಾಗಿದ್ದಿತು ಎಂಬುದನ್ನು ಗಮನಿಸಿದಾಗ, ಈ ಹಬ್ಬ ಹೊಯ್ಸಳರ ಕಾಲದಲ್ಲಿಯೂ ದೀಪದ ಹಬ್ಬವಾಗಿ ನಡೆಯುತ್ತಿದ್ದಿತೆಂಬುದು ವ್ಯಕ್ತವಾಗುತ್ತದೆ. ನವಗ್ರಹ ಹೋಮ ಮತ್ತು ಪುಣ್ಯಾಹವಾಚನ ಇಂದಿಗೂ ದೇವಾಲಯಗಳಲ್ಲಿ ಮಾತ್ರವಲ್ಲದೆ ಮನೆಗಳಲ್ಲಿಯೂ ನಡೆಯುತ್ತಿರುವ ಒಂದು ಪೂಜೆ. ವಿಶೇಷ ಪೂಜಾ ದಿನಗಳಲ್ಲಿ ಓಕುಳಿ ನಡೆಯುವುದು ಇಂದಿಗೂ ಹಳ್ಳಿಗಳಲ್ಲಿ ನಡೆಯುತ್ತಿರುವ ಒಂದು ಸಂಭ್ರಮದ ಹಬ್ಬ. ಅದು ಹೊಯ್ಸಳರ ಕಾಲದಲ್ಲಿ ನಡೆಯುತ್ತಿದ್ದಿತು. ಅದಕ್ಕಾಗಿ ಅರಿಶಿನವನ್ನು ಬಳಸುತ್ತಿದ್ದರು. ಅದಕ್ಕಾಗಿ ದತ್ತಿಯನ್ನೂ ಕೊಟ್ಟಿದ್ದರು ಎಂಬುದು ಗಮನಾರ್ಹ ಸಂಗತಿ. ಕರ್ಪೂರದ ಆರತಿ, ಪಾರಣೆಗಳು ಇಂದಿಗೂ ಆಚರಣೆಯಲ್ಲಿರುವ ವಿಶೇಷಗಳು. ಪಂಚಾಮೃತಕ್ಕೋಸ್ಕರ ದತ್ತಿಯನ್ನು ಕೊಟ್ಟಿರುವುದು ಒಂದು ವಿಶೇಷ. ದೇವರಿಗೆ ಪಂಚಾಮೃತ ಅಭಿಷೇಕ ಮತ್ತು ಸೇವೆ ಮಾಡುವುದು ಇಂದಿಗೂ ಜನಜನಿತವಾಗಿರುವ ಒಂದು ಸೇವೆ. ಅದೇ ರೀತಿ ಈ ಶಾಸನವು ದೇವರಿಗೆ ಶ್ರೀಗಂಧ ಲೇಪನ ಸೇವೆ ಹಾಗೂ ಧೂಪಕ್ಕೆ ದತ್ತಿಯನ್ನು ಉಲ್ಲೇಖಿಸುತ್ತದೆ. ಹೀಗೆ ದೇವಾಲಯದಲ್ಲಿ ನಡೆಯುವ ಅನೇಕ ಸೇವೆಗಳ ವಿಷಯದಲ್ಲಿ ಈ ಶಾಸನಗಳು ಮಾಹಿತಿಯನ್ನು ಒದಗಿಸುವುದು ಮಾತ್ರವಲ್ಲದೆ, ಅವುಗಳ ಪ್ರಾಚೀನತೆಯನ್ನು ತಿಳಿಯಲೂ ಸಹಾಯಕವಾಗಿವೆ.

---

೫ ಜ್ಯೋತ್ಸ್ನಾ ಕಾಮತ್ : ಸೋಷಿಯಲ್ ಲೈಫ್ ಇನ್ ಮಿಡಿವಿಯಲ್ ಕರ್ನಾಟಕ; ಪು. 33

ದೇವಸ್ಥಾನದ ಸೇವೆಯಲ್ಲಿದ್ದ ಕೆಲಸಗಾರರು ಮತ್ತು ಅವರ ಸಂಬಳಗಳೂ ಈ ಶಾಸನದಲ್ಲಿ ವರ್ಣಿತವಾಗಿರುವುದು ಮತ್ತೊಂದು ವಿಶೇಷ. ಅವರುಗಳು ಯಾರೆಂದರೆ, ಅಡುಗೆಯ ಬ್ರಾಹ್ಮಣರು, ಆಚಾರ್ಯರು, ವೈಷ್ಣವರು, ಪುರಾಣವಾಚಕರು, ನಂಬಿಗಳು, ಶೃಂಗಾರದವರು. ಅಂದರೆ ದೇವಾಲಯದ ಅಲಂಕರಣ ಕಾರ್ಯವನ್ನು ಮಾಡುವವರು; ಪರಿಚಾರಕರು, ಅಪ್ಪಣೆಯವರು ಅಂದರೆ ಅಪ್ಪಣೆಯ ಮೇರೆಗೆ ಕೆಲಸ ಮಾಡುವವರು; ಕುಡಿಯುವ ನೀರನ್ನು ಒದಗಿಸುವವರು, ಶ್ರೀಗಂಧವನ್ನು ತೇದು ಒದಗಿಸುವವರು, ಚಾಮರವನ್ನು ಬೀಸುವವರು, ಸೇನಬೋವ, ಮುದ್ರೆಯವರು, ಭಂಡಾರದವರು ಅಂದರೆ ಹಣವನ್ನು ನೋಡಿಕೊಳ್ಳುವವರು, ಭಟ್ಟಗುತ್ತರು ಅಂದರೆ ದೇವರ ಪೂಜೆಯನ್ನು ಮಾಡುವವರು. ಕರ್ಪೂರದಾರತಿಯವರು, ರಂಗವಾಲೆಯವರು ಅಂದರೆ ಅಕ್ಕಿಹಿಟ್ಟಿನಲ್ಲ ದೇವಾಲಯವನ್ನು ರಂಗವಲ್ಲಿಯಿಂದ ಅಲಂಕರಿಸುವವರು. ಮಾಲೆಗಾರರು ಅಂದರೆ ಪೂಜೆಗೆ ಬೇಕಾದ ಹೂವಿನ ಹಾರಗಳನ್ನು ಕಟ್ಟುವವರು, ದವಸಿಗರು ಅಂದರೆ ದೇವಾಲಯದ ಅಡಿಗೆಮನೆಗೆ ಬೇಕಾದಷ್ಟು ದವಸ-ಧಾನ್ಯಗಳನ್ನು ಒದಗಿಸುವವರು, ಗಾರೆ ಕೆಲಸದವರು, ಅಕ್ಕಸಾಲೆಯವರು, ದೇವಾಲಯದ ಚಿನ್ನ-ಬೆಳ್ಳಿ ಕೆಲಸಗಳನ್ನು ಮಾಡುವವರು, ಕುಂಬಾರರು, ಮೊಖರಿಗಳು ಅಂದರೆ ಆಡಳಿತಗಾರರು, ಸ್ಥಾನಿಕರು, ಬಡಗಿಯವರು ಇವರೆಲ್ಲರಿಗೂ ಅವರವರ ಕೆಲಸಕ್ಕೆ ತಕ್ಕಂತೆ ಸಂಬಳವನ್ನು ಶಾಸನದಲ್ಲಿ ನಮೂದಿಸಲಾಗಿರುವುದರಿಂದ, ಇವರೆಲ್ಲರೂ ಪೂರ್ಣ ಅವಧಿಯ ನೌಕರರಾಗಿದ್ದು ದೇವಾಲಯದ ಪೂರ್ಣ ಸೇವೆಯಲ್ಲಿ ತಮ್ಮ ಕಾಲ ಕಳೆಯುತ್ತಿದ್ದರು. ಇಷ್ಟೊಂದು ಶ್ರೀಮಂತವಾದ ದೇವಾಲಯಗಳ ರಕ್ಷಣಾ ವ್ಯವಸ್ಥೆ ಹೇಗಿದ್ದಿತು ಎಂಬುದು ಮುಖ್ಯವಾದ ಪ್ರಶ್ನೆ. ಸೋಮನಾಥಪುರದ ಈ ದೇವಾಲಯಕ್ಕೆ ೩೦೦ ಜನ ಅಂಗರಕ್ಷರು ಇದ್ದರು. ಅವರಿಗೆ ನಾಯಕ ಅಥವಾ ಮುಖಂಡನೂ ಇದ್ದನು. ಯಾವ ಯಾವ ದೇವಾಲಯದ ಭಾಗವನ್ನು ಎಷ್ಟು ಜನ ಅಂಗರಕ್ಷಕರು ಕಾಯಬೇಕು ಎನ್ನುವುದೂ ಕೂಡ ಶಾಸನದಲ್ಲಿ ಉಲ್ಲೇಖಿತವಾಗಿದೆ. ಹೀಗೆ ದೇವಾಲಯವು ಒಂದು ಸಮಗ್ರ ಧಾರ್ಮಿಕ-ಸಾಮಾಜಿಕ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿದ್ದಿತು ಎಂಬುದು ತಿಳಿದು ಬರುತ್ತದೆ.

ಒಟ್ಟಿನಲ್ಲಿ ಇವು ಸೋಮನಾಥಪುರದ ದೇವಾಲಯವನ್ನು ಕುರಿತದ್ದಾದರೂ, ಇಲ್ಲಿರುವ ಚಿತ್ರಣ ಹೊಯ್ಸಳ ಕಾಲದಲ್ಲಿದ್ದಿತು ಎಂಬುದು ಮುಖ್ಯವಾಗಿ ಗಮನಿಸಬೇಕಾದ ಅಂಶ.

# ಗುಂಡಬಾಳದ ಶಾಸನ ಸಹಿತವಾದ ತೀರ್ಥಂಕರ ವಿಗ್ರಹಗಳು

ಎಸ್. ಗಣಪತಿಗೌಡ

ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನಲ್ಲಿರುವ ಗುಂಡಬಾಳವು ಹೊನ್ನಾವರದಿಂದ ಈಶಾನ್ಯಕ್ಕೆ ರಾಷ್ಟ್ರೀಯ ಹೆದ್ದಾರಿ ೧೯ರಲ್ಲಿ ಸುಮಾರು ೧೦ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧ನೇ ಶತಮಾನದಿಂದ ಕ್ರಿ.ಶ. ೧೩ನೇ ಶತಮಾನದವರೆಗೆ ಗುಂಡಬಾಳವು, ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿತ್ತು ಎಂದು ಇಲ್ಲಿರುವ ಜಿನಾಲಯಗಳು, ಜಿನಶಿಲ್ಪಗಳು ಮತ್ತು ಶಿಲಾಶಾಸನಗಳಿಂದತಿಳಿಯುತ್ತದೆ.

ಇಲ್ಲಿ ಮೂರು ಶಿಲಾಶಾಸನಗಳು ದೊರಕಿದ್ದು ಈಗಾಗಲೇ ಎರಡನ್ನು ಡಾ|| ಸದಾನಂದ ನಾಯಕರು ಪ್ರಕಟಿಸಿದ್ದಾರೆ[1]. ಇನ್ನೊಂದು ಅಪ್ರಕಟಿತ ಶಿಲಾಶಾಸನ.

ಪದ್ಮಾವತಿ ಅಮ್ಮನವರ ದೇವಾಲಯ ಎಂದು ಕರೆಯಲಾಗುವ ಇಲ್ಲಿಯ ಜೈನ ಬಸದಿಯಲ್ಲಿ ಒಟ್ಟು ನಾಲ್ಕು ತೀರ್ಥಂಕರ ವಿಗ್ರಹಗಳಿದ್ದು, ಎರಡು ತೀರ್ಥಂಕರ ವಿಗ್ರಹಗಳ ಪೀಠಗಳ ಮೇಲೆ ಚಿಕ್ಕ ಶಾಸನಗಳಿವೆ.

ಮೊದಲ ಶಿಲ್ಪವು ಕಪ್ಪು ಶಿಲೆಯಿಂದ ಕೆತ್ತಲ್ಪಟ್ಟಿದೆ. ತೀರ್ಥಂಕರನು ಸಿದ್ಧಾಸನದಲ್ಲಿ ಯೋಗಮುದ್ರೆಯಲ್ಲಿ ಕುಳಿತಿದ್ದಾನೆ. ಈ ಮೂರ್ತಿಯ ಎತ್ತರ ೯೬ ಸೆಂ.ಮಿ. ಜೊತೆಗೆ ಮಕರತೋರಣವು ಸೇರಿದಂತೆ ಒಟ್ಟು ೧೧೮ ಸೆಂ.ಮಿ. ಎತ್ತರವಿದೆ. ಅಗಲ ೭೬ ಸೆಂ.ಮಿ. ತೀರ್ಥಂಕರ ವಿಗ್ರಹದ ಪೀಠದ ಮೇಲೆ ಮೂರು ಸಾಲಿನ ಶಾಸನವಿದ್ದು, ಹೈವಲದೇವಿಯ ಮಗಳು ನಾಗಲದೇವಿಯ ಮಗನಾದ ಶ್ರೀಮತ್ ತ್ರಿಭುವನಮಲ್ಲ ಮಲ್ಲಿದೇವನಿಂದ ಸ್ಥಾಪಿಸಲ್ಪಟ್ಟಿತೆಂದೂ ಹೈವಲದೇವಿಯು ಮೂಲಸಂಘದ ಸೂರಸ್ಥ ಗಣದ ಚಾರುಕೀರ್ತಿ ಸಿದ್ಧಾಂತಿದೇವರ ಗುಡ್ಡಿ ಎಂದೂ ತಿಳಿಸುತ್ತದೆ. ಅರ್ಧ ನಿಮಿಲಿತ ನೇತ್ರಗಳು, ಸ್ವಲ್ಪ ದುಂಡಾದ ಮುಖ, ಮಂದಹಾಸ ಚೆಲ್ಲುವ ತುಟಿ, ನೀಳ ನಾಸಿಕ, ಭುಜದವರೆಗೂ ಇಳಿಬಿಟ್ಟ ಗುಂಗುರಾಕಾರದ ಕೇಶ, ವಿಶಾಲವಾದ ಎದೆ, ಬಲಿಷ್ಠವಾದ ಭುಜ, ಮೂರ್ತಿಯ ವೈಶಿಷ್ಟ್ಯವಾದರೆ, ಅಲಂಕೃತವಾದ ಮುಕ್ಕೊಡೆಯು ಪ್ರಭಾಮಂಡಲದ ಸೊಬಗನ್ನು ಹೆಚ್ಚಿಸಿದೆ.

ಅಷ್ಟೇ ರಮ್ಯವಾಗಿ ಮಕರತೋರಣವನ್ನು ಕೆತ್ತಿದ್ದಾರೆ. ಮಕರತೋರಣದ ಮೂಲದಲ್ಲಿ ಎರಡು ಅರ್ಧಗಂಬವಿದ್ದು, ಅದರ ಮೇಲೆ ಸಿಂಹಮುಖದಿಂದ ಹೊರಟ ಸುರುಳಿಯಾಕಾರದ ಬಳ್ಳಿಯು ತೋರಣದ ಉಳಿದ ಭಾಗವನ್ನು ತುಂಬಿದೆ. ಈ ತೋರಣದ ಎರಡೂ ಕಡೆ ಚಾಮರಧಾರಿಗಳಿದ್ದಾರೆ.

ಇದರ ಪಕ್ಕದಲ್ಲಿಯೇ ಇರುವ ಇನ್ನೊಂದು ತೀರ್ಥಂಕರ ವಿಗ್ರಹವೂ ಪದ್ಮಪೀಠದ ಮೇಲೆ ಸಿದ್ಧಾಸನದಲ್ಲಿ ಕುಳಿತಿದ್ದು, ಧ್ಯಾನಮುದ್ರೆಯಲ್ಲಿದೆ. ಈ ಶಿಲ್ಪದ ತೋರಣವು ೯೮ ಸೆಂ.ಮಿ. ಅಗಲ, ೧೩೮ ಸೆಂ.ಮಿ. ಎತ್ತರವಿದೆ. ಮೂರ್ತಿಯು ೭೭ ಸೆಂ.ಮಿ. ಎತ್ತರವಿದೆ. ಪ್ರಭಾಮಂಡಲದ ಇಕ್ಕೆಲಗಳಲ್ಲಿ ಸುರುಳಿಗಳಿದ್ದು, ಮಧ್ಯ

1 ಸದಾನಂದ ನಾಯಕ: ಸಾಹಿತ್ಯ ಸಂಶೋಧನೆ ಮತ್ತು ಸಮಾಲೋಚನೆ, ಪು. ೯೦-೯೮

ದಲ್ಲಿ ಮುಕ್ಕೊಡೆಯಿದೆ. ಮಕರತೋರಣಕ್ಕೆ ಎರಡೂ ಬದಿಯಲ್ಲಿ ಸಿಂಹಗಳಿರುವ ಕಂಬಗಳು ಆನೆಯ ತಲೆಯ ಮೇಲೆ ನಿಂತಿವೆ. ಸಣ್ಣ ಎರಡು ಜಿನ ವಿಗ್ರಹಗಳು ಅರ್ಧ ಗಂಬಗಳ ಮೇಲೆ ಇವೆ. ಇಬ್ಬರು ಚಾಮರಧಾರಿಗಳು ಮಕರತೋರಣದ ಎರಡೂ ಕಡೆ ಇದ್ದಾರೆ. ಬಳ್ಳಿಗಳು ಮತ್ತು ಸರ್ಪಗಳು ಸಿಂಹದ ಬಾಯಿಂದ ಬಂದಂತೆ ತೋರಿಸಲಾಗಿದೆ. ಬಳ್ಳಿಗಳ ಸುರುಳಿಗಳಲ್ಲಿ ವಾದ್ಯ ಊದುವವರನ್ನೂ, ತಾಳ ಬಾರಿಸುವವರನ್ನೂ ಮತ್ತು ಮೂಲ ವಾಹಕರನ್ನೂ ಚಿತ್ರಿಸಲಾಗಿದೆ. ಈ ಜಿನಶಿಲ್ಪದ ಪೀಠದ ಎದುರು ಮುಖದಲ್ಲಿರುವ ಶಾಸನವು ಮೂಲಸಂಘದ ಕಾಣೂರ್ಗಣದ ಮೇಘ ಪಾಷಾಣಗಚ್ಛವನ್ನು ಹೆಸರಿಸುತ್ತದೆ. ಆದ್ದರಿಂದ ಈ ವಿಗ್ರಹವು ಮೇಘ ಪಾಷಾಣಗಚ್ಛದ ಒಬ್ಬ ಜೈನನಿಂದ ಮಾಡಿಸಲ್ಪಟ್ಟಿರಬೇಕು.

ಮೊದಲನೆ ಶಾಸನದಲ್ಲಿ ಬರುವ ಮಲ್ಲಿದೇವನನ್ನು ಕುರಿತ ವಿವರಣೆ ಕೊಡುವ ಶಾಸನಗಳು ಗುಂಡಬಾಳ ಮತ್ತು ಇದರ ಸುತ್ತಮುತ್ತ ದೊರಕಿದ್ದು ಇವನ ಕಾಲವನ್ನು ಕ್ರಿ.ಶ. ೧೧೪೦–೬೩ ಎಂದು ನಿರ್ಧರಿಸಬಹುದು.

ಈ ಮಲ್ಲಿದೇವನು ಶಿಸುಗಲಿಯಿಂದ ರಾಜ್ಯವಾಳಿದ ಪಾಂಡ್ಯವಂಶದ ಜನೇ ದೊರೆಯಾಗಿದ್ದಾನೆ. ಶಾಸನ-ಶಿಲ್ಪಗಳ ಆಧಾರದ ಮೇಲೆ ಗುಂಡಬಾಳವು ಜೈನ ಸಂಸ್ಕೃತಿಯ ಒಂದು ಕೇಂದ್ರವಾಗಿತ್ತೆಂದು ಹೇಳಬಹುದು. ಡಾ|| ಶ್ರೀನಿವಾಸ ಪಾಡಿಗಾರ ಅವರು ಈ ಶಾಸನಗಳು ಮತ್ತು ವಿಗ್ರಹಗಳು ಸಿಕ್ಕ ಗುಂಡಬಾಳವೇ ಶಿಸುಗಲಿಯಾಗಿದ್ದು, ಗುಂಡಬಾಳದ ಸಂಸ್ಕೃತ ರೂಪ ಶಿಸುಗಲಿಯೆಂದು ಹೇಳಿದ್ದಾರೆ.[2]

ಆದ್ದರಿಂದ ಈ ವಿಗ್ರಹವು ಸುಮಾರು ೧೨ನೇ ಶತಮಾನದ ಪೂರ್ವಾರ್ಧದಲ್ಲಿ ನಿರ್ಮಿತವಾಗಿದೆ ಎಂಬುದು ನಿರ್ವಿವಾದ. ಈ ಕಾಲದಲ್ಲಿ ಕಲ್ಯಾಣದಲ್ಲಿ ಚಕ್ರಾಧಿಪತ್ಯವನ್ನು ನಡೆಸುತ್ತಿದ್ದ ಚಾಲುಕ್ಯರು ತಮ್ಮದೇ ಆದ ಶಿಲ್ಪ ಶೈಲಿಯನ್ನು ಸೃಷ್ಟಿಸಿದ್ದರು. ಆದರೆ ಈ ಜಿನಶಿಲ್ಪಗಳು ಕಲ್ಯಾಣ ಚಾಲುಕ್ಯ ಶೈಲಿಗಿಂತ ತುಸು ಭಿನ್ನವಾದ ಶೈಲಿಯಲ್ಲಿ ಕಡೆಯಲ್ಪಟ್ಟಿದ್ದು, ಇದು ಪ್ರಾದೇಶಿಕ ಶೈಲಿಯ ಪ್ರಭಾವವೋ ಎಂದು ಸಂಶಯ ಬರುತ್ತದೆ. ಇದಕ್ಕೆ ನಿದರ್ಶನವೆಂದರೆ ಪೀಠದ ಒಳಹೊಕ್ಕ ಭಾಗದ ಮೇಲೆ ಇರುವ ಶಾಸನ. ಜಿನನ ವಿಶಾಲವಾದ ವಕ್ಷಸ್ಥಳ, ಬಲಿಷ್ಠವಾದ ಭುಜ ಮತ್ತು ಕಂಠದ ಭಾಗವು ಸಣ್ಣದಾಗಿದ್ದು ಪ್ರಮಾಣಬದ್ಧತೆಯ ಕೊರತೆಯಿದೆ. ಶಾಸನವಿಲ್ಲದಿದ್ದರೆ ಇದನ್ನು ಬಹುಶಃ ರಾಷ್ಟ್ರಕೂಟ-ಕಲ್ಯಾಣ ಚಾಲುಕ್ಯರ ಸಂಕ್ರಮಣ ಕಾಲದ್ದೆಂದು ಭಾವಿಸುತ್ತಿದ್ದೆನೇನೋ ! ಈ ಶಿಲ್ಪಕ್ಕೆ ಸಂಬಂಧಪಟ್ಟ ಯಾವುದೇ ಭಾಗದಲ್ಲಿ ಯಕ್ಷ–ಯಕ್ಷಿಯರು ಅಥವಾ ಲಾಂಛನ ಇವುಗಳು ಚಿತ್ರಿಸಲ್ಪಟ್ಟಿಲ್ಲವಾದ್ದರಿಂದ ಈ ವಿಗ್ರಹಗಳು ಪ್ರತಿನಿಧಿಸುವ ತೀರ್ಥಂಕರರಾರು ಎಂದು ನಿರ್ಧರಿಸುವುದು ಕಷ್ಟಕರ.[3]

ಶಾಸನಗಳ ಪಾಠ ಈ ಕೆಳಗಿನಂತಿದೆ :

**ಮೊದಲನೆಯ ವಿಗ್ರಹದ ಪೀಠಶಾಸನ**

೧. ಸ್ವಸ್ತಿ ಶ್ರೀ ಮೂಲಸಂಘದ ಸೂರಸ್ಥಗಣದ ಮುತ್ತುಗಿಡಿ ದೇವರ ಪ್ರತಿಬದ್ಧದ ಚಾರುಕೀ

೨. ರ್ತಿ ಸಿದ್ಧಾಂತಿ ದೇವರ ಗುಡ್ಡಿ ಶ್ರೀಮತು ಹಯ್ವಲದೇವಿಯರ ಮಗಳು ನಾಗ

೩. ಲ ದೇವಿಯರ ಮಗಂ ಶ್ರೀಮತು ಮಲ್ಲಿದೇವರಸರು ಮಾಡಿಸಿದ ಪ್ರತಿಷ್ಠೆ

**ಎರಡನೆಯ ವಿಗ್ರಹದ ಪೀಠಶಾಸನ**

೧. ಶ್ರೀ ಮೂಲಸಂಘ ಕಾಣೂರ್ಗಣ ಮೇಘ (ಪ?) ಪಾಷಾಣ ಗಚ್ಛ ಮಂಗಳ ○

---

2 ಶ್ರೀನಿವಾಸ ಪಾಡಿಗಾರ: "ಸಮ್ ಇನ್‌ಸ್ಕ್ರಿಪ್‌ಷನ್ಸ್ ಆಫ್ ಚಂದಾವರ ಕದಂಬಾಸ್" ಸೆಮಿನಾರ ಆನ್ ದಿ ಹಿಸ್ಟರಿ ಆಫ್ ಕಾರವಾರ ಡಿಸ್ಟ್ರಿಕ್ಟ್, ೧೦-೧೧, ಫೆಬ್ರವರಿ ೧೯೯೦

3 ಶ್ರೀನಿವಾಸ ಪಾಡಿಗಾರ: ಮತ್ತು ಎಸ್. ಗಣಪತಿಗೌಡಾ "ಚಂದಾವರ ಕದಂಬ ತ್ರಿಭುವನಮಲ್ಲ ಮಲ್ಲಿದೇವನ ಗುಂಡಬಾಳದ ಶಾಸನ, ಶಕವರ್ಷ ೧೦೬೩" ಕರ್ನಾಟಕ ಭಾರತಿ, ಸಂಪುಟ ೨೨, ಸಂಚಿಕೆ ೩, ಧಾರವಾಡ ೧೯೯೦, ಪು. ೭೮-೯೦

## ಕೃತಜ್ಞತೆಗಳು

ನಮ್ಮ ಅಧ್ಯಯನದಲ್ಲಿ ಗುಂಡಬಾಳದಲ್ಲಿ ನೀಡಿದ ಸಹಕಾರಕ್ಕಾಗಿ ಗುಂಡಬಾಳ ಪದ್ಮಾವತಿ ಅಮ್ಮನವರ ಜೈನ ಬಸ್ತಿಯ ಅರ್ಚಕ ಶ್ರೀ ಶಾಂತರಾಜನ್ ಪದ್ಮಯ್ಯಸೆಟ್ಟಿ ಮತ್ತು ಇತರ ಅರ್ಚಕ ವರ್ಗದವರಿಗೆ ; ಶಾಸನಗಳನ್ನು ಓದಿ ಕೊಟ್ಟ ಡಾ|| ಶ್ರೀನಿವಾಸ ಪಾಡಿಗಾರ, ಅಧ್ಯಾಪಕ, ಪ್ರಾಚೀನ ಭಾರತದ ಚರಿತ್ರೆ ಮತ್ತು ಶಾಸನ ವಿಜ್ಞಾನ ವಿಭಾಗ, ಕ.ವಿ.ವಿ. ಧಾರವಾಡ ಇವರಿಗೆ ; ಹಾಗೂ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ನನ್ನ ಮಿತ್ರ ಶ್ರೀ ಪ್ರಮೋದ ಹೆಗಡೆಯವರಿಗೆ ಅನಂತ ಧನ್ಯವಾದಗಳು.

# ಕೃಷ್ಣದೇವರಾಯನ ಅಪ್ರಕಟಿತ ತಾಮ್ರಶಾಸನ

**ಸಿ. ಮಹದೇವ**

ಕೃಷ್ಣದೇವರಾಯನ ಅಪ್ರಕಟಿತ ಶಾಸನವೊಂದು ಮೊದಲ ಬಾರಿಗೆ ಇಲ್ಲಿ ಪ್ರಕಟಗೊಂಡಿದೆ. ಶಾಸನವು ಮೂರು ಹಲಗೆಗಳನ್ನು ಹೊಂದಿದೆ. ಈ ಹಲಗೆಗಳು, ವಿಜಯನಗರದ ರಾಜಮುದ್ರೆಯ ಬಿಲ್ಲೆಯನ್ನು ಹೊಂದಿರುವ ಬಳೆಯೊಳಗೆ ಸೇರಿವೆ. ತಾಮ್ರಪಟಗಳ (ಹಲಗೆಗಳ) ಅಗಲ ೨೦.೫ ಸೆಂ. ಮೀ., ಉದ್ದ ೨೯ ಸೆಂ. ಮೀ. ಮತ್ತು ದಪ್ಪ ೦.೩ ಸೆಂ. ಮೀ. ಶಾಸನದ ಲಿಪಿಯು ನಾಗರಿ. ಭಾಷೆ ಸಂಸ್ಕೃತ. ಸೀಮಾವಿವರಗಳು ಮಾತ್ರ ಕನ್ನಡ ಭಾಷೆಯಲ್ಲಿವೆ. ಭಾಷೆ ಅಲ್ಲಲ್ಲಿ ವಿಕೃತಗೊಂಡಿದೆ. ಶಾಸನವು ವಿಜಯನಗರದ ತುಳುವ ವಂಶದ ಕೃಷ್ಣದೇವರಾಯನ ಕಾಲದ್ದು. ಇದು ಶಕವರ್ಷ ೧೪೪೯, ಸರ್ವಜಿತು ಸಂವತ್ಸರ ಮಾಘ ಶುಕ್ಲ ಸಪ್ತಮಿ, ಅಂದರೆ ಕ್ರಿ. ಶ. ೧೫೨೮ರ ಜನವರಿ ತಿಂಗಳಿನ ದಿನಾಂಕ ೨೮ಕ್ಕೆ ಸರಿಹೊಂದುತ್ತದೆ.

ಶಾಸನವು "ಶ್ರೀಗಣಾಧಿಪತಯೇ ನಮಃ" ಎಂದು ಪ್ರಾರಂಭವಾಗಿ ತುಳುವಂಶದ ವರ್ಣನೆಯನ್ನು ನೀಡುತ್ತದೆ. ಅನಂತರ ಚೇರ, ಚೋಳ, ಪಾಂಡ್ಯ, ಮಧುರಾವಲ್ಲಭ, ತುರುಷ್ಕ, ಗಜಪತಿ ನೃಪತಿಗಳನ್ನು ಪ್ರಸ್ತಾಪಿಸಿ ಗಂಗಾತೀರದಿಂದ ಲಂಕಾವರೆಗಿನ ಭೂ ಪ್ರದೇಶವನ್ನೂ ಉಲ್ಲೇಖಿಸುತ್ತದೆ. ಪುಣ್ಯಕ್ಷೇತ್ರಗಳಾದ ಶ್ರೀವಿರೂಪಾಕ್ಷ ದೇವಸ್ಥಾನ, ಶ್ರೀಕಾಲಹಸ್ತಿ, ವೆಂಕಟಾದ್ರಿ (ತಿರುಮಲೆ), ಕಾಂಚಿ, ಶ್ರೀಶೈಲಾ, ಶ್ರೀರಂಗಂ, ಕುಂಭಕೋಣ, ಮಹಾನಂದಿ, ಗೋಕರ್ಣಗಳನ್ನು ಹೆಸರಿಸುತ್ತದೆ. ಕೃಷ್ಣದೇವರಾಯನ ಬಿರುದುಗಳನ್ನು ಮತ್ತು ದಾನಗುಣವನ್ನೂ, ಶೌರ್ಯವನ್ನೂ ಕುರಿತು ಹೇಳುತ್ತದೆ.

ಮುಖ್ಯವಾಗಿ ಇದೊಂದು ದಾನಶಾಸನ. ಇದರ ಪ್ರಕಾರ, ಕೃಷ್ಣದೇವರಾಯನು ಶ್ರೀವತ್ಸಗೋತ್ರದ, ಆಶ್ವಲಾಯನ ಸೂತ್ರದ, ಋಕ್‌ಶಾಖೆಯ ನಾಗಿದೇವನಿಗೆ ಗುತ್ತಿವೇಂಠಯ, ಪೂಲೇಳಿಮಾಗಣಿ ಮತ್ತು ಗುಂತಗಲ್ಲ ಸ್ಥಳಕ್ಕೆ ಸೇರಿದ ಚೀನುರಾಲಬಂಡೆ, ಪುರಪ್ಪನಹಾಳು ಮತ್ತು ತಿಮ್ಮಾಪುರಗಳನ್ನು ಸೇರಿಸಿ ಕೃಷ್ಣರಾಯಪುರವೆಂಬ ಅಗ್ರಹಾರವನ್ನು ಸ್ಥಾಪಿಸಿ ಸರ್ವಮಾನ್ಯವಾಗಿ ದಾನವಾಗಿ ನೀಡಿದನು. ದಾನಪಡೆದ ನಾಗಿದೇವನು ಆ ಅಗ್ರಹಾರವನ್ನು ೭೨ ವೃತ್ತಿಗಳಾಗಿ ವಿಂಗಡಿಸಿ, ಸ್ವಂತಕ್ಕೆ ೨೫ ವೃತ್ತಿಗಳನ್ನು ಉಳಿಸಿಕೊಂಡು, ಉಳಿದವುಗಳನ್ನು ಬೇರೆ ಬೇರೆ ಗೋತ್ರಸೂತ್ರಗಳಿಗೆ ಸೇರಿದ ಬ್ರಾಹ್ಮಣ ವಿದ್ವಾಂಸರಿಗೆ ಹಂಚಿದನು. ಸ್ವತಃ ನಾಗಿದೇವನು ವೇದ, ವೇದಾಂತ, ಆಗಮಗಳಲ್ಲಿ ವಿದ್ವಾಂಸನಾಗಿದ್ದನು.

ಈ ಶಾಸನದಲ್ಲಿ, ಅಗ್ರಹಾರದ ಸೀಮಾವಿವರಗಳನ್ನು ದೇಶಭಾಷೆಯಾದ ಕನ್ನಡದಲ್ಲೇ ಹೇಳಿರುವುದರಿಂದ, ಕನ್ನಡ ವಿಜಯನಗರ ಸಾಮ್ರಾಜ್ಯದ ಅಧಿಕೃತಭಾಷೆಯಾಗಿತ್ತೆಂದು ತಿಳಿದು ಬರುತ್ತದೆ. ಶಾಸನದ ಕೊನೆಯಲ್ಲಿ 'ಶ್ರೀವಿರೂಪಾಕ್ಷ' ಎಂದು ಕನ್ನಡದಲ್ಲಿ ಬರೆಯಲಾಗಿದೆ.

ಮೊದಲನೆಯದಾಗಿ ಸ್ಥಳನಾಮ ಇತಿಹಾಸದ ದೃಷ್ಟಿಯಿಂದ ಈ ಶಾಸನವು ಮುಖ್ಯವಾಗಿದೆ. ಅಂದರೆ ಗುಂತಗಲ್ಲು ಎಂಬುದು ಹದಿನೈದನೆಯ ಶತಮಾನದಿಂದಲೂ ಯಾವುದೇ ರೂಪಾಂತರ ಹೊಂದದೆ ಇಂದಿಗೂ ಸಹ ಗುಂತಕಲ್ಲು ಅಥವಾ ಗುಂತಗಲ್ಲು ಎಂದು ಕರೆಸಿಕೊಳ್ಳುತ್ತಿದೆ. ಎರಡನೆಯದಾಗಿ ಕೃಷ್ಣರಾಯಪುರವೆಂದು ಕೃಷ್ಣದೇವರಾಯನ ಹೆಸರಿನಲ್ಲಿ ಸ್ಥಾಪಿಸಿದ ಅಗ್ರಹಾರ

ವೊಂದರ ಮತ್ತು ಅಲ್ಲಿನ ಬ್ರಾಹ್ಮಣ ವಿದ್ವಾಂಸರ ಉಲ್ಲೇಖ ದೊರೆಯುತ್ತದೆ.

ಪ್ರಸ್ತುತ ತಾಮ್ರಶಾಸನವನ್ನು ಓದಿ ಅರ್ಥೈಸುವುದರಲ್ಲಿ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ಎಪಿಗ್ರಾಫಿಯಾ ಕರ್ನಾಟಿಕದ ಪರಿಷ್ಕೃತ ವಿಭಾಗದಲ್ಲಿನ ಶ್ರೀಯುತ ಎಚ್. ಎಂ. ನಾಗರಾಜರಾವ್‌ರವರು ಮತ್ತು ಶ್ರೀಮತಿ ಕೃಷ್ಣವೇಣಿಯವರು ಹೆಚ್ಚಿನ ಸಹಾಯ ಮಾಡಿದ್ದಾರೆ. ಅವರಿಗೆ ನನ್ನ ವಂದನೆಗಳು. ತಾಮ್ರಶಾಸನವು ಒಟ್ಟು ೧೨೭ ಸಾಲುಗಳನ್ನು ಹೊಂದಿದೆ. ಶಾಸನದ ಪಾಠವನ್ನು ಈ ಕೆಳಗೆ ನೀಡಲಾಗಿದೆ.

## ಪಾಠ

### ಒಂದನೆಯ ಹಲಗೆಯ ಹಿಂಭಾಗ

೧. ಶ್ರೀ ಗಣಾಧಿಪತಯೇ ನಮಃ । ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರ
೨. ವೇ । ತ್ರೈಲೋಕ್ಯನಗರಾರಂಭಮೂಲಸ್ತಂಭಾಯ ಶಂಭವೇ ॥ ಹರೇರ್ಲೀಲಾವರಾಹಸ್ಯ
೩. ದಂಷ್ಟ್ರಾದಂಡಃ ಸ ಪಾತುವಃ । ಹೇಮಾದ್ರಿಕಲಶಾಯತ್ರ ಧಾತ್ರೀ ಛತ್ರಶ್ರಿಯಂ ದಧೌ । ಕ
೪. ಲ್ಯಾಣಾಯಾಸ್ತು ತದ್ಧಾಮಪ್ರತ್ಯೂಹ ತಿಮಿರಾಪಹಂ । ಯದ್ಗಜೋಪ್ಯಗಜೋದ್ಭೂತಂ ಹರಿಣಾಪಿ ಚ
೫. ಪೂಜ್ಯತೇ । ಅಸ್ತಿಕ್ಷೀರಮಯಾದ್ದೇವೈರ್ಮಥ್ಯಮಾನಾಮಹಾಂಬುಧೇ । ನವನೀತಮಿವೋದ್ಭೂತ
೬. ಮಪನೀತತಮೋ ಮಹ । ತಸ್ಯಾಸೀತ್ತನಯ (ಃ) ಸ್ತಪೋಭಿರತುಲ್ಯೈರನ್ವರ್ಥನಾಮಾ (೦) ಬಧಪು
೭. ಣ್ಯೈರಸ್ಯ ಪರೂರವಾಭುಜಬಲ್ಯೈರಾಯುರ್ದ್ವಿಷಾಂ ನಿಷ್ಣತಾ । ತಸ್ಯಾಯುರ್ನಹುಷೋಸ್ಯ ತಸ್ಯ
೮. ಪರುಷೋ ಯದ್ಧೀ ಯಯಾತಿ ಕ್ಷಿತೌ ಖ್ಯಾತಸ್ತಸ್ಯ ತು ತುರ್ವಸುರ್ವಸುನಿಭಂ ಶ್ರೀ ದೇವಯಾ
೯. ನೀಪತೇ । ತದ್ವಂಶೇ ದೇವಕೀಜಾನಿರ್ದಿಧೀಪೇ ತಿಂಮಭೂಪತಿ । ಯಶಸ್ವೀ ತುಲುವೇಂದ್ರೇಷ ಯ
೧೦. ದೋ ಕೃಷ್ಣಯಿವಾನ್ವಯೇ । ತತೋಽಭೂದ್ಬುಕ್ಕಮಾಜಾನಿರೀಶ್ವರಕ್ಷಿತಿಪಾಲಕ । ಅತ್ರಾಸ
೧೧. ಮಗುಣಭ್ರಂಶಂ ಮೌಲಿರತ್ನಂ ಮಹೀಭುಜಾ । ಸರಸಾದುದಭೂತಸ್ಮಾನರಸಾವನಿಪಾಲ
೧೨. ಕ । ದೇವಕೀನಂದನಾತ್ಮಾಮೋ ದೇವಕೀನಂದನಾದಿವ । ವಿವಿಧಸುಕೃತೋದ್ದೋಮು ರಾಮೇಶ್ವ
೧೩. ರಪ್ರಮುಖೇ ಮುಹುರ್ಮುದಿತಹೃದಯೋ ಸ್ಥಾನೇ ಸ್ಥಾನೇ ವ್ಯಧಕ್ತ । ಯಥಾವಿಧಿ ಬುಧಪರಿ
೧೪. ವೃತೋ ನಾನಾದಾನಾನಿ ಯೋಭುವಿ ಷೋಡಶ ತ್ರಿಭುವನಜನೋದ್ಗೀತಂ ಸ್ಫೀತಂ ಯಶಃ ಪುನ
೧೫. ರುಕ್ತಯನ್ । ಕಾವೇರೀಮಾಶು ಬಧ್ವಾ ಬಹಲಜಲರಯಾ [೦] ತಾಂ ವಿಲಂಘ್ಯೈವ ಶತ್ರುಂ ಜೀವ
೧೬. ಗ್ರಾಹಂ ಗೃಹೀತ್ವಾ ಸಮಿತಿಭುಜಬಲಾತಂ ಚ ರಾಜ್ಯಂ ತದೀಯಂ । ಕೃತ್ವಾ ಶ್ರೀರಂಗಪೂರ್ವಂ ತ
೧೭. ದಪಿ ನಿಜವಸೇ ಪಟ್ಟಣಂ ಯೋ ಬಿಭಾಸೇ । ಕೀರ್ತಿಸ್ತಂಭಂ ನಿಖಾಯಾ ತ್ರಿಭುವನ ಭ
೧೮. ವನಸ್ತೂಯಮಾನಾಪದಾನಾ । ಚೇರಂ ಚೋಲಂ ಚ ಪಾಂಡ್ಯಂ ತಮಪಿ ಚ [ಮ*] ಧುರಾವಲ್ಲಭಂ ಮಾನ
೧೯. ಭೂಷಂ । ವೀರ್ಯೋದಗ್ರಂ ತುರುಷ್ಕಂ ಗಜಪತಿ ನೃಪತಿಂಚಾಪಿ ಜಿತ್ವಾತದನ್ಯಾನ್ । ಆಗಂ
೨೦. ಗಾತೀರಲಂಕಾ ಪ್ರಥಮ ಚರಮ ಭೂಭೂತ್ತಟಾಂತಂ ನಿತಾಂತಂ । ಖ್ಯಾತ ಕ್ಷೋಣೀಪತೀನಾಂ
೨೧. ಸಜಮಿವ ಸಿರಸಾ ಶಾಸನಂ ಯೋ ವ್ಯತಾನೀತ್ । ತಿಪ್ಪಾಜೀ ನಾಗಲಾದೇವ್ಯೋ ಕಂಸ

೨೨. ಲ್ಯಾ ಶ್ರೀ ಸುಮಿತ್ರಯೋ । ದೇವ್ಯೋರಿವ ನೃಸಿ [ಂ] ಹೇಂದ್ರ ತಸ್ಮಾತ್ಪಜ್ತಿರಥಾದಿವ । ವೀರೌ

೨೩. ವಿನಯಿನೌ ರಾಮಲಕ್ಷ್ಮಣಾವಿವ ನಂದನೌ । ಜಾತೌ ವೀರನೃಸಿಂಹೇಂದ್ರ ಕೃಷ್ಣರಾ

೨೪. ಯಮಹೀಪತಿ । ವೀರ ಶ್ರೀ ನಾರಸಿಂಹ ಸ ವಿಜಯನಗರೇ ರತ್ನ ಸಿಂಹಾಸನಸ್ತ । ಕೀರ್ತ್ಯಾ

೨೫. ನಿರಸ್ಯಾ ನೃಗನಲನಹುಷಾ [ಂ] ನಪ್ಯವನ್ಯಾಮಥಾನ್ಯಾನ್ । ಆ ಸೇತೋರಾಸುಮೇರೋ

೨೬. ರವನಿಸುರನುತಾಸ್ವೈರಮಾಚೋದಯಾದ್ರೇ । ಆ ಪಶ್ಚಾತ್ಯಾಚಲಾಂತಾದಖಿಲಹೃದಯ

೨೭. ಮಾವರ್ಜ್ಯ ರಾಜ್ಯಂ ಶಶಾಸ । ನಾನಾನಾದಾನ್ಯ್ಕರ್ಷೀ ಕನಕಸದಶಿಯ ಶ್ರೀವಿರೂಪಾ

೨೮. ಕ್ಷ ದೇವಸ್ಥಾನೇ ಶ್ರೀ ಕಾಲಹಸ್ತಿ ಶಿತುರಪಿನಗರೇ ವೆಂಕಟಾದ್ರಾ ಚ ಕಾಂಚ್ಯಾ । ಶ್ರೀ ಶೈ

೨೯. ಲೇ ಶೋಣಶೈಲಂ ಮಹತಿ ಹರಿಹರೇಹೋಬಲೇ ಸಂಗಮೇ ಚ । ಶ್ರೀರಂಗೇ ಕುಂಭಘೋಣೇ ಹತತ

೩೦. ಮಸಿ ಮಹಾನಂದಿತೀರ್ಥೇ ನಿವೃತ್ತೌ ॥ ಗೋಕರ್ಣೇ ರಾಮಸೇತೌ ಜಗತಿ ತದಿತರೇಷ್ಟಪ್ಯ

## ಎರಡನೆಯ ಹಲಗೆಯ ಮುಂಭಾಗ

೩೧. ಸಶೇಷು ಪುಣ್ಯಸ್ಥಾನೇಷ್ವಾರಬ್ಧ ನಾನಾವಿಧ ಬಹಲ ಮಹಾದಾನವಾರಿ ಪ್ರವಾಹೈ । ಯ

೩೨. ಸ್ಯೋದಂಚತ್ತುರಂಗ ಪ್ರಕರಖುರರಜಃ ಸ್ಯುಷಾದಂಭೋದಿಮಗ್ನಃ ॥ ಕ್ಷ್ಮಾಭೃತ್ಪಕ್ಷವಿದೋದ್ಯತರ ಕಲಿಶ

೩೩. ಧರೋತ್ಕಂಠಿತಾ ಕಂಠಿತಾಭೂತ್। ಬ್ರಹ್ಮಾಂಡಂ ವಿಶ್ವಚಕ್ರಂ ಘಟಮುದಿತ ಮಹಾಭೂತಕಂ ರತ್ನಧೇನುಂ ।

೩೪. ಸಪ್ತಾಂಬೋಧಿಶ್ಚ ಕಲ್ಪಕ್ಷಿತಿರುಹಲತಿಕೇ ಕಾಂಚನೀಂ ಕಾಮಧೇನುಂ । ಸ್ವರ್ಣಕ್ಷ್ಮಾಂ ಯೋ ಹಿರಣ್ಯಾಶ್ವರ

೩೫. ಥಮಪಿ ತುಲಾಪೂರುಷಂಗೋಸಹಸ್ರಂ ಹೇಮಾಶ್ವಂ ಹೇಮಗರ್ಭಂ ಕನಕಕರಿರಥಂ ಪಂಚಲಾಂಗಲ್ಯತಾನೀ

೩೬. ತ್ । ಪ್ರಾಜ್ಯ[ಂ] ಪ್ರಸ[ಂ]ಸ್ಯ ನಿರ್ವಿಘ್ನಂ ರಾಜ್ಯಂ ದ್ಯಾಮಿವಶಾಶಿತುಂ । ತಸ್ಮಿಂ ಗುಣೇನ ವಿಖ್ಯಾತೇ ಕ್ಷಿತೇರಿಂದ್ರೇ । ದಿವಂಗ

೩೭. ತಾ । ತತೋಪ್ಯವಾರ್ಯವೀರ್ಯ ಶ್ರೀಕೃಷ್ಣರಾಯ ಮಹೀಪತಿ । ಭಿಭರ್ತಿ ಮಣಿಕೇಯೂರ ನಿರ್ವಿಸೇಷಂ ಮಹೀಭುಜಾ ।

೩೮. ಕೀರ್ತ್ಯಾ ಯಸ್ಯ ಸಮಂತತಃ ಪ್ರಶೃತಯಾ ವಿಶ್ವಂ ರುಚೈಕ್ಯಂ ಬ್ರಜೇ । ದಿತ್ಯಾಸಂಕ್ಯ ಪುರಾ ಪುರಾರಿರ ಭವದ್ಬಾ

೩೯. ಲೇಕ್ಷಣಃ ಪ್ರಾಯಶಃ । ಪದ್ಮ ಕ್ಷೋಪಿ ಚತುರ್ಭುಜೋಜನಿ ಚತುರ್ವಕ್ತ್ರೋಭವತ್ಪದ್ಮಭೂತ್ । ಕಾಲೀ ಖಡ್ಗಮಥಾದ್ರ

೪೦. ಮಾಚ ಕಮಲಾಂ ವೀಣಾಂಚ ವಾಣೀ ಕರೇ । ಶತ್ರೂಣಾಂ ವಾಸಮೇತೇ ದದತ ಇತಿ ರಷಾಕಿಂನು ಸಪ್ತಾಂಬ

೪೧. ರಾಸೀನ್ । ನಾನಾಸೇನಾತುರಂಗಾ ತೃಟಿತ ವಸುಮತೀ ಧೂಲಿಕಾ ಪಾಲಿಕಾಭಿ । ಸಂ[ಶೋ*]ಷ್ಯ ಸ್ವೈರಮೇತ

೪೨. ತ್ರಿಶಿನಿಧಿ ಶ್ರೇಣಿಕಾ ಯೋ ವಿಧತ್ತೇ। ಬ್ರಹ್ಮಾಂಡ ಸ್ವರ್ಣಮೇರು ಪ್ರಮುಖ ನಿಜಮಹಾದಾನ ತೋಯೈರ

೪೩. ಮೇಯೈ । ಮಧತತ್ರಾಮರ್ತಿಸಾರ್ಥಶ್ರಿಯ ಮಿಹಶಚಿರಂ ಭುಂಜತಾಮಿತ್ಯವೇತ್ಯ । ಪ್ರಾಯ ಪ್ರತ್ಯೂಹ ಹೇತಾಸ್ತ

೪೪. ಪನರಥಗತೇರಾಲಯಂ ದೇವತಾನಾಂ । ತತ್ತದಿಗ್ಜೈತ್ರ ವೃತ್ಯಾಪಿ ಬಿರುದಪದ್ಯೈರಂಕಿತಾಂಸ್ತತ್ರ ತತ್ರ

೪೫. ಯಸ್ತಂವಾ ಪ್ರತಿಷ್ಠಾನ್ವತನುತ ಭುವಿ ಯೋ ಭೂಭೃದದಭ್ರಂಕಷಾಗ್ರಾನ್ । ಕಾಂಚೀ ಶ್ರೀಶೈಲ ಶೋಣಾಚಲ ಕನ

೪೬. ಕಸಭಾ ವೆಂಕಟಾದ್ರಿ ಪ್ರಮುಖ್ಯೈಶ್ವಾವತ್ಯಾರ್ವತ್ಯ ಸೀಮೋಶತನುತ ವಿಧಿವದ್ಭೂಯಸೇ ಶ್ರೇಯಸೇ ಯಃ । ದೇ

೪೭. ವಸ್ಥಾನೇಷ ತೀರ್ಥೇಷ್ವಪಿ ಕನಕತಲಾಪೂರುಷಾದೀನಿ ನಾನಾದಾನಾನ್ಯೇವೋಪದಾನ್ಯೈರಪಿ ಸಮಮ

೪೮. ಖಿಲೈರಾಗಮೋಕಾನಿ ತಾನಿ ॥ ರೋಪಕೃತ್ ಪ್ರತಿಪಾರ್ಥಿವದಂಡಃ ಸೇಪಭುಜಕ್ಷಿತಿ ರಕ್ಷಣ ಶೌಂಡಃ । ಭಾ

೪೯. ಷೆಗೆ[ಗೆ] ತಪ್ಪುವರಾಯರ ಗಂಡ ಸ್ತೋಪಕೃತರ್ಥಿಷು ಯಾ ರಣಚಂಡಃ । ರಾಜಾಧಿರಾಜ ಇತ್ಯುಕ್ತೋ ಯೋ

೫೦. ರಾಜಪರಮೇಶ್ವರ । ಮೂರ್ರರಾಯರ ಗಂಡಶ್ಚ ಪರರಾಯ ಭಯಂಕರ । ಹಿಂದುರಾಯ ಸುರತ್ರಾಣದು

೫೧. ಷ್ಟಶಾರ್ದೂಲಮರ್ದ್ದನ । ವೀರಪ್ರತಾಪ ಇತ್ಯಾದಿ ಬಿರುದೈರುಚಿತೈರ್ಯುತ । ಆಲೋಕಯ ಮಹಾ

೫೨. ರಾಯ ಜಯ ಜೀವೇತಿ ವಾದಿಭಿ । ಅಂಗವಂಗಕಲಿಂಗಾದ್ಯೈ ರಾಜಭಿ ಸೇವ್ಯತೇ ಚಯ । ಸ್ತು

೫೩. ತ್ಯೌದಾರ್ಯಸದೀಭಿ ಸ ವಿಜಯನಗರೇ ರತ್ನಸಿಂಹಾಸನಸ್ಥ । ಕ್ಷ್ಮಾಪಾಲಾನ್ಕೃಷ್ಣರ

೫೪. ಯಾಕ್ಷಿತಿಪತಿರಧರೀಕೃತ್ಯ ಕೀರ್ತ್ಯಾ ನೃಗಾದೀನ್ । ಆಪೂರ್ವಾದ್ರರಥಸ್ಥಾ ಕ್ಷಿತಿಧರಕ

೫೫. ಟಕಾದಾಚ ಹೇಮಾಚಲಾಂತಾದಾಸೇತೋರರ್ಥಿಸಾರ್ಥಶ್ರಿಯಮಿಹಬಹಲೀ ಕೃತ್ಯ ಕೀರ್ತ್ಯಾ ಸಮಿಂಧೇ

೫೬. ಶಕಾಬ್ದೇ ಶಾಲಿವಾಹೇತು ಸಹಸ್ರೇಣ ಚತುಃಶತೈಃ । ಯುತೇ ಹ್ಯೇಕೋನ ಪಂಚಾಶತವರ್ಷೇ ಸರ್ವಜಿ

೫೭. ದಾಹ್ವಯೇ । ವತ್ಸರೇ ಮಾಘ ಶುಕ್ಲೇತು ಸಪ್ತಮ್ಯಾಂ ಪುಣ್ಯವಾಸರೇ । ಶ್ರೀವತ್ಸಗೋತ್ರ ಭೃತಾಯಾಶ್ವ

೫೮. ಲಾಯನ ಸೂತ್ರಿಣೇ । ರುಕ್‌ಶಾಖಾಧ್ಯಾಯಿನೇ ವೇದವೇದಾಂತಾಗಮವೇದಿನೇ । ಶಿರಿಭಟ್ಟ

೫೯. ತನೂಜಾಯ ನಾಗಿದೇವಾಖ್ಯಸೂರಿಣಂ ವಲಿತೆ ಹಸ್ತಿನಾವತ್ಮಾಂ ಗುತ್ತೀವೇಂಠಯಕಶ್ರ

೬೦. ತೇ । ಪೂಲೇಳಿಮಾಗಣೇ ರಮ್ಯ ಗುಂತಗಲ್ಲಸ್ಥಲೇ ತಥಾ । ಪ್ರಾಗ್ಭಾಗೇ ಗುಂತಗಲೋಸ್ತು ದಕ್ಷಿಣೇ

೬೧. ಮುದ್ದಲಾಪುರಾತ್ । ಪ್ರತ್ಯಕೃಲಕ್ಕನದೊಡ್ಯಸ್ತುಹ್ಯುತ್ತರೇ ನೆಲಗೊಂಡೆತಃ। ಮಧ್ಯೇ ಸ್ಥಿತಂ

೬೨. ಚಾನುರಾಲಬಂಡೆ ಪರ್ಪ್ಪನಹಾಲುಕಂ । ಗ್ರಾಮಂ ತಿಂಮಾಪುರಂ[ಪು][ಶ್ರೀ] ಕೃಷ್ಣರಾಯಪುರಂತ

೬೩. ಥಾ । ಸರ್ವಮಾನ್ಯಂ ಚತುಃ ಸೀಮಾ ಸಯುತಂ ಚ ಸಮಂತತಃ । ನಿಧಿನಿಕ್ಷೇಪ ಪಾಷಾಣ

೬೪. ಸಿದ್ಧಸಾಧ್ಯ ಜಲಾನ್ವಿತಾ । ಅಕ್ಷಿಣ್ಯಾಗಾಮಿ ಸಂಯುಕ್ತ ಮೇಕಭೋಗ್ಯಂ ಸ ಭೂರುಹಂ ।

## ಎರಡನೆಯ ಹಲಗೆಯ ಹಿಂಭಾಗ

೬೫. ವಾಪೀಕೂಪತಟಾಕಾದಿ ಕಚ್ಛೇನಾಪಿ ಚ ಸಂಯುತಂ । ಪುತ್ರ ಪೌತ್ರಾ[ದಿ*]ಭಿರ್ಭೋಗ್ಯಂ ಕ್ರಮಾದಾ

೬೬. ಚಂದ್ರ ತಾರಕಂ । ದಾನಸ್ಯಾಧಮನಸ್ಯಾಪಿ ವಿಕ್ರಯಸ್ಯಾಪಿ ಚೋಚಿತಂ । ಪರೀತ ಪ್ರಯತೈಸ್ನಿ

೬೭. ಗ್ಧೈಪುರೋಹಿತ ಪುರೋಗಮೈ । ವಿವಿಧೈ ವಿಬುಧೈ ಶ್ರೌತಪಥಿಕೈರಧಿಕೈರ್ಗಿರಾ । ಕೃಷ್ಣದೇ

೬೮. ವ ಮಹಾರಾಯ ಮಾನನೀಯೋ ಮನಸ್ವಿನಾ ಸಾಹಿರಣ್ಯಪಯೋಧಾರಾಪೂರ್ವಕದತ್ತವಾನ್ಮುದಾ ।

೬೯. ಗ್ರಾಮಸ್ಯ ಯಜಮಾನಸ್ತು ಪ್ರತಿಗೃಸ್ತಾಗ್ರಹಾರಕಂ । ವೃತ್ತೀ ದ್ವಿಂಸಪ್ತತಿ ಪರಿಕಲ್ಪತ
೭೦. ಮುದಾನ್ವಿತಃ । ಸ್ವಾರ್ಥಂ ಸಂ[ಖ್ಯಾಕ] ವೃತ್ತೀಸ್ತು ಪಂಚವಿಂಶತಿಕಾಸ್ತತಃ ಅವಸಿಷ್ಟಾಸ್ತಥಾ ವೃ
೭೧. ತ್ತೀ ವಿಪ್ರೇಭ್ಯೋ ದತ್ತವಾನ್ಮುದಾ । ನಾನಾ[ಖ್ಯ] ಸೂತ್ರಗೋತ್ರೇಭ್ಯ ವೇದವಿಧ್ಭ್ಯಃ ಸುತೋಷತಃ। ವೃತ್ತಿವಂತೋ
೭೨. ವಿಲಿಖ್ಯಂತೇ ಗೋತ್ರ ಸೂತ್ರ ಪುರಸರಂ ॥ ವಿಶ್ವಾಮಿತ್ರಕುಲೋದ್ಭೂತ ಭಾನುಭಟ್ಟಸ್ಯ ಪುತ್ರಕಃ । ಬ
೭೩. ಹೃಚೋ ಓಭಲಾರ್ಯೋಯಂ ವೃತ್ತಿದ್ವಯ ಮಿಹಾಶ್ನುತೇ ॥ ವಿಶ್ವಾಮಿತ್ರ ಕುಲೋದ್ಭೂತ ಕಾಮ ಣಾರ್ಯಸು
೭೪. ತಸುಧೀಃ । ಬಹೃಚಸ್ತಿಮಣಾಭಿಖ್ಯೋ ವೃತ್ತಿದ್ವಯಮಿಹಾಸ್ನುತೇ । ಆತ್ರೇಯೋ ಯಾಜುಷಾಂ ಧೀ
೭೫. ಮಾನ್ ಅಪ್ಪಣಾರ್ಯತನೂಭವ । ವಿಪಶ್ಚಿದ್ಬಸವಾಭಟ್ಟೋ ವೃತ್ತಿದ್ವಯಮಿಹಾಶ್ನುತೇ । ಆ
೭೬. ತ್ರೇಯಜೋ ಯಜುಶಾಖೀ ಕಸವಾಭಟ್ಟನಂದನ । ವಿರೂಪಾಕ್ಷಸ್ತು ವೇದಜ್ಞೋ ವೃತ್ತಿದ್ವಯಮಿಹಾಶ್ನು
೭೭. ತೇ ಆತ್ರೇಯಾಹ್ವಯ ಸಂಭೂತೋ ಯಾಜುಷಂ ಸಿಂಗಣಾತ್ಮಜ । ತಿಂಮಣಾರ್ಯಸ್ತು ದಾ[ಂ]ತೋಯಂ ಸಾರ್ಧ
೭೮. ವೃತ್ತಿ ಮಿಹಾಶ್ನುತೇ ॥ ಕೌಶಿಕಸ್ತು ಯಜುರ್ವೇದೀ ಧೀಮಾಂ ದೇವಭಟ್ಟಜ । ಮಲ್ಲಭಟ್ಟಪ್ರಸಂನಾ
೭೯. ತ್ಮಾ ಸಾರ್ಧವೃತ್ತಿ ಮಿಹಾಶ್ನತೇ ॥ ಕಾಶ್ಯಪೋ ಬಹೃಚೋ ಧೀಮಾಂ ಗುರುರಾಯತನೂಭವ । ನಾರ
೮೦. ಸಿಹ್ಯ ಸದಾಚ ವೃತ್ತಿದ್ವಯಮಿಹಾಶ್ನುತೇ ॥ ಹರೀತಾನ್ವಯ ಸಂಭೂತ ಬಹೃಚೋ ಬಾದರಾಯಣ ।
೮೧. ಸೂನವೇ ದಾನಿ ಭಟ್ಟಾಖ್ಯೋ ವೃತ್ತಿದ್ವಯ ಮಿಹಾ[ಶ್ನುತೇ*] ॥ ಹಾರೀತೋ ಬಹೃಚ ಶ್ರೀಮಾನಾಗಿ ದೇವಸುತ
೮೨. ಸುಧೀಃ । ನಾರಸಿಂಹ್ಯ ಪ್ರಸಂನಾತ್ಮಾ ವೃತ್ತಿದ್ವಯಮಿಹಾಶ್ನುತೇ ॥ ಹರಿತಾನ್ವಯ ಸಂಭೂತ
೮೩. ಬಹೃಚೋ ಅಂಣಯಾತ್ಮಜ । ನಾರಸಿಹ್ಯ ಸುಶೀಲೋಯಂ ವೃತ್ತಿಮೇಕಾಮಿಹಾಶ್ನುತೇ ॥ ಕೌಶಿ
೮೪. ಕೋ ಬಹೃಚ ಶ್ರೀಮಾವಲ್ಲಂಭಟ್ಟಸುತಸುಧೀ ನಾಗಿದೇವಸದಾಚಾರ ವೃತ್ತಿದ್ವಯ ಮಿಹಾ
೮೫. ಶ್ನುತೇ ॥ ಭಾರದ್ವಾಜಾನ್ವಯೋ ಜಾತ ಸೋಮನಾಥಸ್ಯ ನಂದನ ಬಹೃಚೋ ಲಿಂಗಣಾಭಿಖ್ಯೋ
೮೬. ವೃತ್ತಿಮೇಕಾಮಿಹಾಶ್ನುತೇ ॥ ಅತ್ರೇಯಾಯಸಂಜಾತ ಬನದಿಭಟ್ಟತನೂದ್ಭವ । ತಿಂಮಣಾ
೮೭. ಯೋ ಬಹೃಚ ಜೋ ವೃತ್ತಿದ್ವಯಮಿಹಾಶ್ನುತೇ ॥ ಕೌಂಡಿನ್ಯಗೋತ್ರಸಂಭೂತ ಯಾಜುಷೋಯಂ [ರೇವ*]ಣಾತ್ಮ
೮೮. ಜ । ಭೈರವಾರ್ಯಸುಶೀಲೋಯಂ ವೃತ್ತಿಮೇಕಾಮಿಹಾಶ್ನುತೇ ಕುಸಗೋತ್ರೋ ಯಜುರ್ವೇದೀ ಉದಯಾ
೮೯. ಖ್ಯತನೂಭವ । ರಾಘವಾರ್ಯ ಸುಶಾಂತೋಯಂ ವೃತ್ತಿಮೇಕಾಮಿಹಾಶ್ನುತೇ ॥ ಶ್ರೀವತ್ಸಗೋತ್ರಸಂ
೯೦. ಭೂತ ಶಿರಿಭಟ್ಟ ಸುತ ಸುಧೀಃ । ಭೋಗೇಶ್ವರೋ ಬಹೃಚಜೋ ವೃತ್ತಿಪಂಚಕಮಶ್ನುತೇ ॥ ಶ್ರೀ
೯೧. ವತ್ಸಗೋತ್ರ ಸಂಭೂತ ಬಹೃಚ ಶಿರ್ಯಣಾತ್ಮಜ । ವಿದ್ವಾನಾದಿತ್ಯಭಟ್ಟೋಯಂ ವೃತ್ತಿದ್ವಯ-ಮಿಹಾಶ್ನುತೇ
೯೨. ಶ್ರೀವತ್ಸಾನ್ವಯ ಸಂಜಾತಂ ಬಹೃಚಶ್ಚಾಡಣಾತ್ಮಜ। ವಿದ್ವತ್ಬಸವಣಭಟ್ಟಸ್ತು ವೃತ್ತಿದ್ವಯಮಿಹಾಶ್ನುತೇ॥

೯೩. ಶ್ರೀವತ್ಸಗೋತ್ರ ಸಂಭೂತಬಸವಾಭಟ್ಟನಂದನ। ಬಹ್ವೃಚಶ್ಚೌಡಿಭಟ್ಟಾಖ್ಯೋ ವೃತ್ತಿದ್ವಯಮಿಹಾ-
ಶ್ನುತೇ ॥

೯೪. ವಿಶ್ವಾಮಿತ್ರ ಕುಲೋದ್ಭೂತ ವರದಾಖ್ಯತನೂಭವ। ನಾಗಿದೇವಪ್ರಸಂನಾತ್ಮ ಬಹ್ವೃಚೋತ್ರ್ಯೆಕ ವೃತ್ತಿಕಾ

೯೫. ಬಹ್ವೃಚ ಪೂತಿಮಾಷೋಸೌ ಕಾಚಿಭಟ್ಟಸುತಸುಧೀ। ರಾಘವಾರ್ಯಪ್ರಸ[ಂ]ನಾತ್ಮಾ ವೃತ್ತಿಮೇಕಾಮಿಹಾ

೯೬. ಶ್ನುತೇ॥ ಶಾಂಡಿಲ್ಯಗೋತ್ರ ಸಂಭೂತ ಮಲ್ಲಭಟ್ಟಸ್ಯನಂದನ। ಬಹ್ವೃಚೋ ಗೋಪಿನಾಥಾಖ್ಯೋ ವೃತ್ತಿ-
ದ್ವಯಮಿಹಾಶ್ನು

೯೭. ತೇ। ಕೌಂಡಿಣ್ಯಗೋತ್ರಸಂಭೂತ ತಿಂಮಣಾರ್ಯತನೂಭವ। ಯಾಜುಷಸ್ತಿಂಮಣಾಖ್ಯೋಯಂ
ವೃತ್ತಿಮೇಕಾಮಿಹಾಶ್ನುತೇ

೯೮. ಪೂತಿಮಾಷಾನ್ವಯೋ ಜಾತಾ ಕಾಚಿಭಟ್ಟಸ್ಯನಂದನ। ಬಹ್ವೃಚಸ್ತಿಂಮಣಾಭಿಖ್ಯೋ ವೃತ್ತಿಮೇಕಾಮಿಹಾ
ಶ್ನುತೇ ॥ಶಾಂ

೯೯. ಡಿಲ್ಯಗೋತ್ರಸಂಭೂತ ಚೌಂಡಿಭಟ್ಟಾತ್ಮಜ ಸುಧೀ। ಜೊಂನಿಭಟ್ಟ ಸದಾಚಾರ ಬಹ್ವೃಚೋ ಏಕ–
ವೃತ್ತಿಕಂ॥ ಆತ್ರೇ

೧೦೦. ಯಗೋತ್ರ[ಸ]ಂಭೂತ ಹರಿಭಟ್ಟಸ್ಯನಂದನ। ಬಹ್ವೃಚೋ ದೇವಣಾಭಿಖ್ಯೋ ವೃತ್ತಿದ್ವಯ ಮಿಹಾ
ಶ್ನುತೇ ॥

**ಮೂರನೆಯ ಹಲಗೆಯ ಮುಂಭಾಗ**

೧೦೧. ವಿಶ್ವಾಮಿತ್ರಕುಲೋದ್ಭೂತ(ಮ)ಲ್ಲಿದೇವ ತನೂಭವ। ಯೆಲ್ಲಂಭಟ್ಟಸ್ತು ದಾಂತಾಯ ಬಹ್ವೃಚೋ–
ತ್ರ್ಯೆಕವೃತ್ತಿ

೧೦೨. ಕಃ॥ ಶ್ರೀವ[ತ್*]ಸಗೋತ್ರ ಸಂಭೂತ ರಾಮಾಭಟ್ಟಸ್ಯ ನಂದನ। ಬಹ್ವೃಚಸ್ತಿಂಮಣಾಭಿಖ್ಯೋ
ವೃತ್ತಿಮೇ

೧೦೩. ಕಾ[ಮಿ*]ಹಾಶ್ನುತೇ॥ ತ್ರೈಸ್ತ್ರೈ ಸಮಂತತಶ್ಚಿಂಹ್ನೈದಿ[ಕ್ಷು] ಪ್ರಾಚ್ಯಾದಿಷು ಕ್ರಮಾತ್। ಸೀಮಾನು
ಸ್ಸಗ್ರಹಾರಸ್ಯ

೧೦೪. ಲಿಖ್ಯತೇ ದೇಶ ಭಾ[ಷ*]ಯಾ॥ ಚೀನುರಾಲಬಂಡೆ ಪುರುಷ್ಪನ ಹಾಲು ತಿಂಮಲಾಪುರಕೆ ಪ್ರತಿನಾಮಕ
[ವಾ*]ದ

೧೦೫. ಕೃಷ್ಣರಾಯಪು[ರ*]ವೆಂಬ ಸರ್ವಮಾನ್ಯದ ಅಗ್ರಹಾರಕೆ ವಲೆಯ ಶಾಸನಾದಿ ವಿವರ॥ ತಿರುಮಲಾಪುರಕೆ

೧೦೬. ವಾಯವ್ಯ ಮುದ್ದಲಾಪುರದ ಹೊಲ ಮೇರೆ ಚೌಡಿಶೆಟ್ಟಿ ಮಾಡಿದ ಹೊಲನು ಆದಿಯಾಗಿ ಮೂಡಲು

೧೦೭. ನಡದು ನಲ್ಲಮೇನೆ ಮೇರೆಯಾಗಿ ಮುಗುಡೆ ತಿರುಮಲಾಪುರ ಮುದ್ದಲಾಪುರ ಮೋಗರನಹಲಿ ಏ

೧೦೮. ಸೆಲುಗಟ್ಟನ ಬರಹ ಬರದು ಆದಿಯಾಗ ತೆಂಕಲು ನಡದು ಬನೀಮರ ಮೇರೆಯಾಗಿ ತೆಂಕಲು

೧೦೯. ನಡೆಯಲಾಗಿ ಚೌಳಬಯಲಹಟ್ಟ ಗುಂಡಿನ ವಾಮನ ಮುದ್ರೆಯಿಂ ತೆಂಕಲು ನಡೆದು ಶೀಚಿಲಹ

೧೧೦. ಲಿ ಮೇರೆಯಾಗಿ ಮೂಡಲು ನಡದು ತಿರುಮಲಾಪುರ ಲಜನಹಟ್ಟಿ ಗೌರಿನಾಯಕನಹಟ್ಟಿ

೧೧೧. ಮುಗುಡೆ ಕಾಲುವೆ ಬಂನೀ ಮರದ ಗಡ್ಡೆಗೆ ಹೋದ ಕಾಲುವೆ ಅರಲೀ ಮರ ಮೇರೆಯಲಿ ವಾಮು

೧೧೨. ನ ಮುದ್ರೆ। ಅಲ್ಲಿಂದ ಆಗ್ನೇಯಕ್ಕೆ ನಡೆದ ಗುತ್ತೀಮಾರ್ಗದರ್ವಾತ್ತಿರೆ ವಾಮನಮುದ್ರೆ ಅಲಿಂದ ತೆಂ

೧೧೩. ಕಲು ನಡದು ಹುಟ್ಟು ಬಂಡೆ । ಚಂದ್ರ ಸೂರ್ಯ[*]ರು ಅಲಿಂದ ತೆಂಕಲು ನಡದ ಗುಡ್ಡೆವೊಲಗಣ ಹುಟ್ಟು ಗುಂಡಿ

೧೧೪. ನಲಿ ವಾಮನಮುದ್ರೆ । ಅಲಿಂದ ತೆಂಕಲು ಬಿಲಿಯ ತಿಪ್ಪೆಯ ಒಲಗೆ ಹಿರಿಯ ತಿಪ್ಪೆ ಒ

೧೧೫. ಲಗೆ ಹುಟ್ಟುಗುಂಡಿಗೆ ಚಂದ್ರಸೂರ್ಯರು ಆಗ್ನೇಯ ವಾಮನಮುದ್ರೆ । ಪಡುವಲು ನಿಲುಗುಂಡು । ಆ ಮುಂ

೧೧೬. ದೆ ಕಣು ಒಲಗೆ ಚಂದ್ರ ಸೂರ್ಯರು । ಆ ಮುಂದೆ ಕನಕನಹಾಲದೊಲಗೆ ಸೂರ್ಯ ಚಂದ್ರರು । ಆಗ್ನೇಯ

೧೧೭. ನಡದು ನೆಲಗೊಂಡೆಹಲಮಾರ್ಗ ಸೂರ್ಯ ಚಂದ್ರರು । ಅಲಿಂದ ತೆಂಕಲು ಹಟ್ಟಗುಂಡೀಲಿ ಸೂರ್ಯ ಚಂದ್ರ

೧೧೮. ರು ಅಲಿಂದ ಪಡುವಲು ಹಲದೊಲಗೆ ಸೂರ್ಯಚಂದ್ರರು । ಕಂಮಾರ್ರ ನಾರಾಯನ ಹೊಲು ದೊಲಗೆ ನೆ

೧೧೯. ಲಬಂಡೆ । ಸೂರ್ಯಚಂದ್ರರು । ಪಡುವಣ ಹಲದ ಮರದಲಿ ಸೂರ್ಯ ಚಂದ್ರರು । ನೈರುತ್ಯದ ಮೂಲೆ ಮುಗು

೧೨೦. ಡೆ ನಿಲುಗಲಿ ಒತ್ತಿರೆ ವಾಮನಮುದ್ರೆ । ಪಡುವಲು ಯೆಲೆಗುಂಡು ನೈರುತ್ಯಕೆ ನಡದ ಕಂಮಾ

೧೨೧. ರ್ಯ ವೋಬನ ಹೊ [ಹೊ]ಲ ಮೇರೆ ಹುಟ್ಟುಬಂಡೆ ಚಂದ್ರ ಸೂರ್ಯರು ಅಲಿಂದ ವಾಯಾವ್ಯಕೆ ನಡದು ಐತ

೧೨೨. ರ ಗುಂಡಿಲಿ ವಾಮನಮುದ್ರೆ । ವಾಯುವ್ಯ ನಡೆದು ಗೌರಿಶಟ್ಟಿಕುಂಟೆ ವೊಲಗೆ ವಾಮನಮುದ್ರೆ ।'

೧೨೩. ಉತ್ತರಕೆ ನಡದ ಅಡ್ಡಗಲೀಲಿ ವಾಮನಮುದ್ರೆ । ಅಲಿಂದ ಬಡಗಲು ಪುರಪ್ಪನ ಹಾಲವಾಮ

೧೨೪. ನ ಮುದ್ರೆ । ಅಲಿಂದ ಬಡಗಲು ತೊರ ಹುಣಿಸ ಶಚಿಲಹಲದ ಮೂಡಲು ನಡದು ಅರಲೀಮ

೧೨೫. ರ ಬಡಗಲು ನಡದು ಮುದ್ದಲಾಪುರದ ಹೊಲ ಮೇರೆ ಗುಂತಕಲ್ಲ ಹೊಲ ತಿಂಮಾಪುರದ ಮುಗುಡ್ಡೆ ಕೂಡಿತು ॥

೧೨೬. ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನುಪಾಲನಂ । ದಾನಾ ಸ್ವರ್ಗಮವಾಪ್ನೋತಿ ಪಾಲನಾದ ಚ್ಯುತಂ ಪದಂ ॥=॥

೧೨೭. ಶ್ರೀ ವಿರುಪಕ್ಷ*

---

* ಕನ್ನಡ ಅಕ್ಷರದಲ್ಲಿದೆ

# ಅರೆಯೂರಿನ ಸೊಂನಾರಿಯ ಶಿಲಾಶಾಸನ

—ಕೆ. ಬಿ. ಶಿವತಾರಕ್

ತುಮಕೂರು ತಾಲ್ಲೂಕು ಹೆಬ್ಬೂರು ಹೋಬಳಿ ಅರೆಯೂರು ಗ್ರಾಮದ ವೈದ್ಯನಾಥೇಶ್ವರ ದೇವಾಲಯದಲ್ಲಿರುವ ಪ್ರಸ್ತುತ ಶಿಲಾಶಾಸನವನ್ನು ದೇವಾಲಯದ ಒಂದು ಗರ್ಭಗೃಹದ ಒಳಗೆ ಗೋಡೆಗೆ ಸೇರಿಸಲಾಗಿದೆ. ಈ ದೇವಾಲಯವು ದ್ವಿಕೂಟಾಚಲವಾಗಿದೆ.

ಈ ಅಪ್ರಕಟಿತ ಶಾಸನವು ಅತ್ಯಂತ ಸುರಕ್ಷಿತವಾಗಿದೆ. ಆದರೆ ಬರಹವು ಕೆಲವು ಕಡೆ ತೃಟಿತವಾಗಿದೆ. ಕನ್ನಡ ಲಿಪಿ ಹಾಗೂ ಕನ್ನಡ ಭಾಷೆಯ ಈ ಶಾಸನದಲ್ಲಿ ಒಟ್ಟು ೧೮ ಸಾಲುಗಳಿವೆ. ಕೊನೆಯ ಮೂರು ಸಾಲುಗಳನ್ನು ಅರ್ಧ ಮಾತ್ರ ಬರೆದಿದ್ದು ಉಳಿದ ಭಾಗದಲ್ಲಿ ಚಿತ್ರವನ್ನು ಕೆತ್ತಲಾಗಿದೆ. ಆ ಚಿತ್ರದಲ್ಲಿ ಇಬ್ಬರು ವ್ಯಕ್ತಿಗಳ ಚಿತ್ರಣವಿದ್ದು ಒಂದು ಮಹಿಳೆಯದ್ದು ಇನ್ನೊಂದು ಪುರುಷನದ್ದು. (ಫೋಟೋ ನೋಡಿ).

ಇದು ಒಂದು ಖಾಸಗಿ ದಾನ ಶಾಸನ. ಕಾಲದ ಉಲ್ಲೇಖವನ್ನು ಪ್ರಾರಂಭದಲ್ಲೇ ಕಾಣಬಹುದು. "ಹೇಮಳಂಬಿ ಸಂವತ್ಸರದ ಪಾಲ್ಗುಣ ಬಹುಳ ಒಂದು" ಎಂದು ಮಾತ್ರ ಇದೆ. ಲಿಪಿ ಸ್ವರೂಪದ ಪ್ರಕಾರ ಈ ಶಾಸನದ ಕಾಲ ೧೭ನೇ ಶತಮಾನಕ್ಕೆ ಸೇರುವುದರಿಂದ ಈ ಶತಮಾನದಲ್ಲಿ ಹೇಮಳಂಬಿ ಸಂವತ್ಸರವು ಕ್ರಿ. ಶ. ೧೬೫೮ನೇ ಫೆಬ್ರವರಿ ೧೭ ಶನಿವಾರ ಬರುವುದರಿಂದ ಇದೇ ವರ್ಷದ್ದಿರಬೇಕೆಂದು ತಿಳಿಯಬಹುದು.

ಇದು ಸೊಂನಾರಿ' (ವಾದ್ಯಗಾರನಾದ) ನಾಗಪನು ತಮ್ಮ ತಂದೆ ತಾಯಿಗಳಿಗೆ ಪುಣ್ಯವಾಗಲಿ ಎಂದು ಕೊಟ್ಟ ಭೂ ದಾನ ಶಾಸನ. ನಂದಾದೀವಿಗೆಗೆ ಬಿಟ್ಟಂತಹ ಹೊಲ ಎಂದು ಹೇಳಿದೆ. ಆದರೆ ಅದು ಎಲ್ಲಿ ಮತ್ತು ಎಷ್ಟು ಎನ್ನುವ ಬಗ್ಗೆ ವಿವರವಿಲ್ಲ. ಮುಂದಿನ ಭಾಗದಲ್ಲಿ ಶಾಪದ ವಿವರಣೆ ಇದೆ. "ಇದಕ್ಕೆ ಅಳುಪಿದರೆ ಬ್ರಾಹ್ಮಣರನ್ನು ಕೊಂದ ಪಾಪಕ್ಕೆ ಹೋಗುವರು." ಆದರೆ ಇಲ್ಲಿ ಶಾಸನ ಶಿಥಿಲವಾಗಿರುವುದರಿಂದ ಹೆಚ್ಚು ತಿಳಿಯಲು ಸಾಧ್ಯವಿಲ್ಲ.

ಈ ಶಾಸನದ ಕೆಳ ತುದಿಯಲ್ಲಿ ಚಿತ್ರವನ್ನು ಕೊರೆಯಲಾಗಿದೆ. ಈ ಕೆತ್ತನೆ ಅಪರೂಪವಾದುದು. ವಿಜಯನಗರದ ಕಾಲದ ಕೆಲವು ಶಾಸನಗಳಲ್ಲಿ ಅದರಲ್ಲೂ ವಿಶೇಷವಾಗಿ ನಾಯಿಂದರಿಗೆ ನೀಡಿದ ಶಾಸನಗಳಲ್ಲಿ ಕ್ಷೌರಿಕ ಉಪಕರಣಗಳ ಕೆತ್ತನೆಯನ್ನು ಕಾಣಬಹುದಾಗಿದೆ. ವಿಜಯನಗರಕ್ಕೇ ಸೇರಿದ ಮತ್ತೆ ಕೆಲವು ಶಾಸನಗಳಲ್ಲಿ ಶಾಪದ ವಿವರಣೆಯೊಂದಿಗೆ ಅದರ ಕೆತ್ತನೆಯನ್ನೂ ಕಾಣಬಹುದು. ಆದರೆ ಪ್ರಸ್ತುತ ಶಿಲಾ ಶಾಸನದಲ್ಲಿ ದಾನಿ ವಾದ್ಯಗಾರ ಮತ್ತು ನರ್ತಿಸುತ್ತಿರುವ ಸ್ತ್ರೀಯನ್ನು ಕೆತ್ತಲಾಗಿದೆ. ಇದರಿಂದ ವಾದ್ಯಗಾರರೂ ಕೂಡ ದಾನ ಕೊಡುತ್ತಿದ್ದರೆಂಬ ಅಂಶ ತಿಳಿಯುತ್ತದೆ. ಮೇಲಾಗಿ ಇದು ವಾದ್ಯಗಾರರ ಸಾಮಾಜಿಕ ಉನ್ನತಿಯನ್ನು ಪ್ರತಿಬಿಂಬಿಸುತ್ತದೆ.

ಶಾಸನಗಳಲ್ಲಿ ದಾನಿಗಳಾಗಿ ಸಮಾಜದ ಉನ್ನತ ವರ್ಗಕ್ಕೆ ಸೇರಿದ ವ್ಯಕ್ತಿಗಳ ಕೆತ್ತನೆಯನ್ನು ಕಾಣಬಹುದು. ಪ್ರಸ್ತುತ ಶಾಸನದಲ್ಲಿ ದಾನಿ ನಾಗಪನ ಕೆತ್ತನೆ ಇರುವುದನ್ನೂ ಗಮನಿಸಿದಾಗ ಈ ಪರಂಪರೆ ಸಮಾಜದ ಇತರ ವರ್ಗಗಳ ಮೇಲೂ ಪ್ರಭಾವ ಬೀರಿರುವ ಅಂಶ ಬೆಳಕಿಗೆ ಬರುತ್ತದೆ. ಶಾಸನದಲ್ಲಿ ದಾನಿಯ ಚಿತ್ರವನ್ನು ದಾನಿಯ

ಅಪೇಕ್ಷೆಗನುಸಾರವಾಗಿ ಕೆತ್ತಿರಬೇಕು ಅಥವಾ ಲಿಪಿಕಾರನೇ ಸ್ವಾತಂತ್ರ್ಯ ವಹಿಸಿರಬೇಕು. ವಾದ್ಯಗಾರನ ಸಮ್ಮುಖ ದಲ್ಲಿ ನರ್ತಿಸುತ್ತಿರುವ ಸ್ತ್ರೀ ಯಾರೆಂದು ಗುರ್ತಿಸಲು ಸಾಧ್ಯವಾಗಿಲ್ಲ.

ಅಗಿನ ಕಾಲದಲ್ಲಿ ವಾದ್ಯಗಾರರನ್ನು ಸೊಂನಾರಿ ಗಳೆಂದು ಕರೆಯುತ್ತಿದ್ದರು ಎನ್ನುವ ಅಂಶ ತಿಳಿಯುತ್ತದೆ. ಅದೇ ಪದದ ಬಳಕೆ ಸ್ವಲ್ಪ ಬದಲಾವಣೆಯೊಂದಿಗೆ ಈಗಲೂ ಕೂಡ ದಕ್ಷಿಣ ಕರ್ನಾಟಕದಲ್ಲಿ ಬಳಕೆಯಲ್ಲಿದೆ (ಸೊನಾರಿ ಎನ್ನುತ್ತಾರೆ).

**ಶಾಸನದ ಪಾಠ**

೧) (ಹೇ) ವಿಳಂಬಿ ಸಂವತ್ಸರದ ಪಾಲ್ಗು
೨) ಣ ಬ ೧ ಲೂ ಸೊಂನಾರಿನಾಗಪ
೩) ತಂಮ ತಂದೆ ತಾಯಿಗೆ ಪುಣ್ಯ
೪) ವಾಗ ಬೇಕು (ಎ) ಂದು
೫) . ಂಗನ ನಂದಾದಿ . . ಬಿಟ್ಟ
೬) ಹೊಲಲು . . . . . ದ
೭) . . . . . . . .
೮) ಅಳಿಯಿದಕೆ ಅಳುಪಿದ
೯) ರೆ ಅತ . . . . .
೧೦) . . . . . . .
೧೧) ಬ್ರಾಂಹಾರನ ಕೊಂದ ಪಾಪ
೧೨) ಕ್ಕೆ ಹೋಹರು . ಡ . ರಬರ
೧೩) ಹ . . . ಮತುಂ . ಪಿದೊನು
೧೪) ಹೆಂಡತಿಯ ಕೊಂದ . . ವಿಪಿ
೧೫) ಚಕೆತ . . .

---

1. ಸೊಂನಾರಿ (ಸೊನಾಯಿ, ಸುನಾಯಿ) ಎಂದರೆ a sort of Clarionet ಎಂದು ಕಿಟಲ್ ಅವರು ಅರ್ಥೈಸಿದ್ದಾರೆ. Kittle's Kannada-English Dictionary Vol. 4 PP. 1672-
ಡಾ॥ ಎಂ. ಚಿದಾನಂದಮೂರ್ತಿಯವರು ಈ ಪದದ ಬಗ್ಗೆ ಸಲಹೆ ಮತ್ತು ಸೂಚನೆಗಳನ್ನಿತ್ತಿದ್ದಾರೆ. ಅವರಿಗೆ ಕೃತಜ್ಞತೆಗಳು.

* ಈ ಶಾಸನವನ್ನು ಪ್ರತಿ ಮಾಡಲು ಮಿತ್ರರಾದ ಟಿ. ಜಿ. ರಾಜೇಂದ್ರಪ್ರಸಾದ್‌ರವರು ಸಹಾಯ ಮಾಡಿದ್ದಾರೆ.
ಈ ಶಾಸನದ ಪಡಿಯಚ್ಚನ್ನು ಓದಲು ಡಾ॥ ಬಿ. ವಸಂತಶೆಟ್ಟಿ ಪ್ರಾಂಶುಪಾಲರು, ಎಸ್.ಎಂ.ಎಸ್. ಕಾಲೇಜು ಬ್ರಹ್ಮಾವರ ಇವರು ಸಹಕರಿಸಿದ್ದಾರೆ.

# ಗುಡಿಬಂಡೆಯ ಜೈನ ಶಾಸನಗಳು

**ಡಿ.ವಿ. ಪರಮಶಿವಮೂರ್ತಿ**

ಗುಡಿಬಂಡೆ ಕೋಲಾರ ಜಿಲ್ಲೆಯ ಒಂದು ಸಣ್ಣ ತಾಲ್ಲೂಕು ಕೇಂದ್ರ ಸ್ಥಳ. ಇದು ಆರ್ಥಿಕವಾಗಿ, ಶೈಕ್ಷಣಿಕವಾಗಿ ಬಹಳ ಹಿಂದುಳಿದ ಸ್ಥಳಗಳಲ್ಲಿ ಒಂದಾಗಿದೆ. ಗುಡಿಯ ಮೇಲೆ ಬಂಡೆಯಿರುವುದರಿಂದ ಇದಕ್ಕೆ 'ಗುಡಿಬಂಡೆ' ಎಂಬ ಹೆಸರು ಬಂದಿದೆ[1]. ಈ ಊರನ್ನು 'ಜವಳಿ ಗುಡಿಬಂಡೆ' ಮತ್ತು 'ಗೂಬೆ ಗುಡಿಬಂಡೆ' ಎಂದೂ ಕರೆಯುತ್ತಾರೆ. ಈ ಊರಿನಲ್ಲಿ ನಮ್ಮ ಮನಸೆಳೆವ ಅಂಶಗಳಾವುವು ಎಂದರೆ, ದೊಡ್ಡ ದೊಡ್ಡ ಬಂಡೆಗಳು ಮತ್ತು ಎಂಥಹ ಬಿಸಿಲಿಗೂ ಜಗ್ಗೆನು ಎಂಬ ಮನೋಭಾವದಲ್ಲಿ ನಿಂತ ಬೆಟ್ಟದ ಮೇಲಿನ ಕೋಟೆ. ಈ ಕೋಟೆಯ ಇತಿಹಾಸದ ಬಗ್ಗೆ ಊರಿನ ಜನಗಳ ಬಾಯಲ್ಲಿ ಹಲವಾರು ದಂತ ಕಥೆಗಳು, ಊಹಾಪೋಹಗಳು ಸಾಮಾನ್ಯವಾಗಿವೆ. ಎಲ್ಲದಕ್ಕೂ ಪೌರಾಣಿಕ ಹಿನ್ನೆಲೆಯನ್ನೇ ಮುಂದಿಡುತ್ತಾರೆ[2]. ಆದರೆ ಯಾವ ಪಾಳೆಯಗಾರರೂ ನೇರವಾಗಿ ಈ ಊರಿನಿಂದಲೇ ಆಡಳಿತ ನಡೆಸಲಿಲ್ಲ ಎಂಬುದು ಸತ್ಯ ಸಂಗತಿಯಾಗಿದೆ. ಹಾವಳಿ ಭೈರೇಗೌಡ' ಎಂಬುವನು ೧೭ನೇ ಶತಮಾನದಲ್ಲಿ ಈ ಕೋಟೆಯನ್ನು ಕಟ್ಟಿಸಿದರೂ ಅವನ ನಂತರ ಈ ಪ್ರಾಂತ್ಯ ಕೆಲ ಕಾಲದಲ್ಲೇ ಚಿಕ್ಕಬಳ್ಳಾಪುರ ಸಂಸ್ಥಾನವನ್ನು ಸೇರಿತು ಎಂದು ತಿಳಿದು ಬರುತ್ತದೆ[3]. ಈ ಗುಡಿಬಂಡೆಯನ್ನು ಹಾವಳಿ ಭೈರೇಗೌಡನಿಗೆ ಕಾಸಿಂಖಾನ್ ಎಂಬುವನು ನೀಡಿದನು. ಈ ಸ್ಥಳದ ಇತಿಹಾಸದ ಬಗ್ಗೆ ನಮಗೆ ಇದುವರೆಗೂ ಯಾವುದೇ ರೀತಿಯ ಖಚಿತ ದಾಖಲೆಗಳು ದೊರೆತಿಲ್ಲ. ಒಳ್ಳೆ ಗಟ್ಟಿ ಮುಟ್ಟಾದ, ಉತ್ತಮ ರಚನೆಯಿಂದ ಕೂಡಿದ ಈ ಕೋಟೆ ತನ್ನ ಒಂದೊಂದೇ ಕಲ್ಲುಗಳನ್ನು ಉದುರಿಸಿಕೊಳ್ಳುತ್ತ ಕಳೆದ ಇತಿಹಾಸಕ್ಕೆ ಮೂಕ ಸಾಕ್ಷಿಯಾಗಿ ನಿಂತಿದೆ.[4]

ಜೈನ, ಹಿಂದೂ, ಮುಸ್ಲಿಂ ಮತೀಯರು ಯಾವುದೇ ರೀತಿಯ ಗಲಭೆಗಳಿಲ್ಲದೆ, ಸಹಬಾಳ್ವೆ ನಡೆಸುತ್ತಿರುವುದು ಈ ಊರಿನ ಹಿರಿಮೆಯಾಗಿದೆ. ಈ ಊರಿನ ಇತಿಹಾಸದಲ್ಲಿ ಇದುವರೆಗೂ ಮತೀಯ ಗಲಭೆಗಳೇ ನಡೆದಿಲ್ಲವೆಂದು ಅಲ್ಲಿನ ಜನರ ಅಭಿಪ್ರಾಯ. ಇಂದು ಕೇವಲ ನಾಲ್ಕು ಜೈನ ಕುಟುಂಬಗಳಿರುವ ಈ ಊರು, ಒಂದು ಕಾಲದಲ್ಲಿ ಹೆಚ್ಚು ಜೈನರಿಗೆ ಆಶ್ರಯವಾಗಿತ್ತು. ಈ ವಿಷಯಕ್ಕೆ ಆಧಾರವಾಗಿ ಅಲ್ಲಿನ ಬಸದಿಗಳು, ಜೈನರ ಹೇಳಿಕೆಗಳು ಆಧಾರವಾಗಿದ್ದುವು. ಆದರೆ ಇತ್ತೀಚೆಗೆ ದೊರಕಿದ ಅಲ್ಲಿನ ಶಿಲಾಶಾಸನಗಳ ಆಧಾರದಿಂದ ಈ ಮಾತು ಸಂಶಯವಿಲ್ಲದೆ ದೃಢಪಡುತ್ತದೆ.

---

1 MAR-೧೯೪೧ ಪುಟ

2 ಬೆಟ್ಟದ ಮೇಲಿರುವ 'ಪಾರ್ವತಿ ಪ್ರಸನ್ನ ರಾಮೇಶ್ವರ' ದೇವರನ್ನು ಅಗಸ್ತ್ಯ ಮುನಿಗಳು ಶ್ರೀ ರಾಮನಿಂದ ಪ್ರತಿಷ್ಠೆ ಮಾಡಿಸಿ, ಸುರಸದ್ಮಗಿರಿ ಎಂದು ಹೆಸರಿಟ್ಟರಂತೆ.

3 ಮೈಸೂರು ಗೆಝೆಟೀಯರ್, ಸಂ v ಪುಟ ೩೧೯ (ಸಂ. ಸಿ. ಹಯವದನರಾವ್)

4 ಕೋಟೆಯ ಬಗ್ಗೆ ವಿವರಣೆಗಳಿಗೆ ನೋಡಿ M.A.R. ೧೯೪೧

ಈಗ ಪ್ರಸ್ತಾಪಿಸಲಿರುವ ಶಾಸನಗಳು ಗುಡಿಬಂಡೆ ಕೆರೆಯ ಪಕ್ಕದಲ್ಲಿ ಉತ್ತರಕ್ಕೆ ಇರುವ 'ಪಾದದ ಬೆಟ್ಟ'ದ ಮೇಲೆ ಇವೆ. ಈ ಬೆಟ್ಟದ (ಗುಡ್ಡದ) ಪಕ್ಕ ಕುಶಾವತಿ ನದಿ ಹರಿಯುತ್ತಿತ್ತು. ಈಗ ಈ ನದಿಗೆ ಅಡ್ಡವಾಗಿ ಕೆರೆಯನ್ನು ನಿರ್ಮಿಸಲಾಗಿದೆ[1]. ಈ ಗುಡ್ಡದ ಮೇಲೆ ನಾಲ್ಕು ಕಂಭಗಳಿಂದ ಕೂಡಿದ ಸರಳವಾದ ಒಂದು ಮಂಟಪವಿದೆ. ಇದರ ಸುತ್ತಲೂ ಅಲ್ಲಲ್ಲಿ ಚದುರಿರುವಂತೆ ಏಳು ಶಾಸನಗಳೂ ಮತ್ತು ಎಂಟು ಜೊತೆ ಪಾದಗಳೂ ಇವೆ. ಎಲ್ಲಾ ಶಾಸನಗಳ ಬಳಿಯೂ ಪಾದಗಳನ್ನು ಕೆತ್ತಲಾಗಿದೆ. ಇವುಗಳು ಇರುವ ಜಾಗ ವಿಶಾಲವಾದ ನಯವಿಲ್ಲದ, ಚಕ್ಕೆ ಚಕ್ಕೆಯಿಂದ ಕೂಡಿದ ಬಂಡೆ ಯಾಗಿದೆ. ಸೂಕ್ಷ್ಮವಾಗಿ ಗಮನಿಸಿದಾಗ ಮಾತ್ರ ಈ ಶಾಸನಗಳು ಕಂಡು ಬರುತ್ತವೆ. ಇರುವ ಏಳು ಶಾಸನ ಗಳಲ್ಲಿ ಎರಡು ಶಾಸನಗಳು ಸಂಪೂರ್ಣ ಹಾಳಾಗಿವೆ. ಅಲ್ಲದೆ ಶಾಸನವಿಲ್ಲದ ಒಂದು ಜೊತೆ ಪಾದಗಳೂ ಇವೆ. ಒಟ್ಟಾರೆ ಈ ಸ್ಥಳದಲ್ಲಿ ಎಂಟು ಜೊತೆ ಪಾದಗಳು. ಐದು ಶಾಸನಗಳು ಮತ್ತು ಪೂರ್ಣ ಸವೆದಿರುವ ಎರಡೂ ಶಾಸನಗಳೂ ಇವೆ. ಈ ಶಾಸನಗಳು ಇದುವರೆಗೂ ಎಲ್ಲೂ ಪ್ರಕಟಗೊಂಡಿಲ್ಲ. ಅನ್ಯಕಾರಣಗಳಿಗಾಗಿ ಆ ಪ್ರದೇಶದಲ್ಲಿ ಪರಿವೀಕ್ಷಣೆ ಮಾಡುವಾಗ ಪಾದಗಳು ಮತ್ತು ಅವುಗಳ ಜೊತೆ ಇರುವ ಶಾಸನಗಳೂ ಪತ್ತೆಯಾದುವು[2].

### ಶಾಸನಗಳ ಪಾಠ

1) ಶ್ರೀ ಲಕ್ಷ್ಮೀಸೇನ ಭಟ್ಟಾರಕರ ಸಿಸ್ಯರಾದ
ಶ್ರೀಮತ್ ಆಕಳಜಿಯಾನವರ ಕರ್ಮಕ್ಷ
ಯ ಭೂಮಿ × × ಭಗ × ನರೂಳ × ಸವಿಸೆಟ್ಟ
ಣಂ ಮಾಡಿಸಿದ ಪಲಕ

2) ಶ್ರೀ ಲಕ್ಷ್ಮೀಸೇನ ಭಟರಕ ಸಿಶರಾದ
ಅಂತಕಳ ಜಯನವರು
ಕರ್ಮಕ್ಷಯ ಭೂಮಿ

3) ಬಾಹುಬಲಿ ದೇವರು.

4) ಪರಾಭವ ಸಂವಶ್ಚರದ ಚೈತ್ರ
ಬ ೧೦ ಲು ಲಕ್ಷ್ಮೀಸೆನ ಭಟಾ
ರಕರ ಸಿಸ್ಯರು/ರುಷ × ಸೇನ ದೆವ
ರು × × × × × ಡು × × ಭೂಮಿ × × ×
× × ಶ್ರೀ × × ವ × ಕಗಿ × × × × × ×

5) ಶ್ರೀ ಲಕ್ಷ್ಮೀಸೇನ ಭಟ್ಟಾರಕ್ಕ
ರ ಶಿಷ್ಯರಾದ ಪಾಯಕ್ಕಗ
ಳ ಕರ್ಮಕ್ಷಯ ಭೂಮಿ.

ಮೇಲಿನ ಶಾಸನಗಳಲ್ಲಿ ಸಂಖ್ಯೆ ೪ರ ಶಾಸನದಲ್ಲಿ ಮಾತ್ರ ಕಾಲದ ಬಗ್ಗೆ ಉಲ್ಲೇಖವಿದೆ. 'ಪರಾಭವ ಸಂವತ್ಸರದ ಚೈತ್ರ ಬಹುಳ ೧೦' ಎಂದಿದೆ. ಬರೆದಿರುವ ಲಿಪಿ, ಭಾಷೆ ಮತ್ತು ಕಾಲದ ಉಲ್ಲೇಖದ ಆಧಾರದಿಂದ ಇದರ ಕಾಲ ಕ್ರಿ.ಶ. ೧೭೮೬ ಏಪ್ರಿಲ್ ೨೩ (ಭಾನುವಾರ) ಕ್ಕೆ ಹೊಂದಿಕೊಳ್ಳುತ್ತದೆ[3]. ಇತರ ಶಾಸನಗಳ ಲಿಪಿಯೂ ಇದೇ ರೀತಿಯಿರುವುದರಿಂದ ಅವುಗಳೂ ಕೂಡ ಸರಿ ಸುಮಾರು ಇದೇ ಕಾಲಕ್ಕೆ ಸೇರುತ್ತವೆ.

ಈ ಶಾಸನಗಳಲ್ಲಿ ಬರುವ ಶಿಷ್ಯರುಗಳ ಹೆಸರುಗಳು ಆಕಳಜಿಯ, ಅಂತಕಳಜಿಯ, ವೃಷಭಸೇನ ಮತ್ತು ಪಾಯಕ್ಕ ಎಂದಿವೆ. ಮೇಲಿನ ಎಲ್ಲರೂ (ಬಾಹುಬಲಿ ಯನ್ನು ಬಿಟ್ಟು) 'ಶ್ರೀ ಲಕ್ಷ್ಮೀಸೇನ ಭಟ್ಟಾರಕ' ಎಂಬ ಒಬ್ಬನೇ ಗುರುವಿನ ಪರಂಪರೆಗೆ ಸೇರಿದವರು. ಬಹುಶಃ 'ಬಾಹುಬಲಿ'ಯೂ ಇದೇ ಪರಂಪರೆಗೆ ಸೇರಿದವನಿರ ಬೇಕು. ೨ನೇ ಶಾಸನವನ್ನು 'ಸವಿಸೆಟ್ಟಿ' ಎಂಬುವನು ಕೆತ್ತಿಸಿರುವುದಕ್ಕೆ ದಾಖಲೆಯಿದೆ. ಗುರುವಿನ, ಶಿಷ್ಯರು ಗಳ ಮತ್ತು ಅವರು ಮೋಕ್ಷವನ್ನು ಪಡೆದರು ಎಂಬ ವಿಷಯಗಳನ್ನು ಬಿಟ್ಟರೆ ಇನ್ನಾವ ವಿಷಯಗಳೂ ಈ ಶಾಸನದಲ್ಲಿ ದೊರಕುವುದಿಲ್ಲ.

---

1 ಇದಕ್ಕೆ 'ಭೈರಸಾಗರ' ಎಂಬ ಹೆಸರಿದ್ದು, 'ಹಾವಳಿ ಭೈರೇಗೌಡ' ಇದನ್ನು ಕಟ್ಟಿಸಿದನು ಎಂಬ ವಿಷಯ ಕೆಲವು ಮೂಲಗಳಿಂದ ತಿಳಿದು ಬರುತ್ತದೆ.

2 ಪಾದಗಳನ್ನು ತೋರಿಸಿದವರು ಗುಡಿಬಂಡೆಯ ಶ್ರೀ ಸತ್ಯನಾರಾಯಣ ಅವರು.

3 ಕಾಲವನ್ನು ನಿರ್ಧರಿಸಲು ಗುರುಗಳಾದ ಶ್ರೀ ದೇವರ ಕೊಂಡರೆಡ್ಡಿ ಮತ್ತು ಶ್ರೀ ಪಿ.ವಿ. ಕೃಷ್ಣಮೂರ್ತಿಗಳು ನೆರವು ನೀಡಿದ್ದಾರೆ.

ಈ ಶಾಸನಗಳಲ್ಲಿ ಉಲ್ಲೇಖವಾಗಿರುವ 'ಲಕ್ಷ್ಮೀಸೇನ ಭಟ್ಟಾರಕ' ಎಂಬ ಮುನಿಯು ಜೈನಧರ್ಮದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದವನಾಗಿದ್ದಾನೆ. ಈ ಹೆಸರಿನ ಮುನಿಗಳು ಬೇರೆ ಬೇರೆ ಕಾಲದಲ್ಲಿ ನಮಗೆ ದೊರೆಯುತ್ತಾರೆ. ಇದಕ್ಕೆ ಹಲವಾರು ಶಾಸನಗಳು ಆಧಾರವಾಗಿ ಸಿಗುತ್ತವೆ. ಈ ಹೆಸರಿನ ಒಬ್ಬ ಮುನಿಯು 'ಸಮಂತ ಭದ್ರ ಸ್ವಾಮಿ'ಗಳ ಶಿಷ್ಯರಾದ 'ವೀರಸೇನ ಭಟ್ಟಾರಕ'ರ ಶಿಷ್ಯರು ಎಂದು ಒಂದು ಶಾಸನದಿಂದ ತಿಳಿದು ಬರುತ್ತದೆ[2]. ಇವರು ಪೆನುಗೊಂಡೆಯ ಜೈನ ಮಠಕ್ಕೆ ಸೇರಿದವರು. ದಿಲ್ಲಿ, ಕೊಲ್ಲಾಪುರ, ಜಿನಕಂಚಿಗಳಲ್ಲೂ ಇವರು ಮಠಗಳನ್ನು ಸ್ಥಾಪಿಸಿದ್ದಾರೆ. ಪೆನುಗೊಂಡೆಯು ಗುಡಿಬಂಡೆಗೆ ಬಹಳ ಹತ್ತಿರವಾಗಿರುವುದರಿಂದ, ಈ ಶಾಸನಗಳಲ್ಲಿ ಬರುವ 'ಲಕ್ಷ್ಮೀಸೇನ ಭಟ್ಟಾರಕರು' ಇದೇ ಪರಂಪರೆಯವರೆಂದು ಊಹಿಸಬಹುದಾಗಿದೆ.

ಈ ಶಾಸನಗಳಲ್ಲಿ ಗುರು–ಶಿಷ್ಯರುಗಳ ಹೆಸರುಗಳನ್ನು ಹೇಳಿ ಈ ಸ್ಥಳ ಅವರ 'ಕರ್ಮಕ್ಷಯ ಭೂಮಿ' ಎಂದು ಹೇಳಿದೆ. ಸಾಮಾನ್ಯವಾಗಿ ಬಳಸುವಂತೆ 'ಸನ್ಯಸನಂಗೆಯ್ದುರು' ಅಥವಾ 'ನಿಷಧಿಸ್ಥಳ' ಎಂದು ಹೇಳದೆ, ಶ್ರೀಮತಿ 'ಆಕಳಜಿಯಾನವರ ಕರ್ಮಕ್ಷಯಭೂಮಿ' (೧ನೇ ಶಾಸನ), 'ಅಂತಕಳದೆಜಿಯನವರ ಕರ್ಮಕ್ಷಯ ಭೂಮಿ' (೨ನೇ ಶಾಸನ), ಪಾಯಕ್ಕಗಳ 'ಕರ್ಮಕ್ಷಯ ಭೂಮಿ' (೫ನೇ ಶಾಸನ) ಎಂದು ಹೇಳಬಾಗಿದೆ. ಈ 'ಕರ್ಮಕ್ಷಯ ಭೂಮಿ' ಎಂಬ ಪದ ಇದೂವರೆಗೂ ಪ್ರಕಟವಾಗಿರುವ ಕನ್ನಡ ಶಾಸನಗಳಲ್ಲಿ ಎಲ್ಲೂ ಬಳಕೆಗೊಂಡಿಲ್ಲ. ಅಲ್ಲದೆ ನಿಘಂಟುಗಳಲ್ಲಿಯೂ 'ಕರ್ಮಕ್ಷಯ ಭೂಮಿ, ಎಂಬ ಪದ ಪ್ರಯೋಗಗೊಂಡಿಲ್ಲ. ಅದರ ಬದಲು 'ಕರ್ಮಕ್ಷಯ' ಮತ್ತು 'ಕರ್ಮಭೂಮಿ' ಎಂಬ ಪದಗಳು ಅಲ್ಲಿ ದೊರೆಯುತ್ತವೆ. 'ಕರ್ಮಕ್ಷಯ' ಎಂಬ ಪದಕ್ಕೆ "ಪಾಪ ಪುಣ್ಯರೂಪವಾದ ಕರ್ಮಬಂಧವು ಕ್ಷಯಿಸುವುದು ನಾಶವಾಗುವುದು" "ಇರುವ ಕರ್ಮವನ್ನು ನಾಶಮಾಡುವುದು" ಎಂಬ ಅರ್ಥವಿದೆ[3]. ಕರ್ಮಭೂಮಿ ಎಂಬ ಪದಕ್ಕೆ "ಎಲ್ಲಿ ಸಂಸಾರ ಪರಿಹಾರೋಪಾಯ ಉಂಟೋ, ಎಲ್ಲಿ ಪಾಪ ಪುಣ್ಯಗಳಿಂದ ಜೀವರು ಬಂಧವನ್ನೈದುವರೋ ಆ ಭೂಮಿ" ಎಂಬ ಅರ್ಥವಿದೆ.[4] ಈ 'ಕರ್ಮಕ್ಷಯ ಭೂಮಿ' ಎಂಬ ಪದಕ್ಕೆ ನಾವು ಮೇಲಿನ ಅರ್ಥವನ್ನೇ ಕೊಡಬಹುದು. ಅಂದರೆ 'ಕರ್ಮವನ್ನು ನಾಶಮಾಡಿಕೊಂಡ, ಮೋಕ್ಷವನ್ನು ಪಡೆದ ಸ್ಥಳ' ಎಂದು ಹೇಳಬಹುದು. "ಬಂಡೆಯ ಮೇಲೆ ಇಂತಹ ಬರಹಗಳಿದ್ದರೆ ಆ ಬಂಡೆಯ ತುದಿಯಲ್ಲಿ (ಅಥವಾ ಕೆಳಗೆ) ಮಳೆ ಬಿಸಿಲುಗಳನ್ನು ಸಹಿಸಿ ವ್ರತವನ್ನು ಆ ವ್ಯಕ್ತಿಯು ಪೂರೈಸಿದನು ಎಂದು ತಿಳಿಯಬೇಕು" ಎಂದು ಡಾ॥ ಎಂ. ಚಿದಾನಂದಮೂರ್ತಿಯವರು[5] ಹೇಳುತ್ತಾರೆ. ಆದರೆ ಈ ಶಾಸನಗಳಿರುವ ಸ್ಥಳವು ಮುನಿಗಳು ತಪಸ್ಸು ಮಾಡಿದ ಸ್ಥಳವೇ ಎಂಬುದನ್ನು ಹೇಳುವುದು ಕಷ್ಟವಾಗುತ್ತದೆ. ಇಲ್ಲಿನ ಶಾಸನಗಳಲ್ಲಿ ಉಲ್ಲೇಖವಾಗಿರುವ ಹೆಸರುಗಳು ಸುತ್ತ-ಮುತ್ತಲ ಬೇರೆ ಶಾಸನಗಳಲ್ಲಿ ಎಲ್ಲೂ ದೊರೆಯುವುದಿಲ್ಲ.

ಕಾಲಾನಂತರ ಇಲ್ಲಿನ ಜೈನರುಗಳು ಸುತ್ತ-ಮುತ್ತಲ ಗೌರಿಬಿದನೂರು, ಮಂಡಿಕಲ್ಲು, ಪೆನುಗೊಂಡೆ ಹಾಗೂ ಇತರೆ ಸ್ಥಳಗಳಿಗೆ ವಲಸೆ ಹೋದುದಾಗಿ ತಿಳಿದು

---

1 ಎ.ಕ. ೭ (ಪ.ಆ.) ಪುಟ-೯೩. ಕ್ರಿ.ಶ. ೧೬೮೦
ಎ.ಕ. ೨ (ಪ.ಆ.) ಪುಟ-೧೫೪ ಕ್ರಿ.ಶ. ೧೬೬೨
ಎ.ಕ. ೪ -”- ಪುಟ-೨೪೦ ಕ್ರಿ.ಶ. ೧೬೭೪
ಎ.ಕ. ೫ -”- ಪುಟ-೬೨ ಕ್ರಿ.ಶ. ೧೮೭೮
ಎ.ಕ. ೨ -”- ಪುಟ-೨೪೪. ಕ್ರಿ.ಶ. ೧೫ ಶಮಾ
ಎ.ಕ. ೨ -”- ಪುಟ-೧೫೪ ಕ್ರಿ.ಶ. ೧೪ ಶಮಾ
-”- -”- ಪುಟ-೨೪೫ ಕ್ರಿ.ಶ. ೧೬೬೨

2 ಎ.ಕ. ೭ (ಪ.ಆ.) ಪುಟ-೯೩. ಕ್ರಿ.ಶ. ೧೬೮೦

3 ಕನ್ನಡ-ಕನ್ನಡ ನಿಘಂಟು ಸಂ. ೨ ಪುಟ-೧೫೭೬

4 ಜೈನ ಪರಿಭಾಷಾ ರತ್ನಕೋಶ ಪುಟ-೬೬

5 ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಪುಟ-೧೦೦

ಬರುತ್ತದೆ. ಊರಿನೊಳಗಡೆ ಎರಡು ಬಸದಿಗಳು ಇವೆ. ಅವು 'ಪಾರ್ಶ್ವನಾಥ ಬಸದಿ' ಮತ್ತು 'ಚಂದ್ರನಾಥ ಬಸದಿ'. ಪಾರ್ಶ್ವನಾಥ ಬಸದಿ ದೊಡ್ಡದಾಗಿದ್ದು, ಕಂಭಗಳಲ್ಲಿ ಹಾಗೂ ಗೋಡೆಗಳಲ್ಲಿ ಹಲವಾರು ರೀತಿಯ ಉಬ್ಬು ಶಿಲ್ಪಗಳಿವೆ. ಪಾರ್ಶ್ವನಾಥ ವಿಗ್ರಹ ನಿಂತ ಭಂಗಿಯಲ್ಲಿದ್ದು, ಹಸಿರು ನೀಲಿ ಮಿಶ್ರಿತ ಪಚ್ಚೆಗಲ್ಲಿನಿಂದ ಕೂಡಿದೆ. 'ಚಂದ್ರನಾಥ ಬಸದಿ'ಯು ಸ್ವಲ್ಪ ಚಿಕ್ಕದಾಗಿದ್ದು ಇಲ್ಲಿ ಅಮೃತ ಶಿಲೆಯಲ್ಲಿ ಕಡೆದ, ಕುಳಿತ ಭಂಗಿಯ ವಿಗ್ರಹವಿದೆ. ಎರಡು ಬಸದಿಗಳಲ್ಲೂ ಲೋಹಗಳ ಹಲವಾರು ವಿಗ್ರಹಗಳಿವೆ. ಇವುಗಳಲ್ಲಿ 'ಪದ್ಮಾವತಿ'ಯ ವಿಗ್ರಹ ತುಂಬ ಸುಂದರವಾಗಿದ್ದು, ಇದೇ ರೀತಿಯ ವಿಗ್ರಹ ಸಾಲಿಗ್ರಾಮದ ಬಸದಿಯಲ್ಲೂ ಕಂಡು ಬರುತ್ತದೆ. ಇಲ್ಲಿನ ವಿಗ್ರಹಗಳನ್ನು ಅರಲಗೆರೆ, ಚಾಮರಾಜನಗರ ಮುಂತಾದ ಕಡೆಯ ಭಕ್ತರು ಮಾಡಿಸಿ ಕೊಟ್ಟಿದ್ದಾರೆ. ಕಾಲದ ದೃಷ್ಟಿಯಿಂದ ಎರಡೂ ಬಸದಿಗಳು ವಿಜಯನಗರದವರ ಕಾಲಕ್ಕೆ ಸೇರುತ್ತವೆ. 'ಪಾರ್ಶ್ವನಾಥ ಬಸದಿ'ಮೊದಲು ನಿರ್ಮಾಣವಾದುದಾಗಿದೆ. ಈ ಸ್ಥಳದಲ್ಲಿ ಕ್ರಿ.ಶ. 1903ರಲ್ಲಿ 'ಚಂದ್ರಕೀರ್ತಿ ನಿಗ್ರಂಥ ಮುನಿ' ಎಂಬುವನು ಜೀವಿಸಿದ್ದರಂತೆ.[1]

ಗುಡಿಬಂಡೆಯ ದಕ್ಷಿಣಕ್ಕೆ ಸುಮಾರು ೨ ಕಿ.ಮೀ. ದೂರದಲ್ಲಿ ನೆಲಮಾಳಿಗೆಯಾಕಾರದ 'ಬ್ರಹ್ಮದೇವರ' ಗುಡಿ ಇದೆ. ಇಲ್ಲಿನ ಕುದುರೆಯ ಮೇಲೆ ಕುಳಿತ ವೀರನ ವಿಗ್ರಹವನ್ನು 'ಬ್ರಹ್ಮದೇವರು' ಎಂದು ಕರೆಯುತ್ತಾರೆ. ಇದರ ಸಮೀಪವೇ ನೆಲದಲ್ಲಿ ಹುದುಗಿಕೊಂಡಿರುವ ಬಂಡೆಯಲ್ಲಿ ಒಂದು ಜೊತೆ ಪಾದಗಳನ್ನು ಕೆತ್ತಲಾಗಿದೆ. ಇದು ನೆಲದಿಂದ ಸುಮಾರು ೪ ಅಡಿ ಆಳದಲ್ಲಿದೆ. ಬ್ರಹ್ಮದೇವರು ಮತ್ತು ಈ ಪಾದಗಳಿರುವ ಸ್ಥಳದ ಆಳವು ಒಂದೇ ಆಳತೆಯಲ್ಲಿದೆ. ಇದನ್ನು ಗಮನಿಸಿದರೆ ಈ ಸ್ಥಳ ಕಾಲಾನಂತರ ಮುಚ್ಚಿಹೋಗಿರಬಹುದು. ಎರಡು ಬೆಟ್ಟಗಳ ಮಧ್ಯಯಿರುವ ಈ ಸ್ಥಳ ಹೀಗಾಗಲು ಸಾಧ್ಯವಿದೆ. ಈ ಜಾಗದಲ್ಲಿ ಉತ್ಖನನ ನಡೆಸಿದರೆ ಇನ್ನೂ ಹಲವಾರು ಹೊಸ ಅಂಶಗಳು ತಿಳಿಯಬಹುದು.

ಗ್ರಾಮದಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದ ಹಲವಾರು ತಾಳೇಗರಿ ಗ್ರಂಥಗಳಿವೆ. ಅವುಗಳಲ್ಲಿ 'ಪದ್ಮಾವತಿ ಅಮ್ಮನವರ ಚೂರ್ಣಿಕೆ' ಮತ್ತು 'ಜಿನ ಸಂಧ್ಯಾವಂದನೆ' ಎಂಬುವು ಮುಖ್ಯವಾಗಿವೆ.

ಹೀಗೆ ಬಸದಿಗಳು, ಪ್ರತೀತಿಗಳು, ತಾಳೇಗ್ರಂಥಗಳು ಮತ್ತು ಈಗ ದೊರಕಿರುವ ಶಾಸನಗಳ ಆಧಾರದಿಂದ, ಗುಡಿಬಂಡೆಯಲ್ಲಿ ಜೈನ ಧರ್ಮೀಯರು ಪ್ರಭಾವಶಾಲಿಗಳಾಗಿದ್ದರು ಎಂದು ತಿಳಿಯಬಹುದು*. ○

---

1 ಬಸದಿಗಳನ್ನು ನೋಡಲು ಅವಕಾಶ ನೀಡಿದ ಹಾಗೂ ಅಲ್ಲಿನ ಜೈನರ ಬಗ್ಗೆ ಹಲವಾರು ಮಾಹಿತಿಗಳನ್ನು ನೀಡಿದ ಗುಡಿಬಂಡೆಯ ಹಿರಿಯ ಮಿತ್ರರಾದ ಶ್ರೀ ಸುರೇಶ್ ಜೈನ್ ಅವರಿಗೆ ನಾನು ಚಿರಋಣಿಯಾಗಿದ್ದೇನೆ.

* ಈ ಸಂಶೋಧನೆಯ ವೇಳೆಯಲ್ಲಿ ನನಗೆ ಆಶ್ರಯ ನೀಡಿದ ಎ.ಎಫ್.ಆರ್.ಎಸ್. ಶಾಲೆಯ ಡೈರೆಕ್ಟರ್ ಶ್ರೀ ರವಿಕುಮಾರ್ ಅವರಿಗೂ, ಹಲವಾರು ರೀತಿ ನೆರವಾದ ಗುಡಿಬಂಡೆಯ ಎಲ್ಲ ಮಿತ್ರರಿಗೂ ನನ್ನ ಕೃತಜ್ಞತೆಗಳು.

# ಶಾಸನಗಳ ಹಿನ್ನೆಲೆಯಲ್ಲಿ ಕೋಲಾರದ ಪಿಡಾರಿಯರ ದೇವಾಲಯ

ಆರ್. ವೆಂಕಟೇಶಮೂರ್ತಿ

ಕ್ರಿಸ್ತಶಕ ೧೧ನೆಯ ಶತಮಾನದಿಂದಲೂ ಹಲವಾರು ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಕೋಲಾರ (ಕುವಲಾಲ)ದ ಪಿಡಾರಿಯು ಈಗ ಕೋಲಾರಮ್ಮ ಎಂದು ಪ್ರಸಿದ್ಧಿ ಪಡೆದ ದೇವತೆಯಾಗಿದ್ದಾಳೆ.

ಹಿಂದಿನಿಂದಲೂ ಭಾರತದಲ್ಲಿ ಸ್ತ್ರೀದೇವತೆಗಳನ್ನು ಪೂಜಿಸುವ ರೂಢಿ ಬೆಳೆದುಬಂದಿದ್ದು, ಕರ್ನಾಟಕದ ಅಸಂಖ್ಯಾತ ಗ್ರಾಮಗಳ ಅಧಿದೇವತೆಗಳು ಸ್ತ್ರೀಯರೇ ಆಗಿದ್ದಾರೆ.

ಬ್ರಾಹ್ಮಿ ಮಾಹೇಶ್ವರಿ ಚೈವ ಕೌಮಾರೀ
ವೈಷ್ಣವೀ ತಥಾ ।
ಮಾಹೇಂದ್ರೀ ಚೈವ ವಾರಾಹೀ ಚಾಮುಂಡಾ
ಸಪ್ತಮಾತರಃ ॥

ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ಮಾಹೇಂದ್ರೀ, ವಾರಾಹೀ ಮತ್ತು ಚಾಮುಂಡೀ–ಇವರೇ ಸಪ್ತಮಾತೃಕೆಯರು ಎಂದು ಈ ಶ್ಲೋಕವು ತಿಳಿಸುತ್ತದೆ.

ಸಪ್ತಮಾತೃಕೆಯರನ್ನು ವರಾಹಪುರಾಣ, ಮಾರ್ಕಂಡೇಯಪುರಾಣ, ಸುಪ್ರಭೇದಾಗಮ, ಇತ್ಯಾದಿ ಗ್ರಂಥಗಳು ಬೇರೆಬೇರೆ ಹೆಸರುಗಳಿಂದ ಗುರುತಿಸಿವೆ.

ಈ ಸಪ್ತಮಾತೃಕೆಯರಲ್ಲಿ ಒಬ್ಬಳಾದ ಚಾಮುಂಡೇಶ್ವರಿಯೇ ಹಿಂದಿನ ಪಿಡಾರಿ ಮತ್ತು ಈಗಿನ ಕೋಲಾರಮ್ಮ ಎಂಬುದು ಹಲವಾರು ವಿದ್ವಾಂಸರುಗಳ ಅಭಿಪ್ರಾಯವಾಗಿದೆ.

ಕೋಲಾರಮ್ಮನ ದೇವಾಲಯದ ಪ್ರವೇಶದ್ವಾರದ ಗೋಡೆಯ ಮೇಲೆ ಕಾಣುವ ಸ್ತ್ರೀ-ಪುರುಷ ಉಬ್ಬುಶಿಲ್ಪಗಳನ್ನು ಶಿವ-ಪಾರ್ವತಿಯರ ಶಿಲ್ಪಗಳು ಎಂದು ಅಲ್ಲಿನ ಜನ ಗುರುತಿಸುತ್ತಾರೆ. ಈ ಶಿಲ್ಪಗಳ ಎಡಭಾಗಕ್ಕೆ ನವರಂಗದ ದ್ವಾರ. ಇಲ್ಲಿ ಎರಡು ಗರ್ಭಗೃಹಗಳಿದ್ದು, ಒಂದರಲ್ಲಿ ಸಪ್ತಮಾತೃಕೆಯರ ಶಿಲಾವಿಗ್ರಹಗಳು, ಮತ್ತೊಂದರಲ್ಲಿ ಗಾರೆಯ ಸಪ್ತಮಾತೃಕೆಯರ ಮೂರ್ತಿಗಳು ಮತ್ತು ಉತ್ಸವಮೂರ್ತಿ ಇವೆ. ಎರಡು ಗರ್ಭಗೃಹಗಳಿಗೂ ಒಂದೇ ನವರಂಗವಿದೆ. ಪೂರ್ವಾಭಿಮುಖವಾಗಿ ಶಿಲಾವಿಗ್ರಹಗಳಿರುವ ಗರ್ಭಗೃಹಕ್ಕೆ ಸುಖನಾಸಿ ಇಲ್ಲ. ಆದರೆ ಉತ್ತರಾಭಿಮುಖವಾಗಿರುವ ಗಾರೆಯ ಮೂರ್ತಿಗಳ ಗರ್ಭಗೃಹವು ಸುಖನಾಸಿಯನ್ನು ಹೊಂದಿದೆ. ಈ ಸುಖನಾಸಿಯಲ್ಲಿರುವ ಚೇಳಮ್ಮನ ಶಿಲಾವಿಗ್ರಹವು-ಉತ್ತರಾಭಿಮುಖವಾಗಿ ಗೋಡೆಗೆ ಮುಖ ಮಾಡಿದೆ. ಗೋಡೆ ಮತ್ತು ವಿಗ್ರಹದ ನಡುವಿನ ಅಂತರ ಬಹಳ ಕಿರಿದು. ದೇವಾಲಯದ ಉತ್ತರ ದಿಕ್ಕಿನಲ್ಲಿರುವ ಒಂದು ಸಣ್ಣ ದ್ವಾರವು ನವರಂಗಕ್ಕೆ ಪ್ರವೇಶವನ್ನು ಒದಗಿಸುತ್ತದೆ. ಆದರೆ ಈಗ ಆ ದ್ವಾರವನ್ನು ಮುಚ್ಚಲಾಗಿದೆ.

ಈ ಹಿನ್ನೆಲೆಯಲ್ಲಿ ಸುಖನಾಸಿಯನ್ನು ಹೊಂದಿರುವ ಮಣ್ಣಿನ ಮೂರ್ತಿಗಳಿರುವ ಗರ್ಭಗೃಹವೇ ಪ್ರಾಚೀನವಾದುದು ಎಂಬುದು ಹಲವರ ಅಭಿಪ್ರಾಯ.

ಸುಖನಾಸಿಯಲ್ಲಿರುವ ಚೇಳಮ್ಮನ ಶಿಲಾವಿಗ್ರಹವು ಯೋಗೀಶ್ವರಿಯದು ಎಂದು ಶ್ರೀ ದೇವರಕೊಂಡಾರೆಡ್ಡಿ

ಯವರ ಅಭಿಪ್ರಾಯ.[1] ಇದನ್ನು ಕಪಾಲಭೈರವಿ, ಮೂಕನಾಂಚಾರಮ್ಮ ಎಂಬ ಹೆಸರಿನಿಂದ ಕರೆದಿರುವುದೇ ಅಲ್ಲದೆ ಈಕೆಯೇ ನಿಜವಾದ ಕೋಲಾರಮ್ಮ ಎಂಬ ಅಂಶವು ಶ್ರೀ ಆರ್. ನರಸಿಂಹಾಚಾರ್ ಅವರ ವರದಿಯಲ್ಲಿ[2] ಕಂಡುಬರುತ್ತದೆ.

"ಕೋಲಾರದ ಕೋಲಾರಮ್ಮನಿಗೂ ಚೇಳಿಗೂ ಇರುವ ಸಂಬಂಧ ಪ್ರಸಿದ್ಧವಾದುದಲ್ಲವೇ ? ಈಗ ಗರ್ಭಗುಡಿಯಲ್ಲಿರುವ ದೇವತೆ ಅಷ್ಟಭುಜದ ಮಹಿಷಮರ್ಧಿನಿಯೇ ಕೋಲಾರಮ್ಮನೆನಿಸಿಕೊಳ್ಳುತ್ತಾಳೆ. ಆದರೆ ದಿಟವಾದ ಗ್ರಾಮದೇವತೆ ಪಕ್ಕದ ಕೋಣೆಯಲ್ಲಿರುವ ಆರಡಿ ಎತ್ತರದ ಮೂಕನಾಂಚಾರಮ್ಮ. ಈಕೆಯ ಪಾದಪೀಠದಡಿಯಿಂದ ಪ್ರತೀ ವರ್ಷವೂ ವೈಶಾಖ ಮಾಸದ ಶುಕ್ಲ ಪಂಚಮಿಯಂದು ಚೇಳು ಹೊರಬಂದು ಅರ್ಧಗಂಟೆ ಹೊರಗಿದ್ದು ಅನಂತರ ಮತ್ತೆ ಮರೆಯಾಗುವುದೆಂದು ಪ್ರತೀತಿಯಿದೆ. ಹೀಗೆ ಕೋಲಾರಮ್ಮ ವೃಶ್ಚಿಕೇಶ್ವರಿ" ಎಂದು ಎಸ್.ಕೆ.ರಾಮಚಂದ್ರರಾವ್ ಅವರ ಅಭಿಪ್ರಾಯವಾಗಿದೆ.[3]

ಶ್ರೀ ದೇವರಕೊಂಡಾರೆಡ್ಡಿಯವರು ಚೋಳರು ಗಂಗವಾಡಿಯನ್ನು ಆಕ್ರಮಿಸಿದ ನಂತರ ಆ ಪ್ರಾಂತ್ಯದಲ್ಲಿದ್ದ ಪ್ರಾಚೀನ ಮೂರ್ತಿಗಳು ಲಯವಾಗಿ, ಅವುಗಳ ಸ್ಥಾನದಲ್ಲಿ ಒಂದೇ ಕಲ್ಲಿನಲ್ಲಿ "ಏಳು ದೇವಿಯರನ್ನೂ ಇಕ್ಕೆಲಗಳಲ್ಲಿ ವಿನಾಯಕನನ್ನೂ, ಕುಮಾರಸ್ವಾಮಿಯನ್ನೂ ಬಿಡಿಸುವುದು ಆರಂಭವಾಯಿತು ಎಂದು ತಿಳಿಸುತ್ತ, ಇಲ್ಲಿಯ ಮಣ್ಣಿನ ಮೂರ್ತಿಗಳೇ ಪ್ರಾಚೀನವಾದುದೆಂಬುದರಲ್ಲಿ ಸಂಶಯವಿಲ್ಲ" ಎಂದು ದಾಖಲಿಸಿದ್ದಾರೆ.[4]

ಆದರೆ ಅವರ ಅಭಿಪ್ರಾಯದ ಹಿನ್ನೆಲೆಯಲ್ಲೇ ಪ್ರಸ್ತುತ ಪೂಜೆ ನಡೆಯುತ್ತಿರುವ ಸಪ್ತಮಾತೃಕೆಯರ ಶಿಲಾವಿಗ್ರಹಗಳು ಪ್ರತ್ಯೇಕಪ್ರತ್ಯೇಕವಾಗಿ ಇರುವುದರಿಂದ ಈ ಶಿಲಾಮೂರ್ತಿಗಳೇ ಪ್ರಾಚೀನವಾದುದು ಎಂದೂ ಊಹಿಸಬಹುದಾಗಿದೆ.

ಸಾಮಾನ್ಯವಾಗಿ ತಮಿಳುನಾಡಿನಲ್ಲಿ ಗಾರೆಯ ಮೂರ್ತಿಗಳು ಕಂಡುಬರುವುದರಿಂದ, ಚೋಳರ ಕಾಲದಲ್ಲಿ ಈ ದೇವಾಲಯವು ಪುನರ್ ನಿರ್ಮಾಣಗೊಂಡಿರುವುದು ಶಾಸನದ ಮೂಲಕ[5] ತಿಳಿದುಬಂದಿರುವುದರಿಂದ ಮಣ್ಣಿನ ಮೂರ್ತಿಗಳಿರುವ ಸ್ಥಳದಲ್ಲಿದ್ದ ಶಿಲಾವಿಗ್ರಹಗಳನ್ನು ಪಕ್ಕದಲ್ಲಿರುವ ಗರ್ಭಗೃಹಕ್ಕೆ ಸ್ಥಳಾಂತರಿಸಿ ಬಹುಶಃ ಅನಂತರ ಆ ಜಾಗದಲ್ಲಿ ಗಾರೆಯ ವಿಗ್ರಹಗಳನ್ನು ನಿರ್ಮಿಸಿರಬಹುದು ಎಂದು ಊಹಿಸಬಹುದಾಗಿದೆ.

ಕೋಲಾರಮ್ಮನ ದೇವಾಲಯದಲ್ಲಿ ಒಟ್ಟು ೨೧ ಶಾಸನಗಳು ದೊರೆತಿದ್ದು, ೧೮ ಶಾಸನಗಳು ತಮಿಳು ಭಾಷೆಯದಾಗಿದ್ದು, ಉಳಿದ ೩ ಶಾಸನಗಳು ಕನ್ನಡ ಭಾಷೆಯದಾಗಿವೆ. ಇವುಗಳಲ್ಲಿ ಕ್ರಿ.ಶ. ಸುಮಾರು ೯೯೬ರದು ಅತಿ ಪ್ರಾಚೀನವಾದನೆ, ಕ್ರಿ.ಶ. ಸುಮಾರು ೧೫೩೮ರದು ಅತಿ ಆಧುನಿಕವೆನಿಸುತ್ತದೆ.

ಕ್ರಿಸ್ತಶಕ ಸುಮಾರು ೯೯೬ರ ಶಾಸನವು ಕುವಲಾಲದ ಪಿಡಾರಿಯರ ದೇವಾಲಯಕ್ಕೆ ದೊರಕಿದ ದೇವದಾನವನ್ನು ಕಂದಾಯ ಪುಸ್ತಕದಲ್ಲಿ ನಮೂದಿಸಿರುವುದನ್ನು ತಿಳಿಸುತ್ತದೆ. ಕ್ರಿ.ಶ. ಸು. ೧೦೨೨ ಮತ್ತು ೧೦೨೮ರ ಶಾಸನಗಳು ಕಂದಾಯದ ಅಧಿಕಾರಿಗಳು ಇದ್ದುದನ್ನು ದಾಖಲಿಸಿವೆ. ಕ್ರಿ.ಶ. ಸು. ೧೦೩೩ರ ಶಾಸನವು ಗಂಗರ ಕಾಲದಲ್ಲಿ ಇದ್ದಿತು ಎನ್ನಲಾಗುವ ಇಟ್ಟಿಗೆಯ ದೇವಾಲಯವು ರಾಜೇಂದ್ರಚೋಳದೇವನ ಕಾಲದಲ್ಲಿ ಕಲ್ಲಿನಿಂದ ಪುನರ್ನಿರ್ಮಾಣಗೊಂಡಿದೆ ಎಂಬುದನ್ನು ತಿಳಿಸಿದೆ. ಕ್ರಿ.ಶ. ಸು. ೧೦೭೧ರ ಎರಡು ಶಾಸನಗಳು ಪಿಡಾರಿಯರ ದೇವಾಲಯದ ದೇವತೆಗಳಾದ ಯೋಗಿನಿ-ಯೋಗೇಶ್ವರ, ಭೈರವ, ಮೂಲಸ್ಥಾನ ಚಾಮುಂಡೇಶ್ವರಿ, ಕ್ಷೇತ್ರಪಾಲ, ಶಾಸ್ತ-ಇವರ ವಿವರದೊಂದಿಗೆ ಯೋಗಿನಿ-

---

1 'ಸಪ್ತಮಾತೃಕೆಯರು', ಹರತಿಸಿರಿ (ಹೆಚ್.ವಿ. ವೀರನಾಯಕ 'ಹರತಿ' ನೆನಪಿನ ಸಂಪುಟ), ಹರ್ತಿಕೋಟೆ, ೧೯೮೭, ಪು.೮೮

2 ಮೈ.ಆ.ರಿ., ೧೯೧೦, ಪು. ೧೪೮

3 ಮೂರ್ತಿಶಿಲ್ಪ : ನೆಲೆ-ಹಿನ್ನೆಲೆ, ಬೆಂಗಳೂರು, ೧೯೭೫, ಪು. ೧೬೭

4 ಹರತಿಸಿರಿ, ಪು. ೮೭

5 ಎ.ಕ., ಸಂಪುಟ ೧೦, ಕೋಲಾರ ೧೦೯ ಎ, ಕ್ರಿ.ಶ.ಸು. ೧೦೦೬

ಯೋಗೇಶ್ವರ ಪೂಜೆ, ಕುಮಾರಿಯರ ಪೂಜೆ, ಅಲ್ಲದೆ ವಿವಿಧ ಸೇವಕವರ್ಗದವರಾದ ಕಾವಲುಗಾರ, ತನ್ಮಟಿ ಬಾರಿಸುವವ, ಮದ್ದಳೆ ನುಡಿಸುವವ, ಕರಡಿಗೆ ನುಡಿಸುವವ, ನೃತ್ಯವನ್ನು ಹೇಳಿಕೊಡುವ ಉಪಾಧ್ಯಾಯ, ನೃತ್ಯಗಾರ್ತಿಯರು, ಲೆಕ್ಕಾಧಿಕಾರಿಗಳು, ಮಡಕೆ ಒದಗಿಸುವವ,ಮಡಿವಾಳ, ಶಾಸ್ತ್ರಜ್ಞ, ಬೋಧಿಸುವವ, ಪೂಜಾರಿ, ಕನ್ನಾಟ ಪಂಡಿತ ಹಾಗೂ ಕಲ್ಲುಕುಟಿಗ, ಮುಂತಾದವರ ವಿವರವನ್ನು ಒದಗಿಸುತ್ತದೆ.

"ಮಾರಿಯಮ್ಮನಂತೆಯೇ ಪೀಡಾರಿಯೂ ವಿಶೇಷವಾಗಿ ಜನಪ್ರಿಯಳಾದ ಗ್ರಾಮದೇವತೆ. ಈಕೆಯ ಗುಡಿಗಳನ್ನು ಹಳ್ಳಿಹಳ್ಳಿಗಳಲ್ಲಿ ಕಾಣಬಹುದು. ಶಿವನಂತೆ ಮುಕ್ಕಣ್ಣಿ ಈಕೆ. ತಲೆಗೂದಲನ್ನು ಉರಿಯುವ ಬೆಂಕಿಯಂತೆ ಅಳವಡಿಸಿರುತ್ತಾರೆ. ನಾಲ್ಕು ಕೈಗಳಲ್ಲಿ ನಾಗ ಡಮರು, ತ್ರಿಶೂಲ, ಅಂಕುಶ ಮತ್ತು ಬ್ರಹ್ಮ ಕಪಾಲಗಳನ್ನು ಹಿಡಿದು ಸಿಂಹಾಸನದ ಮೇಲೆ ಕುಳಿತಿರುವಂತೆ ಈಕೆಯ ಮೂರ್ತಿಗಳಿರುತ್ತವೆ. ಮಾರಿಯಮ್ಮನಿಗಿದ್ದಂತೆ ಈಕೆಗೆ ಪಾರ್ಶ್ವದೇವತೆಗಳಿರುವುದಿಲ್ಲ. ಕ್ಷಾಮ,ಅನಾವೃಷ್ಟಿ, ಬೆಳೆಗೆ ತಗಲುವ ರೋಗ, ಸಾಂಕ್ರಾಮಿಕ ಜಾಡ್ಯಗಳು ಇಂಥ ಸಂದರ್ಭಗಳಲ್ಲಿ ಪೀಡಾರಿಯು ಪೂಜೆಗೊಳ್ಳುತ್ತಾಳೆ" ಎಂಬ ಎಸ್.ಕೆ. ರಾಮಚಂದ್ರರಾಯರ ಅಭಿಪ್ರಾಯದ ಹಿನ್ನೆಲೆಯಲ್ಲಿ,[6] ಕೋಲಾರದ ಪೀಡಾರಿಯು ಗ್ರಾಮದೇವತೆ ಎನ್ನುವುದು ಸ್ಪಷ್ಟವಾಗುತ್ತದೆ. ಸಾಮಾನ್ಯವಾಗಿ ಈಗ ಹಲವಾರು ಗ್ರಾಮಗಳಲ್ಲಿ ಗ್ರಾಮದೇವತೆಯರು ಚಾಮುಂಡೇಶ್ವರಿಯ ಸ್ವರೂಪವಾಗಿರುವುದರಿಂದ ಕೋಲಾರದ ಚಾಮುಂಡೇಶ್ವರಿಯೇ ಪೀಡಾರಿ ಎಂದು ನಿರ್ಧರಿಸಬಹುದು.

ಪೀಡಾರಿಗೆ ಚೋಳರ ಕಾಲದಲ್ಲಿ ವಿಶೇಷ ಮಹತ್ವ ದೊರೆತು ಕನ್ಯಾಪೂಜೆ, ಯೋಗಿನಿ–ಯೋಗೇಶ್ವರಪೂಜೆ ಮತ್ತು ಚಾಮುಂಡಿ ಹೋಮದಂತಹ ವಿಶೇಷ ಆಚರಣೆಗಳಿದ್ದುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಶಾಕ್ತ ಮತ್ತು ವೈದಿಕ ಆಚರಣೆಗಳೆರಡೂ ಒಟ್ಟಿಗೇ ನಡೆಯುತ್ತಿದ್ದ ಪಿಡಾರಿಯರ ದೇವಾಲಯವು ಅನೇಕ ವಿಧದ ದಾನದತ್ತಿಗಳನ್ನು ಚೋಳರ ಕಾಲದಲ್ಲಿ ಪಡೆದಿದೆ.

ಇಲ್ಲಿ ಇದ್ದ ಬಹುಮುಖ್ಯ ಆಚರಣೆಗಳೆಂದರೆ, ಯೋಗಿನಿ–ಯೋಗೇಶ್ವರರ ಪೂಜೆ, ಕನ್ಯಾಪೂಜೆ, ಚಾಮುಂಡಿಹೋಮ, ಕುಂಭದೇವತೆಗಳ ಮತ್ತು ಅಸ್ತ್ರ ದೇವರ ಪೂಜೆಯಲ್ಲಿ, ಬೆಳಗಿನ ಶಾಂತಿ, ಮಧ್ಯಾಹ್ನದ ಶಾಂತಿ, ಮಧ್ಯರಾತ್ರಿಯ ಶಾಂತಿ, ಇತ್ಯಾದಿ ಆಚರಣೆಗಳಿದ್ದುವು.

ವರ್ಷದ ಪ್ರತೀ ತಿಂಗಳೂ ಒಂದುದಿನ ನಡೆಯುವ ಯೋಗಿನಿ–ಯೋಗೇಶ್ವರ ಪೂಜೆಗೆಂದು ಮದ್ಯ ಮತ್ತು ಒಂದು ಕುರಿ (ಒಟ್ಟಿಗೇ ಒಂದು ವರ್ಷಕ್ಕೆ) ಮತ್ತು ೭ ದಿನ ನಡೆಯುವ ಶಾಂತಿ ಸಂದರ್ಭದಲ್ಲಿ ಈ ಯೋಗಿನಿ-ಯೋಗೇಶ್ವರ ಪೂಜೆಗಾಗಿ ಮದ್ಯ ಮತ್ತು ಅರ್ಧ ಕುರಿಯ ದಾನವನ್ನು ನೀಡಲಾಗಿದೆ.

ವರ್ಷಪೂರ್ತಿ ಪ್ರತೀ ಮಂಗಳವಾರ ನಡೆಯುವ ಕನ್ಯಾಪೂಜೆಯ ವಿಧಿಗಾಗಿ, ಎಂದರೆ ಏಳು ಜನ ಕನ್ಯೆಯರು ಮತ್ತು ಒಬ್ಬ ಬ್ರಹ್ಮಚಾರಿಯನ್ನು (ವಿಕ್ಕೇಶ್ವರ ಮಾಣಿ) ಕರೆಸಿ ಪೂಜಿಸುವ ಸಂದರ್ಭಕ್ಕಾಗಿ ದಾನ ನೀಡಿರುವ ವಿವರಗಳು ಕಂಡುಬರುತ್ತದೆ. ಬಹುಶಃ ಈ ಏಳುಜನ ಕನ್ಯೆಯರು ಎಂದರೆ ಸಪ್ತಮಾತೃಕೆಯರ ಪ್ರತಿನಿಧಿಗಳು ಎಂದು ತಿಳಿಯಬಹುದು. ಇವರಿಗೆ ಆಭರಣ ಮತ್ತು ಬಟ್ಟೆಯನ್ನು ದಾನವಾಗಿ ನೀಡಿರುವುದನ್ನು ಶಾಸನಗಳು ಉಲ್ಲೇಖಿಸಿವೆ.

ಕುಂಭದೇವತೆಗಳು ಮತ್ತು ಅಸ್ತ್ರದೇವತೆಯ ಪೂಜೆಯು, ಮೂರು ಹೊತ್ತು ಎಂದರೆ ಬೆಳಗ್ಗೆ, ಮಧ್ಯಾಹ್ನ ಮತ್ತು ಸಂಜೆ, ಅಲ್ಲದೆ ಅರ್ಧಯಾಮದಲ್ಲಿ ನಡೆಯುತ್ತಿತ್ತು. ಇವುಗಳಲ್ಲಿ ಮಧ್ಯಾಹ್ನದ ಪೂಜೆಗೆ ಎಂದು ರಕ್ತಬಲಿಗಾಗಿ ಒಂದು ಕುರಿ ಮತ್ತು ಅರ್ಧಯಾಮದ ಪೂಜೆಗೆ ಒಂದು ಕುರಿಯನ್ನೂ ದಾನವಾಗಿ ನೀಡಲಾಗಿದೆ.

ಈ ಪಿಡಾರಿಯ ದೇವಾಲಯಕ್ಕೆ ವಿಕ್ರಮ ಚೋಳ ಚ್ಚೂಳಿಯವರೈಯನ್ ಎಂಬುವನು ಶಾಶ್ವತವಾದ ದೀಪವನ್ನು ಸೂರ್ಯಚಂದ್ರರಿರುವವರೆಗೆ ಬೆಳಗಿಸುವಂತೆ ದಾನವಾಗಿ ನೀಡಿ, ಇದರ ನಿರ್ವಹಣೆಗಾಗಿ, ದೇವಾಲಯದ ಅರ್ಚಕರಾದ ಕೌಶಿಕಗೋತ್ರದ ಶಿವಬ್ರಾಹ್ಮಣರಿಗೆ

6 ಮೂರ್ತಿಶಿಲ್ಪ : ನೆಲೆ–ಹಿನ್ನೆಲೆ, ಪು. ೧೩೮

ಉತ್ತಮವಾದ, ಮುದಿಯಾಗದ, ಸಾವನ್ನಪ್ಪದ ಐದು ಎಮ್ಮೆಗಳನ್ನು ದಾನನೀಡಿರುವ ವಿವರವನ್ನು ಕ್ರಿ.ಶ. ಸುಮಾರು ೧೧೯೧ರ ಶಾಸನವು ನೀಡುತ್ತದೆ. ಸಾವನ್ನಪ್ಪದ ಮತ್ತು ಮುದಿಯಾಗದ ಎಮ್ಮೆಗಳು ಎಂದಾಗ, ಬಹುಶಃ ಈ ದಾನನೀಡಿದ ಎಮ್ಮೆಗಳಿಂದ ಸಂತಾನ ವೃದ್ಧಿಯಾಗುವುದರಿಂದ, ಸಾವನ್ನಪ್ಪದ, ಮುದಿಯಾಗದ ಎಂಬ ಪದಗಳನ್ನು ಬಳಸಿರಬಹುದು ಎಂದು ಹೇಳಬಹುದು.

ಈ ಮುಖ್ಯವಾದ ದಾನಗಳ ಹಿನ್ನೆಲೆಯಲ್ಲಿ ತಿಳಿದು ಬರುವ ಅಂಶಗಳೆಂದರೆ, ಈ ದೇವಾಲಯದಲ್ಲಿ ಶಾಕ್ತ ಮತ್ತು ವೈದಿಕ ಎರಡೂ ಪದ್ಧತಿಯ ಪೂಜೆಗಳು ನಡೆಯುತ್ತಿದ್ದುವು. ಎಂದರೆ ಹೋಮದ ಆಚರಣೆಗಳಂತಹ ವೈದಿಕ ಪದ್ಧತಿ, ಕನ್ಯಾಪೂಜೆ, ಯೋಗಿನಿ-ಯೋಗೇಶ್ವರರ ಪೂಜೆಯಂತಹ ಶಾಕ್ತಪದ್ಧತಿ (ಮದ್ಯ ಮತ್ತು ಮಾಂಸಗಳ ಉಪಯೋಗ)ಗಳು ಒಟ್ಟಿಗೆ ಆಚರಣೆಯಲ್ಲಿದ್ದುವು, ಎಂದು ತಿಳಿಯುತ್ತದೆ.

ಗಂಗರ ಕಾಲದಲ್ಲಿ ದೇವಾಲಯಗಳು ಇಟ್ಟಿಗೆಯಲ್ಲಿ ನಿರ್ಮಾಣವಾಗುತ್ತಿದ್ದುವು ಎಂಬುದಕ್ಕೆ ಮಂಡ್ಯಜಿಲ್ಲೆ ಕೋಡಿಹಳ್ಳಿಯ ದಡಿಗೇಶ್ವರ ದೇವಾಲಯ, ತಿಪ್ಪೂರಿನ ಬಸದಿ, ತುಮಕೂರು ಜಿಲ್ಲೆ ಹೊನ್ನುಡಿಕೆ (ಜಲಗಾರ ದಿಬ್ಬ)ಯ ದೇವೀ ದೇವಾಲಯ, ಬೆಂಗಳೂರು ಜಿಲ್ಲೆ ಮಣ್ಣೆಯ ಕಪಿಲೇಶ್ವರ ದೇವಾಲಯ ಮತ್ತು ಸೋಮೇಶ್ವರ ದೇವಾಲಯ, ಹಾಗೂ ಮೈಸೂರು ಜಿಲ್ಲೆ ನರಸಮಂಗಲದ ರಾಮೇಶ್ವರ ದೇವಾಲಯ, ಇವೆಲ್ಲವನ್ನೂ ನಿದರ್ಶನವನ್ನಾಗಿ ತೆಗೆದುಕೊಳ್ಳಬಹುದಾಗಿದೆ.[7]

ಅಂತೆಯೇ ಈ ಕೋಲಾರಮ್ಮ ಎಂದರೆ ಪಿಡಾರಿಯ ಅಥವಾ ಪೀಡಾರಿ (ಪೀಡಾಹಾರಿ) ದೇವಾಲಯವೂ ಸಹ ಗಂಗರ ಕಾಲದಲ್ಲಿ ಇಟ್ಟಿಗೆಯಿಂದ ನಿರ್ಮಾಣವಾಗಿದ್ದು, ಚೋಳರು ಗಂಗವಾಡಿಯನ್ನು ಆಕ್ರಮಿಸಿಕೊಂಡ ನಂತರ, ಅಲ್ಲಿದ್ದ ಇಟ್ಟಿಗೆ ಕಟ್ಟಡವನ್ನು ಕೆಡವಿ, ಕಲ್ಲಿನ ಕಟ್ಟಡವನ್ನು ನಿರ್ಮಾಣ ಮಾಡಿ ನಂತರ ಶಾಸನಗಳನ್ನು ಹಾಕಿಸಿರಬಹುದು ಎಂದು ಭಾವಿಸಬಹುದಾಗಿದೆ. ಶಾಸನಗಳಲ್ಲಿ ಪಿಡಾರಿ ಎಂದು ಉಲ್ಲೇಖಿತವಾಗಿರುವ ಕೋಲಾರಮ್ಮನು ಸಪ್ತಮಾತೃಕೆಯರಲ್ಲಿ ಒಬ್ಬಳಾದ ಚಾಮುಂಡಿಯೇ ಎಂದೂ ತಿಳಿಯಬಹುದಾಗಿದೆ.

ಈ ನನ್ನ ಪ್ರಥಮ ಪ್ರಬಂಧವನ್ನು ರಚಿಸಲು ಸೂಕ್ತ ಮಾರ್ಗದರ್ಶನವನ್ನು ನೀಡಿದ ಪೂಜ್ಯ ಗುರುಗಳು ಹಾಗೂ ಮಿತ್ರರೂ ಆದ ಶ್ರೀ ಎಚ್.ಎಸ್. ಗೋಪಾಲ ರಾವ್, ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ○

---

7 I.K. Sarma : 'Brick Temples of Western Gangas', Srinidhi Madras, (K.R. Srinivasan Festschrift) 1983, pp. 67-83

# ಬಿಳಗಿ ಅರಸರ ಆಳ್ವಿಕೆಯಲ್ಲಿ ದೇವಸ್ಥಾನಗಳ ಆರ್ಥಿಕ ನಿರ್ವಹಣೆ ಹಾಗೂ ಶಾಸನಗಳು

**ಡಾ. ರಾಜಾರಾಮ ಹೆಗಡೆ**

ಬಿಳಗಿ ಇಂದಿನ ಉತ್ತರ ಕನ್ನಡ ಜಿಲ್ಲೆಯ ಸಿದ್ಧಾಪುರ ತಾಲ್ಲೂಕಿನ ಒಂದು ಗ್ರಾಮ. ಹದಿನೈದನೇ ಶತಕದ ಅಂತ್ಯಭಾಗದಲ್ಲಿ ಬಿಳಗಿಯ ಸಮೀಪದ ಐಸೂರಿನಲ್ಲಿ ಆಳ್ವಿಕೆ ಪ್ರಾರಂಭಿಸಿದ ಒಂದು ಮನೆತನ. ತನ್ನ ಉಚ್ಛ್ರಾಯಾವಸ್ಥೆಯಲ್ಲಿ ಈ ಸ್ಥಳವನ್ನು ಕೇಂದ್ರವನ್ನಾಗಿ ಆರಿಸಿಕೊಂಡಿತು.[1] 'ಒಡೆಯರು' ಎಂದು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುವ ಈ ಅರಸರು ಸ್ಥೂಲವಾಗಿ ಇಂದಿನ ಸಿದ್ಧಾಪುರ ತಾಲೂಕನ್ನು ಒಳಗೊಳ್ಳುವಂತೆ ಐವತ್ತಳಿಗೆ ನಾಡು, ಚಿಕ್ಕಮಾಳಿಗೆಯ ನಾಡು ಹಾಗೂ ಚಂದ್ರಗುತ್ತಿ ವೇಂಠೆಯ ಕೆಲಭಾಗಗಳನ್ನು ಆಳಿದ್ದು ಕಂಡುಬರುತ್ತದೆ. ವಿಜಯನಗರ ಪತನಾನಂತರ ಪ್ರಾಬಲ್ಯಕ್ಕೆ ಬಂದ ಈ ಸ್ಥಾನಿಕ ಅರಸು ಮನೆತನ ಸೀಮಿತವಾದರೂ ಸ್ವತಂತ್ರ ಅಧಿಕಾರವನ್ನು ಹೊಂದಿತ್ತು ಎಂಬುದು ಗಮನಾರ್ಹ. ತಮ್ಮ ಶಾಸನಗಳಲ್ಲಿ ಎಲ್ಲೂ ಅವರು ಸ್ವಾಮಿರಾಜರನ್ನು ಪರಿಗಣಿಸಿಲ್ಲ. ಹದಿನೇಳನೆಯ ಶತಕದಲ್ಲಿ ಕೆಳದಿಯ ಅರಸರು ಸುಲಭವಾಗಿ ಇವರನ್ನು ಸೋಲಿಸುತ್ತಿದ್ದರೂ ತಮ್ಮ ಪ್ರದೇಶದ ಸ್ವಾಮಿತ್ವವನ್ನು ಇವರು ಕಳೆದುಕೊಂಡಂತೆ ತೋರುವುದಿಲ್ಲ. ಹದಿನೇಳನೆಯ ಶತಮಾನದ ಅಂತ್ಯಭಾಗದಲ್ಲಿ ಈ ಮನೆತನದ ಆಳ್ವಿಕೆ ಕೊನೆಗೊಂಡಿತು.

ಪ್ರಸ್ತುತ ವಿಷಯವನ್ನು ಈ ಪ್ರದೇಶದಲ್ಲಿ ದೇವಾಲಯ ನಿರ್ಮಾಣದ ಇತಿಹಾಸ ಹಾಗೂ ವಾಸ್ತುಶಿಲ್ಪದ ಬೆಳಕಿನಲ್ಲಿ ವಿಶ್ಲೇಷಿಸುವದು ಹೆಚ್ಚು ಪ್ರಯೋಜನಕಾರಿ. ಬಿಳಗಿ ಅರಸರ ಕಾಲಕ್ಕಿಂತ ಮೊದಲು ಈ ಪ್ರದೇಶದಲ್ಲಿ ದೇವಾಲಯಗಳು ಇದ್ದ ಪುರಾವೆ ಲಭ್ಯವಿದ್ದರೂ ವಿವರಗಳು ತಿಳಿಯುವುದಿಲ್ಲ. ದೊಡ್ಡ ಪ್ರಮಾಣದಲ್ಲಿ ಖರ್ಚನ್ನು ನಿರ್ವಹಿಸಿ ಅಂಥ ಚಟುವಟಿಕೆಯನ್ನು ಈ ಪ್ರದೇಶದಲ್ಲಿ ಸಂಘಟಿಸಿದ ಉದಾಹರಣೆ ಬಿಳಗಿ ಅರಸರಿಗಿಂತ ಹಿಂದೆ ಅಥವಾ ನಂತರ ನಮಗೆ ಸಿಕ್ಕುವುದಿಲ್ಲ. ಬಿಳಗಿಯ ರತ್ನತ್ರಯ ಬಸದಿಯ ಕ್ರಿ.ಶ. ೧೫೯೩ರ ಶಾಸನದಲ್ಲಿ ಘಂಟೇಂದ್ರನಿಗೂ ಸುಮಾರು ಐದು ತಲೆಮಾರು ಹಿಂದಿನ ಕಲ್ಲಪ್ಪೊಡೆಯನ ಕಾಲದಿಂದ ಈ ಮನೆತನ ಜೀರ್ಣೋದ್ಧಾರ ಮಾಡಿಸಿದ ಹಾಗೂ ಕಟ್ಟಿಸಿದ ಜೈನ ಬಸದಿಗಳ ಸವಿಸ್ತಾರ ದಾಖಲೆ ನೀಡಲ್ಪಟ್ಟಿದೆ[2]. ಈ ದಾಖಲೆ ಸುಮಾರು ಎಂಟು ಬಸದಿಗಳ ಹೊಸ ನಿರ್ಮಾಣವನ್ನೂ, ಮೂರು ಬಸದಿಗಳ ಜೀರ್ಣೋದ್ಧಾರವನ್ನೂ ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ ಕೇವಲ ಜೈನ ಮಂದಿರಗಳ ಉಲ್ಲೇಖವಿದ್ದು ಅವುಗಳಲ್ಲಿ ಕೆಲವನ್ನು ಕುರಿತು ನಮಗೆ ಬೇರೆ ಪುರಾವೆಗಳು ಬೇಕಾಗಿವೆ.

1 'ಬಿಳಗಿ ಅರಸುಗಳ ವಂಶಾವಳಿ' ಎಂಬ ಕೃತಿಯನ್ನು ಶ್ರೀ ಚೆನಗಲ್ ರಾಮರಾವ್ ಸಂಪಾದಿಸಿದ್ದಾರೆ. ಡಾ॥ ಶಾಮಾಶಾಸ್ತ್ರಿಯವರು 'ಬಿಳಗಿ ಅರಸುಗಳ ಚರಿತ್ರೆ' ಎಂದು ಅದೇ ಪುಸ್ತಕವನ್ನು ಸಂಪಾದಿಸಿದ್ದಾರೆ. ಬಿಳಗಿ ಅರಸರ ಮೇಲೆ ಡಾ॥ ಸೂರ್ಯನಾಥ ಕಾಮತರೂ 'ಬಿಳಗಿಯ ಒಡೆಯರು' ಎಂಬ ಪುಸ್ತಕವನ್ನು ಹೊರತಂದಿದ್ದಾರೆ.

2 *Indian Epigraphy Annual Reports* (*IEAR*) *1970-71* No. 158, p. 52.

ಹದಿನಾರನೆಯ ಶತಕದ ಉತ್ತರಾರ್ಧದಲ್ಲಿ ಹಿಂದೆ ಇಲ್ಲದಷ್ಟು ದೊಡ್ಡ ಪ್ರಮಾಣದಲ್ಲಿ ದೇವಾಲಯ ವಾಸ್ತುವಿಗೆ ಹಾಗೂ ದತ್ತಿಗೆ ಈ ಅರಸೊತ್ತಿಗೆ ಖರ್ಚು ಮಾಡಿದ್ದು ಕಂಡುಬರುತ್ತದೆ. ಕ್ರಿ.ಶ. ೧೫೭೦ರಲ್ಲಿ, ವೀರಪ್ಪೊಡೆಯನ ರಾಣಿ ವೀರಾಂಬಿಕೆ ಸಂಪೂರ್ಣ ಶಿಲಾಮಯವಾದ ವಿರೂಪಾಕ್ಷ ದೇವಾಲಯವನ್ನು ಬಿಳಗಿಯಲ್ಲಿ ಕಟ್ಟಿಸಿ ಶಾಸನ ಹಾಕಿಸಿದಳು[3]. ಈ ದೇವಾಲಯದ ಗೋಪುರ, ಪ್ರಾಕಾರ, ಮಂಟಪ, ಚಂದ್ರಶಾಲೆಗಳನ್ನು ಶಾಸನದಲ್ಲಿ ಹೆಮ್ಮೆಯಿಂದ ಉಲ್ಲೇಖಿಸಲಾಗಿವೆ. ಜೊತೆಗೆ ಒಂದು ನಂದಿ ಮಂಟಪ ಹಾಗೂ ಧ್ವಜಸ್ತಂಭ ಕೂಡ ಈ ದೇವಾಲಯದ ತಲವಿನ್ಯಾಸದಲ್ಲಿ ಬರುತ್ತದೆ. ಕ್ರಿ.ಶ. ೧೫೪೧ರಲ್ಲಿ ಘಂಟೇಂದ್ರನಿಂದ ಬಿಳಗಿಯ ರತ್ನತ್ರಯ ಬಸದಿ ಪೂರ್ಣಗೊಳಿಸಲ್ಪಟ್ಟಿತು. ಆತನ ತಂದೆ ರಂಗರಾಜನಿಂದ ಪ್ರಾರಂಭಿಸಲ್ಪಟ್ಟ ವಾಸ್ತುವಿನ ತಲವಿನ್ಯಾಸದಲ್ಲಿ ಮೂರು ಮೂರ್ತಿಗಳನ್ನು ಪ್ರತಿಷ್ಠಾಪಿಸಲು ಅನುಕೂಲವಾಗುವಂತೆ ದೀರ್ಘಾಯುತವಾದ ಗರ್ಭಗೃಹ. ಅದೇ ಪ್ರಮಾಣದ ಅಂತರಾಳ ಹಾಗೂ ಮಂಟಪಗಳು ಯೋಜಿಸಲ್ಪಟ್ಟಿದ್ದು, ಘಂಟೇಂದ್ರನ ಕಾಲದಲ್ಲಿ ರಂಗಮಂಟಪ, ಇನ್ನೆರಡು ದೇವಕೋಷ್ಠಗಳು ಹಾಗೂ ಪ್ರವೇಶ ದ್ವಾರದಲ್ಲಿ ಚಂದ್ರಶಾಲೆ ಇವು ಸೇರಿಸಲ್ಪಟ್ಟವು. ಹೀಗೆ ರತ್ನತ್ರಯ ಬಸದಿಯು ಬಿಳಗಿಯ ಅರಸರ ಸಂದರ್ಭದ ಮಹತ್ವಾಕಾಂಕ್ಷೆಯ ವಾಸ್ತುಶಿಲ್ಪವಾಗಿದೆ. ಬಸದಿಗೆ ಬಳಸಿದ ಕಲ್ಲಿನಲ್ಲೂ ಕುಶಲ ಕೆತ್ತನೆಗೆ ಅನುಕೂಲವಾದ ಕಪ್ಪು, ನುಣುಪುಗಲ್ಲುಗಳನ್ನು ಬಹುದೂರದಿಂದ ಕಂಭಗಳಿಗೆ, ಮೂರ್ತಿರಚನೆಗೆ ತಂದು ಉಪಯೋಗಿಸಿದ್ದಾರೆ. ಶಿಲ್ಪಿಗಳೂ ಕೂಡ ವಿಶೇಷ ಪರಿಣತಿ ಹೊಂದಿದವರಾಗಿದ್ದರು. ಈ ಬಸದಿಯ ಕೆತ್ತನೆ ಕೆಲಸ, ಮೂರ್ತಿಶಿಲ್ಪ ಮುಂತಾದವುಗಳು ಇದನ್ನು ಸೂಚಿಸುತ್ತವೆ. ಈ ಸಮಯದಲ್ಲೇ ಕಟ್ಟಿರಬಹುದಾದ ಮತ್ತೊಂದು ಶಿಲಾಮಯ ದೇವಾಲಯ ಇಟಗಿ ರಾಮೇಶ್ವರ ದೇವಾಲಯ.[4] ಆಳೆತ್ತರದ ಅಧಿಷ್ಠಾನದ ಮೇಲೆ ಕಟ್ಟಿದ ಈ ಮಂದಿರ ಗರ್ಭಗೃಹ, ಸುಕನಾಸ ಹಾಗೂ ಮಂಟಪಗಳನ್ನೂ ಒಳಗೊಂಡಿದೆ. ಆದರೆ ಈ ಮಂದಿರದ ಬಗೆಗೆ ನಮಗೆ ವಿಶೇಷ ಶಾಸನಾಧಾರ ಲಭ್ಯವಿಲ್ಲ. ಈ ರೀತಿಯಲ್ಲಿ ಹತ್ತು–ಹದಿನೈದು ವರ್ಷಗಳಷ್ಟು ಕಿರು ಅವಧಿಯಲ್ಲಿ ಈ ಮೇಲಿನ ಮೂರು ವಾಸ್ತುಗಳು ರಚನೆಯಾಗಿದ್ದು ಗಮನಾರ್ಹ.

ಬಿಳಗಿಯಲ್ಲಿ ಪಾಳುಬಿದ್ದ ಇತರ ಕೆಲವು ಸಣ್ಣಪುಟ್ಟ ಕಲ್ಲಿನ ದೇವಾಲಯಗಳಿವೆ. ಹದಿನೇಳನೇ ಶತಮಾನದಲ್ಲಿ ಸಿದ್ಧಾಪುರದ ವಿಘ್ನೇಶ್ವರ ದೇವಾಲಯ (ಕ್ರಿ.ಶ. ೧೬೫೧) ಹಾಗೂ ಭುವನಗಿರಿಯ ಭುವನೇಶ್ವರಿ ದೇವಾಲಯ (ಕ್ರಿ.ಶ. ೧೬೯೨) ದೊಡ್ಡ ಪ್ರಮಾಣದಲ್ಲಿ ಕಟ್ಟಲ್ಪಟ್ಟು ರಾಜ್ಯದ ಆದಾಯದಲ್ಲಿ ಪಾಲು ಪಡೆದವು. ಬಿಳಗಿಯಲ್ಲಿ ಶಿಲ್ಪಿಗಳ, ವಾಸ್ತುಕರ್ಮಿಗಳ ವಸತಿಯೇ ಇದ್ದಿತ್ತೆಂದು ತೋರುತ್ತದೆ. 'ಒಡ್ಡರ ಬೇಣ' ಎಂದು ಕರೆಸಿಕೊಳ್ಳುವ ಹಾಳುಬಿದ್ದ ಸ್ಥಳವೊಂದು ಸೋಮನದಿಯ ದಡದಲ್ಲಿದೆ.

**ದತ್ತಿಗಳು**[5] : ಈ ಅರಸರು ನೀಡಿದ ದತ್ತಿ ಶಾಸನಗಳು ಕಲ್ಲಿನಲ್ಲಿ ಹಾಗೂ ತಾಮ್ರಪಟಗಳಲ್ಲಿ ಲಭ್ಯ ಇವೆ. ಬಿಳಗಿಯ ವಿರೂಪಾಕ್ಷ ದೇವಾಲಯ (ಕ್ರಿ.ಶ. ೧೫೭೦), ರತ್ನತ್ರಯಬಸದಿ (ಕ್ರಿ.ಶ. ೧೫೪೧ ಹಾಗೂ ಕ್ರಿ.ಶ. ೧೫೯೨) ಹಾಗೂ ಸಿದ್ಧಾಪುರದ ವಿಘ್ನೇಶ್ವರ

3 *IEAR 1970-71*, No. 159, p. 52

4 Karnataka Inscriptions (KI), Vol. V, Ed : Dr. B. R. Gopal, Kannada Research Institute, Karnataka University, Dharwad, No. 136, p. 333 ಈ ದೇವಾಲಯದ ಕಲ್ಲಿನ ನೆಲದ ಮೇಲೆ 'ಘಂಟಪ್ಪನಾಯಕರ ತಿಮ್ಮಯ್ಯನ ಸದಾ ಸೇವೆ' ಎಂದು ಬರೆಸಲ್ಪಟ್ಟಿದೆ. ಈ ತಿಮ್ಮಯ್ಯ ನರಸಿಂಹನ (ವಿರೂಪಾಕ್ಷ ದೇವಾಲಯ ಶಾಸನದ ವೀರಪ್ಪೊಡೆಯರ ತಂದೆ) ಸಹೋದರನೆಂದು ಗುರ್ತಿಸಿದರೆ ಇಟಗಿ ದೇವಾಲಯದ ಕಾಲವನ್ನು ಸೂಕ್ತ ರೀತಿಯಲ್ಲಿ ನಿಷ್ಕರ್ಷಿಸಬಹುದು.

5 ಈ ಪ್ರಬಂಧದ ಲೇಖಕನಿಗೆ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಎಪಿಗ್ರಫಿ ವಿಭಾಗದ ಡೈರಕ್ಟರ ಡಾ। ಕೆ. ವಿ. ರಮೇಶ, ಜಾಯಿಂಟ್ ಡೈರೆಕ್ಟರ್, ಡಾ। ಮಾಧವ ಕಟ್ಟಿ ಹಾಗೂ ಇತರ ಅಧಿಕಾರಿಗಳು ಕೆಲವು ಶಾಸನಗಳ Transcript ನೀಡಿ ಸಹಕರಿಸಿದ್ದಾರೆ. ಅವರಿಗೆಲ್ಲಾ ಧನ್ಯವಾದಗಳು.

ದೇವಾಲಯು (ಕ್ರಿ.ಶ. ೧೬೫೧)[6] ಗಳು ರಾಜ್ಯಾದಾಯುವನ್ನು ಬಿಟ್ಟುಕೊಟ್ಟ ವಿವರ ಹಾಗೂ ವಿವಿಧ ಖರ್ಚಿನ ವಿವರಗಳನ್ನು ನೀಡುವ ಶಿಲಾಶಾಸನಗಳನ್ನು ಹೊಂದಿವೆ. ಮೂಡುಬಿದಿರೆಯು ಬಸದಿಗಳಿಗೆ ಕೊಟ್ಟ ದತ್ತಿಯುನ್ನು ಉಲ್ಲೇಖಿಸುವ ಎರಡು ತಾಮ್ರ ಶಾಸನಗಳು (ಕ್ರಿ.ಶ. ೧೫೪೬ ಹಾಗೂ ೧೫೬೧) ಈ ಮೇಲಿನ ಶಾಸನಗಳಿಗೂ ಪೂರ್ವದ ಉದಾಹರಣೆಗಳು.[7] ಗೋಕರ್ಣದ ಮಹಾಬಲೇಶ್ವರ ದೇವರಿಗೆ ಸೋಮಶೇಖರ ನಾಯುಕನು ಮಾಡಿದ ದಾನಗಳನ್ನು ವಿವರಿಸುವ ತಾಮ್ರ ಶಾಸನವೊಂದು (ಕ್ರಿ.ಶ. ೧೬೮೬) ದೊರೆತಿದೆ.[8] ಮತ್ತೊಬ್ಬ ಸೋಮಶೇಖರ ನಾಯುಕನು ಸಿದ್ಧಾಪುರದ ಗಂಗಾಧರೇಶ್ವರ ದೇವರಿಗೆ ಮಾಡಿದ ದಾನದ ಎರಡು ತಾಮ್ರಪಟಗಳು (ಕ್ರಿ.ಶ. ೧೭೬೦) ಸಿಕ್ಕಿವೆ.[9] ಭುವನಗಿರಿಯ ಭುವನೇಶ್ವರಿ ದೇವಾಲಯು ಹಾಗೂ ಇಟಗಿಯ ರಾಮೇಶ್ವರ ದೇವಾಲಯುಗಳು ಇಂದಿಗೂ ಪೂಜೆಗೊಳ್ಳುತ್ತಿದ್ದರೂ ಶಾಸನಗಳು ಲಭ್ಯವಿಲ್ಲದ ಕಾರಣ ವಿವರಗಳು ತಿಳಿಯುುವುದಿಲ್ಲ.

**ದೇವಾಲಯುದ ಉತ್ಪನ್ನ ಮೂಲಗಳು**

ದೇವಾಲಯುಗಳಿಗೆ ಬಿಟ್ಟ ರಾಜ್ಯದ ಉತ್ಪನ್ನ ಮೂಲತಃ ವ್ಯವಸಾಯೋತ್ಪನ್ನ. ನಮಗೆ ದೊರೆಯುುವ ಆಧಾರಗಳಿಂದ ಸ್ಥೂಲವಾದ ಲೆಕ್ಕದಲ್ಲಿ ೪೬ರಷ್ಟು ಹಳ್ಳಿಗಳು ದತ್ತಿಯ ಮಿತಿಗೆ ಒಳಪಟ್ಟಿದ್ದವು (ಪಟ್ಟಿ ೧). ಒಂದು ಹಳ್ಳಿಯ ಎಲ್ಲಾ ಉತ್ಪನ್ನವನ್ನೂ ಎಲ್ಲಾ ಉದಾಹರಣೆಗಳಲ್ಲೂ ಬಿಟ್ಟ ಹಾಗಿಲ್ಲ. ಕೆಲವೊಮ್ಮೆ ಒಂದೇ ಹಳ್ಳಿಯ ಒಂದೇ ಹಿಡುವಳಿಯ ಉತ್ಪನ್ನವನ್ನು ಬೇರೆ ಬೇರೆ ದೇವಾಲಯುಗಳಿಗೆ ಹಂಚಿಕೊಟ್ಟದ್ದನ್ನು ಕಾಣಬಹುದು. ರತ್ನತ್ರಯುಬಸದಿಯ ಶಾಸನದಲ್ಲಿ ಬರುವ ವಿವರದಲ್ಲಿ, ಅಲ್ಲಿ ಹೆಸರಿಸಿರುವ ಎಲ್ಲಾ ಒಂಭತ್ತು ಹಳ್ಳಿಗಳ ಒಟ್ಟೂ ಉತ್ಪನ್ನವನ್ನು ಬಸದಿಗೆ ನೀಡಿದ್ದು ಕಂಡುಬರುತ್ತದೆ.

ಪ್ರತೀ ಹಳ್ಳಿಯಿಂದ ಬರುವ ಬೇರೆ ಬೇರೆ ಆದಾಯುದ ಮೂಲಗಳನ್ನು ಹೆಸರಿಸಿ ಒಟ್ಟುಗೂಡಿಸಿ ಆ ಹಳ್ಳಿಯು ಉತ್ಪನ್ನವನ್ನು ಶಾಸನದಲ್ಲಿ ಬರೆಸಲಾಗಿದೆ. ಬಹುಶಃ 'ಸಿದ್ಧಾಯು' ಎಂಬ ಕರವನ್ನು ಎಲ್ಲೆಲ್ಲಿ ಹೆಸರಿಸುತ್ತಾರೋ ಅಲ್ಲೆಲ್ಲ ಒಂದು ಹಳ್ಳಿಯ ಎಲ್ಲಾ ಉತ್ಪನ್ನವನ್ನು ದತ್ತಿಗೆ ಪರಿಗಣಿಸಿದ್ದಾರೆ. ಕೆಳದಿ ರಾಜ್ಯದ ಸಂದರ್ಭದಲ್ಲಿ 'ಸಿದ್ದಾಯು' ಒಂದು ಉಪಕರವಾಗಿತ್ತೆಂದು ಸಂಶೋಧನೆಗಳು ತೋರಿಸಿದರೂ ಮಧ್ಯಕಾಲೀನ ಕರ್ನಾಟಕದ ಕಾಲದಿಂದಲೂ ಬಹು ಪ್ರದೇಶಗಳಲ್ಲಿ 'ಸಿದ್ಧಾಯು'ವೇ ನಿರ್ಧಿಷ್ಟಪಡಿಸಿದ ಮುಖ್ಯ ಭೂ ಆದಾಯವಾಗಿತ್ತೆಂಬುದು ಈ ವರೆಗೆ ನಡೆದ ಸಂಶೋಧನೆಗಳಿಂದ ವಿಧಿತವಾಗುತ್ತದೆ[10]. ಈ ಸಂದರ್ಭದಲ್ಲಿ 'ಸಿದ್ಧಾಯು'ವನ್ನು ಅದೇ ಅರ್ಥದಲ್ಲಿ ತೆಗೆದುಕೊಳ್ಳಬಹುದು. ಏಕೆಂದರೆ 'ಸಿದ್ಧಾಯು'ವನ್ನು ಹೆಸರಿಸುವಾಗೆಲ್ಲ ಪ್ರಥಮವಾಗಿ ಅದನ್ನೇ ಉಲ್ಲೇಖಿಸಿ ನಂತರ ಉಳಿದ ಕರಗಳಾದ ಹದಿಕೆ ಬಿರಾಡ, ಕುಳಬಡ್ಡಿ ಉಪಾತ್ತರ ಅಥವಾ ಉಪಾದ್ರ ಮುಂತಾದವುಗಳನ್ನು ಉಲ್ಲೇಖಿಸಿದ್ದಾರೆ. ಕ್ರಿ.ಶ. ೧೭೬೦ರ ಸಿದ್ಧಾಪುರದ ತಾಮ್ರಪಟದಲ್ಲಿ 'ಸಿದ್ಧಾಯು'ದ ಬದಲು 'ಸಿಸ್ತ'ನ್ನು ಮುಖ್ಯ ಕರವನ್ನಾಗಿ ಉಲ್ಲೇಖಿಸಿದ್ದಾರೆ. ಈ ಮೇಲಿನ ಎಲ್ಲ ಕರಗಳನ್ನು ಹಣರೂಪದಲ್ಲಿ ವಸೂಲಿ ಮಾಡುತ್ತಿದ್ದರು. ಹಾಗಾಗಿ ಅದನ್ನು ಸುವರ್ಣಾದಾಯು ಎಂದು ಕರೆದಿದ್ದಾರೆ. ಈ ರೀತಿ 'ಸಿದ್ಧಾಯು', 'ಬಿರಾಡ', 'ಕುಳಬಡ್ಡಿ', 'ಉಪಾತ್ತರ' 'ಉಪಾದ್ರ', 'ವರ್ತನೆ', 'ಪಾಲು', 'ವಿಭಾಯು, 'ಕಟ್ಟುಗುತ್ತಿಗೆ, 'ಸುತ್ತು', 'ಮರುಗುತ್ತಿಗೆ' 'ಹದಿಕೆ ಬಿರಾಡ' ಎಂದು ಉಲ್ಲೇಖಿಸಿರುವ ರಾಜ್ಯದ ಉತ್ಪನ್ನ ಮೂಲಗಳನ್ನು ಗದ್ಯಾಣದ ರೂಪದಲ್ಲಿ ಸಂದಾಯು ಮಾಡುವ ಪರಿಪಾಠ ಇತ್ತು. ದೇವಸ್ಥಾನಕ್ಕೆ ಬರುವ ಸುವರ್ಣಾದಾಯುವನ್ನು ಗದ್ಯಾಣ, ವರಾಹಗಳ ರೂಪದಲ್ಲಿ

6 *KI, Vol. V*, No. 73, p. 271-77.
7 *IEAR 1939-40*, Appendix A, C.P. No. 2 & 3, p. 23.
8 *IEAR 1939-40*, Appendix A, C.P. No. 17, p. 23.
9 *IEAR 1939-40*, Apdendix A, C.P. No. 12 & 14, p. 22
10 K. N. Chitnis, *'Keladi Polity'*, 1974, Karnataka University, Dharwad, p. 97, H. R. Kuppuswamy, *Economic Conditions in Karnataka, AD. 975-1335*, 1975, Karnataka University, Dharwar, p. 152, and K. S. Shivanna, *The Agrarian System of Karnataka 1336-1761*, Mysore University, Publ, Mysore, p. 52.

ಹಾಗೂ ಚಿಲ್ಲರೆ ಹಣ, ಹಾಗೂ ಪೀಸೆಗಳ ರೂಪದಲ್ಲಿ ಶಾಸನಾಂಕಿತ ಮಾಡಿದ್ದು ಕಂಡುಬರುತ್ತದೆ. ಹಣ ರೂಪದ ಆದಾಯವಲ್ಲದೇ ಧಾನ್ಯ ರೂಪದಲ್ಲಿಯೂ ದೇವಾಲಯಗಳಿಗೆ ರಾಜ್ಯಾದಾಯವನ್ನು ಬಿಡುವದು ಸಾಮಾನ್ಯವಾಗಿತ್ತು. ಈ ಪ್ರದೇಶದ ಮುಖ್ಯ ಬೆಳೆಯಾದ ಭತ್ತವನ್ನು ಖಂಡುಗದ ಅಳತೆಯಲ್ಲಿ ಉಲ್ಲೇಖಿಸಿದ್ದಾರೆ. ಬಹುಶಃ ಮೇಲೆ ಉಲ್ಲೇಖಿಸಿದ ಎಲ್ಲಾ ಕರಗಳನ್ನು ಬೆಳೆಗೆ ಕ್ರಯ ಕಟ್ಟಿ ಹಣದ ರೂಪದಲ್ಲಿ ಪಡೆಯುವ ವ್ಯವಸ್ಥೆ ಕಡ್ಡಾಯವಾಗಿರಲಿಲ್ಲ. ಹಾಗಾಗಿ ಕೆಲವೊಮ್ಮೆ 'ಸಿಸ್ತು', 'ಉತ್ತಾರ', 'ಗುತ್ತಿಗೆ', 'ಗೇಣಿ' ಮುಂತಾದ ಸಂದಾಯಗಳನ್ನು ಭತ್ತದ ರೂಪದಲ್ಲಿ ಉಲ್ಲೇಖಿಸಿದ್ದಾರೆ. ದೇವಾಲಯದ ಪೂಜೆ ಪುನಸ್ಕಾರಕ್ಕೆ ಬೇಕಾದ ಧಾನ್ಯಕ್ಕೆ, ಹಾಗೂ ಪರಿಚಾರಕರಿಗೆ ನೀಡಬೇಕಾದ ಸಂಬಳಕ್ಕೆ ಈ ರೀತಿ ಭತ್ತವನ್ನು ನೇರವಾಗಿ ದೇವಾಲಯಗಳಿಗೆ ನೀಡುವ ವ್ಯವಸ್ಥೆ ಮಾಡಿದ್ದು ಶಾಸನಗಳಿಂದ ವೇದ್ಯವಾಗುತ್ತದೆ.

ಹೀಗೆ ಶಾಸನಗಳಲ್ಲಿ ಹಳ್ಳಿಗಳಿಂದ ರಾಜ್ಯಕ್ಕೆ ಸಂದಾಯವಾಗುತ್ತಿದ್ದ ಆದಾಯವನ್ನು ಲೆಕ್ಕಹಾಕಿ ಪ್ರತ್ಯೇಕಿಸಿ ನೀಡಿದ್ದಾರೆಯೇ ಹೊರತು ಹಳ್ಳಿಗಳನ್ನೇ ದಾನವಾಗಿ ನೀಡಿಲ್ಲ. ರತ್ನತ್ರಯಬಸದಿಯ ಶಾಸನದಲ್ಲಿ ಒಂಬತ್ತು ಹಳ್ಳಿಗಳ ಗಡಿಯಲ್ಲಿ "ಮುಕ್ಕೊಡೆಯ ಕಲ್ಲನ್ನು ನೆಡಿಸಿ ಧಾರಾಪೂರ್ವಕ" ಕೊಟ್ಟ ವಿಧಿಯ ಉಲ್ಲೇಖಿಸಿದ್ದಾರೆ.[11] ಈ ಉದಾಹರಣೆಯನ್ನು ಬಿಟ್ಟರೆ ಉಳಿದ ಕಡೆ ಗಡಿಯನ್ನು ನಿರ್ದಿಷ್ಟಪಡಿಸಿದ ಉಲ್ಲೇಖವಿಲ್ಲ. ಬದಲಾಗಿ ಹಳ್ಳಿಯ ಹೆಸರು ಹಾಗೂ ವ್ಯಕ್ತಿಗಳ ಹೆಸರುಗಳನ್ನಷ್ಟೇ ನೀಡಿ, ಉತ್ಪನ್ನದ ವಿವರ ಹಾಗೂ ಮೊತ್ತವನ್ನು ಲೆಕ್ಕಹಾಕುವುದರಲ್ಲಿ ವಿಶೇಷ ಲಕ್ಷ್ಯ ಇಟ್ಟಿದ್ದಾರೆ. ಅಥವಾ "...ಗ್ರಾಮದ ಗದ್ಯಾಣ....ಕ್ಷೇತ್ರವನ್ನು ಶಾಸನಾಂಕಿತ ಮಾಡಿ" ಎಂಬ ವಾಕ್ಯಗಳು ರಾಜ್ಯಕ್ಕೆ ಬರುವ ಆಧಾಯದ ಪರಿಭಾಷೆಯಲ್ಲೇ ಇಲ್ಲಿ ದಾಖಲೆ ಮಾಡಲ್ಪಟ್ಟದ್ದನ್ನು ಸೂಚಿಸುತ್ತವೆ.[12] ಬಿಳಗಿ ಅರಸರ ಶಾಸನಗಳು ಸೂಚಿಸುವ ಪ್ರಕಾರ ಹೆಚ್ಚಿನ ಕರಗಳೆಲ್ಲ ಹಣರೂಪದಲ್ಲೇ ಸಂದಾಯವಾಗುತ್ತಿದ್ದವು. ಹಾಗಾಗಿ ರಾಜ್ಯದ ಬದಲು ಈ ದೇವಾಲಯಗಳು ಆ ಆದಾಯವನ್ನು ಪಡೆಯುತ್ತಿದ್ದವು. ದೇವಾಲಯಗಳಿಗೆ ಆ ರೂಪದಲ್ಲಿ ಅಪ್ರತ್ಯಕ್ಷವಾದ ರೀತಿಯಲ್ಲಿ ಉತ್ಪನ್ನ ನೀಡುವ ಭೂಮಿಯ ಮೇಲೆ ಹಿಡಿತ ಇದ್ದಿರಬಹುದೇ ಹೊರತೂ ಭೂಮಿಯೇ ಅವುಗಳ ಸೊತ್ತಾದ ಬಗ್ಗೆ ಸರಿಯಾದ ಆಧಾರ ಸಿಕ್ಕುವುದಿಲ್ಲ.

ಸೋಮಶೇಖರ ನಾಯಕನು ಸಿದ್ಧಾಪುರದ ಗಂಗಾಧರೇಶ್ವರ ದೇವಾಲಯಕ್ಕೆ ಕೃಷಿಯೇತರ ಉತ್ಪನ್ನವನ್ನೂ ನಿಗದಿ ಮಾಡಿದ್ದನು. ಸಿದ್ಧಾಪುರದ ಮೂಲಕ ಸಾಗಿಸಲ್ಪಡುವ ಅಡಿಕೆ ಮತ್ತು ಮೆಣಸುಗಳ ಹೇರುಗಳ ಮೇಲೆ, ಒಂದು ಗದ್ಯಾಣ ಬೆಲೆಯ ಹೇರಿಗೆ ಒಂದು ಹಣದಂತೆ ಎಲ್ಲ ವ್ಯಾಪಾರಿಗಳೂ ನೀಡಬೇಕೆಂಬ ಅಪ್ಪಣೆ ಹಿಂದೆ ಉಲ್ಲೇಖಿಸಿದ ಕ್ರಿ.ಶ. ೧೭೬೦ರ ಒಂದು ತಾಮ್ರಶಾಸನದಲ್ಲಿದೆ. ಅದೇ ದೇವಾಲಯಕ್ಕೆ ಆತನು ೧೨೪ ಬಿಟ್ಟ ಆಳುಗಳ ಸೇವೆಯನ್ನು ನಿಗದಿಪಡಿಸಿದ್ದನ್ನು ೧೭೬೦ರ ಮತ್ತೊಂದು ಶಾಸನ ಹೇಳುತ್ತದೆ.[13]

## ಸಂದಾಯ ವಿಧಾನ

ಕೃಷಿಯ ಕರಗಳು ದೇವಾಲಯಗಳಿಗೆ ವರ್ಷಕ್ಕೊಮ್ಮೆ ಸಂದಾಯವಾಗುತ್ತಿದ್ದವು. ಏಕೆಂದರೆ ದೇವಾಲಯದ ಖರ್ಚಿಗೆ ಸರಿಬರುವ ಉತ್ಪನ್ನವನ್ನು ವಿಂಗಡಿಸಿ ಕೊಡುವಾಗ ಒಂದು ವರ್ಷದ ಖರ್ಚುಗಳನ್ನು ಲೆಕ್ಕ ಹಾಕಲಾಗಿದೆ. ದೇವಾಲಯಗಳು ಆ ಆದಾಯವನ್ನು ವಸೂಲಿಮಾಡಿದ ವಿಧಾನ ಅಷ್ಟು ಸ್ಪಷ್ಟವಾಗಿಲ್ಲ. ಇಡೀ ಹಳ್ಳಿಯ ಎಲ್ಲ ಉತ್ಪನ್ನವನ್ನು ಬಿಟ್ಟ ದೃಷ್ಟಾಂತಗಳಲ್ಲಿ ಯಾವುದೇ ವಸೂಲಿಯ ಗ್ರಾಮಾಧಿಕಾರಿಗಳನ್ನು ಉಲ್ಲೇಖಿಸಿಲ್ಲ. ವಿರೂಪಾಕ್ಷ ದೇವಾಲಯ ಹಾಗೂ ರತ್ನತ್ರಯಬಸದಿಗಳಲ್ಲಿ ಮೇಲ್ವಿಚಾರಣೆಗಾಗಿ ಅಧ್ಯಕ್ಷರುಗಳನ್ನು ನೇಮಕ ಮಾಡಿದ್ದು ಕಂಡುಬರುತ್ತದೆ. ಬಹುಶಃ ಅವರೇ ಆದಾಯವನ್ನು ಬೇರೆ ಬೇರೆ ಸ್ಥಳಗಳಿಂದ ವಸೂಲಿ

---

11 *IEAR 1970-71*, No. 157, p. 52

12 ಸೂಚಿ ನಂ. ૩ನ್ನು ನೋಡಿರಿ.

13 ಸೂಚಿ ನಂ. ೯ನ್ನು ನೋಡಿರಿ.

ಮಾಡುತ್ತಿದ್ದರು. ಆದರೆ ಬೇರೆ ದೇವಾಲಯಗಳ ಸಂದರ್ಭದಲ್ಲಿ ಈ ವ್ಯವಸ್ಥೆ ಅಷ್ಟು ಸರಳವಾಗಿದ್ದಂತಿಲ್ಲ. ವ್ಯಕ್ತಿಗಳನ್ನು ಹೆಸರಿಸಿದ ಸಂದರ್ಭದಲ್ಲಿ ಅವರು ಈ ಬಗ್ಗೆ ದೇವಾಲಯದ ಜತೆ ನೇರ ಸಂಪರ್ಕ ಹೊಂದಿರುವ ಸಾಧ್ಯತೆ ಇದೆ. ಕರ ತುಂಬುವವರ ಜತೆ ರಾಜ್ಯ ಹಲವು ತರದ ಹೊಂದಾಣಿಕೆ ಮಾಡಿತ್ತು. ಒಂದೇ ವ್ಯಕ್ತಿಯ ಉತ್ಪನ್ನವನ್ನು ಬೇರೆ ಬೇರೆ ಮಂದಿರಗಳಿಗೆ ಕೆಲವೊಮ್ಮೆ ವಿಂಗಡಿಸಿ ಕೊಟ್ಟಿತ್ತು. ಹಿಂದಿನವರು ಮಾಡಿದ ದತ್ತಿಗಳನ್ನು ಅನುಲಕ್ಷಿಸಿ ಮಾನ್ಯಮಾಡಿ ನಂತರದವರು ಉಳಿದ ಸಂದಾಯದ ಹಣವನ್ನು ಮತ್ತೊಂದು ದೇವಾಲಯಕ್ಕೆ ಹೊಂದಿಸಲು ಈ ರೀತಿ ಮಾಡಿರಬಹುದು. ಒಂದು ಸಂದರ್ಭದಲ್ಲಿ ಒಬ್ಬ ವ್ಯಕ್ತಿಯಿಂದ ಬರತಕ್ಕ ೩೦ ಗದ್ಯಾಣಗಳಲ್ಲಿ ೬ ಗದ್ಯಾಣಗಳನ್ನು ಅರಮನೆಗೆ ಸಂದಾಯವಾಗ ತಕ್ಕದ್ದು ಎಂದು ಅದನ್ನು ಕಳೆದು ಉಳಿದ ಹಣವನ್ನು ದೇವಾಲಯಕ್ಕೆ ನೀಡಿದ್ದು ಕಂಡುಬರುತ್ತದೆ.[14] ಮತ್ತೊಂದು ಉದಾಹರಣೆಯಲ್ಲಿ ಗೌಡುಂಬಳಿಯನ್ನು ಕಳೆಯಲಾಗಿದೆ.[15] ದೇವಸ್ಥಾನಕ್ಕೆ ಬಿಟ್ಟ ದತ್ತಿಯಲ್ಲಿ ಉಂಬಳಿ, ಉತ್ತರದ ಭೂಮಿಗಳನ್ನು ಕೆಲವೊಮ್ಮೆ ಸೇರಿಸಲಾಗಿದೆ.[16] ಇದರ ಸ್ವರೂಪ ನಮಗೆ ಸ್ಪಷ್ಟವಾಗುವುದಿಲ್ಲ.

### ಖರ್ಚುಗಳು

**ಧಾರ್ಮಿಕ ವಿಧಿಗಳು :** ದೇವಾಲಯಕ್ಕೆ ಬಿಟ್ಟ ಒಟ್ಟು ಉತ್ಪನ್ನವನ್ನು ವ್ಯವಸ್ಥಿತವಾಗಿ ಧಾರ್ಮಿಕ ವಿಧಿಗಳಿಗೆ ಹಾಗೂ ಅದನ್ನು ನಡೆಸುವ ಪರಿಚಾರಕ ವರ್ಗದವರಿಗೆ ಹಂಚಿಕೊಟ್ಟಿದ್ದರು. ತೀರ ವಿವರವಾಗಿ ಅದನ್ನು ಶಾಸನದಲ್ಲಿ ದಾಖಲಿಸಿದ್ದಾರೆ. ಧಾರ್ಮಿಕ ವಿಧಿಗಳ ಖರ್ಚನ್ನು ಸಾಧಾರಣವಾಗಿ ಹಣದ ರೂಪದಲ್ಲಿ ಲೆಕ್ಕ ಹಾಕಿದ್ದಾರೆ. ಎಣ್ಣೆ, ತುಪ್ಪ, ಹಾಲು, ಗಂಧ, ಧೂಪ, ಬತ್ತಿಹತ್ತಿ, ಅಡಕೆ, ವೀಳ್ಯದೆಲೆ, ಹಣ್ಣು, ತೆಂಗಿನಕಾಯಿ ಮುಂತಾದವುಗಳು ಪ್ರತಿ ವಿಧಿಗೆ ಎಷ್ಟು ಬೇಕಾಗುತ್ತವೆ ಎಂದು ಲೆಕ್ಕಮಾಡಿ, ನಂತರ ಅವುಗಳಿಗೆ ವಾರ್ಷಿಕ ಖರ್ಚು ಎಷ್ಟಾಗುತ್ತದೆ ಎಂದು ಮೊತ್ತ ತೆಗೆದಿದ್ದಾರೆ. ವಸ್ತು ರೂಪದಲ್ಲಿ ರಾಜ್ಯ ಬಿಟ್ಟುಕೊಟ್ಟ ಆದಾಯವೆಂದರೆ ನೈವೇದ್ಯ ಹಾಗೂ ಅಮೃತಪಡಿಗಾಗಿ ಭತ್ತವನ್ನು ಮಾತ್ರ. ಈ ರೀತಿ ಲೆಕ್ಕಾಚಾರ ಹಾಕುವ ವಿಧಾನದಲ್ಲಿ ಆಯಾ ದೇವಾಲಯಗಳಲ್ಲಿ ನಡೆಯುತ್ತಿದ್ದ ಎಲ್ಲ ಧಾರ್ಮಿಕ ವಿಧಿಗಳ ವಿವರವೂ ನಮಗೆ ಸಿಗುತ್ತದೆ. ದೈನಂದಿನ, ಹಾಗೂ ನಿಯತಕಾಲಿಕ ವಿಧಿಗಳ, ಹಾಗೂ ಆಗಾಗ ನಡೆಸಲ್ಪಡುತ್ತಿದ್ದ ಹಬ್ಬ ಹುಣ್ಣಿಮೆಗಳ ವೆಚ್ಚವನ್ನೆಲ್ಲ ಭರಿಸಲು ರಾಜ್ಯ ಅನುಕೂಲ ಮಾಡಿತ್ತು. ರತ್ನತ್ರಯಬಸದಿಯಲ್ಲಿ ಅಂಥ ಅತೀ ಹೆಚ್ಚು ವಿಧಿಗಳನ್ನು ಅಲ್ಲಿಯ ನೇಮಿನಾಥ, ಪಾರ್ಶ್ವನಾಥ ಹಾಗೂ ವರ್ಧಮಾನ ತೀರ್ಥಂಕರರಿಗೆ ನೆರವೇರಿಸುತ್ತಿದ್ದುದು ಕಂಡುಬರುತ್ತದೆ. ಸುಮಾರು ಹತ್ತರಷ್ಟು ದೈನಂದಿನ ವಿಧಿಗಳ ಉಲ್ಲೇಖ ಬಸದಿಯ ಶಾಸನದಲ್ಲಿದೆ. ಪ್ರತಿ ಮೂರ್ತಿಗೂ ದಿನಕ್ಕೆರಡು ಬಾರಿ ಬಾರಿ ಕ್ಷೀರಾಭಿಷೇಕ ನಡೆಯುತ್ತಿತ್ತು. ದಿನವೂ ಅಲ್ಲಿ ನಾಲ್ಕು ನಂದಾದೀಪ್ತಿಗಳು, ೨೪ ಅಲಂಕಾರ ದೀಪ್ತಿಗಳು ಉರಿಯುತ್ತಿದ್ದವು. ಆರು ಹಬ್ಬಗಳನ್ನು ವರ್ಷಂಪ್ರತಿ ಆಚರಿಸುತ್ತಿದ್ದರು. ಸಿದ್ದಾಪುರದ ವಿಘ್ನೇಶ್ವರ ದೇವಾಲಯದಲ್ಲಿ ಒಂಭತ್ತು ಹಬ್ಬಗಳನ್ನು ಆಚರಿಸುತ್ತಿದ್ದರು. ಗಂಗಾಧರೇಶ್ವರ ದೇವರ ಜಾತ್ರೆಗೆ ಸೋಮಶೇಖರ ನಾಯಕನಿಂದ ಎರಡು ತಾಮ್ರಪಟಗಳ ಮೂಲಕ ಅನುಕೂಲ ಕಲ್ಪಿಸಲಾಗಿತ್ತು. ದೇವಾಲಯದ ಧಾರ್ಮಿಕ ವಿಧಿಗಳಲ್ಲಿ ಹಬ್ಬ ಹುಣ್ಣಿಮೆಗಳಿಗೆ ಉಳಿದ ವಿಧಿಗಳಿಗಿಂತಲೂ ಕಡಿಮೆ ಖರ್ಚು ತಗಲುತ್ತಿತ್ತು.

### ದೇವಾಲಯದ ಪರಿಚಾರಕರು

ದೇವಸ್ಥಾನದ ಉತ್ಪನ್ನದ ಬಹುಭಾಗ ದೇವಾಲಯದ ವಿಧಿಗಳ ಆಚರಣೆಗೆ ಹಾಗೂ ಮೇಲ್ವಿಚಾರಣೆಗೆ ಶಾಶ್ವತ ಪರಿಚಾರಕ ವರ್ಗದವರನ್ನು ನಿಯಮಿಸಿ ಅವರಿಗೆ ವೇತನ ನೀಡಲು ಖರ್ಚಾಗುತ್ತಿತ್ತು. ಪೂಜಾರಿಗಳು ಅತಿ ಅವಶ್ಯವಾದ ಅಗತ್ಯವಾಗಿದ್ದರು. ದೊಡ್ಡ ದೇವಾಲಯಗಳಲ್ಲಿ ಬೇರೆ ಬೇರೆ ವಿಧಿಗಳನ್ನು ಪೂರೈಸಲು ಜಾಸ್ತಿ ಅರ್ಚಕರು ಬೇಕಾಗಿದ್ದರು. ವಿರೂಪಾಕ್ಷ ಹಾಗೂ

14 ಸೂಚಿ ನಂ. ೯ನ್ನು ನೋಡಿರಿ.

15 ಸೂಚಿ ನಂ. ೭ನ್ನು ನೋಡಿರಿ. C.P. No: 2

16 ಸೂಚಿ ನಂ. ೬ನ್ನು ನೋಡಿರಿ.

ವಿಘ್ನೇಶ್ವರ ದೇವಾಲಯಗಳಲ್ಲಿ ಎರಡೆರಡು ಅರ್ಚಕರಿದ್ದರು. ಹಿಂದೆ ಉಲ್ಲೆಖಿಸಿದ ಗೋಕರ್ಣದ ೧೬೭೮ರ ತಾಮ್ರ ಪಟದಲ್ಲಿ ಬೇರೆ ಬೇರೆ ಅರ್ಚನೆಗಳಲ್ಲಿ ಪರಿಣತರಾದ ಮೂರು ಅರ್ಚಕರ ಜೀವನೋಪಾಯವನ್ನು ಬಿಳಗಿ ಅರಸರು ಕಲ್ಪಿಸಿದ್ದು ಗೊತ್ತಾಗುತ್ತದೆ.[17] ಗೋಕರ್ಣದಲ್ಲಿ ಅದಾಗಲೇ ಇದ್ದ ಹಲವು ಅರ್ಚಕರ ಜತೆ ಈ ಮೇಲಿನವರು ಹೆಚ್ಚು ಸೇರ್ಪಡೆಯಾಗಿದ್ದಿರಬಹುದು. ವಾದ್ಯದವರು ಅಥವಾ ಓಲಗದವರು ದೊಡ್ಡ ದೇವಾಲಯಗಳ ಅನಿವಾರ್ಯ ಅಂಗಗಳಾಗಿದ್ದರು. ವಿರೂಪಾಕ್ಷ ದೇವಾಲಯದಲ್ಲಿ ಅವರ ಸಂಖ್ಯೆ ಎರಡಿದ್ದರೆ, ವಿಘ್ನೇಶ್ವರ ದೇವಾಲಯದಲ್ಲಿ ನಾಲ್ಕು ಇತ್ತು. ವಿಘ್ನೇಶ್ವರ ದೇವಾಲಯದಲ್ಲಿ ಇಬ್ಬರು ನಾದಸ್ವರದವರು ಹಾಗೂ ಇಬ್ಬರು ಡೋಲಿನವರು ಇದ್ದರು. ರತ್ನತ್ರಯಬಸದಿ ಉಳಿದೆಲ್ಲ ಮಂದಿರಗಳನ್ನು ಮೀರಿಸಿತ್ತು. ಅಲ್ಲಿ ಆರು ಓಲಗದವರಿದ್ದರು. ಈ ಮೇಲಿನವರ ಜತೆ, ತಾಳ, ಛಳಗಗಳಿಗೆ ತಲಾ ಒಬ್ಬೊಬ್ಬರಿದ್ದರು. ಅದೇ ಬಸದಿಯಲ್ಲಿ ಹತ್ತು ಭೋಗಪಾತ್ರದ ಜನರಿದ್ದರು. ನಟ್ಟುವ ಜನ ೧, ತಾಳಧಾರಿಗಳು ೧, ಮದ್ದಳೆಯವರು ೨, ಸಂಗೀತದವರು ೧, ಶೃತಿಯವರು ೧, ಪಾತ್ರದವರು ೪, ಹೀಗೆ. ದೇವಾಲಯದ ಚಟುವಟಿಕೆಗಳ ಮೇಲ್ವಿಚಾರಣೆ ನಡೆಸಲು ಅಧ್ಯಕ್ಷರು ವಿರೂಪಾಕ್ಷ ದೇವಾಲಯ ಹಾಗೂ ರತ್ನತ್ರಯ ಬಸದಿಯಲ್ಲಿ ಇದ್ದರು. ಪಾಟಾಳಿಗಳು, ಪರಿಚಾರಕರು ಮುಂತಾದವರು ಸಹಾಯಕ್ಕಾಗಿ ಇದ್ದರು. ಈ ರೀತಿಯಲ್ಲಿ ವಿರೂಪಾಕ್ಷ ಹಾಗೂ ವಿಘ್ನೇಶ್ವರ ದೇವಾಲಯಗಳಲ್ಲಿ ಅವರ ಸಂಖ್ಯೆ ೭, ಹಾಗೂ ರತ್ನತ್ರಯ ಬಸದಿಯಲ್ಲಿ ೨೨ ಇತ್ತು. ಪರಿಚಾರಕ ವರ್ಗದವರಿಗೆ ಹಣ ಹಾಗೂ ಧಾನ್ಯ ಈ ಎರಡೂ ರೂಪದಲ್ಲೂ ವೇತನ ಸಲ್ಲಿಸುತ್ತಿದ್ದರು. ಪಟ್ಟಿ ೨ ತೋರಿಸುವಂತೆ ರತ್ನತ್ರಯ ಬಸದಿಯ ಸಿಬ್ಬಂದಿ ವರ್ಗದವರಿಗೆ ಉಳಿದ ದೇವಾಲಯಗಳ ಸಿಬ್ಬಂದಿಗಳಿಗಿಂತ ಹೆಚ್ಚು ವೇತನ ಸಿಗುತ್ತಿತ್ತು. ಬಹುಶಃ ದೇವಾಲಯದ ಚಟುವಟಿಕೆ ಹಾಗೂ ಮಹತ್ವ ವೇತನದ ಪ್ರಮಾಣವನ್ನು ನಿರ್ಧರಿಸಿತ್ತು. ರತ್ನತ್ರಯ ಬಸದಿಯ ಎರಡು ಅಧ್ಯಕ್ಷರಿಗೆ ತಲಾ ೧೨ ಗದ್ಯಾಣ ಹಾಗೂ ಒಂದು ಕಂಬಳಿ ಸಿಕ್ಕಿದರೆ ವಿರೂಪಾಕ್ಷ ದೇವಾಲಯದ ಅಧ್ಯಕ್ಷನಿಗೆ ೧೦ ಗದ್ಯಾಣ ದೊರೆಯುತ್ತಿತ್ತು. ರತ್ನತ್ರಯ ಬಸದಿಯ ಶ್ರೀಬಲಿ ಹಾಗೂ ಅಮೃತಪಡಿಗಾಗಿ ೧೦೦ ಖಂಡುಗ ಭತ್ತ ಖರ್ಚಾಗುತ್ತಿತ್ತು. ಅದನ್ನು ಯಾರು ಉಪಯೋಗಿಸುತ್ತಿದ್ದರು ಎಂಬ ಬಗೆಗೆ ಉಲ್ಲೇಖವಿಲ್ಲ. ದೇವಸ್ಥಾನದ ಪರಿಚಾರಕ ವರ್ಗದವರಿಗೆ ಅಂಥ ನಿರ್ದಿಷ್ಟ ಪಡಿಸಿದ ಉತ್ಪನ್ನವೂ ಇದ್ದಿರಬಹುದು. ವಿಘ್ನೇಶ್ವರ ದೇವಾಲಯದಲ್ಲಿ ನೈವೇದ್ಯದ ಅನ್ನವನ್ನು ಓಲಗದವರಿಗೆ ಸಲ್ಲಿಸಲಾಗುತ್ತಿತ್ತು.

ಈ ಮೇಲೆ ವಿಚಾರಿಸಿದ ಖರ್ಚಿನ ಬಾಬ್ತುಗಳು ದೇವಾಲಯದ ಧಾರ್ಮಿಕ ವಿಧಿಗಳ ಬಾಬ್ತಿಗಿಂತ ಅಧಿಕ ಇದ್ದವು. ಪಟ್ಟಿ ೩ರಲ್ಲಿ ತುಲನೆ ಮಾಡಿದ ಮೂರು ದೇವಾಲಯಗಳ ಖರ್ಚುಗಳ ಮೊತ್ತ ಇದನ್ನು ಸಮರ್ಥಿಸುತ್ತದೆ.

**ಉಪಸಂಹಾರ :** ಈ ರೀತಿಯಲ್ಲಿ ಬಿಳಗಿ ಅರಸರ ಕಾಲದಲ್ಲಿ ಪ್ರಾದೇಶಿಕ ಮಟ್ಟದಲ್ಲಿ ಹಲವು ದೇವಾಲಯಗಳು ರಾಜಾಶ್ರಯ ಪಡೆದು ಬೆಳೆದವು. ಆ ದೇವಾಲಯಗಳನ್ನು ನಡೆಸಿಕೊಂಡು ಹೋಗಲಿಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಹಾಕಿ ಆ ಮೊತ್ತವನ್ನು ರಾಜ್ಯದಾಯದಿಂದ ವಿಂಗಡಿಸಿ ಕೊಡಲಾಗಿತ್ತು. ರಾಜ್ಯದ ಬದಲು ದೇವಾಲಯಗಳೇ ರಾಜ್ಯದ ಸ್ಥಾನದಲ್ಲಿ ನಿಂತು ಅವುಗಳನ್ನು ವಸೂಲಿ ಮಾಡಿಕೊಂಡು ಖರ್ಚನ್ನು ತೂಗಿಸಬೇಕಿತ್ತು. ಈ ವಸೂಲಿ ಪದ್ಧತಿಯು ಕುರಿತು ಸುವ್ಯವಸ್ಥಿತವಾಗಿ ರಾಜ್ಯ ನೀತಿಯನ್ನು ಅಳವಡಿಸಿಕೊಂಡಿದ್ದರ ಬಗ್ಗೆ ಆಧಾರ ಸಿಕ್ಕುವುದಿಲ್ಲ. ದೇವಾಲಯದ ಆರ್ಥಿಕ ವ್ಯವಹಾರದ ಬಹುಪಾಲು ಹಣ ಚಲಾವಣೆಯಿಂದಲೇ ನಡೆಯುತ್ತಿತ್ತು. ಅಂದರೆ ಅದರ ಉತ್ಪನ್ನ ಹಾಗೂ ಖರ್ಚುಗಳು ಸಾಧಾರಣವಾಗಿ ಹಣರೂಪದಲ್ಲೇ ವಿಧಿಸಲ್ಪಟ್ಟಿರುವುದರಿಂದ ಸಮಕಾಲೀನ ಆರ್ಥಿಕ ವ್ಯವಹಾರದಲ್ಲಿ ಹಣ ಚಲಾವಣೆಗಳಿಸಿದ ಪ್ರಾಮುಖ್ಯತೆಯನ್ನು ಇದು ಸೂಚಿಸುತ್ತದೆ. ಅಥವಾ ಈ ಕುರಿತು ವಿವರ ಸಂಶೋಧನೆಗಳು ಅಗತ್ಯ ಇವೆ.

ಬಿಳಗಿ ಅರಸರ ಕಾಲದ ದೇವಾಲಯಗಳ ಇನ್ನೊಂದು ವೈಶಿಷ್ಟ್ಯ ಎಂದರೆ ಈ ದೇವಾಲಯಗಳ ಅಸ್ತಿತ್ವದಲ್ಲಿ ಇದ್ದ ರಾಜಾಶ್ರಯದ ಪಾತ್ರ. ರಾಜ್ಯ

17 ಸೂಚಿ ನಂ. ೮ನ್ನು ನೋಡಿರಿ.

ವಿಂಗಡಿಸಿ ಕೊಟ್ಟ ಉತ್ಪನ್ನದಲ್ಲೇ ಪ್ರಮುಖ ದೇವಾಲಯಗಳು ತಮ್ಮ ಉಸಿರನ್ನು ಇಟ್ಟುಕೊಂಡಿದ್ದವು. ದೇವಾಲಯದ ಆರ್ಥಿಕ ವ್ಯವಹಾರದಲ್ಲಿ ರಾಜ್ಯ ತನ್ನ ನಿರ್ಣಾಯಕ ಪಾತ್ರವನ್ನು ಉಳಿಸಿಕೊಂಡಿತ್ತು. ದೇವಾಲಯಗಳ ಚಟುವಟಿಕೆಗಳು, ಖರ್ಚುಗಳು, ಕಟ್ಟಡಗಳು ಎಲ್ಲವೂ ರಾಜಶಾಸನ ಪುಟವನ್ನವಲಂಬಿಸಿದ್ದವು. ಬಳಗಿ ಅರಸರ ದೇವಾಲಯಗಳಲ್ಲೇ ರತ್ನತ್ರಯಬಸದಿ ಈ ದೃಷ್ಟಿಯಿಂದ ದೊಡ್ಡದು. ಅಲ್ಲಿ ಪರಿಚಾರಕ ವರ್ಗ ಹಾಗೂ ಧಾರ್ಮಿಕ ವಿಧಿಗಳು ಸಂಖ್ಯೆಯಲ್ಲಿ ಮಾತ್ರ ಜಾಸ್ತಿಯಿಲ್ಲ, ರಾಜ್ಯ ಆ ಪ್ರತಿಯೊಂದು ಬಾಬ್ತಿಗೆ ನಿಗಧಿಪಡಿಸಿದ ಹಣ ಕೂಡಾ ಸಾಪೇಕ್ಷವಾಗಿ ಹೆಚ್ಚಿತ್ತು.

ಇಂಥ ರಾಜಾಶ್ರಯ ಕೆಲವು ದೇವಾಲಯಗಳ ಮಟ್ಟಿಗೆ ನಿರ್ಣಾಯಕವಾಗಿ ಪರಿಣಮಿಸಿದಂತೆ ಕಾಣುತ್ತದೆ. ಬಳಗಿ ರಾಜರು ಮಹತ್ವಾಕಾಂಕ್ಷೆಯಿಂದ ನಿರ್ಮಿಸಿದ ವಿರೂಪಾಕ್ಷ ದೇವಾಲಯ ಹಾಗೂ ರತ್ನತ್ರಯ ಬಸದಿಗಳು ಎಷ್ಟು ಕ್ಷಿಪ್ರವಾಗಿ ತಮ್ಮ ವೈಭವವನ್ನು ಪಡೆದವೋ ಅಷ್ಟೇ ತ್ವರಿತವಾಗಿ ಅವರ ಆಳ್ವಿಕೆಯ ನಂತರ ಹಾಳು ಬಿದ್ದವು. ಇದು ಬಳಗಿ ರಾಜರು ಆರ್ಥಿಕ ಸವಲತ್ತುಗಳನ್ನು ನಿರ್ಮಾಣ ಮಾಡುವರಲ್ಲಿ ಮಾತ್ರ ನಿರ್ಣಾಯಕರಾಗಿರಲಿಲ್ಲ. ಈ ವ್ಯವಸ್ಥೆ ತಪ್ಪದೇ ಮುಂದುವರಿಯುವಲ್ಲಿ ಕೇವಲ ಆಶ್ವಾಸನೆಯಾಗಿದ್ದರು ಎಂಬುದನ್ನು ಸೂಚಿಸುತ್ತದೆ. ಹಾಗಾಗಿ ಬಳಗಿ ರಾಜ್ಯ ವ್ಯವಸ್ಥೆ ಹಾಳಾದಾಗ ಈ ದೇವಾಲಯಗಳು ಒಂದು ಪ್ರತಿ ವ್ಯವಸ್ಥೆಯನ್ನು ಸೃಷ್ಟಿಸಿಕೊಳ್ಳಲು ವಿಫಲವಾದವು.

ಆದರೆ ಸಿದ್ಧಾಪುರದ ವಿಘ್ನೇಶ್ವರ ದೇವಾಲಯ, ಭುವನೇಶ್ವರಿ ದೇವಾಲಯ ಹಾಗೂ ಇಟಗಿಯ ರಾಮೇಶ್ವರ ದೇವಾಲಯಗಳು ಮಾತ್ರ ಇಂದಿಗೂ ತಮ್ಮ ಮಹತ್ವವನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಬಹುಶಃ ಬಳಗಿ ಅರಸರ ಪತನಾನಂತರ ಈ ಎಲ್ಲ ದೇವಾಲಯಗಳನ್ನು ಪ್ರಭಾವಿಸಿದ ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳನ್ನು ವಿವರವಾಗಿ ಅಧ್ಯಯನ ಮಾಡಿದಾಗಲೇ ಈ ಮೇಲಿನ ದೇವಾಲಯಗಳ ವ್ಯವಸ್ಥೆ ಹಾಳಾಗಿದ್ದರ ನಿಜವಾದ ಕಾರಣ ತಿಳಿಯಬಹುದು.[18]

## ಪಟ್ಟಿ–೧

### ಶಾಸನಗಳಲ್ಲಿ ಲಭ್ಯವಿರುವಂತೆ ದತ್ತಿಯ ವಿವರಗಳು

| | ದೇವಾಲಯದ ಹೆಸರು | ಹಳ್ಳಿಗಳ ಸಂಖ್ಯೆ | ದತ್ತಿ ಹಣ ರೂಪದಲ್ಲಿ | ವಸ್ತು ರೂಪದಲ್ಲಿ |
|---|---|---|---|---|
| ೧ | ಪಾರ್ಶ್ವತೀರ್ಥಂಕರ ಬಸದಿ, ಐಸೂರು | ೧ | ೨೪ ಗದ್ಯಾಣ | ೩೦೦ ಖಂಡುಗ ಭತ್ತ |
| ೨ | ಪಾರ್ಶ್ವತೀರ್ಥಂಕರ ಬಸದಿ, ಇಡುವಣಿ | ೨ | ೬೩ ಗದ್ಯಾಣ | — |
| ೩ | ಪಾರ್ಶ್ವತೀರ್ಥಂಕರ ಬಸದಿ, ಬಳಗಿ | ೩ | ೧೬೩ ಗದ್ಯಾಣ | — |
| ೪ | ಪಾರ್ಶ್ವತೀರ್ಥಂಕರ ಬಸದಿ, ಬಳಗಿ ಅರಮನೆ | ೩ | ೧೦೪ ಗದ್ಯಾಣ | — |
| ೫ | ಮಾಣಿಕ್ಯತೀರ್ಥಂಕರ ಬಸದಿ, ಬಳಗಿ | ೧ | ೫೦ ಗದ್ಯಾಣ | — |
| ೬ | ಪಂಚ ಬಸದಿ, ತಾಳಗುಪ್ಪೆ | ೧ | ೩೬ ಗದ್ಯಾಣ | — |

18 ಪ್ರಸ್ತುತ ಲೇಖಕರು ಡಾ! ಎಸ್. ಎ. ಬಾರಿ, ಮುಖ್ಯಸ್ಥರು, ಇತಿಹಾಸ ಹಾಗೂ ಪುರಾತನ ಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಇವರಿಗೆ ಅವರ ಅಮೂಲ್ಯ ಸಲಹೆಗಳಿಗಾಗಿ ಕೃತಜ್ಞರಾಗಿದ್ದಾರೆ.

| | ದೇವಾಲಯದ ಹೆಸರು | ಹಳ್ಳಿಗಳ ಸಂಖ್ಯೆ | ದತ್ತಿ ಹಣ ರೂಪದಲ್ಲಿ | ವಸ್ತು ರೂಪದಲ್ಲಿ |
|---|---|---|---|---|
| ೭ | ಅಧೀಶ್ವರಬಸದಿ | ೩ | ೪೩.೫ ಗದ್ಯಾಣ | — |
| ೮ | ರತ್ನತ್ರಯಬಸದಿ | ೨ | ೧೦೧.೫ ಗದ್ಯಾಣ | — |
| ೯ | ಶಾಂತೀಶ್ವರಬಸದಿ | ೨ | ೩೬ ಗದ್ಯಾಣ | — |
| ೧೦ | ಚಂದ್ರನಾಥಬಸದಿ, ಬಳಗುಳಿ | ೪ | ೨೮ ಗದ್ಯಾಣ | — |
| ೧೧ | ತ್ರಿಭುವನತಿಲಕಬಸದಿ, ಬಿದಿರೆ | ೧ | ೪೪.೫ ಗದ್ಯಾಣ | — |
| ೧೨ | ಗಂಧಕುಟಿ ಶಾಂತೀಶ್ವರ, ಬಿಳಗಿ | ೧ | ೧೨ ಗದ್ಯಾಣ | — |
| ೧೩ | ವಿರೂಪಾಕ್ಷ ದೇವಾಲಯ, ಬಿಳಗಿ | ೪ | ೮೬ ಗದ್ಯಾಣ<br>೭ ಹಣ ೩ ಹಾಗ | ೧೧೦ ಖಂಡುಗ ಭತ್ತ |
| ೧೪ | ರತ್ನತ್ರಯಬಸದಿ, ಬಿಳಗಿ | ೯ | ೪೪೩ ಗದ್ಯಾಣ<br>೧೦೧ ಹಣ ೩ ವೀಸ | ೩೦೦ ಖಂಡುಗ ಭತ್ತ |
| ೧೫ | ವಿಘ್ನೇಶ್ವರ ದೇವಾಲಯ, ಸಿದ್ಧಾಪುರ | ೪ | ೬೫ ಗದ್ಯಾಣ<br>೨ ಹಣ ೩ ಹಾಗ | ೧೦೦ ಖಂಡುಗ ಭತ್ತ |
| ೧೬ | ತ್ರಿಭುವನಚೂಡಾಮಣಿಬಸದಿ, ಬಿದಿರೆ | ೧ | ೨೪ ಗದ್ಯಾಣ | |
| ೧೭ | ಪಾರ್ಶ್ವನಾಥಬಸದಿಯ ಸತ್ರ, ಬಿದಿರೆ | ೩ | — | ೧೧೨ ಮೂಟೆ ಅಕ್ಕಿ |
| ೧೮ | ಗೋಕರ್ಣಮಹಾಬಲೇಶ್ವರ ದೇವಾಲಯ | ೨ | ೪೫.೫ ಗದ್ಯಾಣ | — |
| ೧೯ | ಗಂಗಾಧರೇಶ್ವರ ದೇವಾಲಯ, ಸಿದ್ಧಾಪುರ | ೨ | ೨೪ ಗದ್ಯಾಣ | ೧೧೫ ಬಿಟ್ಟಿ ಆಳು |

## ಪಟ್ಟಿ–೨

**ದೇವಾಲಯದ ಸಿಬ್ಬಂದಿಗೆ ಸಂಬಳ (ಒಬ್ಬರಿಗೆ ವರ್ಷಕ್ಕೆ)**

(ಮೂರು ದೇವಾಲಯಗಳ ತುಲನಾತ್ಮಕ ಪಟ್ಟಿ)

| ಸಂ. | ಸಿಬ್ಬಂದಿ | ವಿರೂಪಾಕ್ಷ ದೇವಾಲಯ | | ರತ್ನತ್ರಯಬಸದಿ | | ವಿಘ್ನೇಶ್ವರ ದೇವಾಲಯ | |
|---|---|---|---|---|---|---|---|
| | | ಹಣ ಗದ್ಯಾಣ | ವಸ್ತು ಭತ್ತ ಖಂಡುಗ | ಹಣ ಗದ್ಯಾಣ | ವಸ್ತು ಭತ್ತ ಖಂಡುಗ | ಹಣ ಗದ್ಯಾಣ | ವಸ್ತು ಭತ್ತ ಖಂಡುಗ |
| ೧ | ಅರ್ಚಕ ಭಟ್ಟರು | ೩ | ೩೬ | — | — | ೧೨ | — |
| ೨ | ಕೀಳು ಶಾಂತಿ ಭಟ್ಟರು | ೨ | ೩೦ | — | — | ೧೨ | — |
| ೩ | ಪಾಟಾಳಿಗಳು | ಮುಕ್ಕಾಲು | ೩೦ | — | — | — | — |
| ೪ | ಭಂಡಾರಿ (ವಾದ್ಯದವರು) | ೧.೫ | ೪೨ | ೭ | ೨೦ | — | ೨೪ |
| ೫ | ಅಧ್ಯಕ್ಷರು | ೧೦ | — | ೧೩ | ಒಂದು ಕಂಬಳಿ | — | — |
| ೬ | ಭೋಗವಾತ್ರದವರು | — | — | ೧೫ | — | — | — |
| ೭ | ಪರಿಚಾರಕರು | — | — | ೯.೫ | ೨೦ | — | — |

## ಪಟ್ಟಿ-೩

### ದೇವಾಲಯದ ಬೇರೆ ಬೇರೆ ಉದ್ದೇಶಕ್ಕೆ ಆಗುತ್ತಿದ್ದ ಖರ್ಚಿನ ಪ್ರಮಾಣ

(ಮೂರು ದೇವಾಲಯದ ತುಲನಾತ್ಮಕ ಪಟ್ಟಿ)

| | ದೇವಾಲಯ | ಧಾರ್ಮಿಕ ವಿಧಿಗಳು | ಸಿಬ್ಬಂದಿ ಸಂಬಳ | ಒಟ್ಟು |
|---|---|---|---|---|
| ೧ | ವಿರೂಪಾಕ್ಷ ದೇವಾಲಯ | ೩೦.೫ ಗದ್ಯಾಣ | ೫೫.೫ ಗದ್ಯಾಣ | ೮೬ ಗದ್ಯಾಣ |
| | | ೪೪ ಖಂಡುಗ ಭತ್ತ | ೬೬ ಖಂಡುಗ ಭತ್ತ | ೧೧೦ ಖಂಡುಗ ಭತ್ತ |
| ೨ | ರತ್ನತ್ರಯುಬಸದಿ | ೯೮ ಗದ್ಯಾಣ | ೨೪೫ ಗದ್ಯಾಣ | ೪೪೩ ಗದ್ಯಾಣ |
| | | ೧೦೦ ಖಂಡುಗ ಭತ್ತ | ೨೦೦ ಖಂಡುಗ ಭತ್ತ | ೩೦೦ ಖಂಡುಗ ಭತ್ತ |
| ೩ | ವಿಘ್ನೇಶ್ವರ ದೇವಾಲಯ | ೨೧ ಗದ್ಯಾಣ | ೪೪ ಗದ್ಯಾಣ | ೬೫ ಗದ್ಯಾಣ |
| | | ೪ ಖಂಡುಗ ಭತ್ತ | ೯೬ ಖಂಡುಗ ಭತ್ತ | ೧೦೦ ಖಂಡುಗ ಭತ್ತ |

# ದೇವಾಲಯವಾಸ್ತು ವಿಷಯಾನುಪೂರ್ವೀ ಟಿಪ್ಪಣಿಗಳು

ಎಂ.ಎಸ್. ಪ್ರಭಾಕರ್

ಅಮರ್ತ್ಯಾಶ್ಚೈವ ಮರ್ತ್ಯಾಶ್ಚ ಯತ್ರ ಯತ್ರ
ವಸಂತಿ ಹಿ

ತದ್ವಸ್ತ್ವಿತಿ ಮತಂ....—[1]

ಮಯಮತದ ಪ್ರಕಾರ ಮರ್ತ್ಯ, ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಸ್ತು ಎಂದು ಹೆಸರು. ವಸ್ತು ಎಂಬಲ್ಲಿ ಕೇವಲ ಭೂಮಿ ಅಥವಾ ವಾಸಿಸುವ ಜಾಗ ಮಾತ್ರ. ವಾಸಿಸುವ ಜಾಗವನ್ನು ಆಶ್ರಯಿಸಿದ್ದು ವಾಸ್ತು.

ಪ್ರಾಸಾದಾದೀನಿ ವಾಸ್ತುನಿ ವಸ್ತುತ್ವಾದ್ ವಸ್ತು ಸಂಶ್ರಯಾತ್[2] ಪ್ರಾಸಾದ, ಹರ್ಮ್ಯ, ಸೌಧ, ಗೃಹ ಇತ್ಯಾದಿ ರಚನೆಗಳು ವಸ್ತು ಅಥವಾ ಭೂಮಿಯನ್ನು ಆಶ್ರಯಿಸಿದ್ದು ವಾಸ್ತುಎಂದೆನಿಸುತ್ತದೆ.

ಪದ ವ್ಯುತ್ಪತ್ತಿಯನ್ನು ಗುರುತಿಸುವಾಗ, "ವಸಂತಿ ಪ್ರಾಣಿನೋಽತೇತಿ ವಾಸ್ತು ಶಬ್ದ ವ್ಯುತ್ಪತ್ತಿಃ"[3] ಎಂದು ಸಂಗ್ರಾಹ್ಯವಾಗಿ ಗುರುತಿಸುತ್ತಾರೆ. ವಾಸ್ತು ಎಂದಲ್ಲಿ ಭೂಮಿಯ ಮೇಲೆ ನಿಂತ ಕಟ್ಟಡ ರಚನೆಗಳು ಎಂದು ಅರ್ಥ ಸ್ಪಷ್ಟವಾಗುತ್ತದೆ.

ಇರುವುದಕ್ಕೊಂದು ಸೂರು ಎನ್ನುವುದು ಮಾನವನ ಮೂಲಭೂತ ಅವಶ್ಯಕತೆಗಳಲ್ಲೊಂದೆನಿಸಿದ್ದು, ಮೊದಲಿಗೆ ಆತ ಹೆಬ್ಬಂಡೆಗಳ ಅಡಿಯಲ್ಲಿ ಕೊಂಚ ಜಾಗವನ್ನಾರಿಸಿದ. ಇದು ವಸ್ತು ಪದದ ಅರ್ಥವಷ್ಟೇ ಆಗಿದೆ. ನಂತರ ಹೆಬ್ಬಂಡೆಗಳ ಅಡಿಯಲ್ಲಿಯೇ ಕೊಂಚ ವಿಶಾಲವಾದ ಸುರಕ್ಷಿತವಾದ ಜಾಗವನ್ನಾರಿಸಿದ. ಇದು ಗುಹೆಯೇ ಮನೆಯ ಮೊದಲ ಕಲ್ಪನೆಯ ಮೂಲವಷ್ಟೆ. ಇಂತಹ ಪ್ರಾಚೀನ ಗುಹೆ ಅಥವಾ ಗವಿಗಳು ಹಲವಾರು ಕಡೆಗಳಲ್ಲಿ ಗುರುತಿಸಲ್ಪಟ್ಟಿವೆ. ಇತಿಹಾಸ ಪೂರ್ವ ಮಾನವನ ಬದುಕನ್ನು ನಿರೂಪಿಸುವಲ್ಲಿ, ವ್ಯಾಖ್ಯಾನಿಸುವಲ್ಲಿ ಇವು ನೆರವಾಗಿವೆ. ತದನಂತರ ಮನೆಯ ಸ್ವತಂತ್ರ ಕಲ್ಪನೆ ಗರಿಕೆದರಿದಾಗ ಗುಹೆಯೊಂದಿಗೆ ಕಟ್ಟಡಗಳ ನಿರ್ಮಾಣವೂ ಮೂಡಿಬಂತು. ನಿಸರ್ಗದ ಮಡಿಲಿನಲ್ಲಿ ಗುಹೆಗಳಲ್ಲಿ, ವಾಸಿಸಿದ ಮನುಷ್ಯ ಸ್ವತಂತ್ರ ಕಟ್ಟಡಗಳ ರಚನೆಯಲ್ಲಿ, ತನ್ನ ಕೌಶಲ್ಯವನ್ನು ಪ್ರದರ್ಶಿಸಿದಾಗ್ಯೂ, ಗುಹೆಗಳಂತಿರುವ ಸುಂದರ ತಾಣಗಳನ್ನಾಯ್ದು, ಗುಹಾಂತರಾಲಯಗಳನ್ನು ನಿರ್ಮಿಸಿದ. ದೇವರಿಗೂ ಸಮರ್ಪಿಸಿದ. ಗುಹಾಂತರ ದೇವಾಲಯಗಳ ಕಥೆಯೇ ಇದು. ಇಂದು ಉಳಿದು ಎದಿರುವ ಗುಹಾಂತರ ದೇವಾಲಯಗಳ ನಿರ್ಮಾಣ ಕಾಲಕ್ಕೆ ಕಟ್ಟಡಗಳ ರಚನೆಯೂ ಸಮರ್ಥವಾಗಿ ಬೆಳೆದಿತ್ತೆನ್ನಬಹುದು.

ಮುಂಡನ ಪಟ್ಟುವಿನ ಲಕ್ಷ್ಮಿತಾಯತನಕ್ಕೆ ಸಂಬಂಧಿಸಿದ ಶಾಸನವು, ಗುಹಾಂತರ ದೇವಾಲಯಕ್ಕೆ ಮುನ್ನ ಸ್ವತಂತ್ರ ರಚನೆಗಳೂ ಅಸ್ತಿತ್ವದಲ್ಲಿತ್ತು ಎಂದು ದೃಢ ಪಡಿಸುತ್ತದೆ.

---

1 ಟಿ. ಗಣಪತಿಶಾಸ್ತ್ರಿ (ಸಂ) : ಮಯಮತ, ತಿರುವನಂತಪುರ, ೧೯೧೯ : ಅಧ್ಯಾಯ ೨, ಶ್ಲೋಕ ೧, ಪು. ೨

2 ಅದೇ, ಅ. ೨, ಶ್ಲೋ. ೪, ಪು. ೪.

3 ಡಿ. ಕೃಷ್ಣರಾಯ ಮತ್ತು ವಿನಾಯಕ ಗಣೇಶ ಆಪ್ಟೆ (ಸಂ) : ಕಾಶ್ಯಪ ಶಿಲ್ಪ ; ೧೯೨೬ : ನಿವೇದನೆ, ಪು ೧

ಏತದನಿಷ್ಟಿಕ ಮದ್ರುಮ [ಲೋ]
ಹಮಸುಧಂ [ವಿಚಿತ್ರಚಿ]ತ್ತೇನ
ನಿರ್ಮಾಪಿತಂ ನೃಪೇ[ನ] ಬಹ್ಮೇ
ಶ್ವರ ವಿಷ್ಣು ಲಕ್ಷಿತಾಯತನಂ[4]

ಗುಹೆ ಅಥವಾ ಗವಿಗಳು ವಸತಿ ಮೂಲವೆನಿಸಿದ್ದರೂ, ಲಕ್ಷಿತಾಯತನವು ವಿಕಾಸದ ಹಾದಿಯಲ್ಲಿ ಹೊಸ ಆವಿಷ್ಕಾರವೆನಿಸಿ, ಇಟ್ಟಿಗೆ, ಮರ, ಲೋಹ ಇತ್ಯಾದಿಗಳಿಂದ ರಚಿಸಲ್ಪಡುವ ಕಟ್ಟಡ ರಚನೆಯನ್ನು ಹಿಂದಕ್ಕೆ ಹಾಕಿ, ನವನವೋನ್ಮೇಷಣೆಯಂತೆ ರಚನೆಗೊಂಡದ್ದನ್ನು ಸ್ಪಷ್ಟ ಪಡಿಸುತ್ತದೆ.

ದೇವಾಲಯಗಳು ಬೆಳೆದ ಹಾದಿಯನ್ನು ಗುರುತಿಸುವಾಗ ಗುಹಾಂತರ ಆಲಯಗಳನ್ನೂ ಗಮನಿಸಬೇಕು. ದೇವಾಲಯವನ್ನು ರಚಿಸಿದ ಸ್ಥಪತಿ ಅಥವ ಕುಶಲಕರ್ಮಿಗೆ ಯಜಮಾನನಿಂದ ಒದಗಿದ ಪ್ರೇರಣೆಯೇ ಬಹುಮುಖ್ಯ. ಯಜಮಾನನ ಆದೇಶಕ್ಕೆ ಹೆಚ್ಚು ಸ್ಪಂದಿಸುವುದರಿಂದ, ಕೆಲವೊಮ್ಮೆ ವಿಕಾಸದ ಹಾದಿ ಶೈಲಿಗಳು ಗೌಣವೆನಿಸುತ್ತದೆ. ಆದ್ದರಿಂದ ವಿಕಾಸದ ಹಾದಿಯನ್ನು ಸರಳರೇಖೆಯಲ್ಲಾಗಲಿ, ಕಾಲಾನುಕ್ರಮದಲ್ಲಾಗಲಿ ಗುರುತಿಸುವುದು ಕಷ್ಟಕ್ಕರವೆನಿಸುತ್ತದೆ. ಸರಳ ಹಾಗೂ ಸುಲಲಿತ ರಚನೆಗಳಿಂದ ಸಂಕೀರ್ಣ ಜಾತಿಯೆಡೆಗೆ ಸಾಗಿದ್ದನ್ನು ಗುರುತಿಸುವುದು ಸುಗಮವೆನಿಸುತ್ತದೆ.

ವಸತಿ ಯೋಗ್ಯವಾಸ್ತುವನ್ನು ಸೈಂಧವ ಸಂಸ್ಕೃತಿಯ ದಿನಗಳಲ್ಲಿಯೂ ಕಾಣಬಹುದಾಗಿದ್ದು, ಶಾಸ್ತ್ರ ಹಾಗೂ ಶಬ್ದ ರೂಪದಲ್ಲಿ ಈ ಮಾಹಿತಿಯ ಲಭ್ಯವಿಲ್ಲವೆನ್ನಬಹುದು. ಹರಪ್ಪ ಮತ್ತು ಮಹೆಂಜೊದಾರೋ ನಗರಗಳ ರಚನೆ, ಕಟ್ಟಡಗಳು ರಚನೆ, ಹಾದಿ ಬೀದಿಗಳು, ಜನರ ಬುದ್ಧಿ-ಮತ್ತೆಯನ್ನೂ ಲೌಕಿಕ ಜಾಣ್ಮೆಯನ್ನೂ ಧಾರಾಳವಾಗಿ ತೋರಿಸುತ್ತವೆಯಾದರೂ. ಅವುಗಳ ಪ್ರಯೋಜನ ದೃಷ್ಟಿ ಹೆಚ್ಚಾಗಿದೆಯೇ ಹೊರತು, ಜನರ ಭಾವ ಜೀವನಕ್ಕೆ ಸಂಬಂದಿಸಿದ ಅಂಶಗಳು ಕಡಿಮೆ ಎಂದು ವಿದ್ವಾಂಸರು ಗುರುತಿಸುತ್ತಾರೆ.[5]

ಮಹಾಕಾವ್ಯಗಳಲ್ಲಿ ಕ್ವಚಿತ್ತಾಗಿ ವಿವರಿಸಲ್ಪಡುವ ಹರ್ಮ್ಯ, ಸೌಧ, ರಾಜ ಗೃಹಗಳ ನಂತರ, ಭರತನ ನಾಟ್ಯ ಶಾಸ್ತ್ರದಲ್ಲಿ ದೊರಕುವ ರಂಗಮಂಟಪ ರಚನೆ, ಶಾಸ್ತ್ರೀಯ ದೃಷ್ಟಿಯ ಮೊದಲ ವಾಸ್ತು ವಿವರಣೆ ಎನ್ನಬಹುದು.

ದೇವಾಲಯ ರಚನೆ, ಅರಮನೆ ಅಥವಾ ರಾಜ ಗೃಹ ರಚನೆ, ದೇವತಾಮೂರ್ತಿ ರಚನೆ, ಸರ್ವಜನೋಪಯೋಗಿ ಗೃಹಗಳು, ಬಾವಿ, ಪುಷ್ಕರಿಣಿಗಳ ರಚನೆ ಇತ್ಯಾದಿಗಳನ್ನು ಶುಕ್ರನೀತಿ ಗ್ರಂಥವು ಶಿಲ್ಪಶಾಸ್ತ್ರದಡಿಯಲ್ಲಿ ಗುರುತಿಸುತ್ತದೆ. ಕೆರೆಗಳ ನಿರ್ಮಾಣ ಬಾವಿಗಳ ತೋಡಿಸುವಿಕೆ, ದೇವಾಲಯ ನಿರ್ಮಾಣ ಮುಂತಾದವು.

ಪ್ರಾಚೀನ ಸಮಾಜದಲ್ಲಿ ಉಳ್ಳವರು ಕೈಗೊಳ್ಳಬೇಕಾದ, ಸತ್ಕಾರ್ಯವೆಂದೂ ಕರ್ತವ್ಯವೆಂದೂ ಭಾವಿಸಲಾಗುತ್ತಿತ್ತು. ದೇಶದ ಉದ್ದಗಲಕ್ಕೂ ಕಂಡುಬರುವ ಗುಡಿಗೋಪುರಗಳ ನಿರ್ಮಾಣಕ್ಕೆ ಹಿನ್ನೆಲೆಯಾಗಿರುವ ಈ ಸಮಾಜಿಕ ವ್ಯವಸ್ಥೆಯನ್ನು ಶಾಸನಗಳೂ ಸತ್ವಪೂರ್ಣವಾಗಿ ಚಿತ್ರಿಸಿವೆ. ಪ್ರಾಚೀನಕಾಲದ ನಿರ್ಮಾಣಗಳಲ್ಲಿ ಇಂದು ಅಳಿದುಳಿದಿರುವುದು ಗುಡಿಗೋಪುರಗಳೇ. ಇವು ಕಲಾ ಮೌಲ್ಯದಿಂದ ಕೂಡಿದ್ದು ಸಾಂಸ್ಕೃತಿಕ ವಾಸ್ತು ಎನ್ನಿಸಿವೆ. ವಾಸ್ತು ಶಾಸ್ತ್ರಗಳು ತಮ್ಮ ಗ್ರಂಥ ವಿವರಗಳಲ್ಲಿ ದೇವಾಲಯ ರಚನ್ನೆಯನ್ನೆ ಪ್ರಮುಖವಾಗಿ ವಿವರಿಸಿದ್ದು ದೇವಾಲಯ ರಚನೆಯೇ ವಾಸ್ತು ಶಾಸ್ತ್ರವೆನ್ನಿಸಿದೆ. ಇದನ್ನೇ ವಾಸ್ತು ವಿದ್ಯೆಯೆಂದೂ ವಾಸ್ತು ಶಿಲ್ಪವೆಂದೂ ಪರ್ಯಾಯವಾಗಿ ಗುರುತಿಸುವುದುಂಟು. ಚತುಷಷ್ಠಿ ಕಲೆಗಳ ವಿವರಣೆಯಲ್ಲಿ ವಾಸ್ತು ವಿದ್ಯೆಯೂ, ದಾರುಕರ್ಮವೂ ಗುರುತಿಸಲ್ಪಟ್ಟಿದೆ. ಭರತನ ನಾಟ್ಯ ಶಾಸ್ತ್ರದಲ್ಲಿ ಮಂಟಪ ರಚನೆಯೊಂದಿಗೆ, ದಾರು ಕರ್ಮವೂ ವಿವರಿಸಲ್ಪಟ್ಟಿದೆ.

ವಾಸ್ತು ಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದಕೋಶದ ಮುನ್ನುಡಿಯಲ್ಲಿ ಡಾ|| ಪಿ.ಕೆ. ಆಚಾರ್ಯರು ವಸ್ತು ಶಾಸ್ತ್ರ ಹಾಗೂ ಶಿಲ್ಪಶಾಸ್ತ್ರ ಪದಗಳನ್ನು ಪರ್ಯಾಯ ಪದಗಳೆಂಬಂತೆ ಬಳಸಿದ್ದಾರೆ. ಶುಕ್ರನೀತಿ ಗ್ರಂಥವು ವಾಸ್ತು ಹಾಗೂ ಮೂರ್ತಿ ರಚನೆಯನ್ನು ಶಿಲ್ಪಶಾಸ್ತ್ರದಡಿಯಲ್ಲಿ

4 ಕೆ.ಆರ್. ಶ್ರೀನಿವಾಸನ್ : ಕೇವ್ ಟೆಂಪಲ್ಸ್ ಆಫ್ ದಿ ಪಲ್ಲವಾಸ್, ನವದೆಹಲಿ, ೧೯೬೪, ಪು. ೪೭ (ಮಹೇಂದ್ರ ವರ್ಮನ್-ಕ್ರಿ.ಶ. ೫೮೦-೬೩೦)

5 ಕೆ. ಶಿವರಾಮಕಾರಂತ, ಭಾರತೀಯ ಶಿಲ್ಪ, ಬೆಂಗಳೂರು ವಿ.ವಿ., ೧೯೭೫, ಪು. ೧೩

ಗುರುತಿಸುತ್ತದೆ. ವಾಸ್ತು ಹಾಗೂ ಶಿಲ್ಪ ಪದಗಳು ಖಚಿತಾರ್ಥಗಳನ್ನೊಳಗೊಂಡಿದ್ದು ಅಧ್ಯಯನ ದೃಷ್ಟಿಯಿಂದ ಖಚಿತವಾಗಿ ಬಳಸಬೇಕಾಗಿದೆ. ನಾಟ್ಯಶಾಸ್ತ್ರದ ಆರಂಭದಲ್ಲಿ ಭರತನು ನಾಟ್ಯಶಾಸ್ತ್ರವನ್ನು ಸರ್ವಶಿಲ್ಪ ಪ್ರವರ್ತಕ ಎಂದು ಕರೆದಿದ್ದಾನೆ.

ಸರ್ವಶಾಸ್ತ್ರಾರ್ಥ ಸಂಪನ್ನಂ ಸರ್ವಶಿಲ್ಪ
ಪ್ರವರ್ತಕ,
ನಾಟ್ಯಾಖ್ಯಂ ಪಂಚಮಂ ವೇದಂ ಸೇತಿಹಾಸಂ
ಕರೋಮ್ಯಹಂ[6]

ನಾಟ್ಯಕ್ಕೆ ಸಂಬಂಧಿಸಿದಂತೆ ಶಾಸ್ತ್ರ ಹಾಗೂ ಶಿಲ್ಪ ಎಂದು ಪ್ರತ್ಯೇಕವಾಗಿ ಗುರುತಿಸಿದ್ದನ್ನು ಕಾಣಬಹುದು.

ರಸ, ಭಾವ, ಲೋಕ ಧರ್ಮ ಇತ್ಯಾದಿಗಳು ಶಾಸ್ತ್ರವೆಂದೂ, ನೃತ್ಯ, ಗಾನ ರಂಗಮಂಟಪ ರಚನೆ ಇತ್ಯಾದಿಗಳು ಶಿಲ್ಪವೆಂದೂ ಗಮನಿಸಬಹುದು. ಶಾಸ್ತ್ರ ಹಾಗೂ ಶಿಲ್ಪವನ್ನು ಈ ರೀತಿ ಪ್ರತ್ಯೇಕಗೊಳಿಸಿದ್ದನ್ನು ಹಲವೆಡೆಗಳಲ್ಲಿ ಕಾಣಬಹುದು. ಶಾಸ್ತ್ರಕ್ಕೆ ಜ್ಞಾನವೆನ್ನುವ ಪದವನ್ನು ಪರ್ಯಾಯವಾಗಿ ಬಳಸಿದ್ದನ್ನು ಕಾಣಬಹುದು.

ನತಜ್ಞಾನಂ ನತಚ್ಛಿಲ್ಪಂ ನಸಾ ವಿದ್ಯಾ ನಸಾ
ಕಲಾ
ನಾಸೌ ಯೋಗೋ ನತತ್ಕರ್ಮ ನಾಟ್ಯೇsಸ್ಮಿನ್ ಯನ್ನದೃಶ್ಯತೇ
ಸರ್ವ ಶಾಸ್ತ್ರಾಣಿ ಶಿಲ್ಪಾನಿ ಕರ್ಮಾಣಿ
ವಿವಿಧಾನಿಚ
ಅಸ್ಮಿನ್ ನಾಟ್ಯೇ ಸಮೇತಾನಿ ತಸ್ಮಾದೇತನ್ಮ
ಯಾಕೃತಂ[7]

ಭಾರತೀಯ ವಾಸ್ತು, ಮೂರ್ತಿ, ಚಿತ್ರಕಲೆಗಳ ಅಧ್ಯಯನದಲ್ಲಿ ಸಂಬಂಧಪಟ್ಟ ಪ್ರಾಚೀನ ಶಾಸ್ತ್ರ ಗ್ರಂಥಗಳನ್ನೂ ಶಿಲ್ಪಶಾಸ್ತ್ರವೆಂದೇ ಗುರುತಿಸುವುದುಂಟು. ಕೆಲವೊಮ್ಮೆ ಶಿಲ್ಪಶಾಸ್ತ್ರವೆಂದಲ್ಲಿ ಮೂರ್ತಿ ಅಥವಾ ಪ್ರತಿಮೆಗಳ ಲಕ್ಷಣಗಳು, ರಚನೆ, ತಾಳಮಾನಗಳನ್ನು ಗುರುತಿಸುವುದುಂಟು. ಪ್ರೊ॥ ಫಣೀಂದ್ರನಾಥ್ ಬೋಸ್‌ರವರು "ಭಾರತೀಯ ಶಿಲ್ಪಶಾಸ್ತ್ರದ ಮೂಲ ತತ್ವ"ಗಳನ್ನು[8] ಗುರುತಿಸುವಾಗ ಶಿಲ್ಪಶಾಸ್ತ್ರ ಪದವನ್ನು ಎರಡು ರೀತಿಯ ಅರ್ಥಗಳಲ್ಲಿಯೂ ಬಳಸಿದ್ದಾರೆ.

ಶಿಲ್ಪವೆನ್ನುವ ಪದದ ಅರ್ಥ ಮೂರ್ತಿಶಿಲ್ಪವೆಂದೇ ರೂಢಿಗತವಾಗಿದ್ದರೂ ಪರಂಪರೆಯಿಂದ ಬಂದ ಖಚಿತಾರ್ಥವನ್ನು ಗಮನಿಸಬಹುದು. "ಶಿಲ್ಪಂ ಕರ್ಮ ಕಲಾಧಿಕಂ" ಇದು ಅಮರಕೋಶದ ವಿವರಣೆ. ಶಿಲ್ಪವು ಕರ್ತೃವಿನ ಅಧಿಕ ಕೌಶಲ್ಯವನ್ನೊಳಗೊಂಡ ಕರ್ಮ ಅಥವಾ ಕ್ರಿಯೆ. ಇದನ್ನು ತಾಂತ್ರಿಕ ಪರಿಣಿತಿಯುಳ್ಳದ್ದು ಎಂದು ಗುರುತಿಸಬಹುದಾಗಿದೆ.

"ಶಿಲ್ಪ ಶಬ್ದಸ್ತು ಶೀಲ ಸಮಾಧೌ ಇತಿ
ಧಾತೋರ್ಮರಸಃ

ಸಮಾಧಾನ ಕಾರಕಂ ವಸ್ತು ಜಾತಮಿತಿ"[9]

ಶಿಲ್ಪ ಶಬ್ದದ ವ್ಯುತ್ಪತ್ತಿಯು, ಮನಸ್ಸಿಗೆ ಸಮಾಧಾನವನ್ನುಂಟು ಮಾಡುವ ಭಾವವನ್ನೊಳಗೊಂಡಿದ್ದು, ಕಲೆಯ ದೃಷ್ಟಿಯ ವಿವರಣೆಯನ್ನೂ ಪ್ರತಿಬಿಂಬಿಸುತ್ತದೆ.

ಸದಭಿರುಚಿಯಿಂದ ಕೂಡಿದ್ದು, ಸೌಂದರ್ಯಾನುಭವವನ್ನುಂಟುಮಾಡುವ ಕ್ರೀಯೆಯು ಕಲೆ ಎನಿಸುತ್ತದೆ. ಇದನ್ನೇ ಶಿಲ್ಪವೆಂದೂ "ಕರ್ಮ ಕಲಾಧಿಕ್ಯ"ವೆಂದೂ ಅಮರ ಸಿಂಹನು ಗುರುತಿಸಿದ್ದಾನೆ.

ಈಗ ವಾಸ್ತುಶಾಸ್ತ್ರ, ವಾಸ್ತು ಶಿಲ್ಪಗಳನ್ನು ಸುಲಭವಾಗಿ ಅರ್ಥೈಸಬಹುದು. ವಾಸ್ತುವಿಗೆ ಸಂಬಂಧಿಸಿದ ಮೂಲಸಿದ್ಧಾಂತಗಳನ್ನು ಗುರುತಿಸುವುದೇ ವಾಸ್ತು ಶಾಸ್ತ್ರ. ವಾಸ್ತು ಶಿಲ್ಪವೆಂದಲ್ಲಿ ತಾಂತ್ರಿಕ ಪರಿಣಿತಿಯುಳ್ಳ

6 ಕೆ.ಎಲ್. ನರಸಿಂಹಶಾಸ್ತ್ರಿ, (ಅನು) : ನಾಟ್ಯಶಾಸ್ತ್ರ, ಬೆಂಗಳೂರು, ೧೯೭೭; ಅ. ೧, ಶ್ಲೋ. ೧೫, ಪು. ೩
7 ಅದೇ, ಅ ೧, ಶ್ಲೋ. ೧೧೭,೧೧೮, ಪು. ೨೨
8 ಪ್ರಿನ್ಸಿಪಲ್ಸ್ ಆಫ್ ಇಂಡಿಯನ್ ಶಿಲ್ಪಶಾಸ್ತ್ರ, ದೆಹಲಿ, ೧೯೭೯, ಪು. ೮
9 ಕಾಶ್ಯಪ ಶಿಲ್ಪ, ಉಪೋದ್ಘಾತ, ಪು. ೨

ಭಾವ ಸಂಬಂಧವೂ ಕೂಡಿದ ಸಾಂಸ್ಕೃತಿಕ ವಾಸ್ತುವಿವರಗಳು ಪ್ರಧಾನವಾಗುತ್ತದೆ. ಸಾಂಸ್ಕೃತಿಕ ವಾಸ್ತುವೆನ್ನುವಲ್ಲಿ ದೇವಾಲಯ ವಾಸ್ತುವನ್ನು ಪ್ರಮುಖವಾಗಿ ಗುರುತಿಸಬಹುದು. ಇದರಿಂದಾಗಿ ದೇವಾಲಯ ವಾಸ್ತು, ಪ್ರತಿಮಾ ಲಕ್ಷಣ, ಚಿತ್ರರಚನೆಗೆ ಸಂಬಂಧಿಸಿದ ಶಾಸ್ತ್ರಿಯ ಬರಹಗಳು, ಗ್ರಂಥಗಳು ಶಿಲ್ಪಶಾಸ್ತ್ರವೆನ್ನಿಸಿದೆ. ಶಿಲ್ಪಶಾಸ್ತ್ರವು ಇಷ್ಟಕ್ಕೇ ಸೀಮಿತವಾಗಿಲ್ಲ. ಪ್ರತಿಯೊಂದು ತಾಂತ್ರಿಕ ವಿದ್ಯೆಯನ್ನೂ ಶಿಲ್ಪಶಾಸ್ತ್ರವೆನ್ನಬಹುದಾಗಿದೆ.

ವಿಜ್ಞಾನಕ್ಕೆ ಸಂಬಂಧಿಸಿದಂತೆ Science ಮತ್ತು tecnology ಎರಡೂ ಪದಗಳು ಬಳಕೆಯಲ್ಲಿದೆಯಷ್ಟೆ. ಶಾಸ್ತ್ರ ಹಾಗೂ ಶಿಲ್ಪ ಪದಗಳು ಕ್ರಮವಾಗಿ ಈ ಅರ್ಥವನ್ನೂ ಧ್ವನಿಸುವುದನ್ನು ಕಾಣಬಹುದು. ಭೃಗುವಿನ ಶಿಲ್ಪ ಲಕ್ಷಣದ ವಿವರಣೆಯನ್ನು ಶ್ರೀಧರಭಾಸ್ಕರ ವರ್ಣೇಕರ್‌ರವರು ಗುರುತಿಸಿದ್ದಾರೆ.

ನಾನಾ ವಿಧಾನ ವಾಸ್ತೂನಾಂ ಯಂತ್ರಾಣಾಂ
ಕಲ್ಪ ಸಂಪದಾಂ
ಧಾತೂ ನಾಂ ಸಾಧನಾಂಚ ವಾಸ್ತೂನಾಂ
ಶಿಲ್ಪ ಸಂಜ್ಞಿತಂ[10]

ಶಿಲ್ಪ ಸಂಬಂಧೀ ಶಾಸ್ತ್ರಗಳು ವೈವಿಧ್ಯತೆಯನ್ನು ತಿಳಿಯಲೋಸುಗ, ವಿದ್ವಾಂಸರು ನೀಡಿರುವ ಪಟ್ಟಿಯನ್ನು ಯಥಾವತ್ತಾಗಿ ಗುರುತಿಸಲಾಗಿದೆ :




ಅಪರಾಜಿತ ಪೃಚ್ಛಾ ಗ್ರಂಥವು ವಾಸ್ತುಶಾಸ್ತ್ರವೆನಿಸಿದ್ದು, ಧಾರಾಗೃಹ, ಕ್ರೀಡಾಗೃಹ, ಉದ್ಯಾನ, ವಿಹಾರ ಭೂಮಿ, ಕ್ರೀಡಾಭೂಮಿ, ಜಲೋದ್ಯಾನ, ಜಲವೇಶ್ಮ, ಲತಾಗೃಹ, ಲತಾಮಂಟಪ, ವಾಪಿ, ಕೂಪ, ತಟಾಕ ಜಲಾಶಯ ಮುಂತಾದವನ್ನು ಹೆಸರಿಸಿದೆ. ಅಶ್ವಶಾಲಾ, ಗಜಶಾಲಾ, ರಾಜಗೃಹ, ಏಕಶಾಲಾ, ದ್ವಿಶಾಲಾ, ತ್ರಿಶಾಲಾ, ಚತುಶ್ಶಾಲಾ ಹಾಗೂ ದೇವಾಲಯಗಳ ಶೈಲಿಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಅಧ್ಯಾಯಗಳಿವೆ. ಈ ಗ್ರಂಥದಲ್ಲಿ ಪ್ರಾಸಾದ ರಚನೆಯೂ, ಪ್ರತಿಮಾ ಲಕ್ಷಣವೂ, ಔತ್ತರೇಯ ಸಂಪ್ರದಾಯದ ವಿವಿಧ ಶೈಲಿಗಳೂ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ.

10 ಬಿ.ಎಸ್. ಕೃಷ್ಣರಾವ್ (ಅನು) : ಭಾರತೀಯವಿದ್ಯೆ, ಬೆಂಗಳೂರು, ೧೯೮೭, ಪು. ೧೨೧ (ನೆರವು : ಕ.ವೆಂ. ರಾಜಗೋಪಾಲ)

ಪ್ರಾಚೀನ ಭಾರತದಲ್ಲಿ ದೇವಾಲಯಗಳು ಸಾಮಾಜಿಕ ಸಂಸ್ಥೆಗಳಾಗಿದ್ದು ಸಾಂಸ್ಕೃತಿಕ ಕೇಂದ್ರಗಳಾಗಿಯೂ ಬೆಳೆದಿದ್ದವು. ಈ ವ್ಯವಸ್ಥೆಯನ್ನು ಕಾಪಾಡುವಲ್ಲಿ ಸಾರ್ವಜನಿಕರೂ ಸಹಕರಿಸುತ್ತಿದ್ದರು. ಇದು ದೇವಾಲಯ-ಗಳ ಬೆಳವಣಿಗೆಗೆ ಕಾರಣವಾಯಿತೆನ್ನಬಹುದು. ಶತ ಶತಮಾನಗಳ ಇತಿಹಾಸವುಳ್ಳ ಈ ದೇವಾಲಯಗಳು ಕಲಾತ್ಮಕವಾಗಿಯೂ ಬೆಳೆದು ಹಲವಾರು ಶೈಲಿ ಸಂಪ್ರದಾಯಗಳನ್ನು ಸೃಷ್ಟಿಸಿತು.

ಭಾರತದಲ್ಲಿ ಕಾಲಿರಿಸಿದ್ದ ಪಾಶ್ಚಾತ್ಯರಿಗೆ ಇಲ್ಲಿಯ ಕಲಾಪೂರ್ಣ ಸಂಪತ್ತು ಅಚ್ಚರಿ ಮೂಡಿಸಿದ್ದು, ಇವುಗಳ ವಸ್ತುನಿಷ್ಠ ಅಧ್ಯಯನಕ್ಕೆ ಪ್ರೇರಣೆ ದೊರೆಯಿತು. ಈ ರೀತಿಯಲ್ಲಿ ದೇವಾಲಯಗಳ ಅಧ್ಯಯನವು ಹತ್ತೊಂಬ-ತ್ತನೇ ಶತಮಾನದ ಮೊದಲ ದಶಕಗಳಲ್ಲಿ ಆರಂಭಗೊಂಡಿತು. ದೇವಾಲಯ ವಾಸ್ತುವಿಗೆ ಸಂಬಧಿಸಿದ ಶಾಸ್ತ್ರೀಯ ಅಧ್ಯಯನ ಕೈಗೊಂಡ ಭಾರತೀಯರಲ್ಲಿ ರಾಂರಾಜ್ ಮೊದಲಿಗರು. ಹಿಂದೂ ದೇವಾಲಯಗಳನ್ನು ಕುರಿತ ಪ್ರಬಂಧವೊಂದನ್ನು ಸಿದ್ಧಪಡಿಸಿದ್ದು, ಕಾರ್ಯವ್ಯಾಪ್ತಿಯ ಬಗ್ಗೆ ಹೀಗೆ ನುಡಿಯುತ್ತಾರೆ: "I only Propose to write a short but Comprehensive essay on Indian architecture from the materials. I may be able to collect ; to which I shall Perhaps add some descriptions of a few temples and Porticos, Principally taken from the Carnatic with corresponding designs."[11]

ಮೇಲ್ಕಂಡ ಸಾಲುಗಳು ರಾಂರಾಜ್‌ರವರು ರಿಚರ್ಡ್‌ಕ್ಲಾರ್ಕ್ ಮಹಾಶಯನಿಗೆ ೧೮೩೧ರಲ್ಲಿ ಬರೆದ ಪತ್ರದ ಒಕ್ಕಣೆಯಾಗಿದೆ. ರಾಂರಾಜ್‌ರವರು ತಮ್ಮ ಜೀವಿತದ ಕೊನೆಯ ದಿನಗಳಲ್ಲಿ ಬ್ರಿಟಿಷ್ ಸರ್ಕಾರದ ಸೇವೆಯಲ್ಲಿ ಬೆಂಗಳೂರಿನಲ್ಲಿ ನೇಟಿವ್ ಜಡ್ಜ್ ಹಾಗೂ ಮ್ಯಾಜಿಸ್ಟ್ರೇಟರಾಗಿ ಕಾರ್ಯನಿರ್ವಹಿಸುತ್ತಿದ್ದರು. ಇವರ ಪ್ರಬಂಧದ ವಿವರಣೆಗಳು ದಾಕ್ಷಿಣಾತ್ಯ ಸಂಪ್ರದಾಯದ ದೇವಾಲಯಗಳಿಗೆ ಸಂಬಂಧಿಸಿದ್ದು, ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ ಕರ್ನಾಟಕ ಜಿಲ್ಲೆಗಳಿಂದ ಉದಾಹರಿಸಿರುವುದನ್ನು ಕಾಣಬಹುದು. ರಾಂರಾಜ್‌ರವರ ಅಧ್ಯಯನದ ರೀತಿ ನೀತಿಗಳು ಇಂದಿಗೂ ಆಚರಣೀಯವಾಗಿದೆ. ಅವರು ಅನುಸರಿಸಿದ ಹಾದಿ ಮುಂದಿನ ಸಾಲುಗಳಿಂದ ವ್ಯಕ್ತಗೊಳ್ಳುವುದು : "To Collect these remains from far and near ; to read collect and Comprehend them, with the terms and phrasiology of the science, was no ordinary undertaking ; the assistance of the artist on the one hand' of philologists on the other ; Corraboration by reference to existing edifices, and the ability to exhibit the result at length deduced in the technical and scientific language...."[12]

ಹತ್ತೊಂಬತ್ತನೇ ಶತಮಾನದಲ್ಲಿ ಭಾರತೀಯ ಭಾಷೆ, ಸಾಹಿತ್ಯ, ಚರಿತ್ರೆ, ಸಂಸ್ಕೃತಿ ಇತ್ಯಾದಿ ವಿಷಯಗಳಲ್ಲಿ ಪಾಶ್ಚಾತ್ಯರು ಅಧ್ಯಯನ ಆರಂಭಿಸಿದ್ದು, ಅಂದು ಆಳುತ್ತಿದ್ದ ಅರಸರ ಪ್ರತಿನಿಧಿಗಳಿಂದಲೂ ಪ್ರೋತ್ಸಾಹವಿತ್ತು. ಕ್ರಿಸ್ತಶಕ ೧೮೬೨ರಲ್ಲಿ ಭಾರತದ ಗೌರ್ನರ್ ಜನರಲ್ ಅಗಿದ್ದ ಲಾರ್ಡ್ ಕನ್ನಿಂಗ್ ಮಹಾಶಯನು ಭಾರತೀಯ ಪ್ರಾಚೀನ ಅವಶೇಷಗಳನ್ನು ಮುಂದಿನ ಪೀಳಿಗೆಯ ಸಲುವಾಗಿ ರಕ್ಷಿಸುವ ಅಥವಾ ದಾಖಲಿಸುವ ಅವಶ್ಯಕತೆಯನ್ನು ಮನಗಂಡು ಕೈಗೊಳ್ಳಬೇಕಾದ ಕಾರ್ಯ ವ್ಯಾಪ್ತಿಯನ್ನು ಸ್ಪಷ್ಟವಾಗಿ ಗುರುತಿಸಿದ್ದಾನೆ :

"What is aimed at is an accurate description illustrated by plan, measurements drawings and photographs, and by copies of inscriptions, of such remains as most deserve notice with the history of them so far as they may be traceable and a record of traditions that

---

11 ಎಸ್ಸೆ ಆನ್ ದಿ ಆರ್ಕಿಟೆಕ್ಚರ್ ಆಫ್ ಹಿಂದೂಸ್, ವಾರಣಾಸಿ, ೧೯೭೨, ಪು. xiv
12 ಅದೇ, ಪು. v

# ಒಪ್ಪೋಲೆ

| ಪುಟ | ತಪ್ಪು | ಸರಿ |
|---|---|---|
| ೫೨ | ವಾಸ್ತುನಿ | ವಾಸ್ತೂನಿ |
| | ಪ್ರಾಣಿನೋತೇತಿ | ಪ್ರಾಣಿನೋತ್ರೇತಿ |
| | ಮಂಡನ ಪಟ್ಟು | ಮಂದಗ ಪಟ್ಟು |
| ಅಡಿಟಿಪ್ಪಣಿ | ಅಷ್ಟೆ | ಅಪ್ಟೆ |
| ೫೪ | ವಸ್ತು ಶಾಸ್ತ್ರ | ವಾಸ್ತು ಶಾಸ್ತ್ರ |
| ೫೫ | ಅಡಿ ಟಿಪ್ಪಣಿ 8 ಎಂದು ಗುರುತಿಸಬೇಕು | |
| | ಧಾತೋರ್ಮರಸಃ | ಧಾತೋರ್ಮನಸಃ |
| ೫೬ | ಲಾರ್ಡ್ ಕನ್ನಿನ್ | ಲಾರ್ಡ್ ಕನ್ನಿಂಗ್ |
| ೫೭ | ಸ್ಟೆಲ್ಲಾ ಕ್ರೂರಿಜ್ | ಸ್ಟೆಲ್ಲಾ ಕ್ರಾಂರಿಚ್ |
| | ಸ್ಥಾಪಯೇತ್ ಸ್ಥಿರಂ | ಸ್ಥಾಪಯೇತ್ ಸ್ಥಿರಂ8 |
| | ನಿಷ್ಪೋನನೋ ಭವೇತ್ | ನಿಷ್ಪೋನರೋ ಭವೇತ್ |
| ೫೮ | ಗರ್ಭ ದೇಹಂ | ಗರ್ಭಗೇಹಂ |
| | ನಾನಿಕಾ | ನಾಸಿಕಾ |
| ಅಡಿ ಟಿಪ್ಪಣಿ | ಆಸವಾರಿ | ಆಸೂರಿ |

are preserved regarding them, Further that of investigating and placing on record, for the instruction of future generation....''[13]

ಜೇಮ್ಸ್ ಫರ್ಗ್ಯುಸನ್‌ರವರ ಹಿಸ್ಟರಿ ಆಫ್ ಇಂಡಿಯನ್ ಅಂಡ್ ಇಂಡೋನೇಷಿಯನ್ ಆರ್ಕಿಟೆಕ್ಚರ್ ಪ್ರಕಟವಾದದ್ದು ೧೮೭೬ರಲ್ಲಿ. ಈ ಗ್ರಂಥವು ಪ್ರಾಚೀನ ಭಾರತದ ವಾಸ್ತು ಶೈಲಿಗಳ ಸಮಗ್ರ ನೋಟವನ್ನು ಒದಗಿಸಿದ್ದು, ಈ ರೀತಿಯ ಅಧ್ಯಯನ ಮುಂದುವರೆಯಲು ನಾಂದಿಯಾಯಿತು. ಫರ್ಗ್ಯುಸನ್ ಆರಂಭಿಸಿದ ವಸ್ತುನಿಷ್ಠ ಅಧ್ಯಯನವನ್ನು ಹೆನ್ರಿಕಜಿನ್ಸ್, ಜೇಮ್ಸ್ ಬರ್ಗೆಸ್, ಪರ್ಸಿಬ್ರೌನ್, ಬೆಂಜಮಿನ್ ರೋಲಾಂಡ್, ಜೆ. ಸಿ. ಹರ್ಲೆ ಮುಂತಾದವರು ಮುಂದುವರೆಸಿದರು.

ರಾಂರಾಜ್ ಕೈಗೊಂಡ ಅಧ್ಯಯನ ಮಾದರಿಯನ್ನು ಸ್ಟೆಲ್ಲಾ ಕ್ರೂರಿಜ್‌ರವರು ಮುಂದುವರೆಸಿದರು. ಪ್ರಾಚೀನ ವಾಸ್ತು ಶಾಸ್ತ್ರಗಳನ್ನು ಗುರುತಿಸಿ, ಅವುಗಳ ನೆರವಿನಿಂದ ದೇವಾಲಯ ವಾಸ್ತುವನ್ನು ಗುರುತಿಸುವ ಕಾರ್ಯ ನಡೆಯಿತು. ಮತ್ತಷ್ಟು ದೇಶೀಯ ವಿದ್ವಾಂಸರು ಅಧ್ಯಯನ ಕಾರ್ಯವನ್ನು ಮುಂದುವರೆಸಿದ್ದು ಕೆ. ಆರ್. ಶ್ರೀನಿವಾಸನ್, ಟಿ. ವಿ. ಮಹಾಲಿಂಗಂ, ಕೆ. ವಿ. ಸೌಂದರರಾಜನ್ ಮುಂತಾದವರು ದಾಕ್ಷಿಣಾತ್ಯ ದೇವಾಲಯಗಳನ್ನು ಶಾಸ್ತ್ರರೀತ್ಯಾ ಗುರುತಿಸಿದರು. ಪಿ. ಕೆ. ಆಚಾರ್ಯರವರಿಂದ ಮಾನಸಾರ ಗ್ರಂಥದ ವ್ಯವಸ್ಥಿತ ಅಧ್ಯಯನವೂ ಪ್ರಕಟಗೊಂಡಿತು. ಕೆಲವು ದೇಶೀಯ ವಿದ್ವಾಂಸರು ಚೈತ್ರೇಯ ಸಂಪ್ರದಾಯದ ಗ್ರಂಥಗಳನ್ನು ಟೀಕೆ, ಟಿಪ್ಪಣಿಗಳೊಂದಿಗೆ ಪ್ರಕಟಪಡಿಸಿದರು. ಇವರಲ್ಲಿ ಗುಜರಾತಿನ ಪಿ. ವಿ. ಸೋಂಪುರ ಪ್ರಮುಖರು. ಹೆಚ್ಚಿನ ದೇಶೀಯ ವಿದ್ವಾಂಸರುಗಳಿಗೆ ಪ್ರಾದೇಶಿಕ ಶೈಲಿಗಳೇ ಮಹತ್ವದ್ದೆನಿಸಿದ್ದು, ಭಾರತೀಯ ದೇವಾಲಯಗಳ ವಾಸ್ತುವನ್ನು ಸಮಗ್ರವಾಗಿ ಅವಲೋಕಿಸಿದ್ದು ಕಡಿಮೆಯೆಂದೇ ಹೇಳಬಹುದು.

ನಮ್ಮ ಪ್ರಾಚೀನ ವಾಸ್ತು ಗ್ರಂಥಗಳಂತೆ ವಿಟ್ರೂವಿಯಸ್ ರಚಿಸಿದ ವಾಸ್ತು ಗ್ರಂಥವು ಪಾಶ್ಚಾತ್ಯರಿಗೊಂದು ದಾರಿದೀಪ. ದೇಶಕೋಶಗಳು ವಿಭಿನ್ನವಾದರೂ ವಿಟ್ರೂವಿಯಸ್ ಗುರುತಿಸುವ ವಿಚಾರಗಳು ಆದರಣೀಯ.

"ಸ್ಥಪತಿಃ ಸ್ಥಾಪಯೇತ್ ಸ್ಥಿರಂ"

ಇದು ಮಯಮತೋಕ್ತಿ[14]

ಈ ಒಕ್ಕಣೆಯಲ್ಲಿ ವಾಸ್ತು ಸ್ವರೂಪವೂ, ಸ್ಥಪತಿಯ ಕರ್ತವ್ಯವೂ ಗುರುತಿಸಲ್ಪಟ್ಟಿದೆ. ಸ್ಥಪತಿಯಿಂದ ರಚಿಸಲ್ಪಟ್ಟಿದ್ದು ಸರ್ವಕಾಲಿಕ ಮೌಲ್ಯವುಳ್ಳದ್ದಾಗಿರಬೇಕು ಎಂಬ ಧ್ವನಿಯನ್ನು ಈ ಮೂಲದಲ್ಲಿ ಕಾಣಬಹುದು.

ಲಕ್ಷ್ಯಲಕ್ಷಣಾಯುಕ್ತಾರ್ಥೆ ಶಾಸ್ತ್ರ

ನಿಷ್ಪ್ರೋನಮೋ ಭವೇತ್[15]

ಎಂದು ಸಮರಾಂಗಣ ಸೂತ್ರಧಾರ ಗ್ರಂಥದಲ್ಲಿ ಸ್ಥಪತಿಯು ಗುರುತಿಸಲ್ಪಡುತ್ತಾನೆ. ಈ ಗ್ರಂಥದ ಪ್ರಕಾರ, ಸಾಮುದ್ರ, ಗಣಿತ, ಜ್ಯೋತಿಷ್ಯ, ಛಂದ(ಸ್ಸು ?), ಶಿಲ್ಪ ಇತ್ಯಾದಿಗಳು ಇವನಿಗೆ ಅವಶ್ಯಕವಾಗಿ ತಿಳಿದಿರಬೇಕು. ವಿಟ್ರೂವಿಯಸ್ಸನ ಪ್ರಕಾರ, ವಾಸ್ತುರಚನಾಕಾರ (Architect) ನಿಗೆ, ಇತಿಹಾಸ, ತತ್ವಶಾಸ್ತ್ರ, ಸಂಗೀತ, ಔಷಧಿ ಶಾಸ್ತ್ರಾದಿಗಳೂ ತಿಳಿದಿರಬೇಕು.[16]

'Architect' ಎಂದಲ್ಲಿ ವಾಸ್ತು ಶಿಲ್ಪಿಯೇ. ಶಿಲ್ಪಿ ಎಂದಲ್ಲಿ ತಂತ್ರಜ್ಞಾನದಲ್ಲಿ ಪರಿಣಿತಿಯುಳ್ಳವನು. ತಂತ್ರಜ್ಞಾನ ಅಥವಾ ತಾಂತ್ರಿಕ ವಿದ್ಯೆ ಮತ್ತು ಪರಿಣಿತಿಗಳನ್ನು ವಿಶ್ಲೇಷಿಸುವಾಗ, ಶಾಸ್ತ್ರ ಮತ್ತು ತಂತ್ರಗಳ ನಡುವಣ ಅಂತರ ಕೆಲವೊಮ್ಮೆ ಕೂದಲೆಳೆಯಷ್ಟಾಗುವುದುಂಟು. ಇವೆರಡೂ ಪರಸ್ಪರ ಪೂರಕವೂ ಹೌದು. ಈ ದಿಸೆಯಲ್ಲಿ ವಿಶೇಷವಾಗಿ ಗುರುತಿಸುವ ವಿಟ್ರೂವಿಯಸ್ಸನ ವಿವರಣೆಯನ್ನು ನೋಡೋಣ: "Knowledge is the child of practice and theory. Practice is the continuous and regular excercise of employment where manual

---

13. ಮುಲ್ಕರಾಜ್ ಆನಂದ್ (ಸಂ.): ಇನ್‌ಪ್ರೆಸ್ ಆಫ್ ಐಹೊಳೆ, ಬಾದಾಮಿ, ಮಹಾಕೂಟ, ಪಟ್ಟದಕಲ್, ಮಾರ್ಗ್ ಸಂಪುಟ, ೧೯೭೮; ಜಾಹೀರಾತು ಪುಟಗಳ ಆರಂಭ.
14. ಬ್ರೂನೋ ಡಗೆನ್ಸ್ (ಅನು): ಮಯಮತ, ನವದೆಹಲಿ, ೧೯೮೫ ಪು. x
15. ವಿ.ಎಸ್. ಅಗರ್‌ವಾಲ್ (ಸಂ.); ಸಮರಾಂಗಣ ಸೂತ್ರಧಾರ, ಬರೋಡಾ, ೧೯೬೬; ಅ. ೪೪, ಶ್ಲೋ.೨, ಪು.೨೪೬.
16. ಮೋರಿಸ್‌ಹಿಕ್ಕಿ ಮಾರ್ಗನ್ (ಅನು.): ವಿಟ್ರೂವಿಯಸ್-ದಿ ಟೆನ್ ಬುಕ್ಸ್ ಆನ್ ಆರ್ಕಿಟೆಕ್ಚರ್, ೧೯೬೦, ಪು. ೧೫.

work is done with any necessary material according to the design of a drawing. Theory, on the other hand the productions of dexterity on the principles of proportions''[17]

ದೇವಾಲಯುವೇ ಭಗವಂತನ ಶರೀರವೆಂದೂ ಶರೀರದ ಅಂಗಗಳಿಗೆ ದೇವಾಲಯುದ ಭಾಗಗಳೂ ಸಮೀಕರಿಸಲ್ಪಟ್ಟು ಗುರುತಿಸಲ್ಪಡುತ್ತದೆ:

ಗರ್ಭದೇಹಂ ಶಿರಃಪ್ರೋಕ್ತಂ ಶಿಖಾಶಿಖರ ಮುಚ್ಯತೇ
ನಾನಿತಾ ಶುಕನಾಸೀ ಸ್ಯಾತ್ ಅಂತರಲಾಂಗಲಂಸ್ಮೃತು
ಮಂಟಪಂ ದೇಹಮಿತ್ಯುಕ್ತಂ ಪ್ರಾಕಾರಃ ಕರಉುಚ್ಯತೇ
ಗೋಪುರಂಪಾದ ಇತ್ಯುಕ್ತಂ ದೇವಸ್ಥಾನಂ ಪ್ರಕಥ್ಯತೇ

ವಿಟ್ರೂವಿಯಸ್ಸನ ವಾಸ್ತು ಶಾಸ್ತ್ರವೂ ಮಾನವ ಶರೀರದ ರಚನೆಯಲ್ಲಿರುವ ವಿವಿಧ ಅಂಗಾಂಗ ಸಾಮರಸ್ಯವನ್ನು ವಾಸ್ತು ರಚನೆಯಲ್ಲಿಯೂ ಅಪೇಕ್ಷಿಸುತ್ತದೆ.[19]

ವಾಸ್ತು ರಚನೆಯು ಪರಿಪೂರ್ಣತೆಯನ್ನು ಸಾಧಿಸುವಲ್ಲಿ ಗಮನಿಸಬೇಕಾದ ಇನ್ನಿತರ ಅಂಶಗಳನ್ನೂ ವಿಟ್ರೂವಿಯಸ್ ಗುರುತಿಸುತ್ತಾನೆ. ಅಂಗಾಂಗಗಳ ಸಾಮರಸ್ಯದಂತೆ ಈ ಅಂಶಗಳೂ ನಿರ್ಣಾಯಕ ಪಾತ್ರ ವಹಿಸುತ್ತವ.

○

---

17. ಅದೇ
18. ಅಸವಾರಿ (ಶ್ರೀನಿವಾಸಯ್ಯಂಗಾರ್ಯ; ಮತ್ತು ತಿರುಪತಿ ಶ್ರೀನಿವಾಸಯ್ಯಂಗಾರ್ಯ; ಭರತಖಂಡದ ದೇವಾಲಯಗಳು, ಬೆಂಗಳೂರು, ೧೭೭೮, ಪು. ೩೭
19. ವಿಟ್ರೂವಿಯಸ್-ದಿ ಟೆನ್ ಬುಕ್ಸ್ ಆನ್ ಆರ್ಕಿಟೆಕ್ಚರ್, ಪು. ೧೪.

# ಈಸೂರಿನಲ್ಲಿ ಬೆಳಕಿಗೆ ಬಂದಿರುವ ಗಜಪೃಷ್ಠಾಕಾರದ ದೇವಲಯದ ವಾಸ್ತು ಅವಶೇಷ*

ಎಂ.ವಿ. ವಿಶ್ವೇಶ್ವರ್
ಸಿ.ಎಸ್. ಶೇಷಾದ್ರಿ

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಈಸೂರು ಹಲವು ಕಾರಣಗಳಿಂದ ಪ್ರಸಿದ್ಧವಾಗಿರುವ ಒಂದು ಗ್ರಾಮ. ರಾಷ್ಟ್ರಕೂಟರ ಕಾಲದ (ಕ್ರಿ.ಶ. ೮೫೦ರ ಸುಮಾರಿನ) ಶಾಸನ ಒಂದನ್ನು ಇಲ್ಲಿ ಇತ್ತೀಚೆಗೆ ಸಂಶೋಧಿಸಲಾಗಿದೆ. 'ಶ್ರೀ ಅರಸರ ಬೋದಕೋಜರ' ಎಂಬುವನು ಕೆಲವು ದೇವಾಲಯಗಳನ್ನು ನಿರ್ಮಿಸಿ, ಅದರ ಪೂಜಾದಿಗಳಿಗೆ ದಾನ ನೀಡಿದನೆಂದು, ಈ ಶಾಸನ ತಿಳಿಸುತ್ತದೆ. ಪ್ರಸ್ತುತ ಶಾಸನದಲ್ಲಿ ಉಲ್ಲೇಖಿತವಾಗಿರುವ ದೇವಾಲಯುಗಳನ್ನು ಗುರುತಿಸುವ ಸಲುವಾಗಿ ನಡೆದ ಸ್ಥಳ ಪರಿಶೋಧನೆಯಲ್ಲಿ ಕೆಲವು ಗಮನಾರ್ಹ ಸಂಗತಿಗಳು ಬಳಕಿಗೆ ಬಂದಿವೆ. ಈಸೂರಿನ ಸಾಂಸ್ಕೃತಿಕ ಹಾಗೂ ವಾಸ್ತುನಿರ್ಮಾಣ ಚಟುವಟಿಕೆಗೆ ಸಂಬಂಧ ಪಟ್ಟಂತೆ ದೊರಕಿರುವ ಮಾಹಿತಿಯನ್ನು ಈ ಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ.

ಕೋಟೆ ಪ್ರದೇಶದಲ್ಲಿನ ಕಲ್ಲೇಶ್ವರ ದೇವಾಲಯ -ವಿರುವ ದಿಬ್ಬ ಇಲ್ಲಿನ ವಾಸ್ತು ಅವಶೇಷಗಳಲ್ಲಿ ಗಮನರ್ಹಾವಾದ್ದು. ಇದರ ಪರಿಸರದಲ್ಲಿಯೇ ಮೇಲೆ ಹೇಳಿದ ಶಾಸನ ದೊರಕಿರುವುದು. ಈ ದಿಬ್ಬದಲ್ಲಿ ಗಜಪೃಷ್ಠಾಕಾರದ ತಲವಿನ್ಯಾಸವಿರುವ ಪ್ರಾಚೀನ ದೇವಾಲಯವೊಂದರ ಅವಶೇಷ ಬೆಳಕಿಗೆ ಬಂದಿದೆ. ಅಧಿಷ್ಠಾನದವರೆಗೆ ಮಾತ್ರ ಉಳಿದಿರುವ ಈ ದೇಗುಲ ಕನಿಷ್ಠ ಮೂರುಸಲ ಪುನರ್ನಿರ್ಮಿತವಾದಂತೆ ಕಂಡು ಬರುತ್ತದೆ. ಮೊದಲಿಗೆ ಜಂಬಿಟ್ಟಿಗೆಯಿಂದ, ನಂತರ ಸುಟ್ಟ ಇಟ್ಟಿಗೆಗಳಿಂದ ಕಟ್ಟಲಾದ ಈ ದೇವಾಲಯಕ್ಕೆ ತರುವಾಯದಲ್ಲಿ ಅಲಂಕೃತ ಶಿಲಾಭಾಗಗಳ ಹೊದಿಕೆಯನ್ನು ನೀಡಿರಬೇಕು. ಶಾಸಾನಾಧಾರದ ಮೇಲೆ ಈ ಮೂರು ನಿರ್ಮಾಣಕಾರ್ಯಗಳು ಕ್ರಮವಾಗಿ ರಾಷ್ಟ್ರಕೂಟಪೂರ್ವ (ಕದಂಬ ?), ರಾಷ್ಟ್ರಕೂಟ ಹಾಗೂ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಡೆದಿರಬಹುದೆಂದು ಊಹಿಸಬಹುದು.

ಕರ್ನಾಟಕದಲ್ಲಿರುವ ಕೆಲವೇ ಗಜಪೃಷ್ಠಾಕಾರದ ದೇವಾಲಯಗಳಲ್ಲಿ ಒಂದಾಗಿರುವ ಈಸೂರಿನ ಈ ದೇವಾಲಯದ ತಲವಿನ್ಯಾಸ, ಊರ್ಧ್ವವಿನ್ಯಾಸ, ಶಿಲ್ಪಗಳು ಮತ್ತು ಅದೇ ಸ್ಥಳದಲ್ಲಿ ದೊರೆತಿರುವ ಶಾಸನ ಮತ್ತಿತರ ಸಾಂಸ್ಕೃತಿಕ ಅವಶೇಷಗಳ ಸ್ಥೂಲ ವಿವರಣೆಯನ್ನು ಇಲ್ಲಿ ಮೊದಲಬಾರಿಗೆ ಮಂಡಿಸಲಾಗಿದೆ.

---

* ಸಾರಾಂಶ

ಈ ಸಂಶೋಧನೆಯಿಂದ ಒಟ್ಟಿನಲ್ಲಿ ಎರಡು ಮುಖ್ಯ ಸಂಗತಿಗಳು ಬೆಳಕಿಗೆ ಬಂದಂತಾಗುತ್ತದೆ. ೧ ಈಸೂರಿನ ಐತಿಹಾಸಕ್ಕೆ ಕನಿಷ್ಠ ಕದಂಬರ ಕಾಲದಷ್ಟು ಪ್ರಾಚೀನತೆ ದೊರೆಯುತ್ತದೆ. ಮತ್ತು ೨ ಶತವಾಹನ, ಚುಟು ಕಾಲದಲ್ಲಿ ಕರ್ನಾಟಕದಲ್ಲಿ ನಿರ್ಮಿಸಲಾರಂಭವಾದ ಗಜಪೃಷ್ಠಾಕಾರ ತಲವಿನ್ಯಾಸದ ಮಂದಿರಗಳು ಬಾದಾಮಿ ಚಾಲುಕ್ಯ ಹಾಗೂ ತದನಂತರ ಕರಾವಳಿ ಪ್ರದೇಶದಲ್ಲಿ ಮಾತ್ರ ಹೆಚ್ಚು ಪರಿಚಿತವಾಗಿದ್ದುದರ ಜೊತೆಗೆ ನಡುವಣ ಮಲೆನಾಡು ಪ್ರಾಂತದಲ್ಲಿಯೂ ಕನಿಷ್ಠ ೧೧-೧೨ನೆಯ ಶತಮಾನದವರೆಗೂ ಪ್ರಚಲಿತವಾಗಿದ್ದವು. ಈ ಗಜಪೃಷ್ಠಾಕಾರದ ಇನ್ನೊಂದು ಸುಧಾರಿತ ರೂಪದಲ್ಲಿ ಶೃಂಗೇರಿಯ ವಿದ್ಯಾಶಂಕರ ದೇವಾಲಯದ ದೀರ್ಘವೃತ್ತ ತಲವಿನ್ಯಾಸ ರೂಪುಗೊಂಡಿರುವ ಸಾಧ್ಯತೆ ಇದೆಯೆಂದು ತಿಳಿದುಬರುತ್ತದೆ.

# ಬೇಲೂರು ದೇವಾಲಯ ಭಿತ್ತಿ ಶಿಲ್ಪಗಳ ಮೇಲೆ ಜೈನ ಯಕ್ಷ–ಯಕ್ಷಿಯರ ಪ್ರಭಾವ*

**ದೇವರ ಕೊಂಡಾರೆಡ್ಡಿ**

ಬೇಲೂರು ಚನ್ನಕೇಶವ ದೇವಾಲಯವು ಶ್ರೀ ವೈಷ್ಣವ ಮತಸ್ಥರ ಪ್ರಮುಖ ದೇವಾಲಯ. ಶ್ರೀರಾಮಾನುಜಾಚಾರ್ಯರು ಕರ್ನಾಟಕಕ್ಕೆ ಬಂದಾಗ ಜೈನನಾಗಿದ್ದ ಹೊಯ್ಸಳ ಬಿಟ್ಟಿದೇವನು ಶ್ರೀ ವೈಷ್ಣವ ಧರ್ಮವನ್ನು ಸ್ವೀಕರಿಸಿ ವಿಷ್ಣುವರ್ಧನನೆಂಬ ಹೆಸರನ್ನು ಇಟ್ಟುಕೊಂಡನೆಂದೂ, ಬೇಲೂರಿನಲ್ಲಿ ಚನ್ನಕೇಶವ ದೇವಾಲಯುವನ್ನು ಕಟ್ಟಿಸಿದನೆಂದೂ ಪ್ರತೀತಿ. ಈ ಕಥೆಯು ಸತ್ಯಾಸತ್ಯತೆ ಏನೇ ಆಗಿದ್ದರೂ ಈ ದೇವಾಲಯ ವನ್ನು ಕ್ರಿ.ಶ. ೧೧೧೭ರಲ್ಲಿ ವಿಷ್ಣುವರ್ಧನನು ಕಟ್ಟಿಸಿದ್ದು ಚಾರಿತ್ರಕ ಸಂಗತಿಯಾಗಿದೆ.[1] ಆದರೂ ದೇವಾಲಯ ವನ್ನು ಪೂರ್ಣವಾಗಿ ಗಮನಿಸಿದಾಗ ಇದು ಎರಡು ಹಂತ ಗಳಲ್ಲಿ ನಿರ್ಮಾಣವಾದಂತೆ ಕಂಡು ಬರುತ್ತದೆ. ಗರ್ಭ ಗೃಹದ ಭಾಗವು ಮುಂದಿನ ನವರಂಗದ ಭಾಗಕ್ಕಿಂತ ಭಿನ್ನ ವಾಗಿದೆ.ಹಿಂಬದಿಯ ಗರ್ಭಗೃಹ ಅದಿಷ್ಠಾನವು ಸಾಧಾರಣ ವಾಗಿದ್ದು ಅಧಿಷ್ಠಾನ ಮುಗಿದ ಮೇಲೆ ಭಿತ್ತಿ ಪ್ರಾರಂಭ ವಾಗುತ್ತದೆ. ಭಿತ್ತಿಯಲ್ಲಿ ಎತ್ತರವಾದ ಶಿಲ್ಪಗಳಿವೆ. ಅಧಿಷ್ಠಾನದಲ್ಲಿ ಕೆತ್ತನೆಗಳು ಹೆಚ್ಚಾಗಿಲ್ಲ. ಗರ್ಭಗೃಹದ ಮೂರು ಕಡೆ ಕೋಷ್ಟ ಮಂಟಪಗಳಿದ್ದು ಇವು ನಂತರದ ಸೇರ್ಪಡೆಯೆಂಬಂತೆ ಕಾಣಬರುತ್ತವೆ. ಹಿಂದುಗಡೆಯ ದೇವಕೋಷ್ಠದ ವಿಗ್ರಹದ ಪೀಠದಲ್ಲಿ "ಲೊಕ್ಕಿ ಗುಂಡಿ ಯರ ಭವಾಂ ಬೊಂಡೋಜಸವ ಬಲರದೇವ ಬಿರುದ ರೂವಾರೀಭ ಕಂಠೀರವಂಚತುಂ....ಸೋವಿರಾದ ರೂವಾರಿ ಗೊಂದ್ದಳ ಬಡಿವ ಕಲಿಯುಗ ವಿಶ್ವಕರ್ಮನೆಂಬ ರೂವಾ ರಿಯ ಪ್ರೊಯಿಸಿದು" ಎಂಬ ಶಾಸನವಿದೆ. ದೇವಾಲಯದ ಹೊರಭಾಗದ ವಲಭಿ ಭಾಗದಲ್ಲಿರುವ ಮದನಕೈ ಅಥವಾ ಸಾಲಬಂಜಿಕೆ ಶಿಲ್ಪಗಳಲ್ಲಿ ಅನೇಕವುಗಳ ಮೇಲೆ ಬರೆಹವಿದ್ದು, ಅವು ರೂವಾರಿಚಿಕ್ಕ ಹಂಪ, ಬಳ್ಳಿಗಾವೆಯ ರೂವಾರಿ ದಾಸೋಜ, ಬಳ್ಳಿಗಾವೆಯ ರೂವಾರಿ ದಾಸೋಜನ ಪುತ್ರ ಚಾವಣ, ಮುಂತಾದವರು ಬಿಡಿಸಿದ ಶಿಲ್ಪಗಳೆಂದು ತಿಳಿಯುತ್ತದೆ. ಈ ಶಾಸನಗಳ ಆಧಾರ ದಿಂದ ಈ ದೇವಾಲಯದ ರಚನೆಯಲ್ಲಿ ಗದಗು ಮತ್ತು

* ಈ ಲೇಖನವನ್ನು ಯದುಗಿರಿ ಯತಿರಾಜ ಮಠದ ಪೀಠಾಧಿಪತಿಗಳಾದ ಶ್ರೀ ರಾಮಾನುಜ ಸಂಪತ್ಕುಮಾರಜೀಯರ್ ಅವರು ಹಿಂದೊಮ್ಮೆ ತಮ್ಮ ಭಾಷಣದಲ್ಲಿ 'ಬೇಲೂರು ದೇವಾಲಯವನ್ನು ಜೈನ ಬಸದಿಯಾಗಿ ಕಟ್ಟಲು ಆರಂಭಿಸಿ ಅನಂತರ ಅದನ್ನು ವಿಷ್ಣುದೇವಾಲಯವಾಗಿ ಪರಿವರ್ತಿಸಿದರು'ಎಂಬ ಅಂಶದ ಆಧಾರದ ಮೇಲೆ ದೇವಾಲಯದ ಶಿಲ್ಪಗಳನ್ನು ಗಮನಿಸಿ ಬರೆಯಲಾಗಿದೆ. ಶ್ರೀಯವರ ಅಭಿಪ್ರಾಯಕ್ಕೆ ಚಾರಿತ್ರಿಕ ಆಧಾರಗಳು ಇಲ್ಲವಾದರೂ ಬೇಲೂರು ಚನ್ನಕೇಶವ ದೇವಾಲಯ ದಲ್ಲಿನ ಭಿತ್ತಿ ಶಿಲ್ಪಗಳಲ್ಲಿ ಯಕ್ಷ-ಯಕ್ಷಿಯ ಅಂಶಗಳು ಕಂಡು ಬಂದಿದ್ದು ಆ ಬಗ್ಗೆ ಇಲ್ಲಿ ವಿವೇಚಿಸಲಾಗಿದೆ. ಈ ಬಗೆಯ ಶಿಲ್ಪಗಳು (ಯಕ್ಷ-ಯಕ್ಷಿ ಅಂಶದ) ಬೇಲೂರಿನ ಚನ್ನಕೇಶವ ದೇವಾಲಯಕ್ಕೆ ಮಾತ್ರ ಸೀಮಿತವಾಗಿರದೆ ಅನೇಕ ಹೊಯ್ಸಳ ದೇವಾಲಯಗಳಲ್ಲಿ ಕಾಣ ಬರುತ್ತವೆ.

1 ಎ.ಕ. IX ಬೇಲೂರು ೫೮ ಮತ್ತು ೭೧ ; ಕ್ರಿ.ಶ. ೧೧೧೭

ಬಳ್ಳಿಗಾವೆಯ ಕಡೆಯಿಂದ ಬಂದ ಶಿಲ್ಪಿಗಳ ಪಾತ್ರ ಮಹತ್ತರವಾದದ್ದು ಎಂದು ತಿಳಿಯುತ್ತದೆ.

ಬೇಲೂರು ದೇವಾಲಯದ ಭಿತ್ತಿ ಶಿಲ್ಪಗಳನ್ನು ಗಮನಿಸಿದಾಗ ನಮಗೆ ದೇವ ದೇವಿಯರ ಶಿಲ್ಪಗಳ ಮಧ್ಯೆ ಕೆಲವು ಜೈನ ಯಕ್ಷ ಮತ್ತು ಯಕ್ಷಿ ಶಿಲ್ಪಗಳನ್ನು ಹೋಲುವ ಭಿತ್ತಿ ಶಿಲ್ಪಗಳು ಕಾಣಬರುತ್ತವೆ. ಕೆಲವಂತೂ ಯಕ್ಷ–ಯಕ್ಷಿಯ ಶಿಲ್ಪಗಳಂತೆಯೇ ಭಾಸವಾಗುತ್ತವೆ. ಒಂದು ವ್ಯತ್ಯಾಸವೆಂದರೆ ಈ ದೇವಾಲಯದ ಭಿತ್ತಿಯಲ್ಲಿ ಕಾಣುವ ಯಕ್ಷಿ ಶಿಲ್ಪಗಳು ನಿಂತ ನಿಲುವಿನಲ್ಲಿದ್ದರೆ ಬಹುತೇಕ ಜೈನ ಬಸದಿಗಳ ಯಕ್ಷಿ ಶಿಲ್ಪಗಳು ಕುಳಿತ ಭಂಗಿಯಲ್ಲಿರುತ್ತವೆ. ಅಂಗಡಿ ಬಸದಿಯಲ್ಲಿ ನಿಂತ ಯಕ್ಷಿಯ ಶಿಲ್ಪವಿದೆ. ಬೇಲೂರ ಭಿತ್ತಿ ಶಿಲ್ಪಗಳಲ್ಲಿ ಯಕ್ಷಿಯರಂತಿರುವ ಶಿಲ್ಪಗಳ ಬಳಿ ಯಾವುದೇ ವಾಹನವಿಲ್ಲ. ಈ ಕೆಲವು ವ್ಯತ್ಯಾಸಗಳನ್ನು ಬಿಟ್ಟರೆ ಯಕ್ಷಿ ಶಿಲ್ಪಕ್ಕೂ ಇಲ್ಲಿನ ಭಿತ್ತಿ ಶಿಲ್ಪದಲ್ಲಿ ಬಂದಿರುವ ಯಕ್ಷಿಯರನ್ನು ಹೋಲುವ ಶಿಲ್ಪಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲ. ಯಕ್ಷ ಶಿಲ್ಪಗಳು ಕುಳಿತ ಭಂಗಿಯಲ್ಲಿದ್ದು ಜೈನ ಬಸದಿಗಳಲ್ಲೂ ಕುಳಿತ ಭಂಗಿಯಲ್ಲಿಯೇ ಇರುತ್ತವೆ.

ಈ ಹಿನ್ನೆಲೆಯಲ್ಲಿ ಬೇಲೂರ ಚನ್ನಕೇಶವ ದೇವಾಲಯದ ಭಿತ್ತಿಯ ಶಿಲ್ಪಗಳನ್ನು ಗಮನಿಸಿದಾಗ ಶಿಲ್ಪಿಯು ಎಲ್ಲಾ ಯಕ್ಷ ಮತ್ತು ಯಕ್ಷಿಯ ಬಿಂಬಗಳನ್ನು ಅನುಕರಣೆ ಮಾಡಿಲ್ಲ. ತೀರ್ಥಂಕರನ ಪಕ್ಕದಲ್ಲಿರುವ ಯಕ್ಷ ಮತ್ತು ಯಕ್ಷಿಯರ ಬಿಂಬಗಳು ಆಸೀನರಾಗಿದ್ದು, ಜ್ವಾಲಮಾಲಿನಿ, ಕಾಳಿ, ಚಕ್ರೇಶ್ವರಿ, ಸರಸ್ವತಿ ಬಿಂಬಗಳನ್ನು ಬಿಟ್ಟರೆ ಉಳಿದವುಗಳಿಗೆ ಎರಡೇ ಕೈಗಳು. ಇಲ್ಲಿನ ಭಿತ್ತಿ ಶಿಲ್ಪಗಳ ಪ್ರಮುಖ ಅಂಶವೆಂದರೆ ಒಂದು ಕೈಯಲ್ಲಿ ಫಲವನ್ನು ಹಿಡಿದಿರುವಂತೆಯೂ ಇನ್ನೊಂದು ಕೈಯಲ್ಲಿ ಮಾವಿನ ಹಣ್ಣಿನಗೊಂಚಲು ಅಥವಾ ಪುಷ್ಪಗುಚ್ಛವನ್ನೂ ಹಿಡಿದಿರುವಂತೆಯೂ ಬಿಡಿಸಿರುತ್ತಾರೆ. ಇಂತಹ ಅನೇಕ ಶಿಲ್ಪಗಳನ್ನು ಬಿಡಿಸಿದ್ದು ಅವುಗಳ ವಿವರವನ್ನು ಈಗ ನೋಡೋಣ.

ದೇವಾಲಯವನ್ನು ಅಪ್ರದಕ್ಷಿಣೆಯಾಗಿ ಗಮನಿಸುತ್ತಾ ಹೋದಾಗ ದೇವಾಲಯದ ಮುಂಭಾಗದ ಭಿತ್ತಿಯಲ್ಲಿ ಅಲಂಕಾರಿಕ ತೋರಣಗಳ ಒಳಗೆ ಎಂಟು ಮದನಕೈ ವಿಗ್ರಹಗಳಿದ್ದು ಮೂರು ಶಿಲ್ಪಗಳಲ್ಲಿ ಒಂದು ಕೈಯಲ್ಲಿ ಫಲ ಇನ್ನೊಂದರಲ್ಲಿ ಹೂಗೊಂಚಲುಗಳನ್ನು ಕಾಣಬಹುದು. ಶಿಲ್ಪಗಳ ನಡುವೆ ಆಸೀನ ಯಕ್ಷನನ್ನು ಹೋಲುವ ಶಿಲ್ಪಗಳಿವೆ. ಈ ಸಾಲಿನ ಮೇಲಿನ ಶಿಲ್ಪವೂ ಇದೇ ಲಕ್ಷಣಗಳನ್ನು ಹೊಂದಿದೆ. ಭಾಗವತದ ಶಿಲ್ಪವಿರುವ ಸಾಲಿನಲ್ಲಿ ೪-೫ ಶಿಲ್ಪಗಳು ಇವುಗಳಲ್ಲಿ ಒಂದರಲ್ಲಿ ಅಂಬಿಕಾ ಯಕ್ಷಿ ಶಿಲ್ಪದಂತೆ ಎರಡೂ ಕಡೆ ಮಕ್ಕಳನ್ನು ನಿಲ್ಲಿಸಿದೆ. ಉಳಿದ ಶಿಲ್ಪಗಳ ಕೈಲಿ ಕಮಲ ಮತ್ತು ಫಲವಿದೆ. ಕೆಲವು ಶಿಲ್ಪಗಳ ಕೈಲಿ ಫಲ ಮತ್ತು ಚಾಮರವಿದೆ. ರಂಗನಾಥನ ಶಿಲ್ಪದ ಕೆಳಗಿನ ಸಾಲಿನಲ್ಲಿನ ಮಧ್ಯದ ಒಂದು ಶಿಲ್ಪದ ಎರಡೂ ಕಡೆ ಮಕ್ಕಳಿದ್ದು ಬಲಗೈಲಿ ಕಮಲ ಎಡಗೈ ಮಗುವಿನತಲೆಯ ಮೇಲೆ ಇದೆ. ಇವುಗಳ ಮಧ್ಯೆ ಯಕ್ಷರನ್ನು ಹೋಲುವ ಶಿಲ್ಪಗಳಿವೆ. ಮೇಲಿನ ಚಿಕಣಿ ಶಿಲ್ಪಗಳಲ್ಲಿಯೂ ಯಕ್ಷರನ್ನು ಹೋಲುವ ಶಿಲ್ಪಗಳಿವೆ. ಉತ್ತರ ದಿಕ್ಕಿನ ಬಾಗಿಲ ಬಳಿ ಎರಡು ಶಿಲ್ಪಗಳ ಕೈಲಿ ಫಲ ಮತ್ತು ಕಮಲವಿದೆ. ಕ್ರಿಸ್ತಶಕ ೧೬೨೫ನೇ ವರ್ಷದ ಶಾಸನದ ಕೆಳಗೆ ಇಂತಹ ಶಿಲ್ಪಗಳು ಮದನಿಕೆ ಶಿಲ್ಪಗಳ ಜೊತೆಯಲ್ಲಿ ಇದ್ದು ಈ ಶಿಲ್ಪಗಳ ಎರಡೂ ಕಡೆ ಮಕ್ಕಳ ಇಲ್ಲವೇ ಚಾಮರಧಾರಿಯರ ಚಿಕ್ಕ ಬಿಂಬಗಳಿವೆ. ಒಂದು ಶಿಲ್ಪದಲ್ಲಿ ಬಲಗೈಲಿ ಕಮಲವಿದ್ದು ಎಡಗೈ ಮಗುವನ್ನು ಎತ್ತಿಕೊಂಡಿರುವ ಹೆಂಗಸಿನ ತಲೆಯ ಮೇಲೆ ಇದೆ. ಈ ಭಾಗದಿಂದಾಚೆಗೆ ದೇವಾಲಯ ರಚನೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ. ದೇವಾಲಯದ ವಾಸ್ತು ರಚನೆ ಶಿಲ್ಪಗಳ ಗಾತ್ರ ಮುಂತಾದ ವಿವರಗಳು ಸು. ಕ್ರಿ.ಶ. ೧೧ನೇ ಶತಮಾನದ ಪೂರ್ವಾರ್ಧಕ್ಕೆ ಸೇರುತ್ತವೆ. ಈ ಭಾಗದ ಭಿತ್ತಿಯಲ್ಲಿ ಕ್ಷುದ್ರ ವಿಮಾನಗಳನ್ನು ಬಿಡಿಸಿದ್ದು ಇವುಗಳ ಕೋಷ್ಟದಲ್ಲಿ ಬಿಡಿಸಿರುವ ಶಿಲ್ಪಗಳು ಯಕ್ಷಿಯನ್ನೇ ಹೋಲುತ್ತವೆ. ಈ ಶಿಲ್ಪಗಳಲ್ಲಿ ಕೆಲವುಗಳ ಪಕ್ಕದಲ್ಲಿ ಮಕ್ಕಳು ಇವೆ.

ಮೇಲಿನ ಭಿತ್ತಿಯ ಸಾಲಿನಲ್ಲಿ ಒಬ್ಬ ಹೆಂಗಸು ಕತ್ತರಿ ಕಾಲಿನಲ್ಲಿ ನಿಂತಿದ್ದು ಬಲಗೈಲಿ ಹೂವಿನಗೊಂಚಲಿದ್ದು, ಎಡಗೈಲಿ ಐದು ಹಣ್ಣಿನ ಮಾವಿನ ಗೊಂಚಲನ್ನೂ ಹಿಡಿದಿದೆ. ಮಗುವೊಂದು ಈ ಮಾವಿನ ಹಣ್ಣಿನ ಗೊಂಚಲಿಗೆ ಕೈ ಹಾಕಿದೆ. ಇಲ್ಲಿಯೇ ಇರುವ ರತಿ ಮನ್ಮಥರ ಶಿಲ್ಪದ ಬಳಿ ಮೂಲೆಯಲ್ಲಿ ಒಬ್ಬ ಹೆಂಗಸಿನ ಬಲಗೈಲಿ ಪುಷ್ಪದ ಗೊಂಚಲು ಇದ್ದು ಎಡಗೈ

ಸಣ್ಣ ಮಗುವಿದ ತಲೆ ಮೇಲೆ ಇದೆ. ಬಲಗಡೆ ಚಿಕ್ಕ ಹೆಂಗಸಿನ ಶಿಲ್ಪವಿದೆ. ಭೈರವ ಶಿಲ್ಪದ ಹಿಂದೆ ಇಂತಹದೇ ಶಿಲ್ಪಗಳಿದ್ದು ಬಲಗೈಲಿ ಫಲ ಎಡಗೈಲಿ ಮಾವಿನ ಹಣ್ಣಿನ ಗೊಂಚಲನ್ನು ಹಿಡಿದಿರುತ್ತವೆ. ಮಾವಿನ ಹಣ್ಣಿನ ಗೊಂಚಲಲ್ಲಿ ಐದು ಹಣ್ಣುಗಳಿವೆ. ಇಲ್ಲಿಯು ದೇವ ಕೋಷ್ಠದ ಬಳಿ ಇರುವ ಇಬ್ಬರು ಹೆಂಗಸರ ಶಿಲ್ಪದಲ್ಲಿ ಒಂದು ಕೈಲಿ ಫಲ, ಇನ್ನೊಂದು ಕೈಲಿ ಚಾಮರವಿದೆ. ದೇವಾಲಯದ ಬಲ ಭಾಗದಲ್ಲಿ ಈ ಬಗೆಯ ಶಿಲ್ಪಗಳು ವಿರಳವಾಗಿ ದೊರೆಯುತ್ತವೆ. ಒಂದೆರಡು ಕಡೆ ಗೂಡು ಗಳಲ್ಲಿ ಯಕ್ಷರ ಶಿಲ್ಪಗಳನ್ನೇ ಬಿಡಿಸಿರುತ್ತಾರೆ. ದೇವಾ ಲಯದ ಮುಂಬದಿಯ ಕಡೆಗೆ ಬರುತ್ತಾ ಯಕ್ಷರ ಚಿಕಣಿ ಶಿಲ್ಪಗಳು ಎದ್ದು ಕಾಣುತ್ತವೆ. ಕೆಲವುದರ ಕೈಲಿ ಫಲ ಮತ್ತು ಕಮಲವಿದೆ. ಬಲಬಾಗಿಲು ದಾಟಿ ಮುಂದು ವರೆದರೆ ಮತ್ತೆ ಯಕ್ಷಿಯರ ಶಿಲ್ಪಗಳು ಕಾಣಬರುತ್ತವೆ. ಇಂತಹ ಕಡೆ ಒಂದೆರಡು ಶಿಲ್ಪಗಳಲ್ಲಿ ಒಂದು ಕೈಲಿ ನೇತಾ ಡುತ್ತಿರುವ ಮಾವಿನ ಹಣ್ಣಿನ ಗೊಂಚಲು ಇನ್ನೊಂದು ಕೈಲಿ ಫಲವಿದೆ. ಕೆಲವಡೆ ಮಾವಿನ ಹಣ್ಣಿಗೆ ಬದಲಾಗಿ ಚಾಮರವಿದೆ. ಒಂದು ಶಿಲ್ಪದಲ್ಲಿ ಹೆಂಗಸೊಬ್ಬಳು ಮಗುವನ್ನು ಎತ್ತಿಕೊಂಡಿದ್ದು ಇನ್ನೊಂದು ಕೈಲಿ ಫಲ ಹಿಡಿದಿದ್ದಾಳೆ. ಮುಂಭಾಗದ ಭಿತ್ತಿಯ ಕೆಳಗೆ ಒಂದು ಶಿಲ್ಪದಲ್ಲಿ ಬಲಗೈಲಿ ಮಾವಿನ ಹಣ್ಣು ಹಿಡಿದಿದ್ದು ಆ ಹಣ್ಣನ್ನು ಹುಡುಗನೊಬ್ಬ ಕೀಳುತ್ತಿದ್ದಾನೆ. ಎಡಗೈಲಿ ಫಲವಿದ್ದು ಆ ಕೈ ಮುಂಗೈ ಮೇಲೆ ಗಿಳಿ ಕುಳಿತಿದೆ. ಒಂದು ಶಿಲ್ಪಕ್ಕೂ ಇನ್ನೊಂದು ಶಿಲ್ಪಕ್ಕೂ ಮಧ್ಯೆ ಜಾಗ ವಿರುವೆಡೆಯಲ್ಲಿ ಕುಳಿತ ಯಕ್ಷರ ಶಿಲ್ಪಗಳನ್ನು ಬಿಡಿಸಿರು ತ್ತಾರೆ.

ಮೇಲೆ ವಿವರಿಸಿದ ಶಿಲ್ಪಗಳು ಬಹುತೇಕವಾಗಿ ಜೈನ ಬಸದಿಗಳಲ್ಲಿ ಕಾಣಬರುವ ಯಕ್ಷ ಮತ್ತು ಯಕ್ಷಿಯರ ಶಿಲ್ಪಗಳನ್ನೇ ಹೋಲುತ್ತವೆ. ದೇವಾಲಯದ ಎಡಭಾಗ ದಲ್ಲಿ ಕಾಣಬರುವಷ್ಟು ಈ ಶಿಲ್ಪಗಳು ಬಲಭಾಗದಲ್ಲಿಲ್ಲ ಇವನ್ನು ನೇರವಾಗಿ ಜೈನ ಯಕ್ಷ-ಯಕ್ಷಿ ಶಿಲ್ಪಗಳೆಂದು ಕರೆಯಲು ಸಾಧ್ಯವಿಲ್ಲವಾದರೂ ಅವು ಹಿಡಿದಿರುವ ಆಯುಧಗಳು ಇತ್ಯಾದಿಗಳಿಂದ ಹಿಂದೂ ದೇವತೆಗಳಲ್ಲವೆನ್ನ ಬಹುದು. ಹಿಂದೂ ದೇವತೆಗಳ ಕೈಲಿ ಫಲವಿರುವುದು ಕಡಿಮೆ. ಮತ್ತು ಕೈಗಳೂ ಸಹ ಎರಡಕ್ಕಿಂತ ಹೆಚ್ಚು. ಈ ಭಿತ್ತಿಗಳಲ್ಲಿ ಕಾಣಬಂದಿರುವ ಈ ಬಗೆಯ ಶಿಲ್ಪಗಳೆಲ್ಲ ಬಹುತೇಕ ಅಂಬಿಕಾ ಯಕ್ಷಿಯನ್ನು ಹೋಲುತ್ತವೆ. ಯಕ್ಷಿಯ ನಿಂತ ಶಿಲ್ಪ ನಮಗೆ ಅಂಗಡಿಯ ಬಸದಿಯಲ್ಲಿ ಕಾಣ ಬಂದಿದೆ. ಹೀಗಾಗಿ ಬೇಲೂರಿನ ಚನ್ನಕೇಶವ. ದೇವಾಲಯದ ಅನೇಕ ಭಿತ್ತಿ ಶಿಲ್ಪಗಳ ಮೇಲೆ ಯಕ್ಷ ಮತ್ತು ಯಕ್ಷಿಯರ ಶಿಲ್ಪಗಳು ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. ○

# ಹೊಯ್ಸಳರ ಕಾಲದಲ್ಲಿ ಪ್ರಯಾಣ ಸೌಲಭ್ಯ-ಶಿಲ್ಪಾಧಾರಿತ ಅಧ್ಯಯನ

ಡಾ|| ಟಿ. ದಯಾನಂದ ಪಟೇಲ್

ಹೊಯ್ಸಳ ಶಿಲ್ಪಗಳ ನೆರವಿನಿಂದ ಆ ಯುಗದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಿತಿಗತಿಗಳ ಪುನರಚನೆ ಸಾಧ್ಯ. ದೇವಾಲಯ ಶಿಲ್ಪಗಳಲ್ಲಿ ಚಿತ್ರಿತವಾಗಿರುವ ಸಾಗಣೆಯ ವಿನ್ಯಾಸದ ಬಗ್ಗೆ ಇಲ್ಲಿ ಪರಿಶೀಲಿಸಲಾಗಿದೆ. ಹೊಯ್ಸಳರ ಕಾಲದಲ್ಲಿ ಸಾಗಣೆಯು ಎರಡು ಬಗೆಯುವಾಗಿದ್ದವು. ಮೊದಲನೆಯದು ಭೂಸಾಗಣೆ ಇದರಲ್ಲಿ ಆನೆಗಳು, ಕುದುರೆಗಳು, ಕುದುರೆಗಳ ಗಾಡಿಗಳು (ಅಶ್ವರಥಗಳು), ಎತ್ತಿನ ಗಾಡಿಗಳು, ಕೈಗಾಡಿಗಳು, ಕತ್ತೆಗಳು ಸೇರಿದ್ದವು. ಎರಡನೆಯ ಜಲಸಾಗಣೆಗೆ ದೋಣಿಗಳು ಮೊದಲಾದುವಿದ್ದವು. 'ಯಾನ'[1] ಎಂಬ ಪದವು ವಿಶಾಲಾರ್ಥದಲ್ಲಿ ಮನುಷ್ಯರು, ಪ್ರಾಣಿಗಳು ಮತ್ತು ಸರಕುಗಳ ರವಾನೆಗಾಗಿರುವ ಎಲ್ಲ ವಾಹನಗಳು ಹಾಗೂ ಸಾಧನಗಳನ್ನು ಮತ್ತು ಅವುಗಳಿಗೆ ಪೂರಕವಾದುವನ್ನು ಒಳಗೊಳ್ಳುತ್ತದೆ. ವಾಹನಗಳು ಮತ್ತು ಸಾಧನಗಳನ್ನು ಮಾತ್ರವೇ ಅದು ಒಳಗೊಳ್ಳದೆ ರಸ್ತೆಗಳು, ಸೇತುವೆಗಳು ಮತ್ತು ನಾವೆಗಳು, ಸುಖ, ಸೌಲಭ್ಯ ಮತ್ತು ಸುರಕ್ಷತೆಯನ್ನು ಒದಗಿಸುವುದನ್ನು ಸಹ ಒಳಗೊಳ್ಳುತ್ತದೆ. ಹೊಯ್ಸಳರ ಕಾಲದ ವೇಳೆಗೆ (ಕ್ರಿ.ಶ. ೧೧ ರಿಂದ ೧೩ನೇ ಶತಮಾನ) ಸಾಗಣೆಯ ಸಾಧನಗಳು ಹಿಂದೆಂದಿಗಿಂತಲೂ ಉತ್ತಮವಾದುವು ಹೆಚ್ಚು ಪ್ರಗತಿ ಹೊಂದಿದ್ದವು ಆಗಿದ್ದವು. ಹೊಯ್ಸಳ ದೊರೆಗಳ ಬಲಿಷ್ಠ ಕೇಂದ್ರೀಯ ಆಡಳಿತ ಬುನಾದಿಗಾಗಿ ಪೌರ ಹಾಗೂ ಸೇನಾ ಉದ್ದೇಶಗಳಿಗಾಗಿ ಇವು ಅಗತ್ಯವಾ ಆಗಿದ್ದಿರಬೇಕು. **ಆನೆಗಳು :** ಪ್ರಭುತ್ವದ ಸಂಕೇತಗಳ ಪೈಕಿ ಇದು ಒಂದಾಗಿತ್ತು. ಋಗ್ವೇದದಲ್ಲಿ ಮೃಗ ವಾರಣ (VII, ೩೩,೮ x ೪೦,೪) ಎಂಬುದರಲ್ಲಿ ಅವು ಸೂಚಿತವಾಗಿವೆ. ಹೊಯ್ಸಳರ ಕಾಲದಲ್ಲಿ ಅವನ್ನು ಪಳಗಿಸಿ, ಒಗ್ಗಿಸಿಕೊಳ್ಳಲಾಗಿತ್ತು. ರಾಜಮೆರವಣಿಗೆಗಳಲ್ಲಿ ಪಟ್ಟದ ಆನೆಯೂ ಇರುತ್ತಿತ್ತು. ಮನುಷ್ಯರು ಹಾಗೂ ಇತರ ಸರಕುಗಳ ಸಾಗಣೆಗಾಗಿ ಅವನ್ನು ಪ್ರಧಾನವಾಗಿ ಬಳಸಲಾಗುತ್ತಿತ್ತು ; ಯುದ್ಧಗಳಲ್ಲಿ ಕೂಡ ಬಳಸಿಕೊಳ್ಳುತ್ತಿದ್ದರು. ಬೃಹದಾಕಾರದ ಆನೆಗಳು ಶತ್ರುಗಳ ಸೇನಾವ್ಯೂಹಗಳನ್ನು, ಅವರ ಕೋಟೆಕೊತ್ತಲಗಳು ಮತ್ತು ಪಾಳೆಯಗಳನ್ನು ನಾಶ ಮಾಡುತ್ತಿದ್ದುದು ಮಾತ್ರವೇ ಅಲ್ಲದೆ ಸಾಮಾನ್ಯವಾಗಿ ಮನುಷ್ಯರಿಗೆ ಸಾಧ್ಯವಾಗದ ದೊಡ್ಡ ದೊಡ್ಡ ವೃಕ್ಷಗಳನ್ನು ಉರುಳಿಸುವುದು, ರಸ್ತೆಗಳನ್ನು ಮಾಡಲು ಕಾಡುಗಳನ್ನು ಕಡಿಯುವುದು ಮೊದಲಾದ ಕಾರ್ಯಗಳಲ್ಲಿ ಕೂಡ ಉಪಯೋಗಿಸಲ್ಪಡುತ್ತಿದ್ದುವು. ಹೊಯ್ಸಳ ಶಿಲ್ಪಗಳಿಗೆ ಆನೆಯ ದೈಹಿಕ ರಚನೆ ಹಾಗೂ ಅವುಗಳ ಸಾಧನಗಳು ಸುಪರಿಚಿತವಾಗಿದ್ದು ಅವನ್ನು ಚಿತ್ತಾಕರ್ಷಕವಾಗಿ ಕೆತ್ತಿರುವರು. ಸಾಧಾರಣವಾಗಿ ಎಲ್ಲಾ ಹೊಯ್ಸಳ ದೇವಾಲಯಗಳಲ್ಲಿಯೂ ಕೆತ್ತಿದ ಆಕರ್ಷಕ ಹಾವ ಭಾವಗಳ ಆನೆಯ ಶಿಲ್ಪಗಳಿವೆ ಬೇಲೂರಿನ ವೀರನಾರಾಯಣ ದೇವಾಲಯದಲ್ಲಿ[2]

---

1 ಇಂಡಿಯನ್ ಕಲ್ಚರ್ ಸಂ. ೧೧, ಸಂಖ್ಯೆ ೧-೪, ಪು ೨೬೬

2 ಎಂ.ಎ.ಆರ್. ೧೯೩೧, ಫಲಕviii ಚಿತ್ರ ೩

ಅಂಬಾರಿಯ ಸಮೇತ ಆನೆಯನ್ನು ಸುಂದರವಾಗಿ ಕೆತ್ತಲಾಗಿದೆ. ಆನೆಯ ಕಾಲುಗಳು ಹಾಗೂ ಅಂಬಾರಿಯ ಹೊರಭಾಗವನ್ನು ಬಳ್ಳಿವಿನ್ಯಾಸಗಳಿಂದ ರಮ್ಯವಾಗಿ ಅಲಂಕರಿಸಲಾಗಿದೆ. ಅಂಬಾರಿಯನ್ನು ಆನೆಗೆ ಹಗ್ಗದಿಂದ ಕಟ್ಟಲಾಗಿದೆ. ನಾಲ್ಕುಕಾಲು (ಪಾದ)ಗಳು ಆಭರಣ ಗಳಿಂದ ಅಲಂಕೃತವಾಗಿವೆ ; ಹೊಟ್ಟೆಯ ತಳಭಾಗದಲ್ಲಿ ಕವುದಿ ತೊಡಿಸಲಾಗಿದೆ. 'ಅಂಕುಶಧರ' ಎನ್ನಲಾಗುವ ಮಾವಟಿಗನನ್ನು ಬಲಗೈಯಲ್ಲಿ ಅಂಕುಶವನ್ನು ಹಿಡಿದು, ಆನೆಯನ್ನು ನಿಯಂತ್ರಿಸಲು ಪ್ರಯತ್ನಿಸುತ್ತಿರುವಂತೆ ಕೆತ್ತಲಾಗಿದೆ. ಸೋಮನಾಥಪುರದ ಕೇಶವ ದೇವಾಲಯ ದಲ್ಲಿ[3]. ಅಂಬಾರಿಯೊಡಗೂಡಿದ ಆನೆಯನ್ನು ಕೆತ್ತಲಾಗಿದ್ದು, ಇದರಲ್ಲಿ ಅಂಬಾರಿಯನ್ನು ಬಲವಾದ ಹಗ್ಗ ದಿಂದ ಕಟ್ಟಲಾಗಿದ್ದು, ಅದಕ್ಕೆ ಗಂಟೆ ಕಟ್ಟಲಾಗಿದೆ. ಕೆಲವು ಆನೆಗಳ ಬೆನ್ನಮೇಲೆ ಕವುದಿಯನ್ನು ಒದಗಿಸ (ಕಲ್ಪಿಸ)ಲಾಗಿದ್ದು, ಇವನ್ನು ನುಗ್ಗೇಹಳ್ಳಿಯ ಲಕ್ಷ್ಮೀ ನರಸಿಂಹ ದೇವಾಲಯದಲ್ಲಿ[4] ಕೆತ್ತಲಾಗಿದೆ. ಕೆಲವು ಆನೆಗಳಲ್ಲಿ ಇವು ಸರಳವಾಗಿದ್ದು, ಮತ್ತೆ ಕೆಲವು ಆನೆಗಳಲ್ಲಿ ಅಲಂಕೃತವಾಗಿವೆ. ಸೋಮನಾಥಪುರದ ಕೇಶವ ದೇವಾಲಯ[5] ಮತ್ತು ಹೊಸಹೊಳಲಿನ ಲಕ್ಷ್ಮೀನಾರಾಯಣ ದೇವಾಲಯಗಳಲ್ಲಿ[6] ಇಂಥ ಕೆತ್ತನೆ ಗಳಿವೆ. ಸಾಮಾನ್ಯವಾಗಿ ಆನೆಯ ತಲೆ, ಕತ್ತು(head) ಪದಕ ಚಿಹ್ನೆಗಳೊಡಗೂಡಿದ ಮುತ್ತಿನಸರದಿಂದ ಅಲಂಕೃತವಾಗಿವೆ ; ಕೆಲವು ಆನೆಗಳ ಸೊಂಡಿಲುಗಳನ್ನು ಅಲಂಕರಿಸಲಾಗಿದೆ. ಆನೆಯ ದೇಹದ ಸುತ್ತ ಹುರಿ ಹಗ್ಗವನ್ನು ಬಲವಾಗಿ ಕಟ್ಟಲಾಗಿದೆ. ಆನೆಯನ್ನು ಹತ್ತುವವರು ಪ್ರಾಯಶಃ : ಇದರ ನೆರವಿನಿಂದ ಹತ್ತು ತ್ತಿದ್ದಂತೆ ತೋರುತ್ತದೆ. ಇಂಥವನ್ನು ಬೇಲೂರಿನ ಕೇಶವ ದೇವಾಲಯ, ಅಗ್ರಹಾರ ಬಾಚಹಳ್ಳಿಯ ಹುಣಿಸೇಶ್ವರ ದೇವಾಲಯದ[8]. ಆಗ್ನೇಯ ಭಾಗದ ಶಿಲ್ಪಗಳಲ್ಲಿ ನೋಡಬಹುದಾಗಿದೆ. ಬಸರಾಳಿನ ಮಲ್ಲಿಕಾರ್ಜುನ[9] ಮತ್ತು ಸೋಮನಾಥಪುರದ ಕೇಶವ ದೇವಾಲಯಗಳಲ್ಲಿ[10] ಸವಾರರಿರುವಂಥ ಆನೆಗಳನ್ನು ಕೆತ್ತಲಾಗಿದ್ದು, ಇವು ಬಹುಮಟ್ಟಿಗೆ ಸಮರಗಜಗಳಾಗಿವೆ. ಎತ್ತಿದ ತಲೆಯಿಂದ ಅವುಗಳ ಸೊಂಡಿಲು ನೇತಾಡು ತ್ತಿರುವುದಾದರೆ ಕೆಲವು ವಿನೋದದ ಅಥವಾ ಕಾದಾಡುವ ಭಂಗಿಯಲ್ಲಿವೆ. ಅವುಗಳ ಮೇಲೆ ಒಬ್ಬರು ಅಥವಾ ಹೆಚ್ಚು ಸವಾರರಿರುವರು ; ಕವಚಗಳಿವೆ ; ಹಣೆಯ ಭಾಗವನ್ನು ಮುತ್ತುಗಳು ಅಥವಾ ಮಣಿಸರಗಳಿಂದ ಅಲಂಕರಿಸಲಾಗಿದೆ. ವಿವಿಧೋದ್ದೇಶಗಳಿಗಾಗಿ ಸರಕು -ಗಳ, ಮನುಷ್ಯರ ಸಾಗಣೆಗಾಗಿ ಆನೆಗಳಿಗೆ ತರಪೇತಿ ನೀಡುವುದು ತುಂಬ ಶ್ರಮದ ಪ್ರಕ್ರಿಯೆಯಾಗಿತು, (ಚಿತ್ರ-೧)

**ಕುದುರೆಗಳು :** (ಅ) ಸವಾರಿ (ಆ) ರಥ ಎಳೆಯುವುದು-ಹೀಗೆ ಕುದುರೆಗಳನ್ನು ಆ ಕಾಲದಲ್ಲಿ ಎರಡು ಉದ್ದೇಶಗಳಿಗೆ ಬಳಸಲಾಗುತ್ತಿತ್ತು.

(ಅ) **ಸವಾರಿ ಕುದುರೆ :** (ಚಿತ್ರ-೨) ಒಬ್ಬ ಸವಾರನಿರುತ್ತಿದ್ದ. ವಿವಿಧ ಸಂದರ್ಭಗಳಲ್ಲಿ ಸಂಚಾರಕ್ಕಾಗಿ ಉಪಯೋಗಿಸುತ್ತಿದ್ದರು. ಯುದ್ಧಕಾಲದಲ್ಲಿ ವಿಶೇಷವಾಗಿ ಬಳಸುತ್ತಿದ್ದರು. ಅಶ್ವಪಡೆ ಸೇನೆಯ ಪ್ರಮುಖ ವಿಭಾಗ ಗಳಲ್ಲೊಂದಾಗಿತ್ತು (ಚತುರಂಗ ಬಲಗಳ ಪೈಕಿ ಒಂದಾಗಿತ್ತು. ಈ ಪ್ರಾಣಿಗಳ ಶಿಲ್ಪಗಳ ಕೆತ್ತನೆ ಕೆಲಸದಲ್ಲಿ ತೊಡಗಿದ್ದ ಶಿಲ್ಪಗಳಿಗೆ ಕುದುರೆಯ ಸಾಮಾನ್ಯ ಲಕ್ಷಣಗಳು ಹಾಗೂ ಅವುಗಳ ಸಾಧನ-ಸಜ್ಜುಗಳ ಬಗ್ಗೆ

---

3 ಅದೇ ; ೧೯೩೨ ಫಲಕ viii ಚಿತ್ರ ೪
4 ಅದೇ ; ೧೯೩೩ ಫಲಕ v
5 ಅದೇ ; ೧೯೩೨ ಫಲಕ x ಚಿತ್ರ ೧
6 ಅದೇ : ೧೯೧೫ ಫಲಕ vii
7 ಆರ್ಕಿಟೆಕ್ಚರ್ ಅಂಡ ಸ್ಕಲ್ಪ್ಚರ್ ಇನ್ ಮೈಸೂರು, ; ನಂ ii, ದಿ ಕೇಶವ ಟೆಂಪಲ್ ಆಟ್ ಬೇಲೂರ್, ಫಲಕ ix.v
8 ಎಂ.ಎ.ಆರ್. ೧೯೧೫, ಫಲಕ ix
9 ಅದೇ ೧೯೩೪, ಫಲಕ xii ಚಿತ್ರ ೧
10 ಅದೇ ; ೧೯೩೨ ಫಲಕ i

ಉತ್ತಮ ಜ್ಞಾನವಿತ್ತು. ಸವಾರಿಗಾಗಿ ಕುದುರೆಯ ಬಳಕೆ ಮತ್ತೆ ಬೇರೆ ಉಪಯೋಗಗಳಿಗಿಂತ ಹೆಚ್ಚಾಗಿದ್ದಂತೆ ತೋರುತ್ತದೆ. ಬಹುಮಟ್ಟಿಗೆ ಎಲ್ಲ ಹೊಯ್ಸಳ ದೇವಾಲಯಗಳಲ್ಲಿನ ಉಬ್ಬುಶಿಲ್ಪಗಳು ಹಾಗೂ ಪಟ್ಟಿಕೆಗಳಲ್ಲಿ ಕುದುರೆಸವಾರರನ್ನು ಹೆಚ್ಚಾಗಿ ಚಿತ್ರಿಸಲಾಗಿದೆ. ಬೇಲೂರಿನ ಕೇಶವ ದೇವಾಲಯ,[11] ಸೋಮನಾಥಪುರದ ಕೇಶವ ದೇವಾಲಯ,[12] ಹೊಸಹೊಳಲಿನ ಲಕ್ಷ್ಮೀನಾರಾಯಣ ದೇವಾಲಯ,[13] ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯ,[14] ಬಸರಾಳಿನ ಮಲ್ಲಿಕಾರ್ಜುನ ದೇವಾಲಯಗಳಲ್ಲಿ[15] ಇದಕ್ಕೆ ನಿದರ್ಶನಗಳನ್ನು ಕಾಣಬಹುದು. ಈ ಮೇಲೆ ನಮೂದಿತವಾದ ದೇವಾಲಯ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಅಶ್ವಸವಾರ ಚಲ್ಲಣ ಹಾಗೂ ಪಾದರಕ್ಷೆಗಳನ್ನು ಧರಿಸಿರುವುದನ್ನು ಕಾಣುತ್ತೇವೆ. ಕುದುರೆಯ ಸಾಧನಸಲಕರಣೆಯಲ್ಲಿ ಮೈಪಟ್ಟಿಯಲ್ಲಿ ಮೆತ್ತೆಜೀನು, ಎದೆಪಟ್ಟಿ ಹಾಗೂ ಜೀನುಗಳು ಸೇರಿರುತ್ತವೆ. ಉತ್ತಮ ಬಗೆಯ ವಸ್ತ್ರವನ್ನು ಬಳಸಲಾಗಿರುತ್ತದೆ. ಜೀನಿಗೆ ಸಾಮಾನ್ಯವಾಗಿ ಉತ್ತಮ ರಿಕಾಪುಗಳನ್ನು ಸೇರಿಸಲಾಗಿದ್ದು, ಸವಾರರ ಪಾದಗಳನ್ನು ಅದರಲ್ಲಿ ತೂರಿಸಿರುವಂತೆ ಚಿತ್ರಿಸಲಾಗಿರುತ್ತದೆ. ರಿಕಾಪು ವರ್ತುಲಾಕಾರವಾಗಿದ್ದು, ಅಗಲವಾದ ಸಮತಟ್ಟಾದ ಪಾದದಾಸರೆಯಿಂದಾಗಿರುತ್ತದೆ. ಅವನ್ನು ಪಟ್ಟಿಗಳಿಂದ ನೇತುಹಾಕಲಾಗಿರುತ್ತದೆ. (ಜೀನಿನ ಅಥವಾ ಮೆತ್ತಿಯ ತಳದಿಂದ ಸಾಗುವ) ಕಡಿವಾಣದಲ್ಲಿ ನೊಸಲಪಟ್ಟಿ, ತಡೆಲಗಾಮು, ಗಂಟಲಪಟ್ಟಿ ಹಾಗೂ ಲಗಾಮಿನ ಮೂಗುಪಟ್ಟಿ ಇದ್ದು ಇವೆಲ್ಲ ಲೋಹದಿಂದ ಮಾಡಿದುವಾಗಿರುತ್ತವೆ. ಕಿವಿಗಳ ಬಳಿ ಕುಚ್ಚುಗಳು ಸಾಮಾನ್ಯವಾಗಿ ಇರುತ್ತವೆ. ಜೀನು ಸವಾರನಿಗೆ ಸುಖಕರವಾಗಿದ್ದು, ಲಗಾಮಿನ ನೆರವಿನಿಂದ ಕುದುರೆಯನ್ನು ನಿಯಂತ್ರಿಸುತ್ತಿದ್ದ. ಕುದುರೆಗಳ ಚಲನೆಯನ್ನು ಸಹಜವಾಗಿ ಕೆತ್ತಲಾಗಿದೆ.

**ಆ. ಅಶ್ವರಥಗಳು (ಚಿತ್ರ ೩):** ಪಟ್ಟದ ರಥ (ರಾಜರಥ), ಪುಷ್ಯಾರಥ, ಸಾಂಗ್ರಾಮಿಕ (ಸಮರರಥ), ಪರಿಯಾಂಕ ಮತ್ತು ಸಾಗಣೆ ಮೊದಲಾದ ಅಶ್ವರಥಗಳನ್ನು ವ್ಯಾಪಕವಾಗಿ ಬಳಸುತ್ತಿದ್ದುದರಿಂದ ಹೊಯ್ಸಳ ಕಲಾಕಾರರಿಗೆ ಇವು ಸುಪರಿಚಿತವಾಗಿದ್ದವು. ಯುದ್ಧಕಾಲ ಹಾಗೂ ಶಾಂತಿಕಾಲಗಳೆರಡರಲ್ಲಿಯೂ ರಥಗಳು ಪ್ರಮುಖ ಪಾತ್ರವಹಿಸುತ್ತಿದ್ದವು. ಹೊಯ್ಸಳ ದೇವಾಲಯಗಳ ಪಟ್ಟಿಕೆಗಳಲ್ಲಿ, ಭಿತ್ತಿಗಳಲ್ಲಿನ ಅಲಂಕಾರ ಪಟ್ಟಿಕೆಗಳಲ್ಲಿ ವಿವಿಧ ಬಗೆಯ ರಥಗಳನ್ನು ಕೆತ್ತಲಾಗಿದೆ. ಇವಕ್ಕೆ ನಿದರ್ಶನಗಳನ್ನು ಬೇಲೂರಿನ ಕೇಶವ ದೇವಾಲಯ,[17] ಸೋಮನಾಥಪುರದ ಕೇಶವ ದೇವಾಲಯ,[18] ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯ,[19] ಬಂದನಿಕೆಯ ಸೋಮೇಶ್ವರ ದೇವಾಲಯಗಳಲ್ಲಿ[20] ಕಾಣಬಹುದಾಗಿದೆ. ಮೇಲೆ ಉಲ್ಲೇಖಿಸಿದ ದೇವಾಲಯಗಳು ಅಲಂಕಾರಪಟ್ಟಿಕೆಗಳು ಹಾಗೂ ಪಟ್ಟಿಕೆಗಳಲ್ಲಿ ಕೆತ್ತಲಾಗಿರುವ ರಥಗಳ ಆಕಾರ ಮತ್ತು ರೂಪಗಳು ಭಿನ್ನಭಿನ್ನವಾಗಿವೆ. ಉದಾಹರಣೆಗೆ ಬೇಲೂರಿನ ಕೇಶವದೇವಾಲಯ, ಸೋಮನಾಥಪುರದ ಕೇಶವದೇವಾಲಯ, ಹಳೇಬಿಡಿನ ಹೊಯ್ಸಳೇಶ್ವರ ದೇವಾಲಯ ಮತ್ತು ಬಂದನೀಕೆಯ ಸೋಮೇಶ್ವರ ದೇವಾಲಯಗಳನ್ನು ಗಮನಿಸಬಹುದು.

---

11 ಆರ್ಕಿಟೆಕ್ಚರ್ ಆಂಡ್ ಸ್ಕಲ್ಪ್ಚರ್ ಇನ್ ಮೈಸೂರು ನಂ. II ದಿ ಕೇಶವ ಟೆಂಪಲ್ ಆಟ್ ಬೇಲೂರು. ಫಲಕ XVII

12 ಅದೇ, ನಂ. I ದಿ ಕೇಶವ ಟೆಂಪಲ್ ಆಟ್ ಸೋಮನಾಥಪುರ, ಫಲಕಗಳು III, IV, V

13 ಎಂ.ಎ.ಆರ್. ೧೯೧೫, ಫಲಕಗಳು VII, XIV

14 ಅದೇ, ೧೯೩೩, ಫಲಕ V

15 ಅದೇ ೧೯೩೪, ಫಲಕ XII ಚಿತ್ರ ೧

16 ಅದೇ ೧೯೩೨ ಫಲಕಗಳು I, X, ಚಿತ್ರ ೨

17 ಆರ್ಕಿಟೆಕ್ಚರ್ ಆಂಡ್ ಸ್ಕಲ್ಪ್ಚರ್ ಇನ್ ಮೈಸೂರು ನಂ. II ದಿ ಕೇಶವ ಟೆಂಪಲ್ ಆಟ್ ಬೇಲೂರು, ಫಲಕಗಳು VII ಮತ್ತು IX

18 ಅದೇ, ನಂ. I, ದಿ ಕೇಶವ ಟೆಂಪಲ್ ಆಟ್ ಸೋಮನಾಥಪುರ, ಫಲಕಗಳು III, V

19 ಎಂ.ಎ.ಆರ್, ೧೯೩೦, ಫಲಕಗಳು I, XII

20 ಅದೇ, ೧೯೩೧, ಫಲಕಗಳು XVII (ಚಿತ್ರ ೨)

ಈ ಮೇಲಿನ ದೇವಾಲಯಗಳ ಪಟ್ಟಿಕೆಗಳಲ್ಲಿ ಕುದುರೆಗಳ ಕುತ್ತಿಗೆಗೆ ಕಟ್ಟಿ ಅದರ ಮೇಲೆ ಅಡ್ಡಪಟ್ಟಿಯನ್ನು ಇಟ್ಟಿರುವುದನ್ನು ಕಾಣಬಹುದು. ಕುದುರೆಯ ಲಗಾಮುಗಳನ್ನು ಅದರ ಬಾಯಿಯ ಕಡಿವಾಣಗಳಿಗೆ ಕಟ್ಟಲಾಗಿದೆ. ರಥಿಕನು ಕುದುರೆಗಳನ್ನು ಲಗಾಮುಗಳಿಂದ ನಿಯಂತ್ರಿಸುತ್ತಿದ್ದ ಹಾಗೂ ಜೊತೆಯಾಗಿ ಸಾಗುವಂತೆ ಮಾಡುತ್ತಿದ್ದ. ರಥದ ಒಡಲಿನಂತೆ ಚಕ್ರಗಳು ಕೂಡ ಮರದವೇ ಆಗಿವೆ. ಕೆಲವು ಚಕ್ರಗಳಲ್ಲಿ ಅರೆಗಳಿದ್ದರೆ, ಮತ್ತೆ ಕೆಲವಲ್ಲಿ ಪೂರ್ತಿ ಮರವೇ ಇರುತ್ತದೆ. ಚಕ್ರದಲ್ಲಿ ಅರೆಗಳಲ್ಲದೆ ಚಕ್ರದ ಹೊರಸುತ್ತು,[21] ಪುಟ್ಟಿಮರ ಮತ್ತು ಗುಂಬ ಇವು ಸಹ ಇವೆ. ಚಕ್ರದ ಹೊರಸುತ್ತು ಮತ್ತು ಪುಟ್ಟಿಮರಗಳು ಸೇರಿ ನೇಮಿಯಾಗುತ್ತಿತ್ತು. ರಥಗಳು ಎರಡು ಅಥವಾ ನಾಲ್ಕು ಚಕ್ರದವಾಗಿವೆ; ಅವನ್ನು ಒಂದು, ಎರಡು ಇಲ್ಲವೇ ನಾಲ್ಕು ಕುದುರೆಗಳು ಎಳೆಯುತ್ತಿದ್ದವು. ರಥದ ಚೌಕಟ್ಟು ಒಂದರಿಂದ ಮತ್ತೊಂದನ್ನು ಬೇರ್ಪಡಿಸಲು ಅಡ್ಡಪಟ್ಟಿಗಳಿಂದ ಕೂಡಿರುವ ಸುಂದರ ಸಸ್ಯ-ಪುಷ್ಪಾಕೃತಿಗಳಿಂದ ಅಲಂಕೃತವಾಗಿರುವಂಥ ಪಟ್ಟಿಕೆಗಳಿಂದ ಕೂಡಿದೆ. ರಥದ ಆಕಾರಕ್ಕೆ ಅನುಗುಣವಾಗಿ ಅದರಲ್ಲಿ ಇಬ್ಬರಿಂದ ಎಂಟು ಜನರವರೆಗೂ ಕುಳಿತುಕೊಳ್ಳಬಹುದಾಗಿತ್ತು. ಕ್ರಿಯೆಯನ್ನು ಪ್ರದರ್ಶಿಸುತ್ತಿರುವಂಥ ಸಮರ ರಥಗಳನ್ನು, ಕೆತ್ತನೆ ಮಾಡಿರುವ ಜವನಿಕೆಗಳಲ್ಲಿ ಕೆತ್ತಲಾಗಿದೆ. ಕೆಲವು ಸಮರ ರಥಗಳು ಅರೆಗಳಿರುವ ಅಥವಾ ಅರೆಗಳಿಲ್ಲದಿರುವ ನಾಲ್ಕು ಚಕ್ರಗಳ ಮೇಲೆ ಮರದ ವೇದಿಕೆಗಳಿಂದ ಕೂಡಿವೆ; ವೀರನ ಹಿಂಭಾಗದಲ್ಲಿರುವ ಕಂಬದ ಮೇಲೆ ವೀರ ಲಾಂಛನ ಹಾಗೂ ಪತಾಕೆಗಳಿವೆ. ರಥಗಳ ಮೇಲೆ ಮುಖಾಮುಖಿಯಾಗಿ ಕುಳಿತು ಬಿಲ್ಲು-ಬಾಣಗಳಿಂದ ಕಾದಾಡುತ್ತಿರುವ ಇಬ್ಬರು ವೀರರ ಸುಂದರ ಚಿತ್ರಣವಿದೆ. ಈ ಅವಧಿಯಲ್ಲಿ ರಾಜಮನೆತನದವರು ಹಾಗೂ ಸಾಗಣೆಗಾಗಿಯೂ, ರಾಜಮೆರವಣಿಗೆಗಳಿಗಾಗಿಯೂ ರಥಗಳನ್ನು ವ್ಯಾಪಕವಾಗಿ ಬಳಸುತ್ತಿದ್ದಿರಬೇಕು.

**ಒಂಟೆಗಳು** (ಚಿತ್ರ-೪) : ಒಂಟೆಗಳನ್ನು ಜನರನ್ನು ಸಾಗಿಸಲು, ಸಾಮಾನು ಸರಂಜಾಮು ಸಾಗಿಸಲು, ಯುದ್ಧಕ್ಕಾಗಿ ಹಾಗೂ ರಾಜಮೆರವಣಿಗೆಗಳು ಮೊದಲಾದುವಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರು. ಪ್ರಸ್ತುತ ಪರಿಶೀಲನೆಯ ಅವಧಿಯಲ್ಲಿ ಒಂಟೆಗಳ ಉಪಯೋಗ ತುಂಬ ಸೀಮಿತವಾಗಿದ್ದಿರಬೇಕು; ಏಕೆಂದರೆ ಅವನ್ನು ದೂರದ ಮರುಭೂಮಿಗಳಿಂದ ಖರೀದಿಸಬೇಕಾಗಿತ್ತು. ಈ ಒಂಟೆಗಳನ್ನು ಕೆತ್ತಿರುವಂಥ ಶಿಲ್ಪಿಗಳಿಗೆ ಒಂಟೆಯ ಅಂಗಾಂಗ ಲಕ್ಷಣಗಳು ಹಾಗೂ ಅವುಗಳ ಸಜ್ಜುಗಳ ಬಗ್ಗೆ ಚೆನ್ನಾಗಿ ತಿಳಿದಿತ್ತು. ಸೋಮನಾಥಪುರದ ಕೇಶವ ದೇವಾಲಯ,[22] ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ (ಸ್ವಾಮಿ) ದೇವಾಲಯ,[23] ಸೋಮನಾಥಪುರದ ಕೇಶವ ದೇವಾಲಯ[24]ಗಳ ಉತ್ತರದ ಗೋಡೆಯ ಅಡ್ಡಪಟ್ಟಿಯ ಕೈಪಿಡಿಗೋಡೆಯಲ್ಲಿ ಸುಂದರವಾದ ಒಂಟೆಗಳ ಕೆತ್ತನೆಯನ್ನು ಗಮನಿಸಬಹುದಾಗಿದೆ. ಒಂಟೆಯ ಸವಾರ ಸಾಮಾನ್ಯವಾಗಿ ಇಜಾರ ಹಾಗೂ ಮೋಜಾಗಳನ್ನು ಧರಿಸಿರುವನು. ಒಂಟೆಯ ಸಜ್ಜು ಹೀಗಿದೆ : ಸುತ್ತುಪಟ್ಟಿ, ಸುತ್ತ ಇಟ್ಟಿರುವ ಮೆತ್ತೆಕಾಪು, ಹೊದಿಸುವ ಬಟ್ಟೆ ಅಥವಾ ತಡಿಬಟ್ಟೆಯಿಂದ ಆವೃತವಾಗಿರುವ ಎದೆಪಟ್ಟಿ ಮತ್ತು ಹಿಂಭಾಗದ ಪಟ್ಟಿ, ಅಗಲವಾದ ಚಪ್ಪಟೆಪಾದ ಆನಿಕೆಯಿಂದ ಕೂಡಿದ ಉಂಗುರಾಕಾರದ ರಿಕಾಪು. ಕಡಿವಾಣದಲ್ಲಿ ನೊಸಲಪಟ್ಟಿ, ಕಪೋಲ ಭಾಗಗಳು, ಗಂಟಲು ಹಾಗೂ ಮೂಗು ಪಟ್ಟಿಗಳು ಸೇರಿರುತ್ತವೆ. ಇವೆಲ್ಲವನ್ನೂ ಲೋಹದ ಭಾಗಗಳಿಂದ ಕೂಡಿಸಿರಬೇಕು. ಕೆಲವು ಒಂಟೆಗಳ ಹೊಟ್ಟೆಯ ಮೇಲೆ ನಗಾರಿಗಳನ್ನು ಇಟ್ಟು, ಅದರ ಮೇಲೆ ಕುಳಿತಿರುವವರು ನಗಾರಿಬಾರಿಸುವ ಕ್ರಿಯೆಯಲ್ಲಿ ತೊಡಗಿರುವಂತೆ ಕೆತ್ತಲಾಗಿದೆ. ಈ ಪ್ರಾಣಿಗಳ ಚಲನ ಕ್ರಿಯೆಯು ತುಂಬ ಸಹಜವಾಗಿದೆ. ಅದರ ಕಾಲುಗಳು ಉದ್ದವಾಗಿಯೂ ಇವೆ.

**ಎತ್ತಿನ ಗಾಡಿಗಳು** (ಚಿತ್ರ-೫) : ಎತ್ತಿನ ಗಾಡಿ ಈ ಅವಧಿಯಲ್ಲಿ ಬಳಸುತ್ತಿದ್ದ ಅತ್ಯಂತ

---

21 ಜಿ.ಟಿ. ದಾತೆ, ದಿ ಆರ್ಟ್ ಆಫ್ ವಾರ್ ಇನ್ ಏನ್ಷಿಯೆಂಟ್ ಇಂಡಿಯಾ, ಪುಟ ೪೬

22 ಆರ್ಕಿಟೆಕ್ಚರ್ ಅಂಡ್ ಸ್ಕಲ್ಪ್‌ಚರ್ ಇನ್ ಮೈಸೂರು, ನಂ. I, ದಿ ಕೇಶವ ಟೆಂಪಲ್ ಆಟ್ ಸೋಮನಾಥಪುರ ಫಲಕ V

23 ಎಂ.ಎ.ಆರ್. ೧೯೩೩, ಫಲಕ V

24 ಅದೇ ; ೧೯೩೨, ಫಲಕ X ಮತ್ತು ಪು. ೨೩

ಪ್ರಾಚೀನವಾದ ಹಾಗೂ ಅತಿ ಸಾಮಾನ್ಯವಾದ ವಾಹನವಾಗಿರಬಹುದು. ಹಳ್ಳಿಯ ಜನರು ಇದನ್ನು ತುಂಬ ಬಳಸುತ್ತಿದ್ದರು. ಸಾಕು ಪ್ರಾಣಿಗಳಾದ ಎತ್ತುಗಳು ಹೊಯ್ಸಳರ ಕಾಲದಲ್ಲಿ ಹಳ್ಳಿಯ ಜನರಿಗೆ ಸಂಚಾರದ ಸಾಧನಗಳಾಗಿದ್ದವು. ಸೋಮನಾಥಪುರದ ಕೇಶವ ದೇವಾಲಯ,[25] ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ಸ್ವಾಮಿ ದೇವಾಲಯದ[26] ವಾಸ್ತು ಶಿಲ್ಪದಲ್ಲಿ ಈ ಎತ್ತಿನ ಗಾಡಿಗಳ ಉದಾಹರಣೆಗಳನ್ನು ಗಮನಿಸಬಹುದು. ಇಲ್ಲಿ ಒಂದು ಜೊತೆ ದೊಡ್ಡ ಚಕ್ರಗಳ ಮೇಲೆ ವಿಶಾಲವಾದ ಏಣಿಯಂಥ ಉದ್ದವಾದ ಕಟ್ಟನಿಂದ ಕೂಡಿರುವ ಗಾಡಿಯಿದೆ. ಗಾಡಿಯ ಮುಂಭಾಗದಲ್ಲಿ ದುಂಡುಕೊರಡನ್ನು ಸೇರಿಸಲಾಗಿದೆ. ಎತ್ತುಗಳನ್ನು ಕತ್ತಿನ ಭಾಗದಲ್ಲಿ ಕಟ್ಟಲಾಗುತ್ತಿತ್ತು; ನೊಗವನ್ನು ಕತ್ತಿನ ಮೇಲೆ ಇಡಲಾಗಿದೆ. ಗಾಡಿ ಹೊಡೆಯುವವನು ಚಾವಟಿ, ಲಗಾಮುಗಳನ್ನು ಬಳಸಿ ಆದನ್ನು ಹತೋಟಿಯಲ್ಲಿಟ್ಟುಕೊಳ್ಳುತ್ತಿದ್ದ. ಸಾಮಾನ್ಯವಾಗಿ ಎತ್ತಿನ ಕತ್ತಿನ ಭಾಗವನ್ನು ಲೋಹದ ಪಟ್ಟಿಗಳಿಂದ ಅಲಂಕರಿಸಲಾಗುತ್ತಿತ್ತು. ಬಂಡಿಯ ಒಡಲ ಭಾಗ ಸರಳವಾಗಿದ್ದು, ಹೆಚ್ಚಿನ ಸಂಖ್ಯೆಯಲ್ಲಿ ಜನ ಅಥವಾ ಸಾಮಾನು ಸರಂಜಾಮು ಅಥವಾ ಆಹಾರ ಪದಾರ್ಥಗಳು ಮೊದಲಾದುವನ್ನು ಸಾಗಿಸಲು ಸಹಾಯ ಮಾಡುತ್ತಿತ್ತು.

**ಕೈಗಾಡಿ (ಚಿತ್ರ-೬) :** ಜನರು, ಸಾಮಾನು ಸರಂಜಾಮು,ಆಹಾರ ಪದಾರ್ಥಗಳು ಮೊದಲಾದುವನ್ನು ಸ್ವಲ್ಪ ಸ್ವಲ್ಪ ದೂರಗಳಿಗೆ ಸಾಗಿಸಲು ಹೊಯ್ಸಳರ ಕಾಲದ ಪಟ್ಟಣಗಳು ಹಾಗೂ ಹಳ್ಳಿಗಳಲ್ಲಿ ಕೈಗಾಡಿಗಳನ್ನು ಬಳಸುತ್ತಿದ್ದಿರಬೇಕು. ನುಗ್ಗೆಹಳ್ಳಿಯ ಲಕ್ಷ್ಮೀನರಸಿಂಹ ಸ್ವಾಮಿ ದೇವಾಲಯ[27] ಹಾಗೂ ಸೋಮನಾಥಪುರದ ಕೇಶವ ದೇವಾಲಯದ[28] ದಕ್ಷಿಣ ಗೋಡೆಯ ಅಡ್ಡಪಟ್ಟಿಯ ಪಾಗಾರದಲ್ಲಿ ಕೈಗಾಡಿಗಳನ್ನು ಚಿತ್ರಿಸಲಾಗಿದೆ.

ಆ ದಿನಗಳಲ್ಲಿ ಮಾನವಶಕ್ತಿಯ ಬಳಕೆಯು ತುಂಬ ಸಾಮಾನ್ಯವಾಗಿತ್ತೆಂದು ಅವು ಸೂಚಿಸುತ್ತವೆ. ಬಂಡಿಯ ನೊಗವನ್ನು ಹಿಡಿದುಕೊಂಡು ಬಂಡಿಯನ್ನು ಎಳೆಯುತ್ತಿರುವುದನ್ನು ಅವು ಸಾಧಾರಣವಾಗಿ ಚಿತ್ರಿಸುತ್ತವೆ. ನೊಗವು ಬಾಗಿದೆ ; ಇದನ್ನು ಬಾಗಿದ ಆಕಾರದ ತೊಲೆಗೆ ಸೇರಿಸಲಾಗಿದ್ದು, ಇದನ್ನು ಬಂಡಿಯ ಒಡಲಿಗೆ ಸೇರಿಸಲಾಗಿರುತ್ತದೆ. ಗಾಡಿಯ ಒಡಲು ವಿಶಾಲವಾದ ನಿಚ್ಚಣಿಕೆಯಂಥ ಉದ್ದವಾದ ಚೌಕಟ್ಟಿನಿಂದ ಕೂಡಿದೆ. ಇದನ್ನು ದೊಡ್ಡ ಚಕ್ರಗಳೆರಡರ ಮೇಲೆ ಕೂಡಿಸಲಾಗಿದೆ.[29] ಗಾಡಿಯ ಪಾರ್ಶ್ವಭಾಗವನ್ನು ಮಧ್ಯೆ ಮಧ್ಯೆ ಪಟ್ಟಿಗಳಿರುವಂತೆ ಹೂಗಿಡ ವಿನ್ಯಾಸಗಳಿಂದ ಸುಂದರವಾಗಿ ಅಲಂಕರಿಸಲಾಗಿದೆ. ಈ ಬಗೆಯ ಗಾಡಿಗಳು ತುಂಬ ಹಗುರವಾಗಿದ್ದು, ಇವು ತುಂಬ ಸಣ್ಣದಾಗಿರುವುದರಿಂದ ಹೆಚ್ಚಿನ ಹೊರೆ ಸಾಗಿಸಲಾಗುತ್ತಿರಲಿಲ್ಲ.

**ಕತ್ತಿ (ಚಿತ್ರ-೭) :** ಹೊಯ್ಸಳ ದೇವಾಲಯಗಳ ಪಟ್ಟಿಕೆಗಳು ಮತ್ತು ಅಡ್ಡಪಟ್ಟಿಯ ಪಾಗಾರ (ಕೈಪಿಡಿ ಗೋಡೆ)ಗಳಲ್ಲಿ ಕತ್ತಿಗಳನ್ನು ಕೆತ್ತಿರುವುದು ತುಂಬ ಅಪೂರ್ವವಾದರೂ, ಅಲ್ಲಲ್ಲಿ ಅವುಗಳ ಚಿತ್ರಗಳಿರುವುದರಿಂದ ಹೊಯ್ಸಳ ಶಿಲ್ಪಿಗಳಿಗೆ ಅವುಗಳ ದೈಹಿಕ ಲಕ್ಷಣಗಳ ಗಳ ಬಗ್ಗೆ ಸಾಕಷ್ಟು ಪರಿಚಯವಿತ್ತೆಂಬುದು ತಿಳಿಯುತ್ತದೆ. ಹೊಯ್ಸಳರ ಕಾಲದ ಸಮಾಜದ ಕೆಳದರ್ಜೆಯ ಜನರು ಅವನ್ನು ಬಳಸುತ್ತಿದ್ದಿರಬೇಕು. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯ[30] ಪಶ್ಚಿಮದ ಮುಖ್ಯ ಗೋಡೆಯಲ್ಲಿ ಅಮೃತಾಪುರದ ಅಮೃತೇಶ್ವರ ದೇವಾಲಯದ[31] ಅಡ್ಡಪಟ್ಟಿಯ ಪಾಗಾರದಲ್ಲಿ, ಬೇಲೂರಿನ

---

25 ಅದೇ ; ೧೯೩೨ ಪುಟ ೨೨ ಮತ್ತು ಆರ್ಕಿಟೆಕ್ಚರ್ ಆಂಡ್ ಸ್ಕಲ್ಪ್‌ಚರ್ ಇನ್ ಮೈಸೂರು ನಂ. I, ದಿ ಕೇಶವ ಟೆಂಪಲ್ ಆಟ್ ಸೋಮನಾಥಪುರ, ಫಲಕ V

26 ಎಂ.ಎ.ಆರ್. ೧೯೧೩, ಫಲಕ V

27 ಆರ್ಕಿಟೆಕ್ಚರ್ ಆಂಡ್ ಸ್ಕಲ್ಪ್‌ಚರ್ ಇನ್ ಮೈಸೂರು, ನಂ. I, ದಿ ಕೇಶವ ಟೆಂಪಲ್ ಆಟ್ ಸೋಮನಾಥಪುರ, ಫಲಕ V

28 ಎಂ.ಎ.ಆರ್. ೧೯೩೩, ಫಲಕ V

29 ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾ, ಸಂಪುಟ ೪, ಪುಟ ೯೭೧

30 ಎಂ.ಎ.ಆರ್, ೧೯೩೦ ಫಲಕ XII ಚಿತ್ರ ೨

31 ಅದೇ ; ೧೯೩೯, ಫಲಕ IV

ಕೇಶವ ದೇವಾಲಯದ[32] ನವರಂಗದ ಮಧ್ಯದ ಭುವನೇಶ್ವರಿಯಲ್ಲಿ ಈ ಪ್ರಾಣಿಯ ಕೆತ್ತನೆಗೆ ಉದಾಹರಣೆಗಳಿವೆ. ಉದ್ದವಾದ ಕಿವಿಗಳಿಂದ ಕೂಡಿದ ಈ ಪ್ರಾಣಿಯ ಕುಳ್ಳಾದ ಆಕಾರವು ತನ್ನ ಸಹಜ ದೈಹಿಕ ಲಕ್ಷಣಗಳೊಡನೆ ಪರಿಪೂರ್ಣವಾಗಿರುವಂತೆ ತೋರುತ್ತದೆ.

**ದೋಣಿಗಳು ನಾವೆಗಳು** : ಪಟ್ಟಿಕೆಗಳು ಮತ್ತು ಅಡ್ಡಪಟ್ಟಿಯ ಪಾಗಾರಗಳ ಶಿಲ್ಪಗಳಲ್ಲಿ ಜಲಸಾರಿಗೆಯ ಸಾಧನಗಳಾಗಿ ಯಾವುದೇ ದೋಣಿ, ಹಡಗು, ನಾವೆ ಅಥವಾ ಇತರ ಯಾವುದೇ ಸಾಧನಗಳು ಚಿತ್ರಿತವಾಗಿಲ್ಲದಿದ್ದರೂ, ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ[33] ಪಟ್ಟಿಕೆಗಳಲ್ಲಿ ನದಿಯ ಚಿತ್ರಣ–ಇದರಲ್ಲಿ ನದಿಯಲ್ಲಿ ರಥ ದಾಟುತ್ತಿರುವುದು ಕಂಡು ಬರುತ್ತದೆ—ಅಮೃತಾಪುರದ ಅಮೃತೇಶ್ವರ ದೇವಾಲಯದಲ್ಲಿನ[34] ಶಿಲ್ಪಾಲಂಕಾರ ಪಟ್ಟಿಗಳು, ಮತ್ತು ಸೋಮನಾಥಪುರದ ಕೇಶವ ದೇವಾಲಯದ[35] ಪೌರಾಣಿಕ ಅಲಂಕಾರಪಟ್ಟಿಗಳಲ್ಲಿನ ನದಿಯ ಚಿತ್ರ ಪರೋಕ್ಷವಾಗಿ, ಹೊಯ್ಸಳರ ಪ್ರಾಂತದಲ್ಲಿ (ಆಳ್ವಿಕೆಯ ಕಾಲದಲ್ಲಿ) ಹಡಗುಗಳು ಇದ್ದಿರಬಹುದಾದುದನ್ನು ಸೂಚಿಸುತ್ತವೆ. ○

---

32 ಅದೇ ; ೧೯೩೮, ಪುಟ ೪೪

33 ಅದೇ ; ೧೯೩೦, ಪುಟ ೪೦

34 ಅದೇ ; ೧೯೩೧, ಫಲಕ IV ಚಿತ್ರ ೫ ಮತ್ತು ಪುಟ ೧೦

35 ಅದೇ ; ೧೯೩೨, ಪುಟ ೨೧

# ಧಾರವಾಡ ಜಿಲ್ಲೆಯಲ್ಲಿ ಇತ್ತೀಚೆಗೆ ಕಂಡು ಬಂದ ಕೆಲವು ಮಹತ್ವದ ಇಟ್ಟಿಗೆ ದೇವಾಲಯಗಳು

**ಡಾ|| ರು.ಮ ಷಡಕ್ಷರಯ್ಯ**

ಕನ್ನಡ ಸಂಶೋಧನ ಸಂಸ್ಥೆಯ ವತಿಯಿಂದ ಧಾರವಾಡ ಜಿಲ್ಲೆಯ ಶಿಗ್ಗಾಂವ ತಾಲೂಕಿನ ಶಿಗ್ಗಾಂವ, ಹುಲುಗೂರ, ಶಿಶುವಿನಾಳ, ಬನ್ನಿಯೂರ ; ಕುಂದಗೋಳ ತಾಲೂಕಿನ ಗುಡಗೇರಿ ; ಬ್ಯಾಡಗಿ ತಾಲೂಕಿನ ಕಾಗಿನೆಲೆ ; ಹಿರೇಕೆರೂರ ತಾಲೂಕಿನ ಚಿಕ್ಕೇರೂರು, ಮತ್ತಿಹಳ್ಳಿ ಸಾತೇನಹಳ್ಳಿಗಳಲ್ಲಿ ಪ್ರಾಚ್ಯವಸ್ತುಗಳ ಅನ್ವೇಷಣೆಯನ್ನು ಇತ್ತೀಚಿಗೆ ಕೈಕೊಂಡು ಹಲವಾರು ಪ್ರಾಚೀನ ನೆಲೆಗಳನ್ನು, ದೇವಾಲಯ, ಶಿಲ್ಪ, ಶಾಸನಗಳನ್ನು ಕಂಡು ಹಿಡಿಯಲಾಯಿತು.

ಶಾತವಾಹನರ ಕಾಲದ ಸುಮಾರು ಎರಡು ಸಾವಿರ ವರ್ಷ ಹಳೆಯ ಪ್ರಾಚೀನ ನೆಲೆಗಳು (ಚಿಕ್ಕೇರೂರು, ಶಿಗ್ಗಾವಿ, ಹುಲಗೂರು), ಆ ಕಾಲದ ನಾಣ್ಯಗಳನ್ನು (ಶಿಗ್ಗಾವ), ಇಟ್ಟಿಗೆ ದೇವಾಲಯಗಳನ್ನು (ಹುಲಗೂರು, ಸಾತೇನಹಳ್ಳಿ, ಬನ್ನಿಯೂರು), ಕ್ರಿ.ಶ. ೨ನೆಯ ಶತಮಾನದ ಶಿವಲಿಂಗ (ಚಿಕ್ಕೇರೂರು), ಕ್ರಿ.ಶ. ೭ನೆಯ ಶತಮಾನದ ಎರಡು ಶಿವಲಿಂಗ (ಸಾತೇನಹಳ್ಳಿ, ಬನ್ನಿಯೂರು), ಗಜಲಕ್ಷ್ಮಿ ತೋರಣ ಫಲಕಗಳು (ಶಿಗ್ಗಾವ), ಕ್ರಿ.ಶ. ೯–೧೦ನೆಯ ಶತಮಾನದ ಶಿವಲಿಂಗ, ಭೈರವ, ಬ್ರಹ್ಮಸ್ತಂಭ ನೀತಿಕಥೆಯುಳ್ಳ ಕಂಬಗಳು, ಸಪ್ತಮಾತೃಕೆಯರು, ಹನ್ನೊಂದು ಮಂಗಳ ಚಿಹ್ನೆಯುಳ್ಳ ಗಜಲಕ್ಷ್ಮಿ ಶಾಸನ ಫಲಕ, ದಕ್ಷ, ತೋರಣ ಫಲಕ ಮುಂತಾದ ಶಿಲ್ಪಗಳು (ಹುಲಗೂರು), ಸೂರ್ಯ (ಬನ್ನಿಯೂರು), ಕ್ರಿ.ಶ. ೧೧-೧೩ನೆಯ ಶತಮಾನದ ದೇವಾಲಯಗಳು, ಅನಂತಶಯನ, ವೀರಭದ್ರ, ವೀರಗಲ್ಲು, ಸತೀಕಲ್ಲು ಮುಂತಾದವುಗಳು ಮುಖ್ಯವಾಗಿವೆ. ಇವುಗಳಲ್ಲಿ ಶಾತವಾಹನರ ಕಾಲದ ನಾಣ್ಯಗಳು, ಇಟ್ಟಿಗೆಗಳು, ಬಾದಾಮಿ ಚಾಲುಕ್ಯರ ಮತ್ತು ರಾಷ್ಟ್ರಕೂಟರ ಕಾಲದ ಶಿಲ್ಪಗಳು ಹೆಚ್ಚು ಪ್ರಮಾಣದಲ್ಲಿ ಕಂಡು ಬಂದಿರುವುದು ವಿಶೇಷವಾಗಿದೆ. ಪ್ರಥಮ ಬಾರಿಗೆ ಈ ಭಾಗದಲ್ಲಿ ಪ್ರಾಚೀನ ಇಟ್ಟಿಗೆ ದೇವಾಲಯಗಳು ಕಂಡು ಬಂದಿರುವುದು ಮಹತ್ವದ ವಿಷಯವಾಗಿದೆ.

ಅನ್ವೇಷಣೆಯ ಕಾಲದಲ್ಲಿ ಇಟ್ಟಿಗೆ ದೇವಾಲಯಗಳು ಮೂರು-ನಾಲ್ಕು ಸ್ಥಳಗಳಲ್ಲಿ ಕಂಡು ಬಂದಿವೆ. ಆ ಪ್ರದೇಶದಲ್ಲಿ ಇವುಗಳ ಸಂಗಡ ಕಂಡುಬಂದ ಇನ್ನಿತರ ಇಟ್ಟಿಗೆ ಕಟ್ಟಡದ ಅವಶೇಷಗಳನ್ನೂ ಸ್ಥೂಲವಾಗಿ ವಿವರಿಸಲಾಗಿದೆ.

ಈ ದೇವಾಲಯಗಳನ್ನು ಕಟ್ಟಿಸಿದ ಬಗ್ಗೆಯಾಗಲೀ ಅಥವಾ ಜೀರ್ಣೋದ್ಧಾರ ಮಾಡಿದ ವಿಷಯವಾಗಲೀ ತಿಳಿದುಬರುವುದಿಲ್ಲ. ಕಾಲಮಾನಗಳನ್ನು ಗುರುತಿಸಲು ಅವುಗಳ ವಾಸ್ತುಶಿಲ್ಪದ ಭಾಗಗಳ ಆಕಾರ ಮತ್ತು ಲಕ್ಷಣಗಳು, ಅವುಗಳ ಗಾತ್ರದ ನಮೂನೆ ಇತ್ಯಾದಿಯನ್ನು ಪರಿಶೀಲಿಸಲಾಗಿದೆ.

**ಇಟ್ಟಿಗೆ ಕಟ್ಟಡಗಳ ಅವಶೇಷಗಳು**

೧) **ಶಿಗ್ಗಾವಿ :** ಇಟ್ಟಿಗೆ ಕಟ್ಟಡಗಳು ಅವಶೇಷಗಳು ಶಿಗ್ಗಾವಿಯ ಪಶ್ಚಿಮಕ್ಕೆ ಒಂದು ವಿಶಾಲ

ಪ್ರಾಚೀನ ಹಾಳು ನೆಲೆಯಲ್ಲಿ ಕಂಡುಬಂದಿವೆ. (ಚಿತ್ರ –೧) ಆ ನೆಲೆಯ ಮಣ್ಣನ್ನು ವಿವಿಧ ಕಾರ್ಯಕ್ಕೆ ಉಪಯೋಗಿಸುವದಕ್ಕೋಸ್ಕರ ಸುಮಾರು ೨–೩ ಮೀಟರ್ ಆಳದವರೆಗೆ ಅಲ್ಲಲ್ಲಿ ತೋಡಿದ ಗುಂಡಿಗಳಲ್ಲಿ ಇಟ್ಟಿಗೆ ಕಟ್ಟಡಗಳ ಗೋಡೆಗಳು ಬೆಳಕಿಗೆ ಬಂದಿವೆ. ಆ ಕಾಲದ ಬ್ರಾಹ್ಮಿಲಿಪಿಯುಳ್ಳ ಕೆಲ ನಾಣ್ಯಗಳು ಸಿಕ್ಕಿವೆ. ಅಲ್ಲಿ ಸಂಗ್ರಹಿಸಿದ ಎರಡು ಅಳತೆಯ ಇಟ್ಟಿಗೆಗಳ ಗಾತ್ರ ೩೧ × ೨೦ × ೯ ಸೆಂ.ಮಿ. ೩೩ × ೨೦ × ೭ ಸೆಂ.ಮೀ. ಅಲ್ಲಿರುವ ಕ್ರಿ.ಶ. ೭ನೆಯ ಶತಮಾನದಿಂದ ಕ್ರಿ.ಶ. ೧೯ ಶತಮಾನದವರೆಗಿನ ಶಾಸನಗಳಲ್ಲಿ ಈ ಕಟ್ಟಡಗಳ ಉಲ್ಲೇಖವಿಲ್ಲ.[1]

೨) **ಚಿಕ್ಕೇರೂರು :** ಈ ಗ್ರಾಮದ ಉತ್ತರಕ್ಕಿರುವ ಬಳ್ಳಾರಮ್ಮ ದೇವಾಲಯದ ತಳಪಾಯ ಮತ್ತು ಹೊರ ಭಾಗದಲ್ಲಿ ಸುತ್ತಲೂ ಇಟ್ಟಿಗೆ ಕಟ್ಟಡದ ಅವಶೇಷಗಳು ಬೆಳಕಿಗೆ ಬಂದಿವೆ. ಅಲ್ಲಿಯ ಇಟ್ಟಿಗೆಯ ಅಳತೆ ೩೭×೧೯×೯ ಸೆಂ.ಮೀ. ಈ ದೇವಾಲಯದ ಸುತ್ತಲೂ ಕಾಂಪೌಂಡ್ ಕಟ್ಟುವಾಗ ಈ ಅವಶೇಷಗಳು ಹೊರಬಂದಿದ್ದವು. ಆದರೆ ಅಲ್ಲಿಯ ಕ್ರಿ.ಶ. ೯೫೪ ರಿಂದ ೧೪ನೆಯ ಶತಮಾನದ ಶಾಸನಗಳಲ್ಲಿ[2] ಈ ಕಟ್ಟಡಗಳ ಉಲ್ಲೇಖವಿಲ್ಲ. ಈ ಇಟ್ಟಿಗೆಗಳ ಗಾತ್ರ ಮತ್ತು ನಮೂನೆಯು ಕ್ರಿ.ಶ. ೨–೩ನೆಯ ಶತಮಾನದ ನೆಲೆಗಳ ಇಟ್ಟಿಗೆಗಳನ್ನು ಹೋಲುತ್ತವೆ.

**ಇಟ್ಟಿಗೆ ದೇವಾಲಯಗಳು**

೧) **ಸಾತೇನಹಳ್ಳಿ :** ಈ ಗ್ರಾಮದ ಕ್ರಿ.ಶ. ೧೧೧೪ ರಿಂದ ಸುಮಾರು ಕ್ರಿ.ಶ. ೧೬ನೆಯ[3] ಶತಮಾನದವರೆಗಿನ ಶಾಸನಗಳಲ್ಲಿ ಅಲ್ಲಿಯ ಇಟ್ಟಿಗೆಯ ಈಶ್ವರಗುಡಿ (ರಾಮೇಶ್ವರ ಗುಡಿ)ಯು ಉಲ್ಲೇಖವಿಲ್ಲ. ಈ ದೇವಾಲಯವು ಈ ಗ್ರಾಮಕ್ಕೆ ಹೊಂದಿ ಪೂರ್ವಕ್ಕಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯ ಅಲ್ಲಿಯ ಹತ್ತಿರದ ಕೆರೆ ದಂಡೆಯ ಕಡೆ ಮುಖಮಾಡಿದೆ. ಮತ್ತು ಆದರ ಶಿಖರ ಭಾಗದಲ್ಲಿ ಗಾರೆಯ ಹೊದಿಕೆಯಿದೆ (ಚಿತ್ರ ನಂ. ೨-೩). ಇಟ್ಟಿಗೆ ಮತ್ತು ಶಿಲೆಯಿಂದ ಈ ದೇವಾಲಯವನ್ನು ಕಟ್ಟಿರುವುದು ಹೊರನೋಟದಲ್ಲೇ ಕಂಡುಬರುವುದು. ಅಧಿಷ್ಠಾನದ ಕೆಳ ಅರ್ಧಭಾಗ ಮಣ್ಣಲ್ಲಿ ಹೂತಿರುವದು. ಕ್ರಿ.ಶ. ೧೧೧೪ರ ಇಲ್ಲಿಯ ದತ್ತಿ ಶಾಸನದಲ್ಲಿ[4] ಈ ದೇವಾಲಯವನ್ನು ಗುಂಡೇಶ್ವರ ಎಂದು ಕರೆಯಲಾಗಿದೆ. ಶಿಖರದ ಮೇಲೆ ಹುಲ್ಲು ಬೆಳೆದು ನಿಂತಿರುವುದರಿಂದ ಸ್ತೂಪಿ - ಕಳಸ ಲಕ್ಷಣಗಳು ತಿಳಿಯದಾಗಿದೆ. ಆ ದೇವಾಲಯಕ್ಕೆ ಗರ್ಭಗೃಹ, ಅಂತರಾಳ, ಸಭಾ ಮಂಟಪ ಮತ್ತು ಎದುರಿಗೆ ಪ್ರತ್ಯೇಕ ನಂದಿ ಮಂಟಪಗಳಿವೆ. ಗರ್ಭಗೃಹದ ಮೇಲೆ ಕದಂಬನಾಗರ ಶೈಲಿಯ ಶಿಖರವಿದೆ. ಇಟ್ಟಿಗೆಯಿಂದ ಗರ್ಭಗೃಹ–ಶಿಖರ ಮತ್ತು ಅಂತರಾಳದ ಗೋಡೆಗಳನ್ನು ಕಟ್ಟಲಾಗಿದ್ದು ಉಳಿದ ಭಾಗ ಕಪ್ಪು ಶಿಲೆಯಿಂದ ಕಟ್ಟಿದ ಸಭಾ ಮಂಟಪವಿದೆ. ಅದರ ಅಧಿಷ್ಠಾನದ ಹೊರಮೈಯು ಮೇಲಿನ ಫಲಕದಲ್ಲಿ ಕೆಳ ನಮೂನೆಯಿದೆ.

ಗರ್ಭಗೃಹದ ಹೊರಗೋಡೆಯ ಒಂದೊಂದು ಮೈಮೇಲೆ ಎರಡೆರಡು ಹಿಂಚಾಚು ಮತ್ತು ಮುಂಚಾಚುಗಳಿವೆ. ಅದರ ಮೇಲಿನ ಚೌಕಾಕಾರದ ಶಿಖರಕ್ಕೆ ಸುಮಾರು ಎಂಟು ಸಾಲಿನ (tier) ಮೆಟ್ಟಲುಗಳಿವೆ. ಮೇಲಕ್ಕೆ ಹೋದಂತೆ ಅದರ ಗಾತ್ರ ಕಡಿಮೆಯಾಗುತ್ತ ಹೋಗಿದೆ. ಶಿಖರದ ಒಂದೊಂದು ಮುಖದ ಮಧ್ಯ ಭಾಗದಲ್ಲಿ ಒಂದೊಂದು ತರದಲ್ಲಿ ಕೆಳಗಿನಿಂದ ಮೇಲಿನವರೆಗೆ ಅರ್ಧ ಗಂಭಗಳನ್ನು ಹೊಂದಿದ ಹಾಗೆ ಚಿಕ್ಕ ಹಿಂಚಾಚು ಮುಂಚಾಚುಗಳನ್ನು ತೋರಿಸಲಾಗಿದೆ. ಶಿಖರದ ಮುಂಭಾಗದಲ್ಲಿ ಸುಕನಾಸಿ ಅಥವಾ ಯಾವುದೇ ರೀತಿಯ ಗೂಡನ್ನು ಕಟ್ಟಿರುವುದಿಲ್ಲ (ಚಿತ್ರ ನಂ. ೪). ಆದರೆ ಶಿಖರ ಮುಂಭಾಗದಲ್ಲಿ ಹಾಳು ಮಣ್ಣನ್ನು ಸಭಾ ಮಂಟಪದ ಮುಂಭಾಗದ ಅಂಕಣಗಳ ಮಾಳಿಗೆಯ ಮೇಲೆ ಹಾಕಲಾಗಿದೆ.

---

1 K.I., I 15, 13, 14, 16, 17, 19, 20, 21, E.I.III, P. 212-13 ; E.I. VII, P.201 and 212 ; ; E.I., XIII : P. 170, 12–15 ; E.I., XXXIII P. 317-23
2 E.I., XXXIII P. 131-33 ಮುಂತಾದವು.
3 K.I., IV, 1 to 9
4 K.I., IV. 3

ಚೌಕಾಕಾರದ ಇಟ್ಟಿಗೆಯ ಗರ್ಭಗುಡಿಯ ಒಳಗಿನ ನಾಲ್ಕು ಮೂಲೆಗಳಲ್ಲಿ ನಾಲ್ಕು ಎತ್ತರದ ಶಿಲೆಯ ಅರ್ಧ ಗಂಬಗಳಿವೆ. ಒಂದೊಂದು ಗೋಡೆ ೨.೭೩ ಚದರ ಮೀಟರ್ ಇದೆ. ಬ್ರಹ್ಮಸೂತ್ರವನ್ನು ಹೊಂದಿದ ಸುಂದರ ಮತ್ತು ಬೃಹತ್ ಆಕಾರದ ಶಿವಲಿಂಗವು ಗರ್ಭ ಗುಡಿಯ ಮಧ್ಯದಲ್ಲಿದೆ. ಪಾರ್ಶ್ವನಾಡಿಗಳ ಗೆರೆಗಳು ಬಾಣ ದಂತೆ ಎರಡು ಸಮಾಂತರ ಲಂಬಕೋನದ ಗೆರೆಗಳ ಮೇಲಿಂದ ಸ್ವಲ್ಪ ಕೆಳಗಡೆ ಇಳಿದು ಉಡಿದಾರದಂತೆ ಶಿವ ಲಿಂಗದ ಮೇಲೆ ಸುತ್ತಿಕೊಂಡಿದೆ (ಚಿತ್ರ ೫). ಆ ಶಿವ ಲಿಂಗಕ್ಕೆ ತದನಂತರಕಾಲದ ಬೃಹತ್ ಪೀಠವಿದೆ. ಗರ್ಭ ಗುಡಿಯ ಶಿಲೆಯ ಛತ್ತು ಸರಳವಾಗಿವೆ. ಅದರ ಮತ್ತು ಮುಂದಿನ ಅಂತರಾಳದ ಬಾಗಿಲು ಚೌಕಟ್ಟು ಎತ್ತರ ವಾಗಿದ್ದು ಅವು ಸರಳವಾಗಿವೆ. ಅಂತರಾಳ ಚೌಕಾಗಿದೆ. ಮಣ್ಣಿನ ಕಟ್ಟೆಯನ್ನು ಬಲಗಡೆ ಕಟ್ಟಲಾಗಿದೆ. ಎರಡೂ ಬಾಗಿಲು ಪಟ್ಟಿಗಳ ಮೇಲೆ ಸರಳವಾದ ಮೂರು ಶಾಖೆ ಗಳಿವೆ. ಅವುಗಳ ಚೌಕಟ್ಟುಗಳ ಲಲಾಟ ಬಿಂಬದ ಮೇಲೆ ಗಜಲಕ್ಷ್ಮಿ ಚಿತ್ರಗಳಿವೆ. ಅಂತರಾಳದ ಬಾಗಿಲು ಚೌಕ ಟ್ಟಿನ ಬದಿಗಳಲ್ಲಿ ಮಾತ್ರ ಜಾಲಂದ್ರಗಳಿವೆ. ಅದರ ಬದಿಗಳ ಗೋಡೆಗಳಲ್ಲಿ ಚಿಕ್ಕ ಗೂಡುಗಳಿದ್ದು ಎಡಗಡೆಯ ಗೂಡಿ ನಲ್ಲಿ ಮಹಿಷಾಸುರಮರ್ದಿನಿ ಮತ್ತು ಬಲಗಡೆಯ ಗೂಡಿ ನಲ್ಲಿ ಭೈರವನ ಮೂರ್ತಿಗಳಿವೆ.

ಸಭಾಮಂಟಪ ವಿಶಾಲವಿದ್ದು (೬.೫ × ೬.೫೪ ಮೀ.) ಅದಕ್ಕೆ ಒಟ್ಟು ಒಂಭತ್ತು ಅಂಕಣಗಳಿವೆ. ಸಭಾ ಮಂಟಪದ ಮಧ್ಯದಲ್ಲಿ ನಾಲ್ಕು ಕಂಭಗಳಿವೆ (ಚಿತ್ರ ೬). ಅದರ ಮಧ್ಯದ ಭುವನೇಶ್ವರಿಯ ಛತ್ತಿನಲ್ಲಿ ಕಮಲ ಚಿತ್ರದ ಬದಲು ಕ್ರಿ.ಶ. ೧೧ನೆಯ ಶತಮಾನದ ನಾಲ್ಕು ವೀರಗಲ್ಲುಗಳನ್ನು ಹಾಕಲಾಗಿದೆ. ಇದರಿಂದಾಗಿ ಸಭಾ ಮಂಟಪದ ಛತ್ತನ್ನು ತದನಂತರದ ಕಾಲದಲ್ಲಿ ಪುನಃ ಕಟ್ಟಿರುವುದು ಗೊತ್ತಾಗುವುದು. ಕಂಬಗಳಿಗೆ ಪೀಠ ಗಳಿವೆ. ಸಭಾಮಂಟಪದ ಬಾಗಿಲು ಚೌಕಟ್ಟಿನ ಲಲಾಟ ಬಿಂಬದಲ್ಲಿ ಯಾವ ಚಿತ್ರಗಳೂ ಇರುವುದಿಲ್ಲ. ಬಾಗಿಲು ಚೌಕಟ್ಟಿನಲ್ಲಿ ಸರಳ ಮೂರು ಶಾಖೆಗಳಿವೆ.

ಎದುರಿಗೆ ತೆರೆದ ಚಿಕ್ಕ ಚೌಕಾಕಾರದ ಮಂಟಪದ ಮಧ್ಯೆ ದೇವಾಲಯದಲ್ಲಿಯ ಲಿಂಗಕ್ಕೆ ಮುಖಮಾಡಿ ಕೂಡಿಸಿದ ನಂದಿ ವಿಗ್ರಹವಿದೆ (ಚಿತ್ರ ನಂ. ೭). ನಾಲ್ಕು ಮೂಲೆಯಲ್ಲಿರುವ ಈ ಮಂಟಪದ ಕಂಬಗಳು ಸಭಾ ಮಂಟಪದಲ್ಲಿಯ ಕಂಬಗಳಿಗಿಂತ ಭಿನ್ನವಾಗಿವೆ.

೨)**ಹುಲಗೂರು :** ಕ್ರಿ.ಶ. ೧೦ನೆಯ ಶತಮಾನ ದಿಂದ ಸುಮಾರು ೧೪ನೆಯ ಶತಮಾನದವರೆಗಿನ ಶಾಸನ ಗಳು ಈ ಗ್ರಾಮದಲ್ಲಿವೆ. ಇತ್ತೀಚೆಗೆ ಭೂಮಿಯನ್ನು ಒಡೆಯುವಾಗ ಒಂದು ಶಿವ ದೇವಾಲಯದ ತಳಪಾಯದ ಅವಶೇಷಗಳು ಹೊರಬಂದವು. ಈ ಗ್ರಾಮದ ಉತ್ತರ ಕ್ಕಿರುವ ಶ್ರೀ ಮಹಮ್ಮದ್ ಯೂಸುಫ್ ಹಾಗೂ ಶ್ರೀ ಮಹಮ್ಮದ್‌ಗೌಸರ ಹೊಲದಲ್ಲಿ ಹಾಳಾದ ಈ ದೇವಾ ಲಯದ ತಳಪಾಯವು ಸಿಕ್ಕಿದೆ (ಚಿತ್ರ ೮).

ಈಗ ಉಳಿದಿರುವ ಅದರ ತಳಪಾಯದಲ್ಲಿ ಆ ದೇವಾಲಯದ ಗರ್ಭಗುಡಿ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪ ಭಾಗಗಳಿವೆ. ಗರ್ಭಗೃಹದಿಂದ ಅಂತರಾಳದ ಅರ್ಧ ಭಾಗದವರೆಗೆ ಗೋಡೆಯನ್ನು ಇಟ್ಟಿಗೆ ಯಿಂದ ಕಟ್ಟಿದ್ದು ಈಗ ಹೊರಬಂದಿದೆ. ಬ್ರಹ್ಮಸೂತ್ರ ವಿರುವ ಶಿವಲಿಂಗ ಗರ್ಭಗೃಹ ಮಧ್ಯದಲ್ಲಿದ್ದು ಅದರ ಕೆಳಗೆ ಒಂದು ಶಿಲೆಯ ೧.೮೫ ಮೀ. ಪ್ರನಾಳದ ಎಡ ಗಡೆಯ ಗೋಡೆಯಿಂದ ಹೊರಗಡೆ ಚಾಚಿದೆ. (ಚಿತ್ರ ೯-೧೦). ಮುಂದೆ ಚಿಕ್ಕ ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪಗಳಿವೆ.

ಇಟ್ಟಿಗೆ ಗೋಡೆ ಭಾಗವು ಅದರ ಎಡಭಾಗದಲ್ಲಿ ಉಳಿದಿದೆ. ನಾಲ್ಕು ಮೂಲೆಗಳಲ್ಲಿ ಅರ್ಧ ಕಂಬಗಳಿಗೆ ಉಪಯೋಗಿಸಿದ ಚೌಕಾದ ಪೀಠಗಳು ಗರ್ಭಗೃಹದಲ್ಲಿವೆ. ಮತ್ತು ಅಂತರಾಳದಲ್ಲಿ ಎರಡಿವೆ. ಅಂತರಾಳದಿಂದ ಮುಂದಿನ ಭಾಗದ ನೆಲವು ಹೆಚ್ಚು ಹಾಳಾಗಿದೆ. ಆದರೆ ಚಂದ್ರಪ್ರಭ ಶಿಲೆಯು ಅಂತರಾಳದಲ್ಲಿದೆ. ಮತ್ತು ಅಲ್ಲಲ್ಲಿ ಕೆಲ ಶಿಲೆಯ ಹಲಗೆಗಳು ಉಳಿದಿವೆ. ಈಗ ಉಳಿದಿರುವ ಇಟ್ಟಿಗೆಯ ಗೋಡೆಯ ಉದ್ದ ಮತ್ತು ಅಗಲ ೩.೦೦ × ೦.೬೫ ಸೆಂ. ಮೀ. ಇಟ್ಟಿಗೆಯ ಗಾತ್ರ ೩೩ × ೧೬.೭ ಸೆಂ.ಮೀ. ಚಿಕ್ಕ ಪ್ರಮಾಣದ ಉತ್ಖನನ

5. EI, XVI, p. 332-37; p. 329-32; KI, VI. 54

ದಿಂದ ಆ ಇಟ್ಟಿಗೆಯ ಗೋಡೆಯನ್ನು ಕಲ್ಲಿನ ಹಲಗೆಗಳ ಮೇಲೆ ಏರಿಸಿರುವುದು ತಿಳಿದುಬಂದಿತು. ಈಗಿರುವ ಮೂರು ಸಾಲಿನ ಎತ್ತರದ ಇಟ್ಟಿಗೆಯ ಗೋಡೆಯು ಸುಮಾರು ೦.೬೫ ಸೆಂ.ಮೀ. ಇದ್ದು ಚಿಕ್ಕ ಸಭಾ ಮಂಟಪದಲ್ಲಿ ಬಾಗಿಲುಗಳನ್ನು ಕೂಡಿಸುವುದಕ್ಕಾಗಿ ನಿರ್ಮಿಸಿದ ಸ್ವಲ್ಪ ಆಳ ಹೊಂದಿದ ರಂಧ್ರಪೀಠಗಳು ಅಲ್ಲಿವೆ.

ಬ್ರಹ್ಮಸೂತ್ರದ ಪಾರ್ಶ್ವರೇಖೆಗಳು ಎರಡು ಸಮಾಂತರ ಲಂಬಕೋನರೇಖೆಯು ಸ್ವಲ್ಪ ಕೆಳಭಾಗದಿಂದ ಬದಿಗಳಲ್ಲಿ ಸರಿದು ಮತ್ತೆ ಸ್ವಲ್ಪ ಕೆಳಗೆ ಸಮಾಂತರವಾಗಿ ಮುಂದೆ ಬದಿಗೆ ಕೆಳಗಡೆ ತಿರುಗಿ ವಿಸ್ತರಿಸುತ್ತ ಸುತ್ತಲೂ ಲಿಂಗದ ಮೇಲೆ ಉಡಿದಾರದಂತೆ ಸುತ್ತಿಕೊಂಡಿದೆ. ಬ್ರಹ್ಮಸೂತ್ರದ ಶೈಲಿಯು ಸುಮಾರು ಕ್ರಿ.ಶ. ೧೧-೧೨ ನೆಯ ಶತಮಾನದ ಶಿವಲಿಂಗದಂತಿದೆ. ಅಭಿಷೇಕದ ನೀರು ಹೋಗಲು ಪ್ರನಾಳದ ಜೋಡಣೆ ಪ್ರತ್ಯೇಕವಾಗಿ ಕಲ್ಪಿಸ ಲಾಗಿದೆ.

ತಳಪಾಯದ ಎಡಭಾಗದಲ್ಲಿ ಕಂಡುಬಂದ ಇಟ್ಟಿಗೆಯ ಗೋಡೆಯು ಗರ್ಭಗೃಹದಿಂದ ಅಂತರಾಳ ಮಧ್ಯಭಾಗದವರೆಗೆ ಹಾಸುಹಲಗೆಗಳ ಮೇಲೆ ಕಟ್ಟಿದ್ದು ಕಂಡುಬಂದಿದೆ. ತಳಪಾಯದಲ್ಲಿರುವ ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪಗಳು ಗಾತ್ರದಲ್ಲಿ ಬಹು ಚಿಕ್ಕದಾಗಿವೆ. ಅರ್ಧಗಂಬಗಳಿಗಿದ್ದ ಪೀಠಗಳು, ಗರ್ಭಗೃಹ ಮತ್ತು ಅಂತರಾಳದ ಮೂಲೆ ಭಾಗದಲ್ಲಿ ಕಂಡುಬಂದಿವೆ. ಕೆಲವು ಅಲ್ಲಿ ಈಗ ಕಂಡು ಬಂದಿಲ್ಲ. ಗಾತ್ರದಲ್ಲಿ ಅರ್ಧಗಂಬಗಳು ಬಹು ಚಿಕ್ಕವು. ಬಾಗಿಲುಗಳನ್ನು ಕೂಡಿಸುವ ರಂಧ್ರವುಳ್ಳ ಎರಡು ಚಿಕ್ಕ ಗಾತ್ರದ ಪೀಠಗಳು ಸಭಾಮಂಟಪದ ಮುಂಭಾಗದಲ್ಲಿವೆ. ಬಹುಶಃ ಬಾಗಿಲುಗಳನ್ನು ಕೂಡಿಸುವುದಕ್ಕಾಗಿ ಅವುಗಳನ್ನು ಕಲ್ಪಿಸಿರಬೇಕೆಂದು ಸ್ಪಷ್ಟವಾಗಿ ಗೋಚರಿಸುವುದು. ಈ ಹಾಳಾದ ದೇವಾಲಯದ ತಳಪಾಯದಲ್ಲಿ ಬಹು ಕಡಿಮೆ ಗಾತ್ರದಲ್ಲಿರುವ ಅದರ ವಿವಿಧ ಭಾಗಗಳು, ಅರ್ಧಗಂಬಗಳನ್ನು, ಅದರ ಅಳಿದುಳಿದ ಇಟ್ಟಿಗೆ ಗೋಡೆಯ ದಪ್ಪವಾದ ರಚನೆಯನ್ನು ಪರಿಶೀಲಿಸಿದಾಗ ಆ ದೇವಾಲಯದ ಎತ್ತರ ಬಹು ಕಡಿಮೆ ಇದ್ದಿತೆಂದು ಹೇಳಬಹುದು. ಇಟ್ಟಿಗೆ ಗೋಡೆಯ ತಳಪಾಯದಲ್ಲಿ ಅಧಿಷ್ಠಾನದ ಅವಶೇಷಗಳು ಕಂಡುಬಂದಿರುವುದಿಲ್ಲ. ಇನ್ನಿತರ ಅವಶೇಷಗಳಾದ ಕಂಬಗಳು, ತೊಲೆಗಳು, ಬಾಗಿಲು ಚೌಕಟ್ಟು ಅಲ್ಲಿ ಕಂಡುಬಂದಿಲ್ಲ. ಇದರಿಂದಾಗಿ ಈ ದೇವಾಲಯದ ಕಟ್ಟಡ ಅಪೂರ್ಣವಾಗಿತ್ತೇ? ಎಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲ.

**೩) ಬನ್ನಿಯೂರು** : ಸುಮಾರು ಕ್ರಿ.ಶ. ೮ರಿಂದ ಕ್ರಿ.ಶ. ೧೨ನೆಯ ಶತಮಾನದ ಮೂರು ಶಾಸನಗಳು[6] ಈ ಗ್ರಾಮದ ಪಾಂಡವರ ದೇವಾಲಯಗಳ ಹತ್ತಿರವಿವೆ. ಈ ಗ್ರಾಮದ ದಕ್ಷಿಣಕ್ಕೆ ಎರಡು ಕಡೆ ಪಾಂಡವರ ಹೆಸರಿನ ದೇವಾಲಯಗಳಿವೆ. ಇಟ್ಟಿಗೆಯಿಂದ ನಿರ್ಮಿಸಿದ ದೇವಾಲಯ ಒಂದು ಹೊಲದಲ್ಲಿದ್ದು ಅದಕ್ಕೆ ಭೀಮೇಶ್ವರ ಅಥವಾ ಭೀಮ ದೇವಸ್ಥಾನ ಎಂದು ಹೆಸರು. ಮತ್ತೊಂದೆಡೆ ಕೃಷ್ಣ, ಧರ್ಮರಾಯ, ಅರ್ಜುನ, ನಕುಲ, ಕುಂತಿ, ಸಹದೇವ, ಕಾಳಿಕಾದೇವಿ, ಬಸವಣ್ಣ ಇವರ ಗುಡಿಗಳ ಸಮೂಹವಿದೆ (ಚಿತ್ರಗಳು ೧೧).

ಪೂರ್ವಾಭಿಮುಖವಾದ ಇಟ್ಟಿಗೆ ದೇವಾಲಯದ ಮಾಳಿಗೆ ಅಂಚುಗಳಲ್ಲಿ ಮುಂಭಾಗದ ಅಂಕಣ ಮತ್ತು ಗೋಡೆಯ ಅಲ್ಪಭಾಗ ಶಿಥಿಲಗೊಂಡಿದೆ (ಚಿತ್ರ ೧೨). ಅದಕ್ಕೆ ಚೌಕಾಕಾರದ ಒಂದು ಗರ್ಭಗೃಹ ಮತ್ತು ಅಳಿದುಳಿದ ಅಂತರಾಳದ ಅಂಕಣ ಇವೆ. ಆ ಅಂಕಣದಲ್ಲಿ ತೊಲೆಗಳನ್ನು ಹೊತ್ತು ನಿಂತ ನಾಲ್ಕು ಅರ್ಧಕಂಬಗಳಿವೆ. ಇಟ್ಟಿಗೆ ಗೋಡೆಗೆ ಲೇಪಿಸಿದ ಸುಣ್ಣ ಅಲ್ಲಲ್ಲಿ ಕಾಣಿಸುತ್ತದೆ. ಎತ್ತರದಲ್ಲಿ ಅದರ ಹೊಸ ಗೋಡೆ (ಭಿತ್ತಿ) ಭಾಗ ಬಹು ಚಿಕ್ಕದಿದೆ. ಅಧಿಷ್ಠಾನ ಮಣ್ಣಲ್ಲಿ ಹೂತಿದೆ. ಸ್ವಲ್ಪ ಎತ್ತರದ ದಿನ್ನೆಯ ಮೇಲೆ ಈ ದೇವಾಲಯವಿದೆ. ಗರ್ಭಗೃಹದ ಗೋಡೆಯನ್ನು ಇಟ್ಟಿಗೆಯಿಂದ ಕಟ್ಟಲಾಗಿದೆ. ಅಂತರಾಳದ ಬದಿಗಳಲ್ಲಿ ಅರ್ಧದವರೆಗೆ ಇಟ್ಟಿಗೆ ಗೋಡೆಗಳು ಶಿಥಿಲಗೊಂಡು ಅದರ ಮೇಲೆ ಮಣ್ಣು ಆವರಿಸಿದೆ. ಗರ್ಭಗುಡಿಯ ಒಳ ಭಾಗದಲ್ಲಿ ನಾಲ್ಕು ಮೂಲೆಗಳಲ್ಲಿ ನಾಲ್ಕು ಅರ್ಧಗಂಬಗಳು ಮತ್ತು ಮೂರು ಗೋಡೆಗಳಲ್ಲಿ ಎರಡೆರಡು ಅರ್ಧಗಂಬಗಳಿವೆ. ಭಿತ್ತಿನಲ್ಲಿ ಶಿಲೆಯ ಒಂದು

6. & 7. S.I.I., VII, No. 3, 135

ಅಂಕಣವಿದೆ. ಅದರ ಹೊರವೈಯ ಒಂದೊಂದು ಗೋಡೆಗಳ ಮಧ್ಯ ಎರಡೂಕಾಲು ಮೀಟರಿನಷ್ಟು ಮುಂಚಾಚುಗಳಿವೆ. ಬದಿಗಳಲ್ಲಿ ಹಿಂಚಾಚುಗಳಿವೆ. ಅವುಗಳ ಮಧ್ಯ ನಾಗರ ಶೈಲಿಯ ಶಿಖರ ಮಾದರಿಯನ್ನು ತೋರಿಸಲಾಗಿದೆ (ಚಿತ್ರ ೧೩). ಪಶ್ಚಿಮಗೋಡೆಯ ಮೇಲಿನ ಈ ಮಾದರಿಯ ಅರ್ಧಗಂಬ–ಶಿಖರಗೋಡೆಯಿಂದ ಹೊರ ಬಿದ್ದು ಹೋಗಿದೆ. ಅದರ ಗುರುತುಸ್ಪಷ್ಟವಾಗಿ ಕಾಣುವುದು.ಈ ಇಟ್ಟಿಗೆಯ ಗೋಡೆಯ ಭಿತ್ತಿಯ ಭಾಗದ ಎತ್ತರ ಕೇವಲ ಒಂದು ಕಾಲು ಮೀಟರ್. ಸಾಮಾನ್ಯ ಇಟ್ಟಿಗೆಯ ಸರಾಸರಿ ಉದ್ದ, ಅಗಲ ಮತ್ತು ದಪ್ಪ ಸುಮಾರು ೧:೨:೫.

ಈ ಗೋಡೆಯನ್ನು ಕಟ್ಟಲು ಗಾರೆಯನ್ನು ಉಪಯೋಗಿಸಿದ ಕುರುಹುಗಳೂ ಕಂಡುಬರುವುದಿಲ್ಲ.

ಚೌಕಾಕಾರದ (೨.೨೫ ಮೀ × ೨.೨೫ ಮೀ) ಗರ್ಭಗುಡಿಯ ಒಳಗಿನ ನೆಲ ಹಾಳಾಗಿದೆ. ಮಧ್ಯದಲ್ಲಿ ಪೀಠದ ಮೇಲೆ ಬ್ರಹ್ಮಸೂತ್ರವುಳ್ಳ ಶಿವಲಿಂಗವಿದೆ. ಬ್ರಹ್ಮಸೂತ್ರದ ಪಾರ್ಶ್ವನಾಡಿಗಳು ಮಧ್ಯದ ಎರಡು ಸಮಾಂತರ ಲಂಬರೇಖೆಯ ಮಧ್ಯ ಭಾಗದಿಂದ ಸ್ವಲ್ಪ ಬದಿಗೆ ಹೊರಚಾಚಿ ಸ್ವಲ್ಪ ಅಂತರದವರೆಗೆ ಕೆಳಗೆ ಸಮಾಂತರ ರೇಖೆಗೆ ಹೊಂದಿ ಕೆಳಗಿಳಿದು ಸುತ್ತಲೂ ಉಡಿದಾರದಂತೆ ಸುತ್ತಿಕೊಂಡಿದೆ. ಪೀಠದಲ್ಲಿ ಉದ್ದುದ್ದ ಚಿಕ್ಕೆಗಳು ಕೆಳಭಾಗದಲ್ಲಿ ಸುತ್ತಲೂ ಎದ್ದು ಹೊರಹೋಗಿವೆ. ಆದರೆ ಅದರ ಪೀಠವನ್ನು ರಚಿಸಿರುವ ಕ್ರಮ ನೋಡಿದರೆ ಅದು ಭಿನ್ನ ಕಾಲದಲ್ಲಿ ರೂಪಿತವಾದುದೆಂಬುದು ಗೊತ್ತಾಗುವುದು. ಲಿಂಗದ ಕೆಳಗೆ ನೆಲದ ಮೇಲೆ ಶಿಲೆಯ ಪ್ರನಾಳವು ಎಡಗಡೆಯ ಇಟ್ಟಿಗೆ ಗೋಡೆಯಿಂದ ಹೊರಚಾಚಿದೆ. ಶಿವಲಿಂಗ ಮತ್ತು ಪೀಠ ಭಿನ್ನಕಾಲದವು. (ಸು.ಕ್ರಿ.ಶ. ೧೦ ಮತ್ತು ಕ್ರಿ.ಶ. ೧೧ನೆಯ ಶತಮಾನ). ಅದರ ಬಾಗಿಲು ಚೌಕಟ್ಟಿನಲ್ಲಿರುವ ನಾಲ್ಕು ಸರಳ ಶಾಖೆಗಳು ಬಾಗಿಲು ಫಲಕದಿಂದ ಹಿಡಿದು ಲಲಾಟ ಬಿಂಬದ ಮೇಲೂ ಸಾಗಿವೆ. ಆದರೆ ಗಜಲಕ್ಷ್ಮಿಯ ಚಿತ್ರವು ಲಲಾಟ ಬಿಂಬದ ಮಧ್ಯದಲ್ಲಿದೆ.

ಅದರ ಮುಂಭಾಗದ ಅಂಕಣದಲ್ಲಿ ನಾಲ್ಕು ಅರ್ಧಗಂಬಗಳ ಮೇಲೆ ಛತ್ತಿಗೆ ಸೇರಿದ ತೊಲೆಗಳಿವೆ. ಅದರ ಮುಂಭಾಗದಲ್ಲಿ ಮಣ್ಣನ್ನು ಸುತ್ತಲಿನ ನೆಲಸಮದವರೆಗೆ ಅಗೆಯಲಾಗಿದೆ. ಅಲ್ಲಿ ದೊರೆತ ಎರಡು ಗಾತ್ರದ ಇಟ್ಟಿಗೆಗಳು ೩೩ × ೨೧.೬ ಸೆಂ.ಮೀ. ಮತ್ತು ೨೭ × ೨೧.೬ ಸೆಂ.ಮಿ. ಇವೆ. ಅಲ್ಲಿರುವ ಕ್ರಿ.ಶ. ೧೧೩೭ರ ಕಲ್ಯಾಣ ಚಾಲುಕ್ಯರ ಮುಮ್ಮಡಿ ಸೋಮೇಶ್ವರನ ದತ್ತಿ ಶಾಸನದಲ್ಲಿ ಈ ದೇವರನ್ನು ಭೀಮೇಶ್ವರ ಎಂದು ಉಲ್ಲೇಖಿಸಲಾಗಿದೆ. ಇನ್ನುಳಿದ ಎರಡು ಶಾಸನಗಳು ಪಕ್ಕದ ಧರ್ಮರಾಯನ ಗುಡಿ ಸಮೂಹದಲ್ಲಿವೆ.

**ಕಾಲಮಾನ :** ಆ ಸ್ಥಳಗಳಲ್ಲಿರುವ ಶಿಲಾ ಶಾಸನಗಳಲ್ಲಿ ಇಟ್ಟಿಗೆ ದೇವಾಲಯಗಳನ್ನು ಕಟ್ಟಿಸಿದ ಅಥವಾ ಜೀರ್ಣೋದ್ಧಾರದ ಉಲ್ಲೇಖವಿಲ್ಲ. ಬನ್ನಿಕೊಪ್ಪ ಮತ್ತು ಸಾತೇನಹಳ್ಳಿಯ ದೇವಾಲಯಗಳಿಗಿದ್ದ ಹೆಸರುಗಳನ್ನು ಮಾತ್ರ ಕ್ರಿ.ಶ. ೧೧–೧೨ನೆಯ ಶತಮಾನದ ದತ್ತಿ ಶಾಸನಗಳಿಂದ ತಿಳಿಯಲಾಗಿದೆ. ಇದರಿಂದ ಅವುಗಳ ಕಾಲಮಾನವನ್ನು ಗುರುತಿಸಲು ಅವುಗಳ ವಾಸ್ತು ಶಿಲ್ಪ ಲಕ್ಷಣಗಳನ್ನು ಮತ್ತು ಇಟ್ಟಿಗೆಗಳ ಗಾತ್ರ ಇತ್ಯಾದಿಗಳನ್ನು ಪರಿಶೀಲಿಸುವ ಅವಶ್ಯಕತೆ ಇರುತ್ತದೆ. ಈ ಮೂರು ಸ್ಥಳಗಳ ಇಟ್ಟಿಗೆ ದೇವಾಲಯಗಳಿಗೆ ಒಂದೊಂದು ರೀತಿಯ ವಿನ್ಯಾಸಗಳು ಮತ್ತು ಇಟ್ಟಿಗೆಗಳ ಸಾಮಾನ್ಯ ಅಳತೆಗಳು ಗೊತ್ತಾಗಿವೆ.

ವಾಸ್ತುಶಿಲ್ಪದಿಂದ ಒಂದರಲ್ಲಿ ಕದಂಬನಾಗರ ಶೈಲಿಯ ಶಿಖರ, ಮತ್ತೊಂದರಲ್ಲಿ ನಾಗರ ಶೈಲಿಯ ಶಿಖರ ನಮೂನೆಯನ್ನು ಅರ್ಧಗಂಬದ ಭಿತ್ತಿ ಭಾಗದಲ್ಲಿ ತೋರಿಸಿದ್ದು, ಈ ಮಾದರಿಯ ಶಿಖರ - ಅರ್ಧಗಂಬದ ಮೇಲೆ ತೋರಿಸಲು ಇಟ್ಟಿಗೆ ತುಂಡುಗಳನ್ನು ಮತ್ತು ಇಟ್ಟಿಗೆ ಪುಡಿ ಮಿಶ್ರಿತ ಮಣ್ಣನ್ನು ಕೂಡಿಸಿರುವುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಭಿತ್ತಿಯಲ್ಲಿ ಕಾಣುವ ಹಿಂಚಾಚು ಮುಂಚಾಚು ಲಕ್ಷಣಗಳು ಶಿಖರಗಳ ಹೊರಮೈಮೇಲೆಯೂ ಮುಂದುವರಿದಿರುವುದು ವಿಶೇಷವಾಗಿದೆ. ಎರಡೂ ಕಡೆಯ (ಸಾತೇನಹಳ್ಳಿ ಮತ್ತು ಬನ್ನಿಕೊಪ್ಪ) ದೇವಾಲಯಗಳ ಕಂಬ - ಅರ್ಧಗಂಬ ಬಾಗಿಲು ಫಲಕ, ಅಧಿಷ್ಠಾನದ ಮಾದರಿಗಳು, ಗುರುತಿಸಲು ಕಾಲಮಾನ ತಕ್ಕಮಟ್ಟಿಗೆ ಅನುಕೂಲವಾಗಿವೆ.

ಹುಲಗೂರು ಇಟ್ಟಿಗೆ ದೇವಾಲಯದ ಪರಿಸರದ ಮಣ್ಣಿನಲ್ಲಿ ಇತಿಹಾಸ ಪ್ರಾರಂಭ ಕಾಲದ ಮೃತ್ ಪಾತ್ರೆಗಳು ಜನವಸತಿಯ ಇನ್ನಿತರ ಕುರುಹುಗಳು ಬೆಳಕಿಗೆ ಹರಡಿವೆ. ಆದರೆ ಬನ್ನಿಯೂರ ದೇವಾಲಯದ ಹತ್ತಿರದ ಧರ್ಮರಾಯನಗುಡಿ ಸಮೂಹದಲ್ಲಿ ಬಾದಾಮಿ ಚಾಲುಕ್ಯ

ವಿಜಯಾದಿತ್ಯನ ಕ್ರಿ.ಶ. ೮ನೆಯ ಶತಮಾನದ ಶಾಸನದಲ್ಲಿ ಆ ಕಾಲಕ್ಕಿಂತ ಪೂರ್ವದಲ್ಲೇ ಅರ್ಜುನೇಶ್ವರ ದೇವಾಲಯ ಅಸ್ತಿತ್ವದಲ್ಲಿದ್ದಿತೆಂದು ಮತ್ತು ಆ ಕಾಲದಲ್ಲಿ ನಂದೀಶ್ವರ ದೇವರ ಪ್ರತಿಷ್ಠಾಪನೆ ಮಾಡಿದ ವಿವರಗಳು ದೊರೆಯುತ್ತದೆ.[7] ಈಗ ಅಲ್ಲಿ ಆ ಕಾಲಪೂರ್ವದ ಶಿವಲಿಂಗ ಅರ್ಜುನ (?), ನಂದಿ ಇನ್ನಿತರ ತದನಂತರದ ಕಾಲದ ಶಿಲ್ಪಗಳು ಇತ್ತೀಚೆಗೆ ಕಟ್ಟಿಸಿದ ಅಲ್ಲಿಯ ದೇವಾಲಯ ಸಮೂಹದಲ್ಲಿವೆ. ಆದರೆ ಕ್ರಿ.ಶ. ೮ನೆಯ ಶತಮಾನದ ವಾಸ್ತುಶಿಲ್ಪ ಅವಶೇಷಗಳ ಭಾಗಗಳು ಈಗ ಕಾಣಸಿಗವು. ಬಹುಶಃ ಕ್ರಿ.ಶ. ೮ನೆಯ ಶತಮಾನ ಪೂರ್ವದಲ್ಲಿ ಅರ್ಜುನೇಶ್ವರ ದೇವಾಲಯವನ್ನು ಇಟ್ಟಿಗೆಯಿಂದ ಕಟ್ಟಿರಬೇಕು. ಸುಮಾರು ಕ್ರಿ.ಶ. ೧೦ನೆಯ ಶತಮಾನದಲ್ಲಿ ಅದು ಶಿಥಿಲಗೊಂಡಿರಬೇಕು. ತದನಂತರ ಈಗಿರುವ ಇಟ್ಟಿಗೆಯ ಭೀಮೇಶ್ವರ ದೇವಾಲಯವನ್ನು ಸುಮಾರು ಕ್ರಿ.ಶ. ೧೦ನೆಯ ಶತಮಾನದ ಕೊನೆಯಲ್ಲಿ ಕಟ್ಟಿರುವ ಸಾಧ್ಯತೆಯಿದೆ. ಅಲ್ಲಿರುವ ಕೆಲ ವಾಸ್ತುಶಿಲ್ಪ ಅವಶೇಷಗಳನ್ನು ಉಪಯೋಗಿಸಿ ಈಗ ಧರ್ಮರಾಯನ ಗುಡಿ ಮತ್ತು ಕೃಷ್ಣ ದೇವಾಲಯ ಗುಡಿ ಮತ್ತು ಅವುಗಳ ಮಧ್ಯದಲ್ಲಿ ಒಂದು ತೆರೆದ ಮಂಟಪವನ್ನು ಕಟ್ಟಲಾಗಿದೆ. ಆ ಕಟ್ಟಡದಲ್ಲಿ ಸುಮಾರು ಕ್ರಿ.ಶ. ೧೦ನೆಯ ಶತಮಾನದ ಕಂಬ, ಅರ್ಧಗಂಬ ಇತ್ಯಾದಿಗಳನ್ನು ಉಪಯೋಗಿಸಲಾಗಿದೆ. ಮತ್ತು ಇಟ್ಟಿಗೆಯ ಈ ಭೀಮೇಶ್ವರ ಗುಡಿ, ಅದರ ಮುಂದಿನ ಅಂಕಣದ ಅರ್ಧಕಂಬಗಳು ಮತ್ತು ಭಿತ್ತಿಯ ಹೊರಮೈಯಲ್ಲಿ ತೋರಿಸಿದ ನಾಗರ ಶೈಲಿಯ ಶಿಖರ ಮಾದರಿಯನ್ನು ಅರ್ಧಗಂಬದ ಮೇಲೆ ನಿರ್ಮಿಸಿದ ಶೈಲಿಯು ಕ್ರಿ.ಶ. ೧೦ನೆಯ ಶತಮಾನದ ವಾಸ್ತುಶಿಲ್ಪದ ಶೈಲಿಯಲ್ಲಿವೆ.

ಆದರೆ ಇಟ್ಟಿಗೆಗಳ ಸಾಮಾನ್ಯ ಅಳತೆಯು ಇತಿಹಾಸ ಆರಂಭ ಕಾಲದ ಸುಮಾರು ಕ್ರಿ.ಶ. ೩-೪ನೆಯ ಶತಮಾನದ ಇಟ್ಟಿಗೆಗಳನ್ನು ಹೋಲುತ್ತವೆ. ಪಟ್ಟದಕಲ್ಲಿನ ಸಂಗಮೇಶ್ವರ ದೇವಾಲಯದ ಮತ್ತು ಕಾಶೀವಿಶ್ವೇಶ್ವರ ದೇವಾಲಯದ ಮುಂದೆ ಕಂಡು ಬಂದ ಇಟ್ಟಿಗೆ ಕಟ್ಟಡದ ಇಟ್ಟಿಗೆಗಳು ಬನ್ನಿಯೂರಿನ ಭೀಮೇಶ್ವರ ದೇವಾಲಯದ ಇಟ್ಟಿಗೆಗಳನ್ನು ಸುಮಾರಾಗಿ ಹೋಲುತ್ತವೆ. ಆ ಕಟ್ಟಡದ ಕಾಲಮಾನ ಕ್ರಿ.ಶ. ೩-೪ನೆಯ ಶತಮಾನದ್ದಿರಬೇಕೆಂದು ಡಾ|| ಅ. ಸುಂದರ ಅವರು ಈಗಾಗಲೇ ಅಭಿಪ್ರಾಯ ಪಟ್ಟಿರುವರು.[8]

ಈ ಮೂರು ದೇವಾಲಯಗಳ ಇಟ್ಟಿಗೆ ಅಳತೆಗಳಲ್ಲಿ ನ್ಯೂನತೆಗಳಿವೆ. ಸಾತೇನಹಳ್ಳಿಯ ದೇವಾಲಯದ ಇಟ್ಟಿಗೆಯ ಗಾತ್ರದ ಅಳತೆಯು ಇನ್ನುಳಿದ ಎರಡು ದೇವಾಲಯಗಳ ಮತ್ತು ಚಿಕ್ಕೇರೂರ ಮತ್ತು ಶಿಗ್ಗಾವಿಯ ಕಟ್ಟಡಗಳ ಇಟ್ಟಿಗೆಗಳಿಗಿಂತ ಚಿಕ್ಕದಾಗಿವೆ. ಆದರೆ ಉಳಿದ ಎರಡು ದೇವಾಲಯಗಳ ಇಟ್ಟಿಗೆಗಳ ಮತ್ತು ಚಿಕ್ಕೇರೂರು -ಶಿಗ್ಗಾವಿಯ ಇಟ್ಟಿಗೆಗಳ ಅಳತೆಗಳು ಸುಮಾರಾಗಿ ಒಂದೇ ಇವೆ.

ಆದರೆ. ಹುಲಗೂರು ಮತ್ತು ಬನ್ನಿಯೂರ ಗ್ರಾಮದ ಇಟ್ಟಿಗೆ ದೇವಾಲಯದ ಲಿಂಗಗಳ ಮೇಲಿರುವ ಬ್ರಹ್ಮಸೂತ್ರಗಳ ನಮೂನೆಯು ಸುಮಾರು ಕ್ರಿ.ಶ. ೧೧-೧೨ನೆಯ ಶತಮಾನದ ಶೈಲಿಯನ್ನು ಹೋಲುತ್ತವೆ. ಇದರಿಂದಾಗಿ ಬಹುಶಃ ಬನ್ನಿಯೂರು ದೇವಾಲಯವನ್ನು ಕಟ್ಟಿರಬಹುದಾದ ರೀತಿಯಲ್ಲಿ ಹುಲಗೂರಿನ ದೇವಾಲಯವನ್ನು ಸುಮಾರು ಕ್ರಿ.ಶ. ೧೧–೧೨ನೆಯ ಶತಮಾನದಲ್ಲಿ ಕಟ್ಟಿರಬಹುದೆಂದು ಹೇಳಬಹುದಾಗಿದೆ. ಏಕೆಂದರೆ ಹುಲಗೂರು ದೇವಾಲಯದ ಪಕ್ಕದಲ್ಲಿ ಒಂದು ಗುಂಡಿಯನ್ನು ಸುಮಾರು ಅರ್ಧ ಮೀಟರ್ ಆಳದವರೆಗೆ ತೋಡಿದಾಗ ಅಲ್ಲಿ ಇಟ್ಟಿಗೆ ಕಟ್ಟಡದ ಅವಶೇಷಗಳು ಮತ್ತು ಬಹುಶಃ ಶಿವಲಿಂಗದ ಪೀಠವು ಹೊರ ಬಂದವು. ಅದರ ಇಟ್ಟಿಗೆಯ ಅಳತೆಯು ಪಕ್ಕದ ದೇವಾಲಯದ ಇಟ್ಟಿಗೆಯನ್ನು ಹೋಲುತ್ತವೆ. ಲಿಂಗ ಪೀಠದ ಶೈಲಿಯು ಸುಮಾರು ಕ್ರಿ.ಶ. ೮ನೆಯ ಶತಮಾನದ ಮಾದರಿಯನ್ನು ಹೋಲುವುದು. ಇನ್ನಿತರ ಅವಶೇಷಗಳು ಮತ್ತು ಕಟ್ಟಡದ ರಚನೆ ಮುಂತಾದವು ಗೊತ್ತಿಲ್ಲದಿರುವುದರಿಂದ ಆ ಕಟ್ಟಡ ಎಂತಹದು ಎಂಬುದನ್ನು ಊಹಿಸುವುದು ಕಷ್ಟ ಸಾಧ್ಯವಾಗಿದೆ. ಆದರೆ,

---

7 S.I.I., VII, No. 3, 135

8 ಅ. ಸುಂದರ ಕರ್ನಾಟಕ ಭಾರತಿ, ಸಂಪುಟ ೫, ಸಂಚಿಕೆ ೨, ೧೯೭೨, “ಪಟ್ಟದಕಲ್ಲಿನ ಚಾಲುಕ್ಯರಿಗಿಂತ ಪೂರ್ವದ ಒಂದು ಇಟ್ಟಿಗೆ ಕಟ್ಟಡ,” ಪು. ೩೫-೪೨

ಈ ಮೇಲೆ ತಿಳಿಸಿದಂತೆ ಇಟ್ಟಿಗೆಗಳ ಕಾಲಮಾನ ಸುಮಾರು ಕ್ರಿ.ಶ. ೩-೪ನೆಯ ಶತಮಾನ. ಅಲ್ಲಿ (ಹುಲಗೂರ) ಉತ್ಖನನವನ್ನು ಕೈಕೊಂಡರೆ ಇನ್ನೂ ಹೆಚ್ಚಿನ ವಿಷಯ ತಿಳಿಯುವುದು.

ಸಾತೇನಹಳ್ಳಿಯ ಕದಂಬನಾಗರ ಶೈಲಿಯ ಶಿಖರ, ಅದರ ಮೇಲೆ ತೋರಿಸಿದ ಹಿಂಚಾಚು, ಮುಂಚಾಚು ಮತ್ತು ಉಪಯೋಗಿಸಿದ ಇಟ್ಟಿಗೆ ಕಟ್ಟಡದ ಶೈಲಿಯು ಈಗಾಗಲೇ ತಿಳಿದ ಸುಮಾರು ಕ್ರಿ.ಶ. ೩-೪ನೆಯ ಶತಮಾನದ್ದಾಗಲಿ ಅಥವಾ ಸುಮಾರು ಕ್ರಿ.ಶ. ೧೪ನೆಯ ಶತಮಾನ ಮತ್ತು ನಂತರದ ಕಾಲಮಾನದ ವಾಸ್ತು ಶಿಲ್ಪದ ಶೈಲಿಗಿಂತ ಭಿನ್ನವಾಗಿವೆ. ಇದಲ್ಲದೆ ಅವುಗಳ ಇಟ್ಟಿಗೆಗಳಿಗಿಂತ ಭಿನ್ನವಾಗಿದೆ. ಕಲ್ಯಾಣ ಚಾಲುಕ್ಯರ ಮತ್ತು ಹೊಯ್ಸಳ ಯಾದವರ ಕಾಲದಲ್ಲಿ ಅಂದರೆ ಕ್ರಿ.ಶ. ೧೧-೧೩ನೆಯ ಶತಮಾನಗಳಲ್ಲಿ ಇಂತಹ ಇಟ್ಟಿಗೆಗಳನ್ನು ಉಪಯೋಗಿಸಿ ಕಟ್ಟಿದ ಉದಾಹರಣೆಗಳಿಲ್ಲ. ಆದರೆ ಹುಲಗೂರು, ಬನ್ನಿಯೂರು ಮತ್ತು ಸಾತೇನಹಳ್ಳಿ ಇವುಗಳ ಎರಡನೆ ಭಾಗದ ಶೈಲಿ-ರಚನೆಯು ಕ್ರಿ.ಶ. ೧೧-೧೨ ನೆಯ ಶತಮಾನ.

ಆದರೆ ರಾಷ್ಟ್ರಕೂಟರ ಸಮಕಾಲೀನ ಗಂಗರ ಕಾಲದ ಇಟ್ಟಿಗೆ ದೇವಾಲಯಗಳು ಬೆಂಗಳೂರು ಜಿಲ್ಲೆಯ ಮಣ್ಣೆಯಲ್ಲಿ, ಕುಪ್ಪಟೂರು ಮತ್ತು ಇನ್ನಿತರ ಕೆಲ ಸ್ಥಳಗಳಲ್ಲಿ ಈಗಾಗಲೇ ಕಂಡು ಬಂದಿವೆ. ಈ ಕಾಲದ (ಕ್ರಿ.ಶ. ೯ನೆಯ ಶತಮಾನ) ಇಟ್ಟಿಗೆ ದೇವಾಲಯಗಳನ್ನು ಸಾತೇನಹಳ್ಳಿಯ ಇಟ್ಟಿಗೆ ದೇವಾಲಯದ ಶೈಲಿಯನ್ನು ಹೋಲುತ್ತದೆ. ಆದರೆ ಈ ದೇವಾಲಯದಲ್ಲಿರುವ ಶಿವಲಿಂಗದ ಮೇಲಿನ ಬ್ರಹ್ಮಸೂತ್ರ (ಬಾಣ)ವು ಶೈಲಿಯ ದೃಷ್ಟಿಯಿಂದ ಸುಮಾರು ಕ್ರಿ.ಶ. ೭ನೆಯ ಶತಮಾನಕ್ಕಿಂತ ಪೂರ್ವದ್ದಾಗಿದೆ.

ಇಟ್ಟಿಗೆ ಗೋಡೆಗಳನ್ನು ಅವಲೋಕಿಸಿದಾಗ ಕಟ್ಟಡವನ್ನು ಕಟ್ಟಲು ಗಾರೆ ಬೆರೆಸಿ ಕಟ್ಟಿದ್ದು ಕಾಣುವುದಿಲ್ಲ. ಹೊರಮೈಯಲ್ಲಿ ಕಂಡ ಗಾರೆಯ ಹೊದಿಕೆ ಇತ್ತೀಚಿನ ಕಾಲದ್ದೆಂಬುದು ಸ್ಪಷ್ಟ. ಜತೆಯಲ್ಲಿ ಅಳವಡಿಸಿದ ಪ್ರನಾಳಗಳನ್ನು ನೆಲದ ಮೇಲಿಟ್ಟಿರುವುದು ಕಂಡು ಬರುತ್ತಿದೆ. ಈ ರಚನಾ ಕ್ರಮದಿಂದ ಹೇಳಿಕೊಳ್ಳುವಂತಹ ನ್ಯೂನತೆಗಳು ಕಾಣುವುದಿಲ್ಲ. ವಾಸ್ತುಶಿಲ್ಪದ ಶೈಲಿಯಿಂದ ಮೊದಲನೆ ಭಾಗ—ಸಾತೇನಹಳ್ಳಿ ಈಶ್ವರ (ಗುಂಡೇಶ್ವರ) ದೇವಾಲಯವನ್ನು ಸುಮಾರು ಕ್ರಿ.ಶ. ೮-೯ನೆಯ ಶತಮಾನದ್ದೆಂದು, ಹುಲಗೂರು ಮತ್ತು ಬನ್ನಿಯೂರು ದೇವಾಲಯಗಳು ಸುಮಾರು ಕ್ರಿ.ಶ. ೧೦ನೆಯ ಶತಮಾನದವೆಂದು ಹೇಳಬಹುದಾಗಿದೆ.

### ಕೃತಜ್ಞತೆಗಳು

ಅನ್ವೇಷಣೆ ಕೈಕೊಳ್ಳಲು ಪರವಾನಿಗೆ ನೀಡಿದ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿ ಡಾ॥ ನಾರಾಯಣರೆಡ್ಡಿ ಜಿ.ಕೆ. ಮತ್ತು ಕುಲಸಚಿವರಿಗೆ ಮತ್ತು ಹಂಸಬಾವಿಯ ಶ್ರೀ ಭೋಜರಾಜ ಪಾಟೀಲ, ಮತ್ತಿಹಳ್ಳಿಯ ಶ್ರೀಮತಿ ಮತ್ತು ಶ್ರೀ ಪಾಟೀಲ ಅವರು ಅನ್ವೇಷಣೆಯಲ್ಲಿ ನೀಡಿದ ಸಹಕಾರಕ್ಕೆ ಮತ್ತು ಹುಲಗೂರು ಮಂಡಲ ಪಂಚಾಯತಿಯ ಅಧ್ಯಕ್ಷರಾದ ಶ್ರೀ ಪಾಟೀಲರು ನೀಡಿದ ಸಹಕಾರಕ್ಕೆ ಕೃತಜ್ಞತೆಗಳು. ○

# ದೇವಾಲಯಗಳಲ್ಲಿ ಪಾತ್ರಗಳು : ಒಂದು ಪರಿಶೀಲನೆ

—ಎಚ್.ಎಸ್. ಗೋಪಾಲರಾವ್

ಮಾನವನ ಬದುಕಿನಲ್ಲಿ ಕೇವಲ ಧಾರ್ಮಿಕವಾಗಿ, ಸಾಮಾಜಿಕವಾಗಿ ಮಾತ್ರವಲ್ಲದೆ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿಯೂ ಸಮಾಜಕ್ಕೆ ವಿಶೇಷ ಸೇವೆ ಸಲ್ಲಿಸಿರುವ ದೇವಾಲಯಗಳು ಕಲೆಯ ವಿವಿಧ ಪ್ರಕಾರಗಳನ್ನು ಉಳಿಸಲು ಮತ್ತು ಬೆಳೆಸಲು ಶ್ರಮಿಸಿರುವುದೂ ಕೂಡ ಗಮನಾರ್ಹವಾದುದಾಗಿದೆ.

ದೇವರಿಗೆ ಸಲ್ಲುವ ಸೇವೆಯನ್ನು ಬಹು ಮುಖ್ಯವಾಗಿ ಎರಡು ವಿಧಗಳಾಗಿ ಗುರುತಿಸಲಾಗುತ್ತದೆ. ದೇವರ ಎಂದರೆ ದೇವರ ಸ್ವರೂಪವೆಂದು ಪರಿಗಣಿತವಾದ ವಿಗ್ರಹಕ್ಕೆ ಒಬ್ಬ ವ್ಯಕ್ತಿಯ ಅಂಗಗಳಿಗೆ ಸಲ್ಲುವ ಭೋಗಗಳನ್ನು ಎಂದರೆ ಸೇವೆಯನ್ನು ಸಲ್ಲಿಸುವುದು ಅಂಗಭೋಗ. ಇದರಲ್ಲಿ ಸ್ನಾನ, ವಸ್ತ್ರ, ಗಂಧ, ಇತ್ಯಾದಿ ಮಂಗಳ ದ್ರವ್ಯಗಳ ಲೇಪನ, ಧೂಪ, ದೀಪ, ಭೋಜನ (ನಿವೇದನ) ಇತ್ಯಾದಿಗಳೆಲ್ಲ ಸೇರುತ್ತವೆ. ದೇವರ ಎದುರಿಗೆ ಅವನಿಗೆ ಸಂತೋಷವನ್ನುಂಟುಮಾಡಲು, ಮನರಂಜಿಸಿ ತೃಪ್ತಿಪಡಿಸಲು ಸಲ್ಲಿಸುವ ಸೇವೆಯೇ ರಂಗಭೋಗ. ರಂಗಭೋಗದಲ್ಲಿ ಸಂಗೀತ ಮತ್ತು ನೃತ್ಯಗಳೇ ಪ್ರಧಾನವಾದುವು. ದೃಶ್ಯ ಮತ್ತು ಶ್ರವ್ಯ–ಎರಡೂ ಕಲಾಮಾಧ್ಯಮಗಳು ದೇವಾಲಯದ ರಂಗಭೋಗದ ಸಂದರ್ಭದಲ್ಲಿ ಬೆಳೆದು ಬಂದಿರುವುದನ್ನು ಕನ್ನಡದ ಹಲವಾರು ಶಾಸನಗಳ ಮೂಲಕ ತಿಳಿಯಬಹುದಾಗಿದೆ.

ರಂಗಭೋಗವನ್ನು ಸಲ್ಲಿಸುತ್ತಿದ್ದ ಸೇವಾವರ್ಗದಲ್ಲಿ ಪಾತ್ರಗಳು, ಗಾಯಕರು, ವಾಚಕರು (ವಾಂಶಿಕ, ಪಜಿಕಾರ, ಇತ್ಯಾದಿ), ನರ್ತಕಿಯರು ಬಹುಮುಖ್ಯವಾಗಿ ಉದಾಹೃತರಾಗಿದ್ದಾರೆ.

ಧಾರವಾಡ ಜಿಲ್ಲೆಯ ಕಾಗಿನೆಲೆಯ ಒಂದು ಶಾಸನವು ಕಾಳಮನು ಕಾಳೇಶ್ವರನಿಗೆ ದೇಗುಲವನ್ನೂ 'ರಂಜಿತ ನಾಟ್ಯಶಾಲೆಯತಿ ಪ್ರಖ್ಯಾತಿನೆತ್ತಿರ್ದ್ದ ವಾಗ್ಗಲನಾಮಂಟಪ'ವನ್ನೂ ನಿರ್ಮಿಸಿದ್ದನೆಂದು ಉಲ್ಲೇಖಿಸಿದೆ.[1]

ರಂಗಭೋಗದ ಬಗೆಗೆ ಬಿಜಾಪುರ ಜಿಲ್ಲೆಯ ದೇವರನಾವದಿಗಿಯ ಒಂದು ಶಾಸನವು ಮಹತ್ವದ ವಿವರಗಳನ್ನು ನೀಡಿದೆ.[2] ನಾವದಿಗೆಯ ಮೂಲಸ್ಥಾನ ಮಲ್ಲಿಕಾರ್ಜುನ, ಕರೇಶ್ವರ, ಆದಿತ್ಯದೇವರ ತ್ರಿಕೂಟಾಚಲದ ಪರಿಸೂತ್ರದಲ್ಲೇ ನೃತ್ಯಮಂಟಪವೊಂದಿದ್ದು ಅಲ್ಲಿ 'ನಿತ್ಯ ನೈಮಿತ್ತಿಕ ಗೀತವಾದ್ಯ ವಿವಿಧ ವಾದ್ಯಕ್ಕೃ ನ್ರಿತ್ಯ ವಿದ್ಯಾಧರಿ ವಿಳಾಸಿನಿಯಿರೆಂದೆಸವ ರಂಗಶೋಭೆಯ ಸಮುದಾಯ' ಇದ್ದುದನ್ನು ಶಾಸನವು ಪ್ರಸ್ತಾಪಿಸಿದೆ. ರಂಗಭೋಗಕ್ಕೆ ನೃತ್ಯಮಂಟಪ ನಿರ್ಮಾಣವಾಗುತ್ತಿತ್ತು. ಅಲ್ಲಿ ಸೇವೆ ಸಲ್ಲಿಸಿ ರಂಗಶೋಭೆ ತರುವ ಗಾಯಕ, ವಾದಕ, ನರ್ತಕರ ಸಮುದಾಯವಿತ್ತು. ಧಾರವಾಡ ಜಿಲ್ಲೆಯ ಮುಗದದ ಕ್ರಿ.ಶ. ೧೦೪೫ರ ಶಾಸನವೊಂದು[3]

1 ಸೌ.ಇಂ.ಇನ್ಸ್. XVII ೧೧೭ ; ಕ್ರಿ.ಶ. ೧೧೨೧

2 -ಅದೇ- XX ಬಿ.ಕೆ.ಐ. IV–೧೧೧ ; ಕ್ರಿ.ಶ. ೧೧೪೦

3 -ಅದೇ- XI–I–೭೫ ; ಕ್ರಿ.ಶ. ೧೦೪೫

ಶ್ರೀಮನ್ಮಹಾಸಾಮನ್ತ ಮಾರ್ತ್ತಣ್ಡಯ್ಯನು ತನ್ನ ಮುತ್ತಜ್ಜ ಮಾಡಿಸಿದ 'ಬಸದಿಯಂ ಪಡಿಸಲಿಸಿ ನಾಟಕ ಶಾಲೆಯುಂ' ಮಾಡಿದನೆಂದು ದಾಖಲಿಸಿದೆ.

ಜೈನ ಬಸದಿಗಳಲ್ಲೂ ನೃತ್ಯಗೇಹದ ನಿರ್ಮಾಣವಾಗಿ ರಂಗಭೋಗ ಸೇವೆ ಸಲ್ಲುತ್ತಿದ್ದುದನ್ನೂ ಕೆಲವು ಶಾಸನಗಳು ಉಲ್ಲೇಖಿಸಿವೆ. ಶ್ರವಣಬೆಳಗೊಳದ ಒಂದು ಶಾಸನವು ಹುಳ್ಳನು ಬಸದಿಯಲ್ಲಿ 'ಪರಿಸೂತ್ರಂ ನೃತ್ಯಗೇಹಂ'ಗಳನ್ನು ಮಾಡಿಸಿದ್ದನ್ನು ದಾಖಲಿಸಿದೆ.[4] ಅದೇ ಶ್ರವಣಬೆಳಗೊಳದಲ್ಲಿ ಕ್ರಿ.ಶ. ೧೧೯೫ರಲ್ಲಿ ನಾಗದೇವ ಎಂಬ ಪಟ್ಟಣಸ್ವಾಮಿಯು 'ಪಾರ್ಶ್ವದೇವರ ಬಸದಿಯ ಮುಂದಣ ಕಲುಕಟ್ಟುಮಂ ನೃತ್ಯರಂಗಮುಮಂ' ಮಾಡಿಸಿದನೆಂಬುದೂ ಶಾಸನೋಕ್ತ ವಿಷಯವಾಗಿದೆ.[5]

ಮೇಲಿನ ಕೆಲವು ಉದಾಹರಣೆಗಳಿಂದ ದೇವಾಲಯಗಳಲ್ಲಿ ನೃತ್ಯಮಂಟಪ, ನಾಟಕಶಾಲೆ, ನೃತ್ಯರಂಗಗಳು ಇದ್ದುವು, ಅವುಗಳ ನಿರ್ಮಾಣವೂ ಆವಶ್ಯಕವಾಗಿತ್ತು ಎಂದು ತಿಳಿಯುತ್ತದೆ.

ಬಿಜಾಪುರ ಜಿಲ್ಲೆಯ ಮರೋಳದ ಒಂದು ಶಾಸನದ ಮೂಲಕ ದೇವಾಲಯಗಳ ಸ್ಥಾನಪತಿಗಳೂ ಕೂಡ ಕಲಾವಿದ್ಯೆಯಲ್ಲಿ ಪರಿಣತರಾಗಿರುತ್ತಿದ್ದರು ಎಂಬ ವಿಷಯ ತಿಳಿಯುತ್ತದೆ.[6]

ರಂಗಭೋಗದ ವಿದ್ಯಾವಂತರಿಗೆ ಗ್ರಾಮದಾನ ದೊರೆತಿರುವುದನ್ನು ಬಸ್ತಿಹಳ್ಳಿಯ ಒಂದು ಶಾಸನ[7] ಉಲ್ಲೇಖಿಸಿದೆ.

ಲಕ್ಕುಂಡಿಯ ಕೆಲವು ಶಾಸನಗಳಲ್ಲಿ[8] ಉಕ್ತವಾಗುವ 'ವೈಷ್ಣವ ಗೀತಿ ಮನೋಹರರರು' ಕೂಡ ರಂಗಭೋಗದ ವಿದ್ಯಾವಂತರ ವರ್ಗಕ್ಕೇ ಸೇರಿದವರೆಂದು ಊಹಿಸಬಹುದಾಗಿದೆ.

ದೇವಾಲಯಗಳಿಗೆ ದೊರೆಯುತ್ತಿದ್ದ ದಾನ ದತ್ತಿಗಳಲ್ಲಿ ಗೀತವಾದ್ಯ, ನೃತ್ಯಗಳಿಗೂ ಪಾಲು ದೊರೆಯುತ್ತಿದ್ದುದನ್ನು ಗಳಗನಾಥ[9], ಗೊರಟ[10], ಬೇಸೂರು[11], ಕರೆಕಂಠಪುರ[12], ಕಡಲೆವಾಡ[13] ಇತ್ಯಾದಿ ಸ್ಥಳಗಳ ಹಲವು ಶಾಸನಗಳು ದಾಖಲಿಸಿವೆ.

ದೇವಾಲಯಗಳ ಸೇವಾವರ್ಗದಲ್ಲಿ ನೃತ್ಯಗೀತವಾದ್ಯಗಳಿಗೆ ಪ್ರಾಶಸ್ತ್ಯವಿತ್ತು. ಅದಕ್ಕಾಗಿ ನೃತ್ಯಮಂಟಪ ಮತ್ತು ನಾಟಕಶಾಲೆಗಳ ವ್ಯವಸ್ಥೆಗಳನ್ನೂ ಮಾಡಲಾಗುತ್ತಿತ್ತು ಎಂಬುದು ಒಪ್ಪಿತವಾದ ಮಾತು.

ರಂಗಭೋಗವನ್ನು ಅರ್ಜುಣಗೆಯ ಒಂದು ಶಾಸನವು[14] ರಂಗಪೂಜೆ ಎಂದು ಉಲ್ಲೇಖಿಸಿದೆ.

ರಂಗಭೋಗದ ಸೇವಾವರ್ಗದಲ್ಲಿ ಹಾಡುವವರು, ಪಜಿಕಾಱರು, ವಾಂಶಿಕ, ಸೂಳೆಯರಲ್ಲದೆ ಪಾತ್ರಗಳೂ

---

4 ಎ.ಕ. II ಶ್ರ.ಬೆ. ೩೪೫ ; ಕ್ರಿ.ಶ. ೧೧೫೯
5 -ಅದೇ- ೩೩೫ ; ಕ್ರಿ.ಶ. ೧೧೪೯
6 ಸೌ.ಇಂ.ಇನ್ಸ್ XI-I-೬೧ ; ಕ್ರಿ.ಶ. ೧೦೨೪
7 ಎ.ಕ. V ಬೇಲೂರು ೧೨೪ ; ಕ್ರಿ.ಶ. ೧೧೩೩
8 ಕ.ಇನ್ಸ್. II-೧೦-ಕ್ರಿ.ಶ. ೧೦೭೯ ಮತ್ತು ೧೦೮೧ ಮತ್ತು ಸೌ.ಇಂ.ಇನ್ಸ್. XV-II-೬೭ ; ಕ್ರಿ.ಶ. ೧೦೮೫
9 ಸೌ.ಇಂ.ಇನ್ಸ್. XVII ೮೮ ; ಕ್ರಿ.ಶ. ೧೦೮೦
10 Historical & Cultural Studies arround Basava Kalyana-೧೮ ; ಕ್ರಿ.ಶ. ೧೦೮೨ (ವಿ.ಎಸ್ ಕುಲಕರ್ಣಿ ಅವರ ಅಪ್ರಕಟಿತ ಪಿ.ಎಚ್.ಡಿ. ನಿಬಂಧ)
11 ಎ.ಕ. VII ಸಾಗರ ೧೦೩ ; ಕ್ರಿ.ಶ. ೧೦೮೯
12 ಸೌ.ಇಂ.ಇನ್ಸ್. IX-I-೧೭೨ ; ಕ್ರಿ.ಶ. ೧೧೦೬
13 -ಅದೇ- XX ಬಿ.ಕೆ.ಐ. IV ; ೧೫೪ ; ಕ್ರಿ.ಶ. ೧೧೭೨
14 -ಅದೇ- XVIII-೨೦೨ ; ಕ್ರಿ.ಶ. ೧೨೦೭

ಪ್ರಮುಖವಾಗಿದ್ದರು. ಬಳ್ಳಾರಿ ಜಿಲ್ಲೆಯ ಹಿರೇಮಗಳ ಗೇರಿಯ[15] ಒಂದು ಶಾಸನವು ಪಙ್ತಿಕಾಜಿ, ಪಾತ್ರ, ಕಂಭದ ನಾಲ್ವರು ಸೂಳೆಯರು, ಇವರಿಗೆ ಪ್ರತ್ಯೇಕವಾಗಿ ದೊರೆತ ದಾನವನ್ನು ಉಲ್ಲೇಖಿಸಿದೆ. ಬಿಜಾಪುರ ಜಿಲ್ಲೆಯ ನಂದವಾಡಿಗೆಯ[16] ಒಂದು ಶಾಸನವು ಹಾಡುವ ಇಬ್ಬರಿಗೆ, ಎರಡು ಪಾತ್ರಗಳಿಗೆ ಮತ್ತು ನಾಲ್ಕು ಜನ ಸೂಳೆಯರಿಗೆ ಪ್ರತ್ಯೇಕವಾಗಿ ದಾನ ನೀಡಿರುವುದನ್ನು ದಾಖಲಿಸಿದೆ. ಪಾತ್ರ, ಹಾಡುವವ, ಮದ್ದಳೆಯವ, ಹರೆಕಾರ–ಸೂಳೆ ಇವರುಗಳಿಗೆಲ್ಲಾ ದೊರೆತ ಪ್ರತ್ಯೇಕ ದಾನಗಳನ್ನು ಕುರಿತು ಅನೇಕ ಶಾಸನನೋಲ್ಲೇಖಗಳಿವೆ. ಪಾತ್ರ ಮತ್ತು ಸೂಳೆಯರನ್ನು ಒಂದೇ ಶಾಸನದಲ್ಲಿ ಬೇರೆ ಬೇರೆಯಾಗಿ ಉಲ್ಲೇಖಿಸಿರುವುದನ್ನು ಗಮನಿಸಿದರೆ, ಅವರು ಒಂದೇ ವೃತ್ತಿಗೆ ಸೇರಿದವರಲ್ಲ ಎಂದು ಖಚಿತ ವಾಗುತ್ತದೆ. ಸೂಳೆಯರಿಲ್ಲದ ಅನೇಕ ದೇವಾಲಯ ಗಳಿದ್ದರೂ ಬಹುತೇಕ ದೇವಾಲಯಗಳಲ್ಲಿ ಪಾತ್ರ ಗಳಿದ್ದರು. ಇವರಿಗೆ ಸೂಳೆಯರಿಗೆ ಸೂಳೆವಳ ಇದ್ದಂತೆ ಪ್ರತ್ಯೇಕವಾದ ಮೇಲ್ವಿಚಾರಕ ಇದ್ದಂತೆ ತೋರುವುದಿಲ್ಲ– ಇವರು ಪಾದಮೂಲ ಪರಿವಾರದ ಜೊತೆಗೇ ಇದ್ದ ದೇವಾಲಯದ ಸೇವಾವರ್ಗ ಎಂದು ಭಾವಿಸಬಹುದು.

ಬಳ್ಳಾರಿಜಿಲ್ಲೆಯ ಬಾಗಲಿಯ ಕ್ರಿ.ಶ. ೧೦೧೮ರ ಒಂದು ಶಾಸನವು.[17] ಅಲ್ಲಿಯ ಕಲಿದೇವಸ್ವಾಮಿ ದೇವಾಲಯದಲ್ಲಿದ್ದ ಹನ್ನೆರಡು ಜನ ಸೂಳೆಯರು, ಸೂಳೆವಳ, ವಂಚಿಗ, ಪಙ್ತಿಕಾರರು ಮತ್ತು ಪಾತ್ರಕ್ಕೆ ನೀಡಲಾಗಿರುವ ದಾನವನ್ನು ಉಲ್ಲೇಖಿಸಿದೆ. ಸೂಳೆ ಮತ್ತು ಪಾತ್ರಗಳು ಬೇರೆ ಬೇರೆ ಎಂಬ ನಮ್ಮ ಹಿಂದಿನ ಅಭಿಪ್ರಾಯವನ್ನು ಈ ಶಾಸನವು ಸಮರ್ಥಿಸುತ್ತದೆ. ಸೂಳೆಯರಲ್ಲಿ ಸ್ಥಳೀಯರಲ್ಲದೆ ಬೇರೆಡೆಗಳಿಂದ ಬಂದ ಸೂಳೆಯರೂ ದಾನಗಳನ್ನು ಪಡೆಯುತ್ತಿದ್ದ ಅಂಶವನ್ನು ಲಕ್ಷ್ಮೇಶ್ವರದ ಒಂದು ಶಾಸನವು ದಾಖಲಿಸಿದೆ.[18] ಅದೇ ಶಾಸನವು ಪಾತ್ರವನ್ನೂ ಉಲ್ಲೇಖಿಸಿದೆ.

ಪಾತ್ರಗಳು ದೇವರಿಗೆ ಸಲ್ಲಿಸುತ್ತಿದ್ದ ಸೇವೆಯನ್ನು ಪಾತ್ರಭೋಗ ಎಂದು ಕೆಲವು ಶಾಸನಗಳು ಉಲ್ಲೇಖಿಸಿವೆ. ಬೇಲೂರು ತಾಲ್ಲೂಕಿನ ಭೈರೇದೇವರು ಗುಡ್ಡದ ಒಂದು ಶಾಸನ[19] ಮತ್ತು ಗುಂಡ್ಲು ಪೇಟೆಯ ಒಂದು ಶಾಸನ[20] ಗಳು 'ಪಾತ್ರಭೋಗ'ವನ್ನು ಉಲ್ಲೇಖಿಸಿವೆ.

ಕರ್ನಾಟಕದಲ್ಲಿ ಶ್ರೀವೈಷ್ಣವ ಧರ್ಮ ಪ್ರಬಲವಾದ ಸಂದರ್ಭದಲ್ಲಿ ಶ್ರೀ ವೈಷ್ಣವ ಪಾತ್ರದವರು ಹೆಚ್ಚಾಗಿದ್ದ ರೆಂದು ಬೇಲೂರಿನ ಎರಡು ಶಾಸನಗಳ ನೆರವಿನಿಂದ[21] ತಿಳಿಯಬಹುದಾಗಿದೆ. ಹಲವು ಶಾಸನಗಳು ಉಲ್ಲೇಖಿಸುವ 'ವೈಷ್ಣವಗೀತಿ ಮನೋಹರರ್' ಎಂಬುವವರು ಈ ವರ್ಗಕ್ಕೇ ಸೇರಿದವರಿರಬೇಕು.

ಅನಂತಪುರ ಜಿಲ್ಲೆಯ ಗುತ್ತಿಯ ಒಂದು ಶಾಸನ[22] ಉಲ್ಲೇಖಿಸುವ 'ಶ್ರೀ ವಿಷ್ಣುದೇವರ ರಂಗಭೋಗದ ಪಾತ್ರ' ಎಂಬುವವರೂ ವೈಷ್ಣವ ಪಾತ್ರದವರೇ ಇರಬೇಕು.

ಪಾತ್ರದವರ ಪಾತ್ರಭೋಗಕ್ಕೆಂದೇ ಹಿಂದೆಯೇ ಗಮನಿಸಿರುವ ರಂಗಮಂಟಪ, ನಾಟಕಶಾಲೆಗಳ ನಿರ್ಮಾಣ ವಾಗುತ್ತಿತ್ತೆಂದು ತೋರುತ್ತದೆ.

---

15 -ಅದೇ ix-I-೧೧೩ ; ಕ್ರಿ.ಶ. ೧೦೫೪
16 -ಅದೇ-x-I-೧೦೩ ; ಕ್ರಿ.ಶ. ೧೦೬೫
17 -ಅದೇ-ix-I-೮೦ ; ಕ್ರಿ.ಶ. ೧೦೧೮
18 -ಅದೇ-xx ಬಿ.ಕೆ.ಐ. iv-೭೪ ; ಕ್ರಿ.ಶ. ೧೧೧೨
19 -ಎ.ಕ. v ಬೇಲೂರು ೧೯೨ ; ಕ್ರಿ.ಶ. ೧೨೧೧
20 ಎ.ಕ. ಗುಂ.ಪೇ ೧೨ ; ಕ್ರಿ.ಶ. ೧೩೭೨
21 ಎ.೦. v ಬೇಲೂರು ೫೮-೭೧ ; ಕ್ರಿ.ಶ. ೧೧೧೭
22 ಸೌ ಇಂ.ಇನ್ಸ್. viii-೩೭೧ ; ಕ್ರಿ.ಶ. ೧೧೨೨

ಪಾತ್ರದವರು ಸಾಮಾನ್ಯವಾಗಿ ಸ್ತ್ರೀಯರು ಆಗಿರುತ್ತಿದ್ದರು. ದೇವಾಲಯದ ಪಾತ್ರವರ್ಗವು ವಂಶ ಪಾರಂಪರ್ಯವಾಗಿ ಮುಂದುವರಿಯಲೇ ಬೇಕಾಗಿರಲಿಲ್ಲ. ಬಾಗಲಿಯ ಕಲಿದೇವ ಸ್ವಾಮಿಯ ದೇವಾಲಯದಲ್ಲಿದ್ದ ಶ್ರೀ ಕಲಿದೇವರ ತೊತ್ತು ಪಾತ್ರದ ಸಿರಿಯುವೆಯು ಹಾಡುವ ಕಾಮತಿ ನಾಗವೆಯ ಮಗಳಾಗಿದ್ದಳು[23]. ಬಳ್ಳಾರಿ ಜಿಲ್ಲೆಯ ಹಾಲಗೊಂದಿಯ ಬಾಳೇಶ್ವರ ದೇವಾಲಯದಲ್ಲಿ ಮೂರು ಜನ ಪಾತ್ರದವರಿದ್ದರು.[24] ಬಿಜಾಪುರ ಜಿಲ್ಲೆಯ ಕಲ್ಕೆರಿಯ ಒಂದು ದೇವಾಲಯವಲ್ಲಿ ನಾಲ್ಕು ಜನ ಪಾತ್ರದವರು ಇದ್ದರು.[25] ಬೆಂಗಳೂರು ಜಿಲ್ಲೆಯ ಕೊಡಿಗೆ ಹಳ್ಳಿಯ ಒಂದು ಶಾಸನದ ಪ್ರಕಾರ ಅಲ್ಲಿನ ಸೋಮೇದೇವರ ದೇವಾಲಯದಲ್ಲಿ ಪಾತ್ರ ಭೋಗಕ್ಕೆ ಪಾತ್ರ ಜನ ಇಬ್ಬರು ಇದ್ದರು.[26]

ಅಂದರೆ ದೇವಾಲಯದಲ್ಲಿ ಪಾತ್ರಗಳ ಸಂಖ್ಯೆ ಇಷ್ಟೇ ಇರಬೇಕೆಂಬ ನಿಬಂಧನೆ ಇದ್ದಂತಿರಲಿಲ್ಲ. ದೇವಾಲಯದ ಆರ್ಥಿಕ ಸ್ಥಿತಿಗಳನ್ನನುಸರಿಸಿ ಪಾತ್ರಗಳ ಸಂಖ್ಯೆ ಇರುತ್ತಿತ್ತು. ಕೆಲವು ಬಾರಿ ಪಾತ್ರಗಳೇ ದೇವಾಲಯಗಳಿಗೆ ದಾನ ನೀಡಿರುವುದನ್ನೂ ಶಾಸನಗಳು ದಾಖಲಿಸಿವೆ. ಪಾತ್ರದ ಸಿರಿಯುವೆ ಬಾಗಲಿಯ ಕಲಿ ದೇವರಿಗೆ ಕಲ್ಲಕೇರಿಯ ತನ್ನ ಮನೆಯನ್ನು ಕೊಟ್ಟಿದ್ದಾಳೆ.[27] ಬೇಲೂರಿನ ಹೊಯ್ಸಳೇಶ್ವರ ದೇವರಿಗೆ ಪಾತ್ರದ ಆನೆಯ ಮಾಳವ್ವೆಯು ಮೂರು ಸಂದರ್ಭಗಳಲ್ಲಿ ದಾನ ನೀಡಿದ್ದಾಳೆ.[28] ಅದೇ ದೇವರಿಗೆ ಪಾತ್ರದ ಮಣಿಗಾಜಿ ಮಾಡವ್ವೆ.[29] ಪಾತ್ರದ ಲಖವ್ವೆ, ಪಾತ್ರದ ಚಂದವ್ವ,[30] ಪಾತ್ರದ ನಾಗೌವೆ, ಪಾತ್ರದ ಚಂದವ್ವೆ, ಪಾತ್ರದ ಗೋಪವ್ವೆ, ದೇವವ್ವೆ, ಪಾತ್ರದ ವಿಸ್ಸವ್ವೆ, ಪಾತ್ರದ ಲಖವೆ–ಇವರುಗಳೂ ಹಲವಾರು ದಾನಗಳನ್ನೂ ನೀಡಿದ್ದಾರೆ.[31]

ಈ ಪಾತ್ರಗಳನ್ನು ದೇವಾಲಯಕ್ಕೆ ಊರಿನ ಜನರು ಒಟ್ಟಿಗೇ ತೀರ್ಮಾನಿಸಿ ಅಥವಾ ವೈಯುಕ್ತಿಕ ತೀರ್ಮಾನ ದೊಂದಿಗೆ ನೀಡುತ್ತಿದ್ದರು. ಗುಂಡ್ಲುಪೇಟೆಯ ಒಂದು ಶಾಸನವು ಹಟಾಲಕೋಟೆ, ತೆರಕಣಾಂಬೆ, ನವುಳೂರು, ಬಾಗೂರು-ಈ ನಾಲ್ಕೂ ಊರುಗಳ ಸಮಸ್ತ ವೀರ ಪಂಚಾಳರು ಸರ್ವ ಐಕಮತ್ಯದಿಂದ ದೇವರ ಪಾತ್ರ ಭೋಗಕ್ಕೆ ಕೇತವ್ವೆಯನ್ನು ದಾನ ನೀಡಿ, ಅವರ ಜೀವಿತಕ್ಕೆ ವ್ಯವಸ್ಥೆ ಮಾಡಿದುದನ್ನು ಉಲ್ಲೇಖಿಸಿದೆ.[32] ಪೂರ್ವೋದಾಹೃತ ಬೇಲೂರಿನ ಶಾಸನಗಳು ಆಯಾ ಪಾತ್ರಗಳ ತಾತ, ತಂದೆಯರ ಹೆಸರನ್ನು ಉಲ್ಲೇಖಿಸಿವೆ. ಇದರಿಂದ ಮನೆಯ ಹಿರಿಯರ ಒಪ್ಪಿಗೆ ದೊರೆತೇ ಸ್ತ್ರೀಯರು ಪಾತ್ರಗಳಾಗಿರುತ್ತಿದ್ದರು ಎಂದು ತಿಳಿಯುತ್ತದೆ.

ಧಾರವಾಡ ಜಿಲ್ಲೆಯ ಕೋಳಿವಾಡದ ಒಂದು ಶಾಸನವು.[33] ತಿರುಮಲಬೋವನ ಮಗಳು ಸೂರಿಯ ಮಾಣಿಕೆ ಎಂಬ ಹೆಣ್ಣನ್ನು ಮಾಧವ ಜನಾರ್ಧನ ಸ್ವಾಮಿಯ ಗುಡಿಯ ಪಾತ್ರಕ್ಕೆ ಕಾಣಾಚಿಯ ಪಾತ್ರವಾಗಿ ಸಮರ್ಪಣೆ ಮಾಡಿ ಆಕೆಯ ಜೀವಿತಕ್ಕೆ ವ್ಯವಸ್ಥೆ ಮಾಡಿದ್ದನ್ನು ದಾಖಲಿಸಿವೆ. ಅಂದರೆ ದೇವಾಲಯದಲ್ಲಿ

---

23 -ಅದೇ-ix-I-೮೯ ಕ್ರಿ.ಶ. ೧೦೩೫

24 -ಅದೇ-xx-I-೧೬೩ : ಕ್ರಿ.ಶ. ೧೧೯೩

25 -ಅದೇ-xx ಬಿ.ಕೆ.ಐ. iv ೩೦೦ ; ಕ್ರಿ.ಶ. ೧೨ನೆಯ ಶತಮಾನ

26 ಎ.ಕ. ix ಬೆಂಗ ೧೨೭ ; ಕ್ರಿ.ಶ. ೧೪೩೧

27 ಪೂರ್ವೋದಾಹೃತ.

28 ಎ.ಕ. v ಬೇಲೂರು ೧೦೪ ; ೧೦೬, ೧೧೦ ಕಾಲ ; ಕ್ರಮವಾಗಿ ಕ್ರಿ.ಶ. ೧೨೦೨. ೧೧೯೫, ೧೨೦೧

29 -ಅದೇ-೧೦೬ ; ಕ್ರಿ.ಶ. ?

30 -ಅದೇ-೧೦೭ ; ಕ್ರಿ.ಶ. ೧೧೯೫

31 ಪೂರ್ವೋದಾಹೃತ

32 ಎ.ಕ.ಐ. ಗುಂಪೇ ೧೭ ; ಕ್ರಿ.ಶ. ೧೩೭೨

33 ಕ.ಇನ್ಸ್. v-೧೨೩ ; ಕ್ರಿ.ಶ. ೧೫೬೩

ಪಾತ್ರವೆಂದರೆ ನಿರ್ದಿಷ್ಟ ದೇವರು ಅಥವಾ ವ್ಯಕ್ತಿಯನ್ನು ಪ್ರತಿನಿಧಿಸುವ ಮತ್ತೊಂದು ವ್ಯಕ್ತಿ ಎಂದಾಯಿತು.

ಕಾಣಾಚಿ ಎಂಬ ಪದಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು (ಎರಡನೆಯ ಸಂಪುಟ) ವಂಶಪರಂಪರೆಯಿಂದ ಬಂದು ಸ್ವಾನುಭೋಗದಲ್ಲಿರುವ ಆಸ್ತಿ, ಪಿತ್ರಾರ್ಜಿತ ಆಸ್ತಿ, ಹಕ್ಕುದಾರಿ ಜಮೀನು ಎಂಬ ಅರ್ಥ ಒದಗಿಸಿದೆ. ಆದರೆ ಮೇಲೆ ಉಲ್ಲೇಖಿಸಿದ ಶಾಸನದಲ್ಲಿ ಕಾಣಾಚಿ ಎಂಬುದು ಒಂದು ಅಂಕಿತ ನಾಮವಾಗಿ ಬಳಕೆಯಾಗಿರುವುದರಲ್ಲಿ ಅನುಮಾನವಿಲ್ಲ.

'ಪಾತ್ರ'ಶಬ್ದಕ್ಕೆ ಕಿಟ್ಟೆಲ್ ಕೋಶದಲ್ಲಿ an actor dramatist person, a disguise, an assumed character, performing, dancing, a dancing girl ಪಾತ್ರದವಳು=ಪಾತರದವಳು ಎಂಬ ಅರ್ಥಗಳನೂ ಕಾಣಬಹುದು.

ಪಾತ್ರವನ್ನು ಪಾತರಕ್ಕೆ ಸಂವಾದಿಯಾಗಿ ಗಮನಿಸಿ ನಟನೆ, ಅಭಿನಯ, ನಾಟ್ಯ, ಮೇಳ, ನಟಿಸುವವನು ಎಂದೂ ಪಾತರಗಿತ್ತಿಗೆ ನಟಿ, ಅಭಿನೇತ್ರಿ ಎಂಬ ಅರ್ಥವನ್ನೂ ಪಾತರಗಿತ್ತಿಗೆ ಹಾದರಗಿತ್ತಿ, ವೇಶ್ಯೆ ಎಂಬ ಅರ್ಥಗಳ ಜೊತೆಗೆ ಚಿಟ್ಟೆ, ಪತಂಗ ಎಂಬ ಅರ್ಥಗಳನ್ನೂ ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ಕನ್ನಡ ನಿಘಂಟುವಿನಲ್ಲಿ ಗಮನಿಸಬಹುದು. 'ಪಾತ್ರ' ಎಂಬ ಪದಕ್ಕೆ ಸಂಸ್ಕೃತದಲ್ಲಿ ಹಲವು ಅರ್ಥಗಳ ಜೊತೆಯಲ್ಲಿ 'ನಟ' ಎಂಬ ಅರ್ಥವುವಿದೆ. ಉತ್ತರ ಭಾರತದಲ್ಲಿ ಪಾತರ, ಪಾತುರ್, ಪಾತುರೀಯ ಎಂದರೆ ವೇಶ್ಯೆ ಎಂದೇ ಅರ್ಥ. ನಟಿಯಂತೆ ಅಲ್ಲಿಂದ ಇಲ್ಲಿಗೆ ಹಾರುವ, ಚಂಚಲ ಸ್ವಭಾವದ, ಕ್ಷಣಿಕ ಸೌಂದರ್ಯದ ಚಿಟ್ಟೆಯನ್ನು ಪಾತರಗಿತ್ತಿ ಎಂದು ಕರೆದಿರುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಆದ್ದರಿಂದ ಪಾತ್ರ ಮತ್ತು ಸೂಳೆಯರಿಬ್ಬರೂ ವೇಶ್ಯೆಯರಾದರೂ ಇಬ್ಬರೂ ದೇವರ ಸೇವೆಗಾಗಿ ಮೀಸಲಾಗಿದ್ದರೂ, ಅವರಿಬ್ಬರಲ್ಲಿ 'ಪಾತ್ರ' ಶಬ್ದವು ನೃತ್ಯಗೀತಾದಿಗಳಲ್ಲಿ ಪರಿಣತಳಾದವಳನ್ನೂ, 'ಸೂಳೆ' ಶಬ್ದವು ಉಳಿದ ಸೇವಾಕಾರ್ಯಗಳನ್ನು ಮಾಡುವವಳನ್ನೂ ಸೂಚಿಸುತ್ತದೆ ಎಂದಿಟ್ಟುಕೊಳ್ಳಬಹುದು"– ಎಂದು ಡಾ|| ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.[34] ವಿಭಿನ್ನ ಅಭಿನಯ ಮಾಡಬೇಕಾದಾಗ ಈ ಚಂಚಲ ಸ್ವಭಾವವು ಅವಶ್ಯಕ.

ಪಾತ್ರ ಮತ್ತು ಸೂಳೆಯರಿಬ್ಬರೂ ದೇವರ ಸೇವೆಗೆ ಮೀಸಲಾಗಿದ್ದವರು. ರಂಗಭೋಗದ ಸಮಯದಲ್ಲಿ ಪಾತ್ರದವರು ಪಾತ್ರಭೋಗ ಸಲ್ಲಿಸುತ್ತಿದ್ದರು ಎಂಬುದರಲ್ಲಿ ಅನುಮಾನವಿಲ್ಲ. ಪಾತ್ರದವರ ಕೆಲವು ವಿಶೇಷ ಗುಣಗಳನ್ನೂ ಶಾಸನವೊಂದು ದಾಖಲಿಸಿದೆ. ಧಾರವಾಡ ಜಿಲ್ಲೆಯ ಚಿಂಚೋಳಿಯ ಒಂದು ಶಾಸನವು[35] ಶ್ರೀಧರ ದಂಡನಾಯಕನದ್ವಾರಂಗಿ ಲಕ್ಷ್ಮಿ ಟಿಂಟಳಿಸುವ ಪಾತ್ರಕ್ಕೆ ಗಂಟಲಗಾಳಂ ಮುಚ್ಚಗಿಸುವ ಪಾತ್ರಕ್ಕೆ ಮಸ್ತಕ ಸೂಲಂ...ವಿಷಮ ಪಾತ್ರದ ಸೂತ್ರ ಕಳಶಕ್ಕೆ ವಿಳಸಮೆನಿಸಿರ್ದ' ಗುಂಡಿಲಿ ಜಾಕಿಯಕ್ಕನ ಬಗೆಗೆ ತಿಳಿಸುತ್ತದೆ. ಇಲ್ಲಿ ಪಾತ್ರದವರು ಮತ್ತು ಅಭಿನಯಗಳಿಗಿದ್ದ ಸಂಬಂಧವು ಸ್ಪಷ್ಟವಾಗಿದೆ.

ಚಿನ್ನತುಂಬುಲಂನ ಒಂದು ಶಾಸನವು ತ್ರಿಭುವನಮಲ್ಲ ಪಟ್ಟಮಹಾದೇವಿ ಮಲಯಮತೀದೇವಿಯನ್ನು ಪಾತ್ರ ಮುಖದರ್ಪಣೆ ಎಂದು ವರ್ಣಿಸಿದೆ.[36] ಹೊಯ್ಸಳ ವಿಷ್ಣುವರ್ಧನನ ಪಟ್ಟಮಹಿಸಿ ಶಾಂತಲದೇವಿಯನ್ನು ಬೇಲೂರಿನ ಒಂದು ಶಾಸನವು 'ವಿಚಿತ್ರನರ್ತನಪ್ರವರ್ತನ ಪಾತ್ರಸಿಖಾಮಣಿ', 'ಸಂಗೀತಸಂಗತಸರಸ್ವತಿ' ಎಂದೆಲ್ಲಾ ವರ್ಣನೆ ಮಾಡಿದೆ.[37] ರಾಣಿಯರು, ದಂಡನಾಯಕನ ಹೆಂಡತಿ-ಇವರೆಲ್ಲಾ ಪಾತ್ರಗಳಾಗಿದ್ದರು ಎಂದ ಮೇಲೆ ಅವರನ್ನು ವೇಶ್ಯೆಯರ ವರ್ಗಕ್ಕೆ ಸೇರಿಸುವಂತಿಲ್ಲ.

---

34 ಡಾ॥ ಎಂ. ಚಿದಾನಂದಮೂರ್ತಿ ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೬೬ ಪು. ೧೮೩-೧೮೪

35 ಸೌ.ಇಂ.ಇನ್ಸ್ xv-II-೬೪ ; ಕ್ರಿ.ಶ. ೧೦೮೫

36 ಅದೇ-ix-I-೧೭೫ ; ಕ್ರಿ.ಶ. ೧೦೦೭

37 ಎ.ಕ. v ಬೇಲೂರು ೫೮ ; ಕ್ರಿ.ಶ. ೧೧೧೭

ಪಾತ್ರವಾಗಲೀ, ಸೂಳೆಯಾಗಲೀ ಗಣಿಕಾ ಸ್ತ್ರೀ ಅಥವಾ ವೇಶ್ಯಾವರ್ಗಕ್ಕೆ ಸೇರಿದವರಲ್ಲ–ಅವರು ದೇವಾಲಯದ ಸೇವಾವರ್ಗ ಅದರಲ್ಲೂ ವಿಶೇಷವಾಗಿ ರಂಗಭೋಗದ ಸೇವಾವರ್ಗಕ್ಕೆ ಸೇರಿದವರಾಗಿದ್ದರು. ದೇವಾಲಯಗಳ ಆಶ್ರಯ ತಪ್ಪಿದ ನಂತರ ಪಾತ್ರ, ಸೂಳೆ, ದೇವದಾಸಿ ವರ್ಗದಲ್ಲಿದ್ದ ಸ್ತ್ರೀಯರು ಜೀವನೋಪಾಯಕ್ಕಾಗಿ ಗಣಿಕಾಸ್ತ್ರೀಯರಾಗಿ, ವೇಶ್ಯೆಯರಾಗಿ, ವೃತ್ತಿಯನ್ನು ಬದಲಾಯಿಸಿಕೊಂಡಿರುವುದು ಸಂಭವನೀಯ.

ಕಂಬದ ಸೂಳೆಯರಿದ್ದಂತೆಯೇ ಪಾತ್ರದ ಸೂಳೆಯರೂ ಇರುತ್ತಿದ್ದರು. ಇವರೂ ಬಲದ ದೆಸೆಯ ಪಾತ್ರಂಸೂಳೆ, ಎಡದ ದೆಸೆಯ ಪಾತ್ರಂ ಸೂಳೆ ಎಂದು ಗುರುತಿಸಲ್ಪಟ್ಟಿದ್ದಾರೆ.[38] ಪಾತ್ರ ಮತ್ತು ಸೂಳೆ ರಂಗಭೋಗದ ಬೇರೆ ಬೇರೆ ವರ್ಗಗಳಾದರೂ ಕೆಲವು ಸಂದರ್ಭಗಳಲ್ಲಿ ಎರಡೂ ವರ್ಗಗಳ ಕೆಲಸಗಳನ್ನು ಒಬ್ಬ ವ್ಯಕ್ತಿಯೇ ನಿರ್ವಹಿಸಬೇಕಾಗುತ್ತಿತ್ತು. ಹಾಗೆ ಪಾತ್ರ ಮತ್ತು ಸೂಳೆ ಎರಡೂ ವರ್ಗಗಳ ಕಾರ್ಯಗಳನ್ನು ಒಟ್ಟಿಗೇ ನಿರ್ವಹಿಸುತ್ತಿದ್ದವರನ್ನು ಪಾತ್ರಂ ಸೂಳೆ ಎಂದು ಸಂಬೋಧಿಸಿರುವಂತೆ ತೋರುತ್ತದೆ.

ಪೂರ್ವೋದಾಹೃತ ಬೇಲೂರಿನ ಶಾಸನಗಳು ಮತ್ತು ಕೋಳಿವಾಡದ ಶಾಸನಗಳ ಮೂಲಕ ಪಾತ್ರಗಳು ಅಭಿನಯ ಪ್ರಧಾನವಾದವು ಎಂದೂ ಬೇಲೂರು, ಚಿನ್ನತುಂಬಲಂ ಶಾಸನಗಳ ಮೂಲಕ ಸಮಾಜದ ತುಂಬಾ ಗಣ್ಯ ಸ್ತ್ರೀಯರೂ ಪಾತ್ರಗಳಾಗಿ ದೇವರಿಗೆ ಸೇವೆ ಸಲ್ಲಿಸುತ್ತಿದ್ದ ವಿಷಯಗಳು ಸ್ಪಷ್ಟವಾಗುತ್ತವೆ. ಬೇಲೂರಿನ ಅನೇಕ ಪಾತ್ರಗಳು ಅಲ್ಲಿನ ಶಿಲಾಬಾಲಿಕೆಯರು ಮತ್ತಿತರ ಶಿಲ್ಪಗಳಿಗೆ ರೂಪದರ್ಶಿಗಳಾಗಿ ಕಾರ್ಯ ನಿರ್ವಹಿಸಿದ್ದಿರಲೂಬಹುದು.

ಪಾತ್ರದವರು ದೇವಾಲಯಗಳಲ್ಲಿ ಅಭಿನಯ ಪ್ರಧಾನವಾದ ನಾಟಕ ಅಥವಾ ರೂಪಗಳಲ್ಲಿ ಭಾಗವಹಿಸಿ, ಭಾವಾಭಿನಯದ ಮೂಲಕ ರಂಗಭೋಗವನ್ನು ಪಾತ್ರ ಭೋಗದ ಸಂದರ್ಭದಲ್ಲಿ ಸಲ್ಲಿಸುವ ಅಥವಾ ನಿರ್ದಿಷ್ಟ ವೇಷಭೂಷಣ–ಅಲಂಕರಣಗಳಿಂದ ದೇವರ ಅಥವಾ ಭಕ್ತರ ವೇಷ ಧರಿಸಿ ಭಕ್ತರನ್ನು ಆಕರ್ಷಿಸಿ ದೇವರಿಗೆ ಸೇವೆ ಸಲ್ಲಿಸುವ ಸೇವಾವರ್ಗ ಎಂದು ತಿಳಿಯಬಹುದಾಗಿದೆ. ಇವರು ರೂಪದರ್ಶಿಯರಾಗಿಯೂ ಕಾರ್ಯನಿರ್ವಹಿಸಿರುವ ಸಾಧ್ಯತೆಗಳಿವೆ. ಇವರು ಸೂಳೆಯರಿಂದ ಭಿನ್ನರಾಗಿರುತ್ತಿದ್ದರು.

ದೇವಾಲಯಗಳಲ್ಲಿ ಈಗ ಪಾತ್ರವರ್ಗವಾಗಲೀ, ಸೂಳೆಯರಾಗಲೀ, ಇಲ್ಲದಿರುವುದರಿಂದ ದೇವಾಲಯಗಳ ಆಶ್ರಯ ತಪ್ಪಿದ ಈ ವರ್ಗವು ಅನಂತರ ಸ್ವೀಕರಿಸಿರಬಹುದಾದ ವೇಶ್ಯೆ ಅಥವಾ ಗಣಿಕಾಸ್ತ್ರೀವೃತ್ತಿಯ ಜೊತೆಗೇ ಪಾತ್ರ ಮತ್ತು ಸೂಳೆಯರ ವೃತ್ತಿಯನ್ನೂ ಒಂದು ಮಾಡುವ ಅವಶ್ಯಕತೆಯಿಲ್ಲ.

ಪಾತ್ರಗಳು ಮತ್ತು ಸೂಳೆಯರು ದೇವಾಲಯದಲ್ಲಿ ರಂಗಭೋಗಕ್ಕೆ ಮೀಸಲಾಗಿದ್ದವರು. ಪಾತ್ರಗಳು ತಮ್ಮ ಭಾವಾಭಿನಯದ ಮೂಲಕ, ರೂಪದರ್ಶಿಗಳಾಗಿ ಪಾತ್ರಭೋಗ ಸೇವೆ ಸಲ್ಲಿಸುತ್ತಿದ್ದ ವರ್ಗ ಎಂದು ತಿಳಿಯಬಹುದಾಗಿದೆ.

38 ಎ.ಕ. XV-ಪು ೮೩ ; ಕ್ರಿ.ಶ. ೧೦೫೪

# ಶಾರದಾ ಉಪಾಸನೆ ಒಂದು ಅಧ್ಯಯನ*

ಕೆ. ವಸಂತಲಕ್ಷ್ಮಿ

ಶಾರದಾ ಶಾರದಾಂಬೋಜ ವದನಾ
ವದನಾಂಬುಜೆ ।
ಸರ್ವದಾ ಸರ್ವದಸ್ಮಾಕಂ ಸನ್ನಿಧಿಂ
ಸನ್ನಿಧಿಂಕ್ರಿಯಾತ್ ॥

'ಶಾರದಾ' ಎಂಬ ಪದವು 'ಶರತ್' ಪದದಿಂದ ಉದಿಸಿದ್ದು 'ಶರತ್' ಎಂಬುದಕ್ಕೆ ಬಿಳಿ, ವರ್ಷ, ಮತ್ತು ಋತುವಿನ ಹೆಸರು ಮುಂತಾದ ಅರ್ಥಗಳಿವೆ. ಶರತ್ಕಾಲದಲ್ಲಿ ಆಕಾಶವು ನಿರಭ್ರವಾಗಿದ್ದು ಸೂರ್ಯನ ಪ್ರಖರ ಕಿರಣಗಳಿಂದ ಬೆಳ್ಳಗಿರುತ್ತದೆ.'ಬಿಳಿ ಬಣ್ಣವು' 'ನಗುವಿನ' ಮತ್ತು 'ಶಾಂತಿ'ಯ ಸಂಕೇತವಾಗಿದೆ. ಇಂತಹ ಶರತ್ಕಾಲದ ಶುಕ್ಲ ನವಮಿಯಂದು ಶ್ವೇತವರ್ಣದವಳಾದ ಪ್ರಸನ್ನವದನಳಾದ ದಶಭುಜಗಳುಳ್ಳ ದೇವಿಯ ಸ್ವರೂಪವನ್ನು ದೇವತೆಗಳು ಆಹ್ವಾನಿಸಿ ಪೂಜಿಸುತ್ತಾರೆ. ದೇವಿಯ ಈ ಸ್ವರೂಪವನ್ನು 'ಶಾರದಾದೇವಿ' ಎಂದು ಕಾಳಿಕಾ ಪುರಾಣವು ತಿಳಿಸುತ್ತದೆ.[1] ದೈವಶಕ್ತಿಯು ಯಾವಾಗಲೂ ಜಗದ್ರಕ್ಷಣೆಗಾಗಿ, ಅದರಲ್ಲೂ ದುಷ್ಟಮರ್ಧನಕ್ಕಾಗಿಯೇ ಅವತರಿಸಿರುವುದನ್ನು ಕಾಣುತ್ತೇವೆ. ಆದರೆ ವಿಶೇಷವಾಗಿ ಈ ಸ್ವರೂಪವು ಜಗತ್ತಿನಲ್ಲಿದ್ದ ತಮಸ್ಸನ್ನು ಹೋಗಲಾಡಿಸಿ ಬ್ರಹ್ಮಜ್ಞಾನವನ್ನು ಬೋಧಿಸಲೆಂದೇ ರೂಪುಗೊಂಡ ವಿಶೇಷ ಅವತಾರವಾಗಿದೆ ಎಂದು ತಿಳಿದುಬರುತ್ತದೆ.

ಮೊದಲಿಗೆ ಶಂಕರಾಚಾರ್ಯರು ಶಾರದಾದೇವಿಯನ್ನು ಕುರಿತು ಹೀಗೆ ಸ್ತುತಿಸಿದ್ದಾರೆ :

"ನಮಸ್ತೇ ಶಾರದಾದೇವೀ ಕಾಶ್ಮೀರಪುರ
ವಾಸಿನೀ ।
ತ್ವಾಮಹಂ ಪ್ರಾರ್ಥಯೇ ನಿತ್ಯಂ ವಿದ್ಯಾದಾನಂ
ಚ ದೇಹಿಮೇ ॥

ಇದರಿಂದ 'ಶಾರದಾದೇವಿ'ಯ ಮೂಲಸ್ಥಳ ಕಾಶ್ಮೀರಪುರವೆಂದು ತಿಳಿಯುತ್ತದೆ. ಸು. ಕ್ರಿಸ್ತಶಕ ೭ನೇ ಶತಮಾನದಲ್ಲೇ ಕಾಶ್ಮೀರದಲ್ಲಿ ಶಾರದಾದೇವಿಯ ದೇವಾಲಯವೊಂದಿತ್ತೆಂದು ತಿಳಿದುಬರುತ್ತದೆ[2]. ಕಾಶ್ಮೀರದ ಸುತ್ತಮುತ್ತಲ ಪ್ರದೇಶಗಳಲ್ಲಿನ ಪ್ರಾಚೀನ ಶಾಸನಗಳಲ್ಲಿ 'ಶಾರದಾಲಿಪಿ' ಎಂದು ಕರೆಯುವ ಲಿಪಿಯೊಂದು ಕಾಣಸಿಗುತ್ತದೆ. ಜಾಲಂಧರ್ ರಾಜ್ಯದ ಜಯಚಂದ್ರನ ಕಾಲದ ಈ ಶಾಸನಗಳ ಕಾಲ ಸು. ಕ್ರಿ.ಶ. ೭೦೪ ಎಂದು ಗೌರಿಶಂಕರ ಓಜ್ಹಾರವರು ತಿಳಿಸಿರುತ್ತಾರೆ.[3] ಹ್ಯುಯನ್

---

* ಈ ಲೇಖನವನ್ನು ನಾನು ಶಿವಗಂಗೆ ಮಠಾಧೀಶರಾದ ಶ್ರೀ ಶ್ರೀಗಳವರ ಅಭಿಪ್ರಾಯಗಳ ಮೇರೆಗೆ ಸಿದ್ಧಪಡಿಸಿದ್ದೇನೆ ಮತ್ತು ಬುರ್ಲಿ ಭೀಮಸೇನರಾವ್‌ರವರು ಅನೇಕ ಸಲಹೆಗಳನ್ನು ನೀಡಿ ಸಹಕರಿಸಿದ್ದಾರೆ. ಇವರಿಬ್ಬರಿಗೂ ನಾನು ಋಣಿಯಾಗಿರುವೆ.

1 ಕಾಳಿಕಾಪುರಾಣ ಅಧ್ಯಾಯ ೧ ಶ್ಲೋಕ ೬೯

2 Shrinagar & its Environs Kashmir-India-Samsarchand-Koul-p. 24

3 ಪ್ರಾಚೀನ ಭಾರತೀಯ ಲಿಪಿಮಾಲಾ (ಹಿಂದಿ) ಪಂ. ಗೌರಿಶಂಕರ್ ಹೀರಾಚಂದ್‌ಓಜ್ಹಾ, ಪು. ೭೩-೭೬

ತ್ಸಾಂಗ್‌ನು ೭ನೇ ಶತಮಾನದಲ್ಲಿ ಶಾಕ್ತಪೀಠಗಳಿತ್ತೆಂದು ಹೇಳಿರುತ್ತಾನೆ. ಇದರಿಂದ ಬಹುಶಃ ಕಾಶ್ಮೀರವು ಮೊದಲಿಗೆ ಶಾಕ್ತಪೀಠವಿದ್ದಿರಬೇಕೆನ್ನಿಸುತ್ತದೆ.

'ಶಂಕರವಿಜಯ' ಗ್ರಂಥವು–"ಕಾಶ್ಮೀರದಲ್ಲಿದ್ದ ಶಾರದಾದೇವಾಲಯಕ್ಕೆ ನಾಲ್ಕು ದಿಕ್ಕಿನಲ್ಲಿ ಬಾಗಿಲುಗಳಿದ್ದವೆಂದು, ನಾನಾ ದಿಕ್ಕಿನಿಂದ ಬರುತ್ತಿದ್ದ ವಿದ್ವಾಂಸರನ್ನು ಅಲ್ಲಿದ್ದ ಘನಪಾಠಿಗಳು ವಾದ ವಿವಾದ ಮಾಡಿ ಸೋಲಿಸುತ್ತಿದ್ದರೆಂದೂ, ಸ್ಪರ್ಧೆಯಲ್ಲಿ ವಿಜೇತರಾದವರು, ದೇವಿಯ ಸನ್ನಿಧಿಯಲ್ಲಿದ್ದ 'ಸರ್ವಜ್ಞಪೀಠ'ವನ್ನೇರುತ್ತಿದ್ದರೆಂದೂ ತಿಳಿಸಿದೆ. ಇವರಂತೆ ದಕ್ಷಿಣ ದಿಕ್ಕಿನಿಂದ ಹೋಗಿದ್ದ ಶಂಕರರು ಅಲ್ಲಿದ್ದ ಸರ್ವಜ್ಞಪೀಠವನ್ನೇರಿ ಅಲ್ಲಿಂದ ಬರುವಾಗ ಕರ್ನಾಟಕದ ಶೃಂಗೇರಿಯಲ್ಲಿ ಶಾರದಾದೇವಿಯನ್ನು ಕರೆತಂದು ಸ್ಥಾಪಿಸಿದರೆಂದು ತಿಳಿದುಬರುತ್ತದೆ.[4] ಹೀಗೆ ಶಾರದಾದೇವಿ ಕರ್ನಾಟಕಕ್ಕೆ ಬಂದಳೆನ್ನಬಹುದು. ಇಲ್ಲಿ ೧. ಕವಿಗಳು, ಭಕ್ತರು ಕಂಡಂತೆ ಶಾರದೆಯ ಮಹಿಮೆ ೨. ಕಾಲಾನುಕ್ರಮವಾಗಿ ಬೆಳೆದುಬಂದಿರುವ ಶಾರದಾ ಉಪಾಸನೆ ೩. ಶಾರದಾ ಮೂರ್ತಿಗಳು ಮತ್ತು ದೇವಾಲಯಗಳನ್ನು ಆಧರಿಸಿ ಶಾರದಾದೇವಿಯ ಉಪಾಸನೆ ಬೆಳೆದು ಬಂದ ಬಗೆಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಆದಿಶಂಕರಾಚಾರ್ಯರು ಕಾಶ್ಮೀರದಿಂದ ಶೃಂಗೇರಿಗೆ ಹಿಂತಿರುಗಿದ ಮೇಲೆ ತಮ್ಮ ಆಶ್ರಮದಲ್ಲೇ ಶಾರದಾದೇವಿಗಾಗಿ ಮಂದಿರವೊಂದನ್ನು ರಚಿಸಿ ಅವಳನ್ನು ಶ್ರೀಯಂತ್ರದ ಮೇಲೆ ಸ್ಥಾಪಿಸಿದರೆಂದು ಹೇಳುತ್ತಾರೆ. ಇಲ್ಲಿ ದೇವಿಯ ಬಗೆಗೆ ಮತ್ತೊಂದು ಅಂಶವು ಗಮನಾರ್ಹವಾದುದ್ದು. ತಾಂತ್ರಿಕ ಸಂಪ್ರದಾಯವು 'ದಶಮಹಾವಿದ್ಯಾ' ಎಂದು ಹತ್ತು ರೂಪಗಳಲ್ಲಿ ದೇವಿಯ ಆರಾಧನೆಯನ್ನು ತಿಳಿಸುತ್ತದೆ. ಇದರಲ್ಲಿ ಕೆಲವು ಕಾಳಿ ಸ್ವರೂಪದ ಉಗ್ರದೇವತೆಯ ಆರಾಧನೆಯಾಗಿದ್ದು, 'ವಾಮಾಚಾರ'ದ ಉಪಾಸನೆಯನ್ನೊಳಗೊಂಡಿದೆ. ಉಳಿದ ಕೆಲವು 'ಶ್ರೀ' ಸಂಬಂಧವಾದ ಸ್ವರೂಪವಾಗಿದ್ದು ದೇವಿಯನ್ನು ಲಲಿತಾ ಅಥವಾ ರಾಜರಾಜೇಶ್ವರಿಯ ಸ್ವರೂಪಗಳಾದ ಸೌಮ್ಯ ದೇವಿಯನ್ನು ಸೂಚಿಸಿ 'ದಕ್ಷಿಣಾಚಾರ'ದ ಉಪಾಸನೆಯಾಗಿರುತ್ತದೆ. ಶಂಕರಾಚಾರ್ಯರು ತಮ್ಮ ಅದ್ವೈತ ತತ್ವವನ್ನು ತಾಂತ್ರಿಕರಿಗೂ ಅನುಸರಿಸಿ 'ಬ್ರಹ್ಮನ್' 'ಆತ್ಮನ್' ಎಂಬಲ್ಲಿ 'ದೇವಿಯನ್ನು' ಆರೋಪಿಸಿ ಶಾಕ್ತರನ್ನೂ ಅದ್ವೈತದೆಡೆಗೆ ಎಳೆತಂದರೆಂದು ವಿದ್ವಾಂಸರು ತಿಳಿಸಿರುತ್ತಾರೆ.[5] 'ಸೌಂದರ್ಯ ಲಹರಿ'ಯು ಶಂಕರರು ಈ ಪಂಥಕ್ಕೆ ಕೊಟ್ಟಿರುವ ಅಮೂಲ್ಯ ಕಾಣಿಕೆಯಾಗಿದೆ. ಈ ಕೃತಿಯಲ್ಲಿ ಸಗುಣೋಪಾಸನೆಯ ಮೂಲಕ ಆತ್ಮಾನಂದಕ್ಕೇರುವ ಸೋಪಾನವನ್ನು ಶಂಕರರು ಸ್ಪಷ್ಟವಾಗಿ ತಿಳಿಸಿರುತ್ತಾರೆ ಇಲ್ಲಿ ಸಮಯಾರಾಧನೆಯ ರಹಸ್ಯವನ್ನೇ ತೆರೆದಿಟ್ಟಿದ್ದಾರೆ. ಇಂಥ ಶಂಕರರು 'ಶ್ರೀವಿದ್ಯಾ' ಎನಿಸಿದ ಶಾರದಾದೇವಿ 'ಶ್ರೀ ಚಕ್ರ'ವನ್ನೇ ಸಂಕೇತವಾಗಿಸಿ ಉಪಾಸಿಸಿದ್ದಾರೆನ್ನಬಹುದು. ಇದರಂತೆ ಶೃಂಗೇರಿ ಪೀಠವನ್ನು, ಬ್ರಹ್ಮಜ್ಞಾನವನ್ನು ಬೋಧಿಸಬಲ್ಲ- 'ವ್ಯಾಖ್ಯಾನಪೀಠ'ವೆಂದು ಕರೆದಿರುತ್ತಾರೆ. ಇಲ್ಲಿಯ ದೇವಿಯ ಸ್ವರೂಪವು ವಿಶೇಷವಾಗಿ 'ಬ್ರಹ್ಮಜ್ಞಾನದಾಯಿನಿ'ಯಾದ ದೇವಿಯಾಗಿದ್ದು ಇವಳನ್ನು 'ಶಾರದಾದೇವಿ' ಎಂದು ಕರೆದಿರುತ್ತಾರೆ.

ಶಂಕರರ ಒಂದು ಸ್ತೋತ್ರವು ದೇವಿಯು ಕೈಗಳಲ್ಲಿ ಜ್ಞಾನಮುದ್ರೆ,ಅಕ್ಷಮಾಲೆ,ತಾಳೆಯ ಗರಿಗಳನ್ನು ಹಿಡಿದಿರುವಳೆಂದೂ ಸೂಚಿಸುತ್ತದೆಯಲ್ಲದೆ, ಅವಳು 'ಕೀರವಾಣಿ'ಯ ಮಧುರ ನಿನಾದದಿಂದ ಆನಂದಪಡುತ್ತಾಳೆ ಎನ್ನುತ್ತದೆ. ಇದರಂತೆ ಅವರ ಇನ್ನೊಂದು ಸ್ತುತಿಯಲ್ಲಿ ವ್ಯಕ್ತಪಟ್ಟಿರುವಂತೆ ಆ ದೇವಿಯ ಲಕ್ಷಣಗಳು ವೈದಿಕ ಸಂಪ್ರದಾಯದ ಮೂರ್ತಿಶಿಲ್ಪವು ತಿಳಿಸುವ 'ಶಾರದೆಯ ಲಕ್ಷಣಗಳಾಗಿವೆ'ಯೆಂಬುದು ಗಮನಾರ್ಹ.[6]

ರುದ್ರಯಾಮಳದಲ್ಲಿ ಬೃಹಸ್ಪತಿಯು ಮಾಡಿರುವ ಸರಸ್ವತಿ ಸ್ತೋತ್ರವು ಶಾರದೆಯದೇ ಆಗಿದ್ದು, ಅಲ್ಲಿ ಈಕೆಯನ್ನು ಸ್ಪಷ್ಟವಾಗಿ 'ಆತ್ಮವಿದ್ಯೆಯನ್ನು ನೀಡಬಲ್ಲ

4 'ಶಂಕರವಿಜಯ'-ಟೀಕಾ ಸಹಿತ ಲೇ. ಸರ್ವಜ್ಞ ಮಾಧವಾಚಾರ್ಯ ಪ್ರ. ೯೩೬, ಪು. ೧೬೩೬

5 "Shankar and his Sharada Peethas–" K.R. Venkataraman, p- No. 17

6 ವೈದಿಕ ಮೂರ್ತಿಶಿಲ್ಪಶಾಸ್ತ್ರಗ್ರಂಥಗಳು, ದೇವಿಯು ಕೈಯಲ್ಲಿ ಪುಸ್ತಕ ಅಭಯಹಸ್ತ ಅಕ್ಷಮಾಲೆ ಮತ್ತು ವೀಣೆಗಳನ್ನು ಹಿಡಿದಿರುತ್ತಾಳೆಂದಿದೆ. ಆದರೆ ಶೃಂಗೇರಿಯ ಶಾರದೆಯಲ್ಲಿ ಈ ಲಕ್ಷಣಗಳಿಲ್ಲ

ದೇವಿ ಶಾರದಾ' ಎಂದಿರುವುದು ತಿಳಿದುಬರುತ್ತದೆ. 'ಕಮಲಜಾದಯಿತಾಷ್ಟಕ'ವೆಂಬ ಸ್ತೋತ್ರವೊಂದಿದ್ದು ಇದರಲ್ಲಿ ದೇವಿಯು ಕೈಗಳಲ್ಲಿ ವಿದ್ಯಾಮುದ್ರೆ (ಜ್ಞಾನ ಮುದ್ರೆ)ಯನ್ನು, ಅಕ್ಷಮಾಲೆಯನ್ನು, ಅಮೃತಘಟ (ಸುಧಾಭಾಂಡ)ವನ್ನು ಹಿಡಿದಿರುವಳೆಂದು ಹೇಳಿದೆ ಯಲ್ಲದೆ, "ಜಡಬಧಿರನಾದವನ ಮುಖದಲ್ಲಿ ನೆಲಸಿ ಶೀಘ್ರವಾಗಿ ಅವನನ್ನು ಚತುರನನ್ನಾಗಿಸಿದ 'ವಿದ್ಯಾದಾನ ಪ್ರವೀಣೆ' ಎಂದಿದ್ದು, ಈ ಘಟನೆಯನ್ನು 'ಶಂಕರ ವಿಜಯ' ಗ್ರಂಥದ ಒಂದು ಸನ್ನಿವೇಶದಲ್ಲಿ ಉಲ್ಲೇಖಿಸ ಲಾಗಿದೆ. ಇದೇ ಸ್ತುತಿಯಲ್ಲಿ ಮುಂದೆ ದೇವಿಯನ್ನು, "ವಿದ್ಯಾತೀರ್ಥಾದಿಯೋಗಿ ಪ್ರವರಕರ ಸರೋಜಾತಾ ಸಂಪೂಜಿತಾಂಘ್ರೇ" ಎಂದೂ ಕರೆದಿದ್ದು, ಇದು 'ಶಾರದಾ ಸ್ತುತಿಯೇ' ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಹೀಗೆಯೇ 'ಸರಸ್ವತಿಸ್ತೋತ್ರ'ವೆಂದು ಕರೆಯಲಾಗಿರುವ ಕೆಲವಾರು ಶ್ಲೋಕಗಳಲ್ಲಿ ಶಾರದೆಯ ವರ್ಣನೆಯೇ ಬಂದಿರುವುದು ಗಮನಾರ್ಹವಾಗಿದೆ.

ಇಲ್ಲೆಲ್ಲ ಕಾಣುವ 'ವ್ಯಾಖ್ಯಾನಮುದ್ರೆ, ಅಕ್ಷ ಮಾಲೆ, ಮತ್ತು ಸುಧಾಢ್ಯ ಕಲಶ, ವಿದ್ಯಾ (ಪುಸ್ತಕ) ಇವೆಲ್ಲವೂ ಶಾರದಾದೇವಿಯ ಲಕ್ಷಣಗಳೇ ಆಗಿವೆ. ಇದರಂತೆ ಶಾರದಾದೇವಿಯನ್ನೇ 'ವಾಗ್ದೇವಿ' ಎಂದೂ 'ವಾಗೀಶ್ವರೀ' ಎಂದೂ ಪೂಜಿಸುತ್ತಿದ್ದರೆಂದು ತಿಳಿದುಬರುತ್ತದೆ. ಜೈನ ಪರಂಪರೆಯ 'ಸರಸ್ವತಿ ಸ್ತೋತ್ರ'ವೊಂದರಲ್ಲಿ ಸಹಾ 'ವಾಗೀಶ್ವರಿ'ಯನ್ನು ಹೀಗೆ ಬಣ್ಣಿಸಲಾಗಿದ್ದು, ಇದು ಶಾರದೆಯ ಲಕ್ಷಣಗಳೇ ಆಗಿರುವುದನ್ನು ಗಮನಿಸ ಬಹುದು. ಜೈನ ಪರಂಪರೆಯ 'ಶ್ರುತದೇವಿ'ಯಾದ ಶಾರದೆಯ ಲಕ್ಷಣಗಳು ಚಿನ್ಮುದ್ರೆ, ಜಪಸರ, ಅಭಯಹಸ್ತ ಮತ್ತು ಪುಸ್ತಕಗಳೆಂದು ಇದರಿಂದ ಸ್ಪಷ್ಟವಾಗುವು ದಾದರೂ ಶಾಂತೀಶ್ವರ ಕವಿಯು (ಸು. ೧೭ನೇ ಶ) 'ಶಾರದ ಚೌಪದ'ವೆಂಬ ಕಾವ್ಯವೊಂದನ್ನು ರಚಿಸಿದ್ದು ಇದರಲ್ಲಿ ದೇವಿಯ ರೂಪ ಅವಯವ ಮತ್ತು ಮಹಿಮೆ ಗಳನ್ನು ಬಣ್ಣಿಸಲಾಗಿದೆ.[7] ಯೋಗಾನಂದ ಎಂಬ ಯೋಗಿ ಗಳೊಬ್ಬರು ರಚಿಸಿರುವ 'ಮಹಾದೇವಿ ಸ್ತುತಿ'ಯಲ್ಲಿ ದೇವಿಯನ್ನು, "ಈಕೆಯೇ ಲಕ್ಷ್ಮಿಯು, ಶಂಭುಶಕ್ತಿಯು, ಮಾಹೇಶ್ವರಿಯು ; ಇವಳೇ ದುರ್ಗಿ ; ಕಾಳರಾತ್ರಿ ಸ್ವರೂಪಿಣಿಯಾದ ಮಹಾಕಾಳಿಯೂ ಇವಳೇ ; ಇವಳೇ ಗಿರಿಜೆ ; ಜಗನ್ಮಾತಾ ಸ್ವರೂಪಿಣಿಯಾದ ಈ ದೇವಿಯೇ ಶಾರದೆ" ಎಂದು ಹೊಗಳಿದ್ದಾರೆ. ಇದರಲ್ಲಿ ಶಾರದಾ ದೇವಿಯೇ ಲಕ್ಷ್ಮಿ, ಸರಸ್ವತಿ, ಪಾರ್ವತಿ ಎಂದೂ ನಾನಾ ವಿಧವಾಗಿ ಪೂಜಿಸಲ್ಪಡುತ್ತಿರುವ ಮಹಾಕಾಳಿಯ ಶುದ್ಧ ಸ್ವರೂಪವೇ ಈ 'ಶಾರದಾದೇವಿ' ಎಂದು ಗುರುತಿಸಿದ್ದು 'ದುರ್ಗಾಸಪ್ತಶತಿ'ಯ ಹಿನ್ನೆಲೆಯಲ್ಲಿ ಇಲ್ಲಿ ಸರಸ್ವತಿ ಯನ್ನು 'ಶಾರದಾ' ಎಂದೇ ಭಾವಿಸಿ ಬಣ್ಣಿಸಲಾಗಿದೆ.

ಶಂಕರರು ಕಾಶ್ಮೀರದಿಂದ ಹಿಂತಿರುಗಿದಾಗ, ಅವರ ಶಿಷ್ಯರಾಗಿ ಅವರೊಂದಿಗೆ ವಾದದಲ್ಲಿ ಸೋತ ಮಂಡನ ಮಿಶ್ರರು, ಅವರ ಪತ್ನಿ ಉಭಯಭಾರತಿಯೂ ಕರ್ನಾಟಕಕ್ಕೆ ಬಂದರೆಂದು, ಮಂಡನ ಶೃಂಗೇರಿ ಪೀಠಕ್ಕೆ ಮೊದಲು ಗುರುವಾಗಿ ಸಂನ್ಯಾಸ ಸ್ವೀಕರಿಸಿ 'ಸುರೇಶ್ವರಾ ಚಾರ್ಯ' ಎನ್ನಿಸಿ ಶೃಂಗೇರಿಯಲ್ಲೇ ನೆಲೆಸಿದರೆಂದು ತಿಳಿದುಬರುತ್ತದೆ. ಇವರ ಪತ್ನಿಯಾದ ಉಭಯಭಾರತಿಯ ಬಗೆಗೆ ಬ್ರಹ್ಮನ ರಾಣಿಯಾದ ಸರಸ್ವತಿಯೇ ಶಾಪಗ್ರಸ್ತ ಳಾದ ಕಾರಣ ಭೂಮಿಯಲ್ಲಿ 'ಉಭಯ ಭಾರತಿ' ಎಂಬ ಹೆಸರಿನಿಂದ ಜನಿಸಿದ್ದಳೆಂದು ಶಂಕರ ವಿಜಯವು ತಿಳಿಸಿರುವು ದರಿಂದ ಬಹುಶಃ 'ಈ ಉಭಯಭಾರತಿ'ಯನ್ನೇ 'ಶಾರದಾ ದೇವಿ' ಎಂದೂ ಭಾವಿಸಿರಲೂಬಹುದು. ಹೀಗೆ ಸರಸ್ವತಿಯೇ 'ಉಭಯಭಾರತಿ' ಎನಿಸಿದ್ದು ಶೃಂಗೇರಿಯಲ್ಲಿ ನೆಲೆಸಿದ ಈಕೆಯನ್ನು (ಭಾರತಿಯನ್ನು) ಸರಸ್ವತಿ ಮತ್ತು ಶಾರದೆಯ ರನ್ನು ಒಂದೇ ಎಂಬಂತೇ ಸ್ತೋತ್ರಗಳಲ್ಲಿ ಗುರುತಿಸಿರು ವಂತಿದೆ. ಸು. ೧೮ನೇ ಶತಮಾನದಲ್ಲೂ ಜನರಿಗೆ ಶಂಕರಾ ಚಾರ್ಯರ ಬಗೆಗೆ ಶಂಕರ ಮಠಗಳ ಬಗೆಗೂ ಇದೇ ನಂಬಿಕೆ ಇತ್ತೆಂದು 'ಕೆಳದಿ ನೃಪ ವಿಜಯ' ಕಾವ್ಯದಿಂದ ತಿಳಿದು ಬರುತ್ತದೆ. ಈ ಕಾವ್ಯದಲ್ಲಿ ಸಂಕಣ್ಣನಾಯಕನು ಕಾಶ್ಮೀರ ಪುರಕ್ಕೆ ಹೋದಾಗ ಅಲ್ಲಿಯ 'ಶಾರದಾದೇವಿ'ಯ ದರ್ಶನ

---

7 ಶೃಂಗೇರಿಯ 'ಶಾರದಾದೇವಿ ದೇವಾಲಯದ ಎದುರಿನಲ್ಲಿ ಸು. ೩೫' ಎತ್ತರದ ಕಲ್ಲಿನ ಸ್ತಂಭವೊಂದಿದೆ. ಪ್ರಾಚೀನ ಕಾಲ ದಲ್ಲಿ ಇದೊಂದು ಜೈನ ಸ್ತಂಭವಾಗಿತ್ತೆಂಬ ಪ್ರತೀತಿ ಇದೆ. ಶೃಂಗೇರಿಯ ಪ್ರಾಚೀನ ಶಾಸನಗಳು ಜೈನಧರ್ಮದ್ದೇ ಆಗಿದೆ. ಈ ದಿಸೆಯಲ್ಲಿ ಹೆಚ್ಚಿನ ಅಧ್ಯಯನದ ಅಗತ್ಯವಿದೆ

ಪಡೆದನೆಂದು ವರ್ಣಿಸಲಾಗಿದೆ[8] ಕವಿವರ್ಯರಾದ ಕುಮಾರ ವ್ಯಾಸ, ಲಕ್ಷ್ಮೀಶ ಮೊದಲಾದವರೂ ಈಕೆಯನ್ನು ಸ್ತುತಿಸಿದ್ದಾರೆ. ಕನಕದಾಸರು ಉಮಾ, ಮಾಹೇಶ್ವರಿಯರೊಂದಿಗೆ ಶಾರದೆಯನ್ನು ಸಮೀಕರಿಸಿದ್ದಾರೆ. ಇವರಂತೆ, ಇನ್ನೊಬ್ಬ ಪ್ರಮುಖ ವಾಗ್ಗೇಯಕಾರರಾದ ವಾಸುದೇವಾಚಾರ್ಯರು 'ಮಾಮವತು ಶ್ರೀ ಸರಸ್ವತೀ' ಎಂದು ಆರಂಭಿಸಿದರೂ, ಕಾಮಕೋಟಿ ಪೀಠನಿವಾಸಿನಿ ಅಂಬಾ ಎಂದು ಸ್ತುತಿಸಿರುವುದು 'ಶಾರದೆ'ಯ ಪ್ರಾರ್ಥನೆಯೇ ಆಗಿದೆ. ಇಲ್ಲೆಲ್ಲ ಶಾರದೆಯನ್ನು ಸರಸ್ವತಿಯನ್ನು ಅಬೇಧವಾಗಿ ಗುರುತಿಸಲಾಗಿದೆ.

ಹೀಗೆ ಸಾಹಿತ್ಯವನ್ನು ಅವಲೋಕಿಸಿದಾಗ ಶಾರದೆಯನ್ನು ಸರಸ್ವತಿ ವಾಗೀಶ್ವರೀ, ಆದಿಶಕ್ತಿ ಮೊದಲಾದ ಹೆಸರುಗಳಿಂದ ಕರೆಯಲಾಗಿದೆ ಎಂಬುದನ್ನು ತಿಳಿಯಬಹುದು.

## ಭಾಗ-೨

ಶಾರದಾ ಉಪಾಸನೆಯು ಕಾಲಾನುಕ್ರಮವಾಗಿ ಬೆಳೆದುಬಂದಿರುವ ರೀತಿಯನ್ನು ಗಮನಿಸಿದರೆ 'ಕಾಶ್ಮೀರದಲ್ಲಿ ಶಾರದಾ ದೇವಾಲಯವು ಸು. ೭ನೇ ಶತಮಾನದಲ್ಲೇ ಇದ್ದಿತೆಂದು ತಿಳಿದು ಬರುವುದಾದರೂ ಅಲ್ಲಿಯ ದೇವಿ ಆರಾಧನೆಯ ಬಗೆಗಾಗಲೀ, ದೇವೀ ಸ್ವರೂಪದ ಬಗೆಗಾಗಲೀ ಹೆಚ್ಚು ವಿವರಗಳು ತಿಳಿಯುವುದಿಲ್ಲ. ಇದರಂತೆ ಕರ್ನಾಟಕದಲ್ಲಿ ಶಾರದಾದೇವಿಯ ಉಪಾಸನೆಯು ಸು. ೯ನೇ ಶತಮಾನದಲ್ಲಿ ಶ್ರೀ ಶಂಕರಾಚಾರ್ಯರಿಂದಲೇ ಆರಂಭವಾಯಿತೆನ್ನಬಹುದು. ಆದರೆ ೧೦-೧೧ನೇ ಶತಮಾನಗಳಲ್ಲಿ 'ದೇವೀ ಉಪಾಸನೆ' ಪ್ರಚಲಿತದಲ್ಲಿದ್ದುದರ ಬಗೆಗೆ ಆಧಾರಗಳೂ, ವಿವರಗಳೂ ದೊರೆತಿರುವುದಿಲ್ಲ. ಸು. ೧೦ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಅನೇಕ ಮತಗಳು ವಿವಿಧ ಧರ್ಮಗಳು ಪ್ರಚಲಿತದಲ್ಲಿದ್ದವು. ಆಗ ಪ್ರಬಲವಾಗಿದ್ದ ಧರ್ಮಗಳಲ್ಲಿ ಕಾಳಾಮುಖ ಶೈವಪಂಥವು ಒಂದಾಗಿತ್ತು. ಈ ಕಾಳಾಮುಖ ಶೈವಪಂಥದ ಒಂದು ಕವಲು ಕಾಶ್ಮೀರದಿಂದ ಬಂದುದಾಗಿತ್ತೆಂದು ತಿಳಿದು ಬರುತ್ತದೆ.[9] ಇವರ ಬಗೆಗೆ ಡಾ|| ಎಂ.ಚಿದಾನಂದಮೂರ್ತಿಯವರು "ತಾವು ಕಟ್ಟಿಸಿದ ತಮಗಾಗಿ ಕಟ್ಟಿಸಿದ ದೇವಸ್ಥಾನಗಳಲ್ಲಿ ವಾಸಿಸುತ್ತಾ, ಅಲ್ಲಿ ತಮ್ಮ ವೈಯುಕ್ತಿಕ ಆಧ್ಯಾತ್ಮಿಕ ಸಾಧನೆಯ ಜೊತೆಗೆ ವಿದ್ಯಾಪ್ರಸಾರದ ಹೊಣೆಯನ್ನು ಹೊತ್ತಿದ್ದರೆಂದು ತಿಳಿಸಿರುತ್ತಾರೆ.[10] ಇವರ ಕೆಲವು ಮಠಗಳಲ್ಲಿ ಶಾರದಾಮೂರ್ತಿಯನ್ನು ಸರಸ್ವತೀ ಮೂರ್ತಿಯನ್ನೂ ಇಟ್ಟು ಪೂಜಿಸುತ್ತಿದ್ದರೆಂದು ತಿಳಿದು ಬಂದಿದೆ. ಮನಗೂಳಿಯ ಶಾಸನವೊಂದರಲ್ಲಿ ಹೀಗೆ ಇಡಲಾಗಿದ್ದ ಶಾರದಾದೇವಿಯ ಅಮೃತ ಪಡಿಗಾಗಿ ಕೊಟ್ಟಿದ್ದ ದಾನವೊಂದನ್ನು ಉಲ್ಲೇಖಿಸುತ್ತದೆ.[11] ಈ ಒಂದೆರಡು ಶಾಸನಗಳನ್ನು ಬಿಟ್ಟರೆ ಶಾರದಾದೇವಿಗಾಗಿಯೇ ನಿರ್ಮಿಸಿರುವ ದೇವಾಲಯವಾಗಲೀ ಇತರ ಪೂಜಾವಿವರಗಳಾಗಲೀ ದೊರೆತಿರುವುದಿಲ್ಲ.

ಕ್ರಿ.ಶ. ಸು. ೧೨-೧೩ನೇ ಶತಮಾನದಲ್ಲಿ ಹೊಯ್ಸಳರು ಕರ್ನಾಟಕವನ್ನು ಆಳುತ್ತಿದ್ದಾಗ ವರ್ತಕರ ಸಮುದಾಯಗಳು ಪ್ರಬಲವಾಗಿದ್ದು, ಅವರು ಉತ್ತರ ಭಾರತದವರೆಗೂ ತಮ್ಮ ಸರಕುಗಳನ್ನು ಸಾಗಿಸುತ್ತಿದ್ದರೆಂದು, ವ್ಯವಹಾರ ಸಂಪರ್ಕಗಳಿದ್ದುವೆಂದು ತಿಳಿಯುತ್ತದೆ. ಕಾಶ್ಮೀರವು ಅವರ ವ್ಯಾಪಾರದ ಭಾಗಗಳಲ್ಲಿ ಒಂದಾಗಿತ್ತೆಂದು, ಕೆಲವೆಡೆ ಹೇಳಲಾಗಿದೆ. ಕ್ರಿ.ಶ. ಸು. ೧೨೫೦ರ ನಂತರದಲ್ಲಿ ಅನೇಕ ಜನ ಬ್ರಾಹ್ಮಣರು ಕಾಶ್ಮೀರದಿಂದ ಬಂದವರು ಹಾಸನ ಜಿಲ್ಲೆಯಲ್ಲಿ ನೆಲೆಸಿದ್ದರೆಂದು ಶಾಸನಗಳು ತಿಳಿಸುತ್ತವೆ. ಇವರ ಶಾಸನಗಳಲ್ಲಿ 'ಶಾರದಾಯೈ ನಮಃ' ಎಂಬ ಉಲ್ಲೇಖವಿರುವುದು ಇವರಿಗಿದ್ದ ಜ್ಞಾನ

---

8 'ಕೆಳದಿನೃಪ ವಿಜಯ'-ಲಿಂಗಣ್ಣಕವಿ, ೩ ಆಶ್ವಾಸ ೫೭ ಪ ಆದರೆ ಈ ಹೊತ್ತಿಗೆ ಅಲ್ಲಿಯ ಶಾರದಾದೇವಾಲಯ ಸುಸ್ಥಿತಿಯಲ್ಲಿರಲಿಲ್ಲ

9 ಕರ್ನಾಟಕ ಲಾಕುಳ ಶೈವರ ಇತಿಹಾಸ ಕಪಟರಾಳ ಕೃಷ್ಣರಾಯರು ಪು. ೪೭-೪೮

10 ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಎಂ. ಡಾ|| ಚಿದಾನಂದಮೂರ್ತಿ

11 E. I. Vol V p. No 18 No. 3

ಮತ್ತು ಇವರ ಸ್ಥಾನಗೌರವಗಳನ್ನು ಗಮನಿಸಿದರೆ ಬಹುಶಃ ಇವರೂ ಶಾರದಾ ಉಪಾಸಕರಾಗಿದ್ದಿರೆನ್ನಬಹುದು.[11]

ಕ್ರಿ.ಶ. ಸು. 1379ರ ಹೆಗ್ಗಡದೇವನ ಕೋಟಿ ಶಾಸನವೊಂದರಲ್ಲಿ ಪ್ರಾರ್ಥನಾ ಶ್ಲೋಕವು–

ಶಾರದಾ ಶಾರದಾಂಬೋಜ ಶರದಿಂದು ನಿಭಾನನೆ
ಸಾರಸ್ವತ್ಯಂ ಚ ಮೇ ದೇಹಿ ಶಾಸನಂ ಲಿಬಿತಂ ಮಯೀ–" ಎಂದಿದೆ[12]. ಇದರಿಂದ ಶಾರದೆಯು ವಿದ್ಯೆ ಬುದ್ಧಿಗಳನ್ನು ನೀಡುವವಳೆಂದು ಜನ ಪ್ರಾರ್ಥಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಶಂಕರಾಚಾರ್ಯರು ಸ್ಥಾಪಿಸಿರುವ ಪೀಠಗಳನ್ನು 'ಸರ್ವಜ್ಞಪೀಠ'ವೆಂದು ಕರೆದಿರುತ್ತಾರೆ. ಇದರಂತೆ ಹಾಸನ ಜಿಲ್ಲೆಯ ಕೆಲವು ಅಗ್ರಹಾರಗಳಲ್ಲಿದ್ದ ಬ್ರಾಹ್ಮಣರು ವೇದಪಾರಂಗತರೂ ಕರ್ಮನಿಷ್ಠರೂ ಆಗಿದ್ದು ಅವರಿದ್ದ "ತಳಲೂರು[13]. ಅರಕೆರೆ ಗ್ರಾಮವನ್ನು 'ಸರ್ವಜ್ಞ ಪುರವೆಂದೂ ಕರೆದಿದ್ದು[14]. ಸಾಲಗಾಮೆ ಗ್ರಾಮವನ್ನು ಸರಸ್ವತೀ ಪುರ'[15]ವೆಂದು ಕರೆಯಲಾಗಿದೆ.

ಅರಸೀಕೆರೆಯ ಗಂಡಸಿ ಗ್ರಾಮದ ಶಾಸನದಲ್ಲಿ–

"ಶ್ರೀ ಅಸಿತಗಿರಿ ಸಮಂ ಸ್ಯಾತ್ಕಾಜಲಂ ಸಿಂಧು ಪಾತ್ರೇ
ಸುರತರುವರ ಶಾಖಾಲೆಖಿನೀಂ ಪತ್ರ ಮುರ್ವೀಂ
ಯುವಿ ಲಿಖತಿ ಗೃಹೀತ್ವಾ ಶಾರದಾ ಸಾರ್ವಕಾಲಂ
ತದಪಿ ತವಗುಣಾನಾಮೀಶಪಾರಂ ನಯಾತಿ"

ಎಂಬ ಪ್ರಾರ್ಥನೆ ಇದೆ.[16] ಅರಸೀಕೆರೆಯ ಕೆಲ್ಲಂಗೆರೆಯ ಶಾಸನವೊಂದನ್ನು 'ಶಾರಾದೀನಾಥ ಪಂಡಿತನು ಹೇಳಿರುತ್ತಾನೆ.[17] ಹಳೇಬೀಡಿನ ಶಾಸನವೊಂದರಲ್ಲಿ ನಾನಾದೇಶೀಯರ ಬಗೆಗೆ ಹೇಳುತ್ತಾ ಅವರನ್ನು ಕಾಸ್ಮೀರಾ ಸಾರದಾದೇವಿಲಬ್ಧವರ ಪ್ರಸಾದರು.[18] ಎಂದು ಕರೆಯಲಾಗಿದೆ. ಹೀಗೆ ಈ ಜಿಲ್ಲೆಯಲ್ಲಿ ಕ್ರಿ.ಶ. ಸು ೧೨-೧೩'ನೇ ಶತಮಾನದಲ್ಲಿ ಅನೇಕರು ಶಾರದಾ ಉಪಾಸಕರಾಗಿದ್ದಿರಬೇಕೆನ್ನಿಸುತ್ತದೆ.

ಆದರೆ ಕರ್ನಾಟಕದ ಪ್ರಮುಖವಾದ ಶಾರದಾ ಪೀಠವೆನ್ನಿಸಿರುವ ಶೃಂಗೇರಿಯ ಶಾಸನಗಳಲ್ಲಿ ಕ್ರಿ.ಶ. ಸು. ೧೫'ನೇ ಶತಮಾನಕ್ಕೆ ಮೊದಲು, ಶಾರದಾದೇವಿಯ ಉಲ್ಲೇಖವಿಲ್ಲವೆಂದರೆ ಆಶ್ಚರ್ಯವಾಗಬಹುದು. ಇಲ್ಲಿ ಶಾರದಾದೇವಿಗಾಗಿ ಕೊಟ್ಟಿರುವ ಪ್ರಾಚೀನ ಉಲ್ಲೇಖವೆಂದರೆ ಕ್ರಿ.ಶ. ಸು. ೧೩೮೦ರ ತಾಮ್ರ ಶಾಸನವಾಗಿದೆ. ಇದಕ್ಕೆ ಮೊದಲಿನ ಶಾಸನಗಳಲ್ಲಿ ಶಾರದಾದೇವಿಯ ಉಲ್ಲೇಖವಿಲ್ಲ. ಕ್ರಿ.ಶ. ೧೩೪೬ ಮತ್ತು ೧೩೫೫ರ ಶಾಸನಗಳಲ್ಲಿ ಶ್ರೀ ವಿದ್ಯಾರಣ್ಯರ ಉಲ್ಲೇಖವಿದೆ.[19] ಯಾದರೂ ಈ ದಾನಗಳು ಯತಿಗಳಿಗೆ ಕೊಟ್ಟ ದಾನಗಳಾಗಿವೆ. "ಶ್ರೀ ವಿದ್ಯಾರಣ್ಯರ ನಂತರ ಪೀಠಾಧಿಪತಿಗಳಾದ ಶ್ರೀ ಚಂದ್ರಶೇಖರ ಭಾರತಿ (ಮೊದಲನೆಯ) ಸ್ವಾಮಿಗಳು ಇಮ್ಮಡಿ ಹರಿಹರರಾಯನನ್ನು ಶೃಂಗೇರಿಗೆ ಬರಮಾಡಿಕೊಳ್ಳುತ್ತಾರೆ. ಸಾಮ್ರಾಟರು ಆಗ (ಕ್ರಿ.ಶ. ೧೩೯೬) ವಿದ್ಯಾರಣ್ಯರ ಸಮಾಧಿಯ ಮೇಲೆ ಗುಡಿಯನ್ನು ಕಟ್ಟಿಸಿ

---

11 ಎ.ಕ. ೮, ಹಾಸನ ೧೯೪
12 ಎ.ಕ. ೩, ಹೆ. ಕೋಟಿ ೧೪೯
13 ಎ.ಕ. ೫, ಅರಸೀಕೆರೆ ೧೩೦
14 ಅದೇ, ಅ.ಕೆ. ೮೨
15 ಅದೇ. ಎ.ಕ. ೮, ಹಾಸನ ೫೮
16 ಎ.ಕ. ೫-ಅರಸಿಕೆರೆ ೧೫೯ ;
17 ಅದೇ ; ಅರಸಿಕೇರೆ ೧೧೨
18 ಎ.ಕ. ೫, ಬೇ ೧೧೬
19 ಶೃಂಗೇರಿ ಧರ್ಮ ಸಂಸ್ಥಾನ-ಎ.ಕೆ. ಶಾಸ್ತ್ರೀ-ಪು ೧೩

ಆ ನೆನಪಿಗಾಗಿ 'ವಿದ್ಯಾರಣ್ಯಪುರ'ವೆಂಬ ಅಗ್ರಹಾರವನ್ನು ಸ್ಥಾಪಿಸುತ್ತಾರೆಂದು[20] ವಿದ್ವಾಂಸರು ತಿಳಿಸಿರುತ್ತಾರೆ. ರಾಜನು "ಶ್ರೀ ಶಾರದಾಂಬಾ ದೇವಾಲಯದ ಸಂರಕ್ಷಣೆಗಾಗಿ, ಚಂದ್ರಶೇಖರ ಭಾರತಿ ಸ್ವಾಮಿಗಳಿಗೆ 'ದಂದೂರು, ಎಂಬ ಗ್ರಾಮವನ್ನು ದಾನ ಕೊಡುತ್ತಾನೆ. 'ಇದರಿಂದ ಕ್ರಿ.ಶ. ೧೩೯೬ಕ್ಕೆ ಮೊದಲೇ ಇಲ್ಲಿ ಶಾರದಾಂಬ ದೇವಾಲಯವಿತ್ತೆಂದು ತಿಳಿಯುತ್ತದೆ. ಇದಕ್ಕೆ ಮೊದಲು ಕ್ರಿ.ಶ. ೧೩೮೩ರಲ್ಲಿ ಇಮ್ಮಡಿ ಹರಿಹರನೇ ತುಂಗಭದ್ರಾನದೀ ತೀರದಲ್ಲಿ ವಿರೂಪಾಕ್ಷನ ಸನ್ನಿಧಿಯಲ್ಲಿ ಶೃಂಗೇರಿಯ ಶಾರದಾ ಅಮ್ಮನವರ ನಿತ್ಯೋತ್ಸವ ಮತ್ತು ನವರಾತ್ರಿ ಪೂಜೆಗಾಗಿ, ನಾಲ್ಕು ಉಪಗ್ರಾಮಗಳೊಂದಿಗೆ 'ಗಂಗೆ ಮಂಡಲ' ಎಂಬ ಭಾಗವನ್ನು ದಾನ ಬಿಟ್ಟಿದ್ದಾನೆ.[21] ಇದರಿಂದ ಬಹುಶಃ ಕ್ರಿ.ಶ. ೧೩-೧೪ನೇ ಶತಮಾನಗಳಲ್ಲಿ ಶೃಂಗೇರಿಯಲ್ಲಿ ಶಾರದಾದೇವಿ ಉಪಾಸನೆ ಸಾಂಗವಾಗಿ ನಡೆದಿದ್ದಿರಬೇಕೆನ್ನಿಸುತ್ತದೆ. ಆದರೆ ಇಲ್ಲಿಯ ಪೀಠವು ಹೆಚ್ಚು ಪ್ರಸಿದ್ಧವಾದುದು ಕ್ರಿ.ಶ. ೧೩೫೦ರ ನಂತರವೇ ; ವಿಜಯನಗರದ ಅರಸರ ಸತತ ಬೆಂಬಲವು ಇದಕ್ಕೆ ಕಾರಣವಿದ್ದಿರಬಹುದು. ಇಲ್ಲಿಯ ಶಾಸನಗಳನ್ನು ಗಮನಿಸಿದಾಗ, ಒಂದು ಅಂಶವು ಕುತೂಹಲ ಕೆರಳಿಸುತ್ತದೆ. ಅದೆಂದರೆ ಇಲ್ಲಿಯ ಗುರುಗಳ ಬಿರುದಾವಳಿಗಳಲ್ಲಿ ಎಲ್ಲಿಯೂ ಅವರನ್ನು "ಶೃಂಗೇರಿಯ ಶಾರದಾದೇವಿ ಪಾದಾರಾಧಕರೆನ್ನದೇ ಕೇವಲ ಶ್ರೀ ಮದ್ರಾಜಾಧಿರಾಜಗುರು ಭೂ ಮಂಡಲಾಚಾರ್ಯ ತುಂಗಭದ್ರಾತೀರವಾಸ ।ಋಷ್ಯಶೃಂಗ ಪುರವರಾಧೀಶ್ವರಾ। ಶೃಂಗೇರಿ ಶ್ರೀ ವಿದ್ಯಾ ಶಂಕರ ದೇವರ ದಿವ್ಯ ಶ್ರೀ ಪಾದ ಪದ್ಮಾರಾಧಕರು"-ಎಂದು ಕರೆಯಲಾಗಿದೆ ಇಲ್ಲಿ ಬಹುಶಃ 'ಶಾರಾದಾದೇವಿಯ ಆರಾಧನೆ 'ಗಿಂತ' ವಿದ್ಯಾಶಂಕರರ ಆರಾಧನೆ'ಯೇ ಪ್ರಮುಖ ವಾಗಿದ್ದಂತೆ ಕಾಣಬರುತ್ತದೆ. ಇದಕ್ಕೆ ಉಚಿತವಾದ ಕಾರಣವು ತಿಳಿದು ಬರುತ್ತಿಲ್ಲ.

ಕ್ರಿ.ಶ. ೧೬೦೦ರ ಸುಮಾರಿಗೆ ಹಂಪೆಯಲ್ಲಿ, ಕೂಡ್ಲಿ ಗ್ರಾಮಗಳಲ್ಲೂ ಈ ಮಠದ ಶಾಖೆಗಳು ಆರಂಭವಾಗಿತೆಂದು ತಿಳಿದು ಬರುತ್ತದೆ. ಹೀಗೆ ಶಾರದಾ ಉಪಾಸನೆ ವ್ಯಾಪಕವಾಗಿ ಹರಡ ತೊಡಗಿತು. ನಂತರದ ಕಾಲದಲ್ಲಿನ ಶಾರದಾ ಉಪಾಸನೆಯ ಬಗೆಗೆ ಶಾಸನಗಳಿಗಿಂತ ಕಡತಗಳಿಂದ ಹೆಚ್ಚಿನ ವಿವರಗಳು ದೊರೆತಿದೆ. ಶ್ರೀ ಎ.ಕೆ. ಶಾಸ್ತ್ರೀಗಳವರ 'ಶೃಂಗೇರಿ ಧರ್ಮ ಸಂಸ್ಥಾನ' ಗ್ರಂಥದಿಂದ ಈ ಕೆಳಗಿನ ಅಂಶಗಳನ್ನು ಸಂಗ್ರಹಿಸಲಾಗಿದೆ. ಕ್ರಿ.ಶ. ಸು. ೧೬೬೩ರ ಕಡಿತವೊಂದರಲ್ಲಿ ಮಲ್ಲಿಕಾರ್ಜುನ ಚೌಂದ್ರಮೌಳಿ ಮತ್ತು ಸರಸ್ವತಿ ದೇವತಾ ಮೊದಲಾದ ದೇವರಿಗೆ ಪೂಜೆಗಳಿಗಾಗಿ....ದಾನ ಕೊಟ್ಟ ವಿವರವಿದೆ. ಕೆಳದಿಯ ಸೋಮಶೇಖರನು ಶ್ರೀ ಶಾರದಾಂಬಾ ದೇವಿಯ ಪೂಜೆಗಾಗಿ ದಾನ ಕೊಟ್ಟಿರುತ್ತಾನೆ. ಮುಮ್ಮಡಿ ಸೋಮಶೇಖರನು (ಕ್ರಿ.ಶ. ೧೭೫೬-೬೩) ನವರಾತ್ರಿ ಉತ್ಸವದಲ್ಲಿ ಶಾರದಾಂಬಾ ಪೂಜೆಗೆ ಸಂಬಂಧಿಸಿದ ಸರಕುಗಳ ಮೇಲಿನ ಆಯಾತ ನಿರ್ಯಾತದ ಸುಂಕವನ್ನು ರದ್ದುಗೊಳಿಸುವಂತೆ ಅಧಿಕಾರಿಗಳಿಗೆ ಆಜ್ಞೆ ವಿಧಿಸುತ್ತಾನೆ. ಮರಾಠ ಸರದಾರರ ವಿವಿಧ ಕಾಣಿಕೆಗಳನ್ನು ಶಾರದಅಮ್ಮನವರ ಸೇವೆ ಎಂದು ಕೊಟ್ಟಿರುತ್ತಾರೆ.

ಕ್ರಿ.ಶ. ಸು. ೧೭೦೫ರ ನಂತರದಲ್ಲಿ ದ್ವಿತೀಯ ಸಚ್ಚಿದಾನಂದ ಭಾರತಿ ಸ್ವಾಮಿಗಳು ಪೀಠಾಧಿಪತಿಗಳಾಗಿದ್ದಾಗ, ಈಗಿನಂತೆ ವೈಭವದಿಂದ ನಡೆಯುವ 'ನವರಾತ್ರಿ ಉತ್ಸವ'ವನ್ನು ಪ್ರಾರಂಭಿಸಿದರು. 'ನವರಾತ್ರಿ' ಒಂದು ಮಹತ್ವದ ಉತ್ಸವವಾಗಿದ್ದು, ಆನೇಕ ಭಕ್ತಾದಿಗಳೂ ಶ್ರೀ ಶಾರದಾಂಬೆಯ ಪೂಜೆಗಾಗಿ ಕಾಣಿಕೆ ಮತ್ತು ಧವಸಗಳನ್ನು ದಾನ ಕೊಟ್ಟಿರುತ್ತಾರೆ. ಕ್ರಿ.ಶ. ೧೭೪೮ರಲ್ಲಿ ಇಕ್ಕೇರಿ, ದುರ್ಗ, ಹೊನ್ನಾಳಿ.... ಗುತ್ತಿ ರಾಮಚಂದ್ರಪುರ....ಮುಂತಾದ ಊರಿನ ಭಕ್ತರುಗಳು ನವರಾತ್ರಿ ಉತ್ಸವಕ್ಕೆಂದು ಭತ್ತ, ಅಕ್ಕಿ, ಗಂಧದ ಕಟ್ಟಿಗೆ ಮೊದಲಾದವನ್ನು ಅರ್ಪಿಸಿರುತ್ತಾರೆ.

ಕ್ರಿ.ಶ. ೧೭೫೪ರ ಕಡತದಿಂದ ವೆಂಗೆರೆಯ್ಯ ವೆಂಕಣ್ಣಾ ಚಾರ್ಯರು ಶ್ರೀ ಶಾರದಾಂಬೆಯ ಕೃತ್ತಿಕಾ ಮಹೋತ್ಸವದ ವೆಚ್ಚಕ್ಕಾಗಿ, ವೆಂಗರೆ ಅಗ್ರಹಾರದಲ್ಲಿಯ

---

20 ಶೃಂಗೇರಿ ಧರ್ಮ ಸಂಸ್ಥಾನ-ಎ.ಕೆ. ಶಾಸ್ತ್ರಿ-ಪು. ೧೩

21 ಕೂಡ್ಲಿ ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನ-ಲೇಖನ ಸಂಗ್ರಹ ಸಂ. ೫- ಪು. ೭

ಭೂಮಿಯನ್ನು ದಾನ ಮಾಡುತ್ತಾರೆ. ಅದೇ ರೀತಿ, ಅಂಬಳೆಯ ವೆಂಕಟರಮಣಯ್ಯನು, ದೇವಸ್ಥಾನದಲ್ಲಿ ಪ್ರತಿನಿತ್ಯದ ನೈವೇದ್ಯಕ್ಕಾಗಿ ಚಿಕ್ಕಮಂಗಳೂರಿನ ಗೋವನಹಳ್ಳಿಯ ಒಂದು ಖಂಡುಗ ಭೂಮಿಯನ್ನು ದಾನ ಮಾಡುತ್ತಾನೆ.

ಕ್ರಿ.ಶ. ೧೭೮೬ರಲ್ಲಿ ತೀರ್ಥಹಳ್ಳಿ ಮಠದ ಶ್ರೀ ಅಮರೇಂದ್ರಪುರಿ ಸ್ವಾಮಿಗಳವರು ನವರಾತ್ರಿ ಉತ್ಸವದಲ್ಲಿ ಮೂಲಾನಕ್ಷತ್ರದಲ್ಲಿ ಸಾಯಂಕಾಲ ಆಗುವ ಪೂಜೆ, ನೈವೇದ್ಯ, ದೀಪಾರಾಧನೆ ಮತ್ತು ಪುಷ್ಪ ಮಂಟಪೋತ್ಸವಗಳ ಸೇವೆಗಾಗಿ ಪ್ರತಿ ವರ್ಷ ಐದು ವರಹಗಳನ್ನು ಕೊಡುವುದಾಗಿ ತಿಳಿಸಿರುತ್ತಾರೆ. ಕೇವಲ ನವರಾತ್ರಿ ದಿನಗಳಲ್ಲಿ ಅಲ್ಲದೇ ಪ್ರತಿದಿನವು ಪೂಜೆ ನಡೆಯುತ್ತಿತ್ತೆಂದು ಕ್ರಿ.ಶ. ೧೭೪೮ರ ಕಡತವೊಂದು ತಿಳಿಸುತ್ತದೆ–'ಪ್ರಥಮ ಶ್ರೀ ಸಚ್ಚಿದಾನಂದ ಭಾರತಿ ಸ್ವಾಮಿಗಳು' ಶ್ರೀ ಶಾರದಾಂಬೆಯ ಸನ್ನಿಧಿಯಲ್ಲಿ 'ಸರಸ್ವತಿ ಸೂಕ್ತ'ವನ್ನು ಪಠಿಸುತ್ತಿದ್ದುದ್ದಕ್ಕಾಗಿ ಸಂಬಳದಂತೆ ಕೆಲಭಾಗ ಭೂಮಿಯನ್ನು ಸಾಗುವಳಿ ಮಾಡಿಕೊಳ್ಳಲು, ಬಿಟ್ಟುಕೊಡುವರು. ಇದಕ್ಕಾಗಿ ಅವನು ಆರು ಗದ್ಯಾಣವನ್ನು ಮಠಕ್ಕೆ ಕೊಡಬೇಕೆಂದು ತಿಳಿಸುತ್ತದೆ.

ಇದರಂತೆ ಮಠದ ಆಗುಹೋಗುಗಳ ಬಗೆಗೆ, ಹಣಕಾಸಿನ ಲೆಕ್ಕಾಚಾರದ ಬಗೆಗೆ ಕಡತಗಳಿಂದ ಹೇರಳವಾಗಿ ವಿವರಗಳು ದೊರೆಯುತ್ತವೆ.

ಕ್ರಿ.ಶ. ೧೭೯೧ರ ಪರಶುರಾಮ ಬಾಹು, ಶೃಂಗೇರಿಯನ್ನು ಲೂಟಿ ಮಾಡಿದ ಸನ್ನಿವೇಶದ ವಿವರಗಳನ್ನು ಕೆಳದಿ ದೊರೆಗಳಿಗೆ ತಿಳಿಸುವ ಕಡತವೂ ಬಂದಿದ್ದು, ಆಗ ದೇವಾಲಯದ ಆಭರಣಗಳು ಮಾತ್ರವಲ್ಲದೆ ಶಾರದಾ ದೇವಿಯ ಬಿಂಬವು ಅಪವಿತ್ರವಾಯಿತೆಂದು ತಿಳಿಯುತ್ತದೆ. ಇದಾದ ಕೆಲವೇ ದಿನಗಳಲ್ಲಿ ಟಿಪ್ಪುಸುಲ್ತಾನನು ಪುನಃ ಪ್ರತಿಷ್ಠೆ ಮಾಡಿಸಲು ಮಠಕ್ಕೆ ಸಹಾಯ ಮಾಡುತ್ತಾನೆ.

ಟಿಪ್ಪುಸುಲ್ತಾನನ ಕಾಲದ ಇನ್ನೊಂದು ಕಡತದ ವಿವರವು ಗಮನಾರ್ಹವಾದುದ್ದು-"ಸುಲ್ತಾನನು ತನ್ನ ವೈರಿಗಳಾದ ನಿಜಾಮ ಮತ್ತು ಮರಾಠರು ನಾಶವಾಗಲೆಂದು ಶತಚಂಡಿ ಜಪ, ಸಹಸ್ರ ಚಂಡಿ ಹೋಮಗಳನ್ನು ಮಾಡುವಂತೆ ಗುರುಗಳಿಗೆ ಬಿನ್ನಹ ಮಾಡಿಕೊಳ್ಳುತ್ತಾನೆ. ಅದರ ಮುಂದಿನ ಪತ್ರದಲ್ಲಿ ಅದು ಸಫಲವಾದುದಕ್ಕೆ 'ಧನ್ಯವಾದ'ಗಳನ್ನು ತಿಳಿಸಿರುತ್ತಾನೆ. ಇದರಿಂದ ದೇವಿಯ ಉಪಾಸನೆಯು ಮೊದಲು ಬ್ರಹ್ಮಜ್ಞಾನಾರ್ಜನೆಗಾಗಿ ಇದ್ದುದ್ದು ಮುಂದೆ ತಾಂತ್ರಿಕ ಸಿದ್ಧಿಗಳೇ ಪ್ರಮುಖವಾಗಿ ಇಹಲೋಕದ ಸಿದ್ಧಿಗಾಗಿ ಆರಾಧಿಸುವ ಪರಂಪರೆ ಕಾಣಬರುತ್ತದೆ.

ಕ್ರಿ.ಶ. ೧೮೫೦ರ ಸುಮಾರಿನಲ್ಲಿ ಶಿವಗಂಗೆಯಲ್ಲಿ ಶಂಕರ ಮಠವೊಂದು 'ಶಾರಾದ ಮಂದಿರ'ದೊಂದಿಗೆ ಸ್ಥಾಪನೆಯಾಗಿದ್ದು, ಇಲ್ಲಿರುವ ಶಾರದಾಂಬೆಗೆ ಶೃಂಗೇರಿಯ ನಂತರದ ಅಗ್ರಮನ್ನಣೆ ದೊರೆಯುತ್ತಿದೆ. ಮೈಸೂರರಸರ ಕಾಲದಲ್ಲೂ ಈ ಶೃಂಗೇರಿ ಮಠಕ್ಕೆ ಆ ಮೂಲಕ ಶಾರದಾ ಉಪಾಸನೆಗೆ ಸಾಕಷ್ಟು ಪ್ರಗತಿದಾಯಕವಾಗಿದ್ದು ತಿಳಿದು ಬರುತ್ತದೆ.

ಈಗಿರುವ ಶಾರದಾದೇವಾಲಯವು ಶೃಂಗೇರಿಯಲ್ಲಿ ಸು. ೧೯೧೬ರಲ್ಲಿ ರೂಪುಗೊಂಡಿತು. ಈ ೨೦ನೇ ಶತಮಾನದಲ್ಲಿ ಶಂಕರಮಠವು, ಅನೇಕ ಶಾಖೆಗಳನ್ನು ಹೊಂದಿದ್ದು, ಈ ಮಠವಿರುವ ಕಡೆಯಲ್ಲೆಲ್ಲ ಶ್ರೀ ಶಾರದಾದೇವಿ ದೇವಾಲಯವಿದ್ದು, ಶಾರದಾ ಉಪಾಸನೆ ಸರ್ವವ್ಯಾಪಿಯಾಗಿ ಹಬ್ಬಿರುವುದನ್ನು ಕಾಣುತ್ತೇವೆ.

### ಭಾಗ-೩

ಶಾರದಾದೇವಿಯ ಶಿಲ್ಪಗಳನ್ನು ಗಮನಿಸಿ 'ಶಾರದಾ ಉಪಾಸನೆ'ಯ ಬಗೆಗೆ ತಿಳಿಯಲು ಯತ್ನಿಸಿದರೆ, ಇದರ ಆರಂಭವು ಶಂಕರರು ಅರ್ಚಿಸಿದ ಶ್ರೀಚಕ್ರದ ಉಪಾಸನೆಯಾಗಿದ್ದು, ಶ್ರೀ ಚಕ್ರವು ಯಂತ್ರಗಳಲ್ಲೆಲ್ಲ ಅತೀ ಶ್ರೇಷ್ಠವಾದುದ್ದಾಗಿದೆ. ಇದನ್ನು ದೇವಿಯ ಪ್ರತೀಕವೆಂದೇ ಭಾವಿಸಿರುತ್ತಾರೆ. ಇದರಿಂದಲೇ ದೇವಿಯನ್ನು 'ಶ್ರೀ ಚಕ್ರರಾಜ ನಿಲಯೇ', 'ಚಕ್ರರಾಜ ನಿಕೇತನಾ', 'ತ್ರಿಕೋಣಗಾ','ತ್ರಿಕೋಣಾಂತರ ದೀಪಿಕಾ' ಮುಂತಾದ ಹೆಸರುಗಳಿಂದಲೂ ಕರೆಯುತ್ತಾರೆ. ಈ ಯಂತ್ರದ ಆರಾಧನೆಯು ತಾಂತ್ರಿಕ ಸಂಪ್ರದಾಯವಾಗಿರುವುದರಿಂದ ಬಹುಶಃ 'ಶ್ರೀ ಶಂಕರರು ಉಪಾಸಿಸಿದ್ದು ಶಾಕ್ತ ಶಾರದಯನ್ನೇ ?' ಎಂಬ ಅನುಮಾನ ಉಂಟಾಗುತ್ತದೆ.

ಶಂಕರರು ಉಪಾಸಿಸಿದ್ದ ದೇವತಾಬಿಂಬವು ಈಗ ಶೃಂಗೇರಿಯಲ್ಲಿ ಉಳಿದಿರುವುದಿಲ್ಲ. ಶಂಕರರು 'ದಾರು ಮೂರ್ತಿ'ಯೊಂದನ್ನು ಪೂಜಿಸುತ್ತಿದ್ದರೆಂದು ಹೇಳುವರಾದರೂ ಬಹುಶಃ ಶಂಕರರು ಕೇವಲ ಶ್ರೀ ಚಕ್ರಾರ್ಚನೆಯನ್ನೇ ರೂಢಿಯಲ್ಲಿ ತಂದಿರಬೇಕೆನಿಸುತ್ತದೆ. ಶೃಂಗೇರಿಯಲ್ಲಿ ಮೊದಲ ಬಾರಿಗೆ ಶ್ರೀ ವಿದ್ಯಾರಣ್ಯರು ಪಂಚಲೋಹದ ಪ್ರತಿಮೆಯೊಂದನ್ನು ಮಾಡಿಸಿ ಸ್ಥಾಪಿಸಿದರೆಂದು ಹೇಳುತ್ತಾರೆ. ಶೃಂಗೇರಿಯ ಶಾಸನಗಳಲ್ಲಿ 'ಶಾರದಾಂಬೆ'ಯ ಉಲ್ಲೇಖವು ನಂತರದ ಕಾಲದಲ್ಲೇ ಕಾಣಬರುವುದನ್ನು ನೋಡಿದರೆ ವಿದ್ಯಾರಣ್ಯರು ಮಾಡಿಸಿದ ಶಾರದಾದೇವಿಯ ಪ್ರತಿಮೆಯೇ ಇಲ್ಲಿಯ ಮೂಲಬಿಂಬವಿರಬೇಕೆನ್ನಿಸುತ್ತದೆ. ಆದರೆ ದುರದೃಷ್ಟವಶಾತ್, ಈ ಬಿಂಬವು ಕೂಡ ಕ್ರಿ.ಶ. ೧೭೯೧ರಲ್ಲಿ ಪರಶುರಾಮ್ ಬಾಹುವಿನ ಧಾಳಿಯ ಸಮಯದಲ್ಲಿ ನಾಶವಾಗಿದೆ. ಈಗ ಶೃಂಗೇರಿಯಲ್ಲಿರುವ ಬಿಂಬವು ಸು. ೨೦ನೇ ಶತಮಾನದ್ದಾಗಿದೆ.

ಈ ದೇವಿಯ ಆರಾಧನೆಗೆ ಸಂಬಂಧಿಸಿದಂತೆ ಶಂಕರಾಚಾರ್ಯರ 'ಸೌಂದರ್ಯಲಹರಿ' ಮತ್ತು 'ಲಲಿತಾ ಸಹಸ್ರನಾಮ' ಸ್ತೋತ್ರಗಳು ದೇವಿಯ ಮಹಿಮೆಯನ್ನು ತಿಳಿಸುವ ಪ್ರಮುಖ ಭಾಗಗಳಾಗಿವೆ. ಈ ದೇವಿಯು ವಿಶೇಷವಾಗಿ 'ಬ್ರಹ್ಮ ಜ್ಞಾನದಾಯಿನಿ' ಯಾಗಿದ್ದು ಶ್ರೀಚಕ್ರದ ಸಂಕೇತವು. ಅದನ್ನು ಸಾಧಿಸುವ ಯೋಗ ಮಾರ್ಗಕ್ಕೆ ಕೈದೀವಿಗೆಯಂತಿದೆ. ಈ ಬ್ರಹ್ಮ ಜ್ಞಾನವನ್ನು ಸಾಧಿಸುವ ಬಗೆಗೆ ಯೋಗ ಮಾರ್ಗವು ತಿಳಿಸುವುದು. ಇದರಂತೆ ಪ್ರಕೃತಿಯ ಸಕಲ ಜೀವಿಗಳಲ್ಲೂ ಪರಾಶಕ್ತಿಯ ಅಂಶವಿರುವುದಲ್ಲದೇ, ಮಾನವನಲ್ಲಿ ಅಡಕವಾಗಿರುವ ಕುಂಡಲಿನೀ ಶಕ್ತಿಯನ್ನು ಜಾಗೃತಗೊಳಿಸಿ, ಶಿರಸ್ಸಿನಲ್ಲಿರುವ ಸಹಸ್ರಾರವನ್ನು ತಲುಪಿ—'ಶಿವಶಕ್ತಿ' ಯನ್ನು ಸಾಧಿಸವುದೇ ಶಕ್ತ್ಯಾಗಮದ ಪ್ರಮುಖ ಹಂತವಾಗಿದ್ದು ಇದೇ ಬ್ರಹ್ಮಜ್ಞಾನಸಿದ್ಧಿ, ಮೋಕ್ಷ ಎನ್ನಿಸುತ್ತದೆ. ಈ ತತ್ವದ ಬಗೆಗೆ ಸವಿಸ್ತಾರವಾದ ಕ್ರಮವನ್ನು ಆ ಮೂಲಕ 'ಶಕ್ತಿ'ಯ ಮಹಿಮೆಯನ್ನು 'ಶಾರದಾತಿಲಕ ತಂತ್ರ' ಎಂಬ ಗ್ರಂಥವು ತಿಳಿಸುತ್ತಿದ್ದು, ಈ ಗ್ರಂಥವು-"ಸಾರಂ ವಕ್ಷ್ಯಾಮಿ ತಂತ್ರಾಣಾಂ ಶಾರದಾ ತಿಲಕಂ ಶುಭಂ" ಎನ್ನಿಸಿದೆ.

ಶಾರದಾದೇವಿಯ ಸ್ವರೂಪದ ಬಗೆಗೆ ತಿಳಿದವರು ಹೀಗೆ ಹೇಳುತ್ತಾರೆ. "ಲೋಕ ಕಲ್ಯಾಣಾರ್ಥವಾಗಿ, ಲೋಕದ ಜನತೆಗೆ ಕಂಟಕ ಸ್ವರೂಪವಾಗಿದ್ದ ದಾನವರ ಸಂಹಾರಕ್ಕಾಗಿ 'ದೈವಶಕ್ತಿ' ಅವತರಿಸಿ ವಿವಿಧ ಸ್ವರೂಪಗಳಿಂದ ಜಗತ್ತನ್ನು ಸಂರಕ್ಷಿಸುತ್ತದೆ.ಅದರಂತೆ ಆದಿಶಕ್ತಿಯ ಈ ಸ್ವರೂಪವು-ಜಗತ್ತನ್ನು ಅಜ್ಞಾನದ ಅಂಧಕಾರದಿಂದ ಸಂರಕ್ಷಿಸಿ ಉದ್ಧರಿಸುವ ಉದ್ದೇಶವನ್ನುಳ್ಳದ್ದು. ಈ ಸ್ವರೂಪದ ಉಪಾಸನೆಯಿಂದ-ಇಹಲೋಕದ ಸಕಲಶಾಸ್ತ್ರ, ವಿದ್ಯೆಗಳೂ ದೊರೆಯುವುದಲ್ಲದೇ, ಆತ್ಮಸಾಕ್ಷಾತ್ಕಾರವಾಗಿ ಬ್ರಹ್ಮ ಜ್ಞಾನವು ಲಭಿಸುತ್ತದೆ. ಆ ಕಾರಣ 'ಬ್ರಹ್ಮ ವಿದ್ಯಾದಾಯಿನಿ'ಯಾದ ದೇವಿಯ ಈ ಸ್ವರೂಪವು ವಿಶೇಷವಾಗಿದ್ದು ಅವಳ 'ಮೂರ್ತಿ'ಯು ಈ ಎಲ್ಲಾ ಅರ್ಥವನ್ನು ಸ್ಫುರಿಸುತ್ತದೆ. ವಿಶಾಲವಾದ ಅವಳ ಕಣ್ಣುಗಳೇ ಇಲ್ಲಿ ದಯಾಪೂರ್ಣವಾಗಿದ್ದು, ಅಭಯ ಮತ್ತು ವರದ ಹಸ್ತಗಳ ಬದಲಾಗಿವೆ. ಈ ಎಲ್ಲಾ ಗುಣ ವಿಶೇಷಗಳುಳ್ಳ ಮೂರ್ತಿಯ ಬಗೆಗೆ ನೋಡೋಣ.

ಅರಳಿದ ಕಮಲದ ಮೇಲೆ ಪದ್ಮಾಸನ ಭಂಗಿಯಲ್ಲಿ ಆಸೀನಳಾಗಿರುವ ಶಾರದಾದೇವಿಯು ಜಟಾಮುಕುಟೆ, ಚಂದ್ರಕಲಾಧರೆ, ತ್ರಿನೇತ್ರೆಯಾಗಿದ್ದಾಳೆ. ಇವು ಶೈವ ಧರ್ಮದ ಲಕ್ಷಣಗಳೆನಿಸಿದರೂ ಜಟಾಮುಕುಟ ಮತ್ತು ಪದ್ಮಾಸನ ಭಂಗಿಯು ಅವಳ 'ಯೌಗಿಕ ಸ್ಥಿತಿ'ಯನ್ನು ಸೂಚಿಸುತ್ತಿವೆ. ಚಂದ್ರಕಲೆಯು ಅವಳಿಂದ ಸೂಸುತ್ತಿರುವ ಶಾಂತರಸವನ್ನು, ಸೂರ್ಯ, ಚಂದ್ರ ಮತ್ತು ಅಗ್ನಿಗಳೇ ಅವಳ ತ್ರಿನೇತ್ರಗಳಾಗಿದ್ದು, ಸರ್ವ ಪ್ರಕೃತಿಯು ಅವಳ ಅಂಶವೇ ಎಂಬುದನ್ನು ತಿಳಿಸುತ್ತಿದೆ. ಇದರಂತೆ ದೇವಿಯ ಚತುರ್ಭುಜಗಳಲ್ಲಿ ಕ್ರಮವಾಗಿ ಕೆಳ ಬಲಗೈ ಚಿನ್ಮುದ್ರೆಯಲ್ಲೂ, ಮೇಲಿನ ಬಲಗೈಯಲ್ಲಿ ಅಕ್ಷಮಾಲೆಯನ್ನು ಮುಂಗೈ ಮೇಲೆ ಶುಕವನ್ನು ಧರಿಸಿದ್ದು, ಮೇಲಿನ ಎಡಗೈಯಲ್ಲಿ 'ಸುಧಾಭಾಂಡಾ' ಇದ್ದು ಕೆಳ ಎಡಗೈ ಪುಸ್ತಕವನ್ನು ಹಿಡಿದಿರುತ್ತದೆ. ದೇವಿಯ ಕೈಗಳಲ್ಲಿರುವ ಆಯುಧ ವಿಶೇಷಗಳು ಅವಳ ಮಹತ್ವವನ್ನು ತಿಳಿಸುತ್ತಿದ್ದು - ಚಿನ್ಮುದ್ರೆಯು 'ತಾನು ಸರ್ವರಿಗೂ ಬೋಧಿಸ ಬಲ್ಲವಳು' ಎಂಬುದನ್ನೂ, ಅಕ್ಷಮಾಲೆಯು- ಈ ದೇವಿಯೇ 'ಕಾಲಚಕ್ರ ಸ್ವರೂಪಿಣಿ' ಎಂದೂ, ಸೃಷ್ಟಿ ಸ್ಥಿತಿ ಸಂಹಾರಕ್ಕೆ ಕಾರಣಳಾದ ಜಗತ್ಕಾರಿಣಿ ಎಂಬ ಅಂಶವನ್ನೂ ಸೂಚಿಸುತ್ತಿದೆ. 'ಅಕ್ಷಮಾಲೆ'ಯನ್ನು ಮಂತ್ರ ಪುರಶ್ಚರಣೆಗಾಗಿ ಬಳಸುವುದರಿಂದ ಇಲ್ಲಿ ಮಂತ್ರಸ್ವರೂಪಿಣಿಯಾದ ದೇವಿಯನ್ನು ಸೂಚಿಸುತ್ತಿದೆ ಎನ್ನಬಹುದು. ಈ ಬಲಗೈ ಮುಂಗೈ ಮೇಲಿರುವ 'ಶುಕ'ವು ಜನ್ಮತಃ ಬ್ರಹ್ಮ

ಜ್ಞಾನಿಯಾಗಿದ್ದ 'ಶುಕ ಮಹರ್ಷಿ'ಯ ಸಂಕೇತವಾಗಿದ್ದು. ಸಾಮಾನ್ಯವಾಗಿ ಶಿಲ್ಪದಲ್ಲಿ 'ಮುಂಗೈ ಮೇಲೆ ಗಿಣಿ' ಇರುವುದನ್ನು ರಾಣಿಯ ಸಂಕೇತವೆಂದು ಭಾವಿಸುತ್ತಾರೆ. ಈ ಅರ್ಥದಲ್ಲಿ ಚಿಂತಿಸಿದರೆ ಜಗತ್ತಿಗೆ ಅವಳು 'ಮಹಾ ಸಾಮ್ರಾಜ್ಞಿ'ಯೂ ಹೌದು ; ಇದರಂತೆ 'ಶುಕ'ದ ಮಧುರವಾಣಿಯಿಂದ ದೇವಿ ಆನಂದಿಸುತ್ತಿದ್ದಾಳೆಂದು ಊಹಿಸಿ ನಾದಮಯಿಯಾದ ದೇವಿಯ ಸಂಗೀತಾಸಕ್ತಿಯನ್ನು ಇದು ಸೂಚಿಸುತ್ತಿದೆ ಎಂದು ಭಾವಿಸಲು ಅವಕಾಶವಿದೆ.

ಇನ್ನು ದೇವಿಯ ಎಡಗೈಯಲ್ಲಿರುವ 'ಸುಧಾ ಭಾಂಢ'ವು ವಿಶೇಷವಾದದ್ದು, ಯೌಗಿಕ ಹಿನ್ನೆಲೆಯಲ್ಲಿ ನಿರೂಪಿಸಿರುವ ಇದು ಶಿರಸ್ಸಿನಲ್ಲಿ ಸಹಸ್ರಾರದಲ್ಲಿರುತ್ತದೆ. ಮಾನವನಲ್ಲಿರುವ ಕುಂಡಲಿನೀಶಕ್ತಿಯು ಜಾಗೃತಗೊಂಡು, ಷಟ್ಚಕ್ರಗಳನ್ನು ದಾಟಿ ಸಹಸ್ರಾರದಲ್ಲಿರುವ ಸುಧಾಭಾಂಡವನ್ನು ಸವಿದು ಮತ್ತೆ ಮೂಲಾಧಾರದಲ್ಲಿ ಸ್ತಬ್ಧವಾಗುತ್ತದೆ. ಹೀಗೆ ಶಕ್ತಿ-ಶಿವರ ಸಮ್ಮಿಲನವೇ ಶಾಕ್ತರ ಪ್ರಕಾರ 'ಮೋಕ್ಷ'ವೆನಿಸಿದ್ದು ಇದು ಸಾಮಾನ್ಯರಿಗೆ ಅಸಾಧ್ಯವಾದುದ್ದಾಗಿದೆ. ಇಂಥ ಸುಧಾಭಾಂಡವು ದೇವಿಗೆ ಕರತಲಾಮಲಕವಾಗಿದೆ ಎಂಬುದನ್ನು ಇಲ್ಲಿ ಸಾಂಕೇತಿಕವಾಗಿ ಸೂಚಿಸಲಾಗಿದೆ. ಇದರಂತೆ ಬ್ರಹ್ಮವಿದ್ಯಾಧಿದೇವಿಯಾದ ಶಾರದೆಯು ಒಲಿದರೆ—"ಆತ್ಮನನ್ನು ಪರಮಾತ್ಮನಲ್ಲಿ ಲೀನವಾಗಿಸಿ, ಆತ್ಮಾನಂದವನ್ನುಂಟು ಮಾಡುತ್ತಾಳೆ. ಅಂತೇ ಇವಳು ಅದ್ವೈತ ಸ್ವರೂಪಿಣಿ, ಇವಳನ್ನು ಉಪಾಸಿಸಿದ್ದ ಶಂಕರರು ಆದರಿಂದಲೇ "ಅಹಂ ಬ್ರಹ್ಮಾಸ್ಮಿ" ಎಂದು ಸಾರಿದರು. ಇವಳ ಇನ್ನೊಂದು ಕೈಯಲ್ಲಿ 'ಪುಸ್ತಕ'ವಿದ್ದು 'ಇವಳು' ಸಕಲಶಾಸ್ತ್ರ ವಿಶಾರದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಹೀಗೆ ದೇವಿಯು ಈ ಸ್ವರೂಪದಲ್ಲಿ ಪರಾಪರವಿದ್ಯೆಗಳೆರಡನ್ನು ತಿಳಿಸಬಲ್ಲ ಜ್ಞಾನಾಧಿದೇವಿಯಾಗಿದ್ದಾಳೆ.

ಮೂರ್ತಿಶಿಲ್ಪ ಶಾಸ್ತ್ರದ ಪ್ರಕಾರ ವಿದ್ಯಾದೇವಿಯಾದ ಸರಸ್ವತಿಯ ಮತ್ತು ಜ್ಞಾನಾಧಿದೇವಿಯಾದ ಶಾರದೆಯ ಮೂರ್ತಿ ಲಕ್ಷಣಗಳಲ್ಲಿ ಅಲ್ಪ ವ್ಯತ್ಯಾಸವು ಕಾಣ ಬರುತ್ತದೆ. ಈ ವ್ಯತ್ಯಾಸಗಳನ್ನು ಉಪಾಸಕರು ಹೇಳುವ ಧ್ಯಾನ ಶ್ಲೋಕಗಳಲ್ಲೂ ಕಾಣಬರುತ್ತದೆ. ಶಿಲ್ಪ ಶಾಸ್ತ್ರಗಳು ಸರಸ್ವತಿಯ ಬಗೆಗೆ ಈ ಲಕ್ಷಣಗಳನ್ನು ತಿಳಿಸಿರುತ್ತದೆ.

"ಏಕವಕ್ತ್ರಾ ಚತುರ್ಹಸ್ತಾ ಮುಕುಟೇನ
ವಿರಾಜಿತಾ
ಪ್ರಭಾ ಮಂಡಲ ಸಂಯುಕ್ತಾ ಕುಂಡಲಾನ್ವಿತ
ಶೇಖರಾ ॥
ಅಕ್ಷಾಬ್ಜ ವೀಣಾ ಪುಸ್ತಕಂ ಮಹಾವಿದ್ಯಾ
ಪ್ರಕೀರ್ತಿತಾ
ವರಾಕ್ಷಾಬ್ಜಂ ಪುಸ್ತಕಂ ಚ ಸರಸ್ವತೀ
ಶುಭಾವಹಾ ॥ (ರೂಪಮಂಡಣ)

ಅಂಶುಭೇಧಾಗಮವು :

ವ್ಯಾಖ್ಯಾನಂ ಚಾಕ್ಷಸೂತ್ರಂಚ ದಕ್ಷಿಣೆ ತು
ಕರದ್ವಯೆ ॥
ಪುಸ್ತಕಂ ಪುಂಡರೀಕಂಚ ತ್ರಿನೇತ್ರ
ಚಾರುರೂಪಿಣಿ ।

ಎನ್ನುತ್ತದೆ. ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಸರಸ್ವತಿ ಲಕ್ಷಣಗಳು ಹೀಗಿವೆ :-

"ಪುಸ್ತಕಂಚಾಕ್ಷಮಾಲಾ ಚ ತಸ್ಯಾ ದಕ್ಷಿಣ
ಹಸ್ತಯೋಃ
ವಾಮಯೋಶ್ಚ ತಥಾಕಾರ್ಯ ವೈಣವೀ ಚ
ಕಮಂಡಲಃ ॥[22]

ವೈದಿಕ ಸಂಪ್ರದಾಯದಂತೆ ಧ್ಯಾನ ಶ್ಲೋಕಗಳಲ್ಲಿ ಸರಸ್ವತಿಯ ಬಿಂಬವಾದರೆ ಕೈಗಳಲ್ಲಿ ಅಕ್ಷಸೂತ್ರ. ಅಂಕುಶ, ಪಾಶ ಮತ್ತು ಪುಸ್ತಕಗಳಿರುತ್ತವೆ. ದೇವಿಯು ವಾಗ್ದೇವಿಯ 'ಸ್ವರೂಪ'ದ್ದಾದರೆ ಕೈಗಳಲ್ಲಿ ಪದ್ಮ, ಗಿಣಿ, ಪುಸ್ತಕ ಮತ್ತು ಅಕ್ಷಸೂತ್ರಗಳಿರುತ್ತವೆ ಎನ್ನುವರು.[23] ಇದನ್ನು ಪೂರ್ವಕರಣಾಗಮವು - ವಾಗ್ದೇವಿಯದಾದರೆ ವೀಣೆ, ಅಕ್ಷಮಾಲೆ, ಪುಸ್ತಕ ಮತ್ತು' ಚಿನ್ಮುದ್ರೆಗಳಿರುತ್ತ

22 ಈ ಲಕ್ಷಣಗಳನ್ನು ;Elements of Hindu Iconography, Vol I Part II, Appendix-C.P. No. 137-138 by Gopinatha Rao T.A.

23 ಸರಸ್ವತೀ ರಹಸ್ಯೋಪನಿಷದ್ ಚಂದ್ರಿಕೆ, ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿ ಪು. ೪೦

ವೆಂದು ತಿಳಿಸುತ್ತದೆ. ಆದರೆ ಶೃಂಗೇರಿಯ ಶಾರದಾ ದೇವಿಯ ಬಿಂಬವು ಈ ಎಲ್ಲಾ ಲಕ್ಷಣಗಳಿಗಿಂತ ಭಿನ್ನ ವಾದ ಲಕ್ಷಣಗಳನ್ನು ಹೊಂದಿರುವುದೆಂಬುದು ಗಮನಾರ್ಹ ವಾದ ಅಂಶವಾಗಿದೆ.

ಇದರಂತೆ ಶಾರದಾ ದೇವಿಯನ್ನು ಜೈನ ಪರಂಪ ರೆಯ ಶ್ರುತ ದೇವಿಯ ಬಿಂಬವಿರಬಹುದೆಂದು ಕೆಲವರು ಊಹಿಸುತ್ತಾರೆ. ಆದರೆ ಇವಳ ಲಕ್ಷಣವು ಹೀಗಿದೆ— "ಪದ್ಮಪೀಠದ ಮೇಲೆ ಆಸೀನಳಾಗುವ ಈ ದೇವಿ ಶ್ವೇತ ವರ್ಣದವಳು. ಚತುರ್ಭುಜೆಯಾದ ದೇವಿಯ ಕೈಗಳಲ್ಲಿ ಅಭಯ, ಜ್ಞಾನಮುದ್ರೆ, ಅಕ್ಷಮಾಲೆ ಮತ್ತು ಪುಸ್ತಕ ಗಳಿರುತ್ತವೆ; ಶಾರದಾದೇವಿಗೆ ಇರುವ ಸುಧಾ ಭಾಂಡ ಇಲ್ಲಿಲ್ಲ.[24] ಇದರಂತೆ ಯಕ್ಷಿ ಸಿದ್ಧಾಯಿಕೆಯನ್ನು 'ಸರಸ್ವತಿ'ಯ ಪ್ರತಿಮೆಯಂದೇ ಭಾವಿಸುವರು. ಸಿದ್ಧಾ ಯಿಕೆಯ ಲಕ್ಷಣಗಳು—'ಅಕ್ಷಮಾಲೆ, ಅಂಕುಶ, ಪಾಶ, ಪುಸ್ತಕ'ಗಳನ್ನು ಕೈಗಳಲ್ಲಿ ಧರಿಸಿರುತ್ತಾಳೆ. ಇವಳ ಲಾಂಛನವು 'ಹಂಸ'ವಾಗಿರುತ್ತದೆ. ದಿಗಂಬರ ಪದ್ಧತಿಯ ಪ್ರಕಾರ ದ್ವಿಭುಜೆಯಾದ ಈ ದೇವಿಗೆ ವರದ ಹಸ್ತ ಮತ್ತು ಪುಸ್ತಕಗಳಿರುತ್ತವೆ. ಆದರೆ ಇದಾವ ಲಕ್ಷಣಗಳು ಶಾರದಾ ಮೂರ್ತಿಯಲ್ಲಿ ಕಾಣಬರುವುದಿಲ್ಲ. ಇದರಂತೆ ಬೌದ್ಧ ಪರಂಪರೆಯಲ್ಲಿ 'ವಜ್ರಶಾರದಾ' ಎಂಬ ಹೆಸರಿನ ದೇವಿಯೊಬ್ಬಳಿದ್ದು ತ್ರಿನೇತ್ರೆಯೂ, ದ್ವಿಭುಜೆಯೂ ಆದ ಈಕೆಯ ಕೈಗಳಲ್ಲಿ ಪುಸ್ತಕ ಮತ್ತು ಕಮಲಗಳಿರುತ್ತವೆ. ಇವಳ ಬಳಿ ಪ್ರಜ್ಞಾ, ಮೇಧಾ, ಸ್ಮೃತಿ ಮತ್ತು ಮತಿ ಎಂಬ ನಾಲ್ಕು ಜನ ಸೇವಕರಿರುತ್ತಾರೆ.[25] ಆದರೆ ಶೃಂಗೇರಿಯ ಶಾರದಾದೇವಿಯ ಸ್ವರೂಪವು ಈ ಮೇಲಿನ ಎಲ್ಲ ಲಕ್ಷಣಗಳಿಗಿಂತ ಭಿನ್ನವಾಗಿದೆ. ಈ ಶಾರದಾಬಿಂಬದ ಲಕ್ಷಣಗಳು "ಶಾರದಾ ತಿಲಕ ತಂತ್ರ"ದ ಸಪ್ತಮ ಪಟಲ ದಲ್ಲಿ ಹೇಳಿರುವ "ಶಾಕ್ತ ಶಾರದಾದೇವಿ"ಯ ಲಕ್ಷಣಗಳಿಗೆ ಸರಿಹೊಂದುವುದೆಂದು ಶ್ರೀ ಕೆ.ಎನ್. ಭಟ್ಟಸಾಲಿಯವರು ಗುರುತಿಸಿರುತ್ತಾರೆ.[26] ಶ್ರೀ ಎಸ್.ಕೆ. ರಾಮಚಂದ್ರ ರಾಯರೂ ಶೃಂಗೇರಿ ಶಾರದೆಯನ್ನು "ಶಾಕ್ತಶಾರದೆ" ಎಂದೇ ಕರೆದಿರುತ್ತಾರೆ.[27] ಇತ್ತೀಚೆಗೆ ಶೃಂಗೇರಿ ಶಂಕರ ಮಠದಿಂದ ಪ್ರಕಟವಾಗಿರುವ 'ಶೃಂಗೇರಿ' ಎಂಬ ಪುಸ್ತಕ ದಲ್ಲೂ ದೇವಿಯನ್ನು 'ಶಾಕ್ತಶಾರದೆ' ಎಂದೇ ಗುರುತಿಸಿರು ವುದರಿಂದ ಇದರ ಬಗೆಗೆ ಇನ್ನು ಅನುಮಾನವಿಲ್ಲ. ಇದ ರಿಂದ ಶೃಂಗೇರಿಯು ಪ್ರಾಚೀನ ಕಾಲದಿಂದಲೂ ಸಾಗಿ ಬಂದಿರುವ ಒಂದು ಪ್ರಮುಖ ಶಾಕ್ತ ಪೀಠವೆಂದು ತಿಳಿದು ಬರುತ್ತದೆ.

ಈಗಲೂ ಇಲ್ಲಿ ದೇವಿಯ ಹೆಸರಿನಲ್ಲಿ 'ಶ್ರೀಚಕ್ರ'ಕ್ಕೆ ಪೂಜೆ ಅರ್ಚನೆಗಳು ಸಲ್ಲುತ್ತಿವೆ. ನವರಾತ್ರಿಯ ದಿನ ಗಳಲ್ಲಿ ದೇವಿಗೆ ಸಂಹಾರ ರೂಪಗಳಾದ ಸಪ್ತಮಾತೃಕೆಯ ರಂತೆ ಅಲಂಕರಿಸಿ ಅರ್ಚಿಸುವ ಕ್ರಮವಿದ್ದು, ಆ ಕಾಲ ದಲ್ಲಿ ಚಂಡಿಹೋಮ, ಜಪ, ಪುರಶ್ಚರ್ಣೆ- ನವಾವರಣ ಪೂಜೆ ಇತ್ಯಾದಿಗಳು ನಡೆಯುತ್ತಿವೆ. ಈ ದಿನಗಳಲ್ಲಿನ ಸಪ್ತಮಿಯಂದು ಮೂಲಾನಕ್ಷತ್ರದಂದು ವಿಶೇಷ ಪೂಜೆ ನಡೆಯುವುದು. ದೇವಿಗೆ ನಿತ್ಯಾಭಿಷೇಕವಿಲ್ಲ. ಹೀಗೆ ಇಲ್ಲಿ ನಡೆಯುವ ಪೂಜಾ ಕ್ರಿಯೆಗಳು ಶಾಕ್ತರ ಸಂಪ್ರ ದಾಯದ ಕೆಲವು ಅಂಶಗಳನ್ನೊಳಗೊಂಡಿದೆ.

ಈ ಅಧ್ಯಯನದಿಂದ ತಿಳಿದು ಬರುವ ಪ್ರಮುಖ ಅಂಶಗಳೆಂದರೆ :

೧. ಶಂಕರಾಚಾರ್ಯರ ಕಾಲದಿಂದಲೇ ಶಾರದಾ ಉಪಾ ಸನೆ ಆರಂಭವಾಯಿತಾದರೂ 'ಶಾರದಾ ದೇವಿ'ಯ ಉಲ್ಲೇಖವು ಶೃಂಗೇರಿಯ ಇತಿಹಾಸದಲ್ಲಿ ಕ್ರಿ.ಶ. ೧೪ನೇ ಶತಮಾನಕ್ಕೆ ಮೊದಲು ದೊರೆಯುವು ದಿಲ್ಲ.

೨. ಸು. ೧೫ನೇ ಶತಮಾನದಿಂದ ಮುಂದೆ ಶಾರದಾ ಉಪಾಸನೆ ಹೆಚ್ಚು ಪ್ರಚಲಿತಗೊಂಡಿದೆ.

---

24 ಯಕ್ಷ ಯಕ್ಷಿ—ಹಂ.ಪ. ನಾಗರಾಜಯ್ಯ. ಪು. ೫೪

25 Saraswathi-Kanialal Bhattacharya, P. No. 128

26 The Iconography of Buddhist and Brahminical Scoulptures in the Decca Museum –By K.N. Bhattasal. P. No. 189

27 "ಮೂರ್ತಿಶಿಲ್ಪ-ನೆಲೆ ಹಿನ್ನೆಲೆ"-ಎಸ್.ಕೆ. ರಾಮಚಂದ್ರರಾಯರು ಪು.೧೦೭

೩. ಶಾರದಾ ದೇವಾಲಯಗಳಲ್ಲಿಲ್ಲೂ ಪ್ರಾಚೀನ ಮೂರ್ತಿಗಳು ಕಾಣಬರುವುದಿಲ್ಲ.

೪. ಶಾಕ್ತ ಸಂಪ್ರದಾಯದಂತೆ ಇಲ್ಲಿ ಪೂಜಾ ಕಾರ್ಯಾದಿಗಳು ನಡೆಯುತ್ತವೆ.

೫. ಸಾಹಿತ್ಯ ಮತ್ತು ಸ್ತೋತ್ರಗಳಲ್ಲಿ ಹಲವೆಡೆ 'ಶಾರದೆ'-'ಸರಸ್ವತಿ'ಯರನ್ನು ಅಭೇದವಾಗಿ ಭಾವಿಸಿರುತ್ತಾರೆ.

೬. ಶೃಂಗೇರಿ ಒಂದು ಪ್ರಸಿದ್ಧ ಶಾಕ್ತಪೀಠವಾಗಿದ್ದು 'ಶ್ರೀ ಚಕ್ರಾರಾಧನೆ' ಇಲ್ಲಿ ಕಾಣಿಸುತ್ತದೆ.

೭. ಮೂರ್ತಿ ಶಿಲ್ಪದ ದೃಷ್ಟಿಯಿಂದ ಶಾರದಾದೇವಿ ಮತ್ತು ಸರಸ್ವತಿಯರ ಶಿಲ್ಪಗಳಲ್ಲಿ ವ್ಯತ್ಯಾಸವಿದೆ.

○

# ವೀರ ಪರಂಪರೆಯ ಪ್ರತೀಕವಾದ ವೀರಭದ್ರ ಉಪಾಸನೆ

ಕೆ. ಅಭಿಶಂಕರ್

ಇತ್ತೀಚೆಗೆ ಹೈದರಾಬಾದಿನ ಡಾ|| ಕೆ. ಸರೋಜಿನಿ ದೇವಿ ಅವರ ಒಂದು ಲೇಖನವು Quarteily Journal of the Mythic Societyಯಲ್ಲಿ ಪ್ರಕಟವಾಯಿತು. ಅದು ಹಲವು ಲೋಪದೋಷಗಳಿಂದ ಕೂಡಿದೆ. ಈ ವಿಷಯದ ಮೇಲೆ ಬೇರೆ ಒಂದು ವಿಸ್ತೃತ ಅಧ್ಯಯನಕ್ಕೆ ಅವಕಾಶವಿದೆ. ಈ ನಿಬಂಧದಲ್ಲಿ ಸಂಕ್ಷೇಪವಾಗಿ ಒಂದು ಪ್ರಮೇಯವೆಂಬಂತೆ ಕೆಲವು ಅಂಶಗಳನ್ನು ಹೇಳಿ, ದಿಕ್‌ಸೂಚಿ ನೀಡಲು ಯತ್ನಿಸಲಾಗಿದೆ.

ವೀರಭದ್ರನು ಒಬ್ಬ ಪರಿವಾರ ದೇವತೆಯಾಗಿ, ದೇವಾಲಯಗಳಲ್ಲಿ ಒಬ್ಬ ಪಾರ್ಶ್ವ ದೇವತೆಯಾಗಿ ಭಾರತದ ಅನೇಕ ಕಡೆಗಳಲ್ಲಿ ಅರ್ಚನೆಗೊಳ್ಳುತ್ತಾನೆ. ಉಗ್ರತೆಯಲ್ಲಿ ವೀರಭದ್ರನನ್ನು ವೈಷ್ಣವ ಸಂಪ್ರದಾಯದ ನರಸಿಂಹನಿಗೆ ಹೋಲಿಸಬಹುದು. ಶೈವಾಗಮಗಳಲ್ಲಿ ವೀರಭದ್ರ ದೇವರಿಗೆ ಒಂದು ಸ್ಥಾನವಿದೆ. ವೀರಭದ್ರಾಗಮವೂ ಇದೆ. ತಮಿಳುನಾಡಿನಲ್ಲಿ ಮುರುಗ ಅಥವಾ ಸ್ಕಂದ ಅಂದರೆ ಸುಬ್ರಹ್ಮಣ್ಯ, ಕೇರಳದಲ್ಲಿ 'ಹರಿಹರ ಪುತ್ರ' ಶಾಸ್ತ (ಅಯ್ಯಪ್ಪ), ಮಹಾರಾಷ್ಟ್ರದಲ್ಲಿ ಖಂಡೋಬ ಹೆಚ್ಚು ಜನಪ್ರಿಯ ಶೈವ ದೇವತೆಗಳು. ಕರ್ನಾಟಕದಲ್ಲಿ ಕಳೆದ ಕೆಲವು ಶತಮಾನಗಳಿಂದ ವೀರ ಯೋಧ ದೇವತೆ (Warrior god) ವೀರಭದ್ರನ (ವೀರೇಶನ) ಉಪಾಸನೆಯ ಪ್ರಾಚುರ್ಯ ಬಹುಮಟ್ಟಿಗೆ ಇದೆ. ಆಂಧ್ರಪ್ರದೇಶದಲ್ಲೂ ಇದು ಕೆಲಮಟ್ಟಿಗೆ ಉಂಟು. ವಿಶೇಷವಾಗಿ ಕರ್ನಾಟಕಕ್ಕೆ ಹತ್ತಿರವಿರುವ ಭಾಗದಲ್ಲಿ (ಉದಾಹರಣೆಗೆ ಲೇಪಾಕ್ಷಿ, ರಾಚೋಟಿ ಮುಂತಾದೆಡೆ) ಈ ಬೆಳವಣಿಗೆ ಕುತೂಹಲಕಾರಿಯಾದ, ಸಂಗತಿಯಾಗಿದೆ. ಕರ್ನಾಟಕದ ಬಹಳಷ್ಟು ಊರುಗಳಲ್ಲಿ ವೀರಭದ್ರ ದೇವರ ಗುಡಿಗಳಿವೆ. ಕೆಲವು ಕಡೆಗಳಲ್ಲಿ ಪ್ರಧಾನ ದೇವತೆಯಾಗಿ ವೀರಭದ್ರನಿಗೇ ಅರ್ಪಿತವಾದ ಪ್ರತ್ಯೇಕ ದೇವಾಲಯಗಳಿವೆ. ವೀರಭದ್ರನು ಹೀಗೆ ಶಿಷ್ಟರಿಗೂ, ಜಾನಪದರಿಗೂ ಕೂಡಿಯೇ ಪ್ರಭಾವಶಾಲಿಯಾದ ದೇವತೆಯಾಗಿದ್ದು ಒಂದು ವೈಶಿಷ್ಟ್ಯ.

ಸ್ಕಂದ, ಕೂರ್ಮ, ಮತ್ಸ್ಯ ಮುಂತಾದ ಪುರಾಣಗಳಲ್ಲಿ ಶೈವಾಗಮಗಳಲ್ಲಿ ವೀರಭದ್ರನ ಆವಿರ್ಭಾವ, ವೀರೋಚಿತ ಕಾರ್ಯ, ಮಹಿಮೆ, ಅರ್ಚನೆ ಇತ್ಯಾದಿ ವಿಷಯಗಳ ನಿರೂಪಣೆ, ಪ್ರಸ್ತಾಪ, ವಿವರಣೆ ಬಂದಿವೆ. ದಕ್ಷಯಜ್ಞದ ಸಂದರ್ಭದಲ್ಲಿ ಶಿವನಿಗೆ ಆದ ಅಪಮಾನ, ಇದರಿಂದ ನೊಂದ ದಾಕ್ಷಾಯಣಿ ತನ್ನನ್ನೇ ಯಾಗಕುಂಡದಲ್ಲಿ ಆಹುತಿ ಮಾಡಿಕೊಂಡದ್ದು, ಶಿವನಿಂದ 'ನಿರ್ಮಾಣ'ನಾದ ವೀರಭದ್ರನಿಂದ ಯಜ್ಞದ ಭಂಗ, ದಕ್ಷನ ಶಿರಚ್ಛೇದನ, ತದನಂತರ ಅವನಿಗೆ ಆಡಿನ ತಲೆಯನ್ನು ಸೇರಿಸಿ ಪುನರುಜ್ಜೀವನ ಮುಂತಾದ ಕೆಲವು ಅತಿಮಾನುಷವೆನಿಸುವ ಘಟನೆಗಳಿಂದ ಕೂಡಿದ ವರ್ಣರಂಜಿತ ಪೌರಾಣಿಕ ಕಥೆಗಳುಂಟು. ಇದು ಪ್ರಾಗೈತಿಹಾಸಿಕ ಕಾಲದಲ್ಲಿ ನಡೆದಿರಬಹುದಾದ ಎರಡು ಸಂಸ್ಕೃತಿಗಳ ನಡುವಣ ಸಂಘರ್ಷಣೆಯ ಒಂದು ಸಂಕೇತವೆಂಬ ಅಭಿಪ್ರಾಯವೂ ಇದೆ. ಡಾ|| ಶ್ರೀ ಜ.ಚ.ನಿ. ಅವರು ಸಿಂಧು ಸಂಸ್ಕೃತಿಯ ಕುರುಹುಗಳ ಮತ್ತು ಪ್ರಾಚೀನ ಗ್ರಂಥಗಳಲ್ಲಿ ದೊರಕುವ ಎಳೆಗಳ ಜಾಡನ್ನು ಹಿಡಿದು, ನಡೆದಿರಬಹುದಾದ ಅಂಥ ಪ್ರಾರಂಭಿಕ ಘಟನೆಗಳನ್ನು ಅವುಗಳ ಪರಿಣಾಮಗಳನ್ನು ಕುರಿತು ವಿಸ್ತೃತವಾಗಿ ಬರೆದಿದ್ದಾರೆ.

ಸಪ್ತಮಾತೃಕೆಯರ ಪಟ್ಟಿಕೆಯಲ್ಲಿ ಮೊದಲು, ಅಕ್ಕಪಕ್ಕದಲ್ಲಿ ಅವರ ಬೆಂಗಾವಲಿಗೆ ಇಬ್ಬರು ಕೇವಲ ಆಯುಧ ಪುರುಷರ ರೂಪವಿರುವುದು ಬೆಳಕಿಗೆ ಬಂದಿದೆ. ಕ್ರಮೇಣ ಈ ರಕ್ಷಣೆಯ ಕಾರ್ಯವನ್ನು ವೀರಭದ್ರನಿಗೆ ಮತ್ತು ಗಣೇಶನಿಗೆ ವಹಿಸಲಾದಂತೆ ತೋರಿಸಲಾಗಿದೆ. ಬಲಗಡೆಗೆ ವೀರೇಶ, ಎಡಗಡೆಗೆ ಗಣಪತಿ ಹೀಗೆ. ಈ ಸಂದರ್ಭದಲ್ಲಿ ವೀರಭದ್ರನು ವೀಣಾಧರನಾದಂತೆ ಕೆಲವೆಡೆಗಳಲ್ಲಿ ಕಾಣಿಸಿರುವುದು ಕುತೂಹಲಕಾರಿ ಅಂಶ. ಅಲ್ಲಿ ಅವನು ಸೌಮ್ಯ. ಶಿವನ ಲೀಲೆಗಳಲ್ಲಿ ವೀರಭದ್ರನದು ಒಂದು ಪಾತ್ರ–ಅರ್ಥಾತ್ ವೀರಭದ್ರನು ಶಿವನ ಲೀಲಾ ಮೂರ್ತಿಗಳಲ್ಲಿ ಒಬ್ಬ. ವೀರಭದ್ರನು ಶಿವನದೇ ಒಂದು ರೂಪ, ಭೀಷಣ ರೂಪ ; ಅವನು ದುಷ್ಟನಿಗ್ರಹಿ ; ರುದ್ರ ಗಣಕ್ಕೆ ಸೇರಿದವನೆಂದೂ ಹೇಳಲಾಗಿದೆ. ಸಾವಿರ ತಲೆ, ಸಾವಿರ ಕೈ, ಸಾವಿರ ಕಣ್ಣು, ಬೃಹದಾಕಾರದ ಭುಜಗಳು, ಪ್ರಳಯಕಾಲ ಸ್ವರೂಪ ಮುಂತಾಗಿ ಅವನ ವಿರಾಟರೂಪವನ್ನು ಮೂಲತಃ ವರ್ಣಿಸಲಾಗಿದೆ. ಇದು ಒಂದು ರೀತಿಯ 'ವಿಶ್ವರೂಪ' ದರ್ಶನದ ಹಾಗೆ. ಶಿಲ್ಪಗಳಲ್ಲಿ ಸಾಮಾನ್ಯವಾಗಿ ವೀರಭದ್ರನಿಗೆ ನಾಲ್ಕು ಕೈ, ಮೂರು ಕಣ್ಣು (ಮುಕ್ಕಣ್ಣನಂತೆ), ಬಲಗೈಗಳಲ್ಲಿ ಖಡ್ಗ ಮತ್ತು ಬಾಣ, ಎಡಗೈಗಳಲ್ಲಿ ಬಿಲ್ಲು ಮತ್ತು ಗದೆ ಅಥವಾ ಗುರಾಣಿ–ಹೀಗೆ ತೋರಿಸುವುದುಂಟು. (ಭದ್ರಕಾಳಿಯನ್ನೂ ಶಸ್ತ್ರಸಜ್ಜಿತಳನ್ನಾಗಿ ರೂಪಿಸುತ್ತಾರೆ). ಕೆಲವು ಕಡೆಗಳಲ್ಲಿ ವೀರಭದ್ರನಿಗೆ ಕೋರೆದಾಡೆಗಳು ಮತ್ತು ಅಥವಾ ರುಂಡಮಾಲೆಗಳು ಇರುತ್ತವೆ. ಸಾಧಾರಣವಾಗಿ ಯಾವಾಗಲೂ ಆಡಿನ ತಲೆಯ ದಕ್ಷನ ಚಿಕ್ಕ ಮೂರ್ತಿ ಅಂಜಲಿ-ಬದ್ಧವಾಗಿ ವೀರಭದ್ರಮೂರ್ತಿಯ ಬಲಭಾಗದಲ್ಲಿ ಕೆಳಗೆ ನಿಂತಿರುತ್ತದೆ. ಇನ್ನೊಂದು ಕಡೆ ಭದ್ರಕಾಳಿಯೂ ನಿಂತಿರುವುದುಂಟು.

**ಪ್ರತಿಭಟನೆಗೆ ಪ್ರೇರಕ :** ಹೊಯ್ಸಳರ ಆಳ್ವಿಕೆಯ ಕೊನೆಯ ಭಾಗದಲ್ಲಿ ವೀರಭದ್ರನ ಉಪಾಸನೆಗೆ ಹೆಚ್ಚು ಪ್ರೋತ್ಸಾಹ ನೀಡಿದ ಉದಾಹರಣೆಗಳು ಕಂಡು ಬಂದಿವೆ. ಹಳೆಬೀಡಿನಲ್ಲಿ ಕೋಟೆಯ ಬಳಿ, ಹೊಯ್ಸಳರ ಕಡೆ ಕಾಲದ ಆರಡಿ ಎತ್ತರದ ವೀರಭದ್ರಮೂರ್ತಿ ಇರುವುದನ್ನು ಗುರುತಿಸಲಾಗಿದೆ. ಅದರ ಕೈಗಳಲ್ಲಿ ಕತ್ತಿ, ತ್ರಿಶೂಲ, ಡಮರುಗ ಮತ್ತು ಗುರಾಣಿ ಇವೆ. ಇದು ಮೀಸೆಯುಳ್ಳ ಮೂರ್ತಿ. ಆಗಮಗಳಲ್ಲಿ ವೀರಭದ್ರನಿಗೆ ಮೀಸೆ ಇರಲೇಬೇಕೆಂದು ಹೇಳಿಲ್ಲವಾದರೂ, ಹಲವೆಡೆಗಳಲ್ಲಿ ಮೀಸೆಯನ್ನು ತೋರಿಸುವುದೂ ಪ್ರಚಲಿತವಾಯಿತು. ಮೇಲೆ ಹೇಳಿದ ಮೂರ್ತಿಯಲ್ಲಿ ಸಿಂಹ ಲಲಾಟದ ಬದಲು ರುಂಡವುಳ್ಳ ಕೀರ್ತಿಮುಖವಿದೆ. ಈ ಹೊಯ್ಸಳ ಗುಡಿಯಲ್ಲಿ ಕಂಡುಬಂದ ಹೊಯ್ಸಳ ಶಿಲಾಲೇಖನದಲ್ಲಿ ವೀರಭದ್ರನನ್ನು ವೀರೇಶ್ವರ, ವೀರಣ್ಣನೆಂದು ಹೆಸರಿಸಲಾಗಿದೆ. ಚಿತ್ರದುರ್ಗದ ಗುಡ್ಡದ ಮೇಲೆ ಸಿದ್ಧೇಶ್ವರ ಗುಡಿಯಲ್ಲಿರುವ ಒಂದು ವೀರಭದ್ರಮೂರ್ತಿಯೂ ಹೊಯ್ಸಳರ ಕಾಲದ್ದೆಂದು ಹೇಳಲಾಗಿದೆ.

ದಕ್ಷಿಣ ದೇಶಕ್ಕೆ ಬಂದೊದಗಿದ್ದ ಒಂದು ದೊಡ್ಡ ವಿಪತ್ತಿನ ಕಾಲದಲ್ಲಿ ಈ ಬೆಳವಣಿಗೆಯಾಗುತ್ತಿದ್ದುದನ್ನು ಲಕ್ಷಿಸಬೇಕು. ಕರ್ನಾಟಕದಲ್ಲಿ, ವಿಜಯನಗರ ಮತ್ತು ವಿಜಯನಗರೋತ್ತರ ಕಾಲಗಳಲ್ಲಿ ವೀರಭದ್ರನ ಶಿಲ್ಪಗಳ ಮತ್ತು ಉಪಾಸನೆಯ ಬಾಹುಳ್ಯ ಮತ್ತು ಪ್ರಾಚುರ್ಯ ವಿಶೇಷವಾಗಿರುವುದನ್ನು ಕಾಣುತ್ತೇವೆ. ೧೨ನೆಯ ಶತಮಾನದಲ್ಲಿ ಪ್ರಾರಂಭವಾಗಿ ಪ್ರಸಾರಗೊಂಡ ಶರಣ ಆಂದೋಳನವು ವಿಗ್ರಹ ಪೂಜೆಗೆ ಪ್ರಾಶಸ್ತ್ಯ ಕೊಡದೆ, (ಏಕ ದೇವತಾ) ಶಿವನ (ಅಥವಾ ವಿಶ್ವದ) ಸಂಕೇತವಾದ ಇಷ್ಟಲಿಂಗದ ಅರ್ಚನೆಯ ಮಹತ್ವವನ್ನು ಬೋಧಿಸಿದೆಯಾದರೂ, ಪಾಶುಪತ, ಲಕುಲೀಶ, ಕಾಳಾಮುಖ ಮುಂತಾದ ಶೈವ ಪ್ರಭೇದಗಳನ್ನು ಅನುಸರಿಸುತ್ತಿದ್ದವರು ಶರಣ ಆಂದೋಳನದ ಬೃಹತ್ ಧಾರೆಯಲ್ಲಿ ವಿಲೀನರಾದರೂ, ಕೆಲವು ಮುಂಚಿನ ವಿಗ್ರಹಾರಾಧನೆಯನ್ನೂ ವಿಶೇಷವಾಗಿ ವೀರಭದ್ರನ ಉಪಾಸನೆಯನ್ನು ಮುಂದುವರಿಸಿಕೊಂಡು ಬಂದರು. ಬಸವಣ್ಣನವರ ಮತ್ತು ಚನ್ನಬಸವಣ್ಣನವರ ವಚನಗಳಲ್ಲಿ ಒಂದು ಕಡೆ ಮಾತ್ರ ವೀರಭದ್ರನ ಉಲ್ಲೇಖ ಬರುತ್ತದೆ. ವೀರಭದ್ರೇಶ್ವರ ಅಥವಾ ವೀರೇಶ ಅಂಕಿತದ ವಚನಗಳು ಇದ್ದಂತೆ ಕಾಣುವುದಿಲ್ಲ. ಬಸವ ಪುರಾಣದಲ್ಲಿ "ವೀರಾವತಾರರು ವೀರಭದ್ರಾದಿ ಪ್ರಮಥವರರ ಭಾವದಲಿ" ಎಂಬ ಪ್ರಸ್ತಾಪ ಬಂದಿದೆ. ನಂಜುಂಡ ಕವಿ ವೀರಭದ್ರನೇ ಶೂರಶರಣ ಮಡಿವಾಳ ಮಾಚಿದೇವನ ರೂಪದಲ್ಲಿ ಬಂದನೆಂದು ವರ್ಣಿಸಿದ್ದಾನೆ.

ಬನವಾಸಿಯ ಮಧುಕೇಶ್ವರ ದೇವಸ್ಥಾನ ಸಮುಚ್ಚಯದಲ್ಲಿರುವ ಕ್ರಿ.ಶ. ೧೩೬೯ರಲ್ಲಿ ಸ್ಥಾಪಿತವಾದ

ವೀರಭದ್ರದೇವರ ಗುಡಿ ಚಿಕ್ಕದೇವ ಒಡೆಯನೆಂಬ ಲಕುಲೀಶ ಗುರುವಿಗೆ ಅರ್ಪಿತವಾದ ಬಗ್ಗೆ ಶಾಸನದ ದಾಖಲೆ ಇದೆ. ಬಾಳೆಹೊನ್ನೂರಿನ (ರಂಭಾಪುರಿ) ವೀರ ಶೈವ ವೀರ ಸಿಂಹಾಸನ ಮಠದಲ್ಲಿ ವೀರೇಶನು (ವೀರ ಭದ್ರನು) ಪೀಠದ ಗೋತ್ರಪುರುಷನಾಗಿಯೇ ಪೂಜೆ ಗೊಳ್ಳುತ್ತಾನೆ. ಇಲ್ಲಿನ ವೀರಭದ್ರ ದೇವಸ್ಥಾನಕ್ಕೆ ವಿರೂಪಣ್ಣ ಒಡೆಯರ ಮಹಾಪ್ರಧಾನಿ ಮಾದರಸ ಒಡೆಯರು ಭೂದಾನ ಮಾಡಿದ್ದನ್ನು ಕ್ರಿ.ಶ. ೧೩೬೯ರ ಶಾಸನವು ದಾಖಲಿಸಿದೆ. ಇಲ್ಲಿ ವೀರಭದ್ರ ಮತ್ತು ಭದ್ರ ಕಾಳಿಯರ ಲೋಹದ, ಉತ್ಸವಮೂರ್ತಿಗಳೂ ಇವೆ. ಬೆಂಗಳೂರು ಜಿಲ್ಲೆಯ ಶಿವಗಂಗಾ ಕ್ಷೇತ್ರದ ಮೇಲಣಗವಿ ವೀರಸಿಂಹಾಸನ ಮಠದಲ್ಲೂ ವೀರಭದ್ರನ ಅರ್ಚನೆ ನಡೆಯುತ್ತದೆ. ಹಂಪೆಯಲ್ಲಿ ಮಾತಂಗಪರ್ವತದ ಮೇಲೆ ಸಂಗಮರ ಕಾಲದ ವೀರಭದ್ರ ದೇವಸ್ಥಾನವಲ್ಲದೆ, ತದ ನಂತರದ ಮುದುವೀರಣ್ಣನ (ಉದ್ದಾನ ವೀರಭದ್ರನ) ಗುಡಿ, ಕಾಮಲಾಪುರದ ರಸ್ತೆಯ ಎಡದ ಗುಡ್ಡದ ಮೇಲೆ ಇನ್ನೊಂದು ವೀರೇಶನ ಗುಡಿ ಉಳಿದಿವೆ. ಬೆಳಗಾವಿ ಜಿಲ್ಲೆಯ ಗೊಡಚಿಯಲ್ಲಿರುವ ವಿಜಯನಗರ ಶೈಲಿಯ ವೀರಭದ್ರ ದೇವಸ್ಥಾನವು ಇಂದಿಗೂ ಬಹಳಷ್ಟು ಭಕ್ತ ರನ್ನು ಆಕರ್ಷಿಸುತ್ತಿದೆ. ಕೆಳದಿ ನಾಯಕರ ಕಾಲದಲ್ಲಿ ವೀರಭದ್ರಾಪುರದ ಅಗ್ರಹಾರದ ಬ್ರಾಹ್ಮಣರಿಗೆ ವೀರ ಭದ್ರೇಶ್ವರ, ಹನುಮಂತ ದೇವರು ಮತ್ತು ವಿನಾಯಕ ದೇವರ ಪೂಜೆಗಾಗಿ ವೀರಭದ್ರ ನಾಯಕನು ಕ್ರಿ.ಶ. ೧೬೩೨ರಲ್ಲಿ ಭೂದತ್ತಿ ಕೊಟ್ಟ ಬಗ್ಗೆ ತಾಮ್ರ ಶಾಸನವಿದೆ. ಬೆಂಗಳೂರು ಜಿಲ್ಲೆಯ ಸಾವನದುರ್ಗದ ಬಳಿ ಮತ್ತು ಬೆಂಗಳೂರಿನ ಗವಿಪುರದಲ್ಲಿ ಭವ್ಯ ವೀರಭದ್ರನ ಮೂರ್ತಿ ಗಳಿವೆ. ಯಲಹಂಕದ ಪ್ರಭು ಮುಮ್ಮಡಿ ಕೆಂಪೇಗೌಡನ ಕಾಲದಲ್ಲಿ (೧೮ನೆಯ ಶತಮಾನ) 'ವೀರಭದ್ರ ವಿಜಯ' ಎಂಬ ಚಂಪೂ ಕಾವ್ಯದ ರಚನೆಯಾಯಿತು.

ವಿಜಯನಗರವೂ, ಅದರ ಪತನಾ ನಂತರ ಅದಕ್ಕೆ ಉತ್ತರಾಧಿಕಾರಿಯಾದ ಸಣ್ಣ ರಾಜ್ಯಗಳೂ ಆಕ್ರಮಣ ವನ್ನು ಎದುರಿಸಲು ಸದಾ ಯುದ್ಧಸನ್ನದ್ಧವಾಗಿರಬೇಕಾ ಗಿತ್ತು ಎಂಬುದನ್ನು ಗಮನಿಸಬೇಕು. ಇಂಥ ಪರಿಸ್ಥಿತಿ ಯಲ್ಲಿ ಜನರಲ್ಲಿ ವೀರ ಪ್ರತಿಭಟನೆಯ ವಾತಾವರಣವನ್ನು, ಮನೋಭಾವನೆಯನ್ನು ಉಂಟು ಮಾಡಲು ವೀರೇಶನ ಉಪಾಸನೆಯು ವಿಶೇಷವಾಗಿ ಅಗತ್ಯವೆಂದು ಭಾವಿಸಿದ್ದರೆ ಅದಕ್ಕೆ ಇದು ಸಹಾಯಕ ಸಾಧನವಾಗಿ ಪರಿಣಮಿಸಿದ್ದರೆ ಆಶ್ಚರ್ಯವಲ್ಲ. ವೀರಬಣಂಜು ಪರಂಪರೆಯವರು ವಿಜಯನಗರದ ಉಚ್ಛ್ರಾಯದ ಕಾಲದಲ್ಲಿ ವ್ಯಾಪಾರೋ ದ್ಯಮಗಳಲ್ಲಿ ಹೆಚ್ಚು ಸಾಹಸ ಮಾಡಲೂ ಅವಕಾಶ ವಾಯಿತು. ಅವರು ತಮ್ಮ ಸರಕುಗಳ ಸಂಗ್ರಹದ ಮತ್ತು ಸಾಗಾಣಿಕೆಯ ರಕ್ಷಣೆಗೆ ತಮ್ಮದೇ ಸೈನಿಕ ಘಟಕಗಳನ್ನು ಇಟ್ಟುಕೊಳ್ಳುವುದು ವಾಡಿಕೆಯಾಗಿತ್ತು. ಆದ್ದರಿಂದ, ಉಗ್ರದೇವತೆ ವೀರಭದ್ರನ ಉಪಾಸನೆಯು ನೆರವು ಅವರಿಗೂ ಪ್ರಯೋಜನಕಾರಿಯಾಗಿರಬೇಕು. ವೀರಭದ್ರನು ಶೌರ್ಯದ, ಹೋರಾಟದ, ಧೈರ್ಯದ, ರಕ್ಷಣೆಯ ಪ್ರತೀಕ ನಾದ ಆರಾಧ್ಯದೇವತೆಯಾಗಿ ಕರ್ನಾಟಕದಲ್ಲಿ ವಿಸ್ತೃತ ವಾಗಿ ಕಂಗೊಳಿಸಿದ್ದಾನೆ. ಈ ದೈವತ್ವದ ಉಪಾಸನೆಯಲ್ಲಿ ಅಗ್ನಿ-ಅರ್ಚನೆ (ಕೆಂಡ ಹಾಯುವುದು), ಗುಗ್ಗಳ ಮುಂತಾದ ತನ್ನದೇ ಆದ ರೀತಿ-ರಿವಾಜುಗಳು ಇವೆ. ಈ ಉಪಾಸನೆಯಿಂದ ಪ್ರಭಾವಿತವಾದ ವೀರಗಾಸೆ, ನಂದೀಧ್ವಜ (ನಂದಿಕೋಲು) ಕುಣಿತಗಳು ಮುಂತಾದ ರೋಮಾಂಚಕ, ವಿಶಿಷ್ಟ ಜಾನಪದ ಕಲೆಗಳೂ ಪ್ರಚಲಿತವಾಗಿವೆ. ವೀರೇಶ, ವೀರಪ್ಪ, ವೀರಯ್ಯ, ವೀರಣ್ಣ, ಭದ್ರಯ್ಯ, ಭದ್ರಪ್ಪ ಇಂತಹ ವಿಪುಲವಾದ ವ್ಯಕ್ತಿನಾಮಗಳು ವೀರಭದ್ರನ ಉಪಾಸನೆಯಿಂದ ಬಂದಿವೆ. ಬಹಳಷ್ಟು ಕುಟುಂಬಗಳು ತಾವು ವೀರಭದ್ರ ದೇವರ 'ಒಕ್ಕಲು' (ಉಪಾಸಕರು) ಎಂದು ಹೆಮ್ಮೆಯಿಂದ ಹೇಳಿಕೊಳ್ಳುವುದೂ ಒಂದು ವೀರ ಪರಂಪರೆಯ ದ್ಯೋತಕವೇ. ○

**ಕೆಲವು ಸಹಾಯಕ ಗ್ರಂಥಗಳು**


1 Mysore Archaeological Reports of relevant years
2 Karanataka District Gazetteers

3 South Indian Images of Gods and Goddesses – H. Krishna Sastri
4 Iconography of Hindus, Buddhists and Jains—R.S. Gupte
5 Elements of Hindu Iconography—T.A. GopinathaRao
6 ಮೂರ್ತಿಶಿಲ್ಪ, ನೆಲೆ, ಹಿನ್ನೆಲೆ – ಎಸ್. ಕೆ. ರಾಮಚಂದ್ರರಾವ್
7 ಚಿಗುರಿಟ್ಟ ಚಿಂತನ – ಡಾ॥ ಶ್ರೀ ಜ.ಚ.ನಿ.
8 ರುದ್ರ, ಭದ್ರ, ರೇಣುಕ – ಡಾ॥ ಶ್ರೀ ಜ.ಚ.ನಿ.
9 ಮಾಮಿಡಿ ಮಾಸಿಕ—ಭದ್ರಾಂಕ I ಮತ್ತು II (ಅಕ್ಟೋಬರ್ ೧೯೮೫ ಮತ್ತು ಜನವರಿ ೧೯೮೬) – ಸಂ. ಎಂ.ಜಿ. ನಾಗರಾಜ್
10 ಶ್ರೀ ವೀರೇಶ ಷಡ್‌ಲೀಲಾದರ್ಶನ—ಎಂ. ಚಂದ್ರಶೇಖರ ಆರಾಧ್ಯ

# ಬೃಂದಾವನ

ರಾ. ಮಧ್ವರಾಜ್

'ಬೃಂದಾವನ' ಈ ಪದ ಕೇಳಿದೊಡನೆಯೇ ನಮಗೆ ಗೋಚರವಾಗುವುದು ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳವರ 'ಬೃಂದಾವನ' ಅಥವಾ ಶ್ರೀ ಕೃಷ್ಣ ತನ್ನ ಬಾಲ್ಯವನ್ನು ಕಳೆದ 'ಬೃಂದಾವನ' ವಿವರಣಾತ್ಮಕವಾಗಿ ವಿಶ್ಲೇಷಿಸಿದಾಗ ಬೃಂದಾವನ ಎಂದರೆ ರಾಕ್ಷಸ ಕಾಲನೇಮಿಯ ಮಗಳೂ ಜಲಂಧರನ ಪತ್ನಿಯೂ ಆದ ವೃಂದೆಯ 'ವನ' ಎಂಬ ಅರ್ಥವೂ ಆಗುತ್ತದೆ. ಹಾಗೆಯೇ 'ಬೃಂದಾವನ'ವು 'ವೃಂದಾವನ'ದ ಇನ್ನೊಂದು ಹೆಸರು. ಭಕ್ತವೃಂದವು ಆಸರೆಗಾಗಿ ಬರುವ ಸ್ಥಳ 'ವೃಂದಾವನ' ಎಂಬ ವಿವರಣೆಯೂ ಇದೆ. ಪ್ರತಿ ನಿತ್ಯ ಹಿಂದೂ ಸುಮಂಗಲಿಯರು ಪೂಜಿಸುವುದು 'ತುಳಸಿ ಬೃಂದಾವನ'. ಹೀಗೆ 'ಬೃಂದಾವನ' ಎಂಬ ಪದಕ್ಕೆ ಅನೇಕ ಅರ್ಥಗಳಿವೆ.

ಬೃಂದಾವನ (ಉತ್ತರ ಭಾರತದಲ್ಲಿ ಬೃಂದಾಬನ್') ಎಂಬುದು ಒಂದು ಸ್ಥಳ. ಇಲ್ಲಿ ಭಗವಾನ್ ಶ್ರೀಕೃಷ್ಣನು ತನ್ನ ಬಾಲ್ಯದಲ್ಲಿ ಗೋಪಿಯರೊಡನೆಯೂ, ಯಶೋಧೆಯೊಡನೆಯೂ ವಾಸಿಸುತ್ತಿದ್ದ ಸ್ಥಳ, ಎಂಬ ಕಾರಣದಿಂದ ಒಂದು ಪವಿತ್ರ ಸ್ಥಳ ಎನಿಸಿದೆ.

ಶ್ರೀ ಮಧ್ವಾಚಾರ್ಯರ ನಂತರ ಬಂದ ಶ್ರೀ ಪದ್ಮನಾಭತೀರ್ಥರ "ಬೃಂದಾವನ"ವು ನಮಗೆ ತಿಳಿದಿರುವ ಪ್ರಥಮ 'ಬೃಂದಾವನ' ಅಂದರೆ ಸುಮಾರು ೭೦೦ ವರ್ಷಗಳಷ್ಟು ಪುರಾತನವಾದದ್ದು. ಯತಿಗಳ ಸಮಾಧಿಗೆ "ಬೃಂದಾವನ" ಎಂಬ ಹೆಸರಿದೆ. ಶಿಲ್ಪಶಾಸ್ತ್ರದಲ್ಲಿಯೂ 'ಬೃಂದಾವನ'ದ ಬಗ್ಗೆ ಉಲ್ಲೇಖ ಇರುವಂತೆ ತೋರುವುದಿಲ್ಲ. ಕೆಲವು ವಿದ್ವಾಂಸರ ಅಭಿಪ್ರಾಯದಂತೆ, 'ಗರ್ಭಗೃಹ'ದ ಅಧಿಷ್ಠಾನ (ಬೇಸ್) ವನ್ನು ಬೃಂದಾವನಕ್ಕೆ ಹೋಲಿಸಬಹುದು. ಬೃಂದಾವನದ ಮೇಲ್ಭಾಗದಲ್ಲಿ ಅಷ್ಟದಳಗಳ ಆಕಾರವು ಅಷ್ಟದಿಕ್ಪಾಲಕರನ್ನು ಸೂಚಿಸುತ್ತದೆಂದೂ, ಮತ್ತು ಈ ಅಷ್ಟ ದಿಕ್ಪಾಲಕರು ಸಮಾಧಿಯಲ್ಲಿರುವ ಯತಿಗಳಿಗೆ ನೀಚಶಕ್ತಿಗಳು ಕೊಡುವ ತೊಂದರೆಗಳನ್ನು ಎದುರಿಸುತ್ತವೆಯೆಂದೂ ಹೇಳಲಾಗಿದೆ. ಇನ್ನೂ ಕೆಲವು ಅಭಿಪ್ರಾಯಗಳು ತಿಳಿಸುವಂತೆ ಭೂತ ಪ್ರೇತಗಳ ಹಾವಳಿಯನ್ನು ತಡೆಗಟ್ಟಲು ದೇವತೆಗಳನ್ನು ಈ ಅಷ್ಟ ದಳಗಳಲ್ಲಿ ಪ್ರತಿಷ್ಠಾಪಿಸಲಾಗಿದೆ.

ತುಳಸಿ-ಬೃಂದಾವನದಲ್ಲಿ ತುಳಸಿಯ ಮುಖವು ಕೆತ್ತಲ್ಪಟ್ಟಿರುತ್ತದೆ. ಆದರೆ ಯಾವ ಯತಿಗಳ 'ಬೃಂದಾವನ'ದಲ್ಲಿಯೂ, ಆ ಸಮಾಧಿಯಲ್ಲಿರುವ ಯತಿಗಳ ಮುಖವನ್ನಾಗಲೀ, ಹೆಸರನ್ನಾಗಲಿ ಕೆತ್ತಿರುವುದಿಲ್ಲ. 'ಬೃಂದಾವನ'ದ ವಿನ್ಯಾಸದಲ್ಲಿ ಈ ಪದ್ಧತಿ ಇದ್ದಿದ್ದರೆ ಬಹುಶಃ ಜಯತೀರ್ಥರ ಬೃಂದಾವನದ ಬಗ್ಗೆ ಭಿನ್ನಾಭಿಪ್ರಾಯಗಳು ಇರುತ್ತಿರಲಿಲ್ಲವೆಂದು ತೋರುತ್ತದೆ. 'ಬೃಂದಾವನ', 'ಗದ್ದುಗೆ', 'ದರ್ಗಾ', ಅಥವಾ ಪಿರಮಿಡ್‌ಗಳಲ್ಲಿರುವ ಅಂಶ ಒಂದೇ ಆಗಿದೆ. ಇವು ಒಬ್ಬ 'ಯತಿ' ಅಥವಾ ಶ್ರೇಷ್ಠ ವ್ಯಕ್ತಿಯನ್ನು ಜೀವಂತವಾಗಿ ಅಥವಾ ಮರಣಾಂತರ ದೇಹವನ್ನು ಸಮಾಧಿ ಮಾಡಿರುವ ಸ್ಥಳ. ಮಾಧ್ವಯತಿಗಳ ಸಮಾಧಿಗೆ 'ಬೃಂದಾವನ'ವೆಂದೂ, ವೀರಶೈವ ಯತಿಗಳ ಸಮಾಧಿಗೆ 'ಗದ್ದುಗೆ' ಎಂದೂ ಹೆಸರಿಸಿದೆ. ಶ್ರೀ ಮಧ್ವಾಚಾರ್ಯರ ಸ್ಥಳ ಉಡುಪಿ ಆಗಿದ್ದುದರಿಂದಲೂ ಕಡೆಗೋಲು ಕೃಷ್ಣ ಆರಾಧ್ಯದೇವತೆ ಆಗಿದ್ದುದರಿಂದಲೂ, ಶ್ರೀ ಕೃಷ್ಣನು ಬಾಲ್ಯದಲ್ಲಿ ಕಳೆದ ಸ್ಥಳದ ನೆನಪಿಗಾಗಿ

ಅಥವಾ ಅಷ್ಟೇ ಪಾವಿತ್ರ್ಯತೆ ಇರಲಿ ಎಂಬ ಕಾರಣಕ್ಕಾಗಿ ಮಾಧ್ವ ಯತಿಗಳ ಸಮಾಧಿಗೆ 'ಬೃಂದಾವನ' ಎಂಬ ಹೆಸರು ಬಂದಿರಬಹುದು. ಯತಿಗಳ ಬೃಂದಾವನದಲ್ಲಿ (ಉದಾಹರಣೆಗೆ ರಾಘವೇಂದ್ರ ಸ್ವಾಮಿಗಳ ಬೃಂದಾವನ ಮಂತ್ರಾಲಯ,) ಸಾಮಾನ್ಯವಾಗಿ ತುಳಸೀ ಗಿಡವನ್ನು ನೆಟ್ಟಿರುವುದಿಲ್ಲ. ಆದರೆ ನಿತ್ಯ ಪೂಜಿಸದೇ ಇರುವ ಕೆಲವು ಬೃಂದಾವನಗಳಲ್ಲಿ ತುಳಸಿ ನೆಟ್ಟಿರುತ್ತಾರೆ.

'ತುಳಸೀ ಬೃಂದಾವನ'ವನ್ನು ಸುಮಂಗಲಿಯರು ಪ್ರತಿನಿತ್ಯ ಪೂಜಿಸುತ್ತಾರೆ. ಆದರೆ ಗೃಹಸ್ಥನು, ತುಳಸೀ ಪೂಜೆಯನ್ನು ಮಾಡುವುದು ಉತ್ಥಾನ ದ್ವಾದಶೀ ದಿನ ಮಾತ್ರ. ಆದರೆ ಇದೇ ಹೆಸರುಳ್ಳ ಮಾಧ್ವ ಯತಿಯ 'ಬೃಂದಾವನ'ವು ಮಠಗಳ ಗರ್ಭ ಗೃಹದಲ್ಲಿದ್ದು ಮಹಿಳೆಯ ನೆರಳೂ ಅಲ್ಲಿ ಬೀಳಬಾರದೆಂಬ ನಂಬಿಕೆಯೂ ಇದೆ. ಈ ಬೃಂದಾವನ ಒಂದು ಸಮಾಧಿಯಾಗಿದ್ದು ಪುರುಷರಿಂದ ಮಾತ್ರ ಪೂಜಿಸಲ್ಪಡುತ್ತದೆ.

ಮೂರ್ತಿ ಪೂಜೆಯು ಪ್ರಾಚೀನ ಪದ್ಧತಿಯಾದರೂ, ಮಾಧ್ವ ಯತಿಗಳ ಅಥವಾ ಯಾವುದೇ ಯತಿಗಳ ಪೂಜೆ ಹೆಚ್ಚು ಪ್ರಚಲಿತವಾಗಿಲ್ಲ, ಆದುದರಿಂದ 'ಬೃಂದಾವನ' ಪೂಜೆ ಎಂದರೆ 'ಯತಿ ಪೂಜೆ'ಯಾಗಬಹುದು. ಬೃಂದಾವನದಲ್ಲಿ ಯತಿಯು ಜೀವಂತವಾಗಿರುವರೆಂಬ ನಂಬಿಕೆಯೂ ಇದೆ. ಶ್ರೀ ರಾಘವೇಂದ್ರ ಸ್ವಾಮಿಗಳವರು ಜೀವಂತ ಬೃಂದಾವನಸ್ಥರಾದರು ಎಂದು ನಾವು ತಿಳಿದಿದ್ದೇವೆ. ಆಗಮ ಶಾಸ್ತ್ರದಲ್ಲಿ ಪಂಚಾಮೃತಾಭಿಷೇಕ, ಅಥವಾ ಇತರ ಅಭಿಷೇಕಗಳ ಮೂಲಕ ಪೂಜಿಸುವ ವಿಧಾನವನ್ನು ದೇವತೆಗಳಿಗೆ ಮಾತ್ರ ಮೀಸಲಾಗಿಟ್ಟಿದ್ದು ಬೃಂದಾವನದಲ್ಲಿ ಸಮಾಧಿಸ್ಥರಾಗಿರುವ ಯತಿಗಳಿಗೆ ಈ ವಿಧಾನ ತಿಳಿಸಿಲ್ಲ. ಆದರೆ ಮಠಗಳಲ್ಲಿ ಬೃಂದಾವನಕ್ಕೆ 'ಪಂಚಾಮೃತ ಅಭಿಷೇಕ', ಕ್ಷೀರಾಭಿಷೇಕ' ಮಾಡುವ ಸಂಪ್ರದಾಯವಿದೆ. ಈ ಬೃಂದಾವನಗಳ ಮೇಲೆ ಶ್ರೀರಾಮನ ಅಥವಾ ವಾಯುದೇವರ ಅಥವಾ ಸಾಲಿಗ್ರಾಮವನ್ನಿಟ್ಟು ಪೂಜಿಸುವುದರಿಂದ, ಪೂಜೆಯನ್ನು ಈ ದೇವತೆಗಳ ಮುಖೇನ ಯತಿಗಳಿಗೆ ಅರ್ಪಿಸುವುದರಿಂದ ನೇರವಾಗಿ ವ್ಯಕ್ತಿಗೆ ಪೂಜೆ ಮಾಡುವುದಿಲ್ಲ. ಆದ್ದರಿಂದ ಯಾವುದೇ ಪೂಜಿಸಲ್ಪಡುತ್ತಿರುವ ಬೃಂದಾವನದ ಶಿರದಲ್ಲಿ ಒಬ್ಬ ದೇವತೆಯ ವಿಗ್ರಹ ಅಥವಾ ಸಾಲಿಗ್ರಾಮ ಇರುತ್ತದೆ. ಹಾಗೂ ಮೇಲ್ಭಾಗದಲ್ಲಿ ದಳಗಳು ದೇವತೆಗಳ ಸನ್ನಿಧಿಯನ್ನು ಸೂಚಿಸುತ್ತವೆ.

ಇತ್ತೀಚೆಗೆ 'ಮೃತ್ತಿಕಾ ಬೃಂದಾವನ'ಗಳು ಹೆಚ್ಚಾಗಿ ಕಂಡು ಬರುತ್ತಿವೆ. ಮೂಲ ಬೃಂದಾವನದಿಂದ 'ಮೃತ್ತಿಕೆ'ಯನ್ನು ತಂದು 'ಬೃಂದಾವನ'ವನ್ನು ನಿರ್ಮಿಸಿ ಪೂಜಿಸುವುದು. ಈ ಬೃಂದಾವನಗಳಲ್ಲಿಯೂ ಯತಿಗಳ ಸಾನ್ನಿಧ್ಯ ಇರುತ್ತದೆ ಎಂದೂ, ಇವುಗಳ ಮೇಲೆಯೂ ಸಾಲಿಗ್ರಾಮ ಅಥವಾ ದೇವತೆಗಳ ವಿಗ್ರಹಗಳನ್ನೂ ಇಟ್ಟು ಪೂಜಿಸುವ ಸಂಪ್ರದಾಯವಿದೆ. ○

# ಹರಿಸೇವೆ ಮತ್ತು ಕೊಡಗಿನ ಹರಿಸೇವೆ ಕಲ್ಲುಗಳು : ಒಂದು ಟಿಪ್ಪಣಿ

**ಎಂ. ಜಿ. ನಾಗರಾಜ್**

ಹರಿಸೇವೆ, ತಿರುಪತಿ-ತಿರುಮಲೆ ವೆಂಕಟೇಶ್ವರನಿಗೆ ಅನ್ವಯವಾದ ಆಚರಣೆ. ಹರಸೇವೆ, ರುದ್ರ-ವೀರಭದ್ರರಿಗೆ ಮೀಸಲಾದ ಜನಪದ ಆಚರಣೆ. ಕೆಲವೆಡೆ ಎರಡನ್ನೂ ಸಮನ್ವಯ ಮಾಡಿ ಸುಗ್ಗಿ ಕಟ್ಟೆ ಹಬ್ಬದಲ್ಲಿ ಆಚರಿಸುವುದುಂಟು. ಇದರಲ್ಲಿ ಮಾರುತಿ ವೆಂಕಟರಮಣ, ಕಾಲ ಭೈರವ, ವೀರಭದ್ರ ಹಾಗು ದುರ್ಗೆ, ಇವರುಗಳ ಪ್ರತೀಕಗಳನ್ನು ಬಳಸಿ ಸೇವೆ ಮಾಡಿ, ಜನಪದ ಕುಣಿತಗಳನ್ನು ಅಳವಡಿಸಿಕೊಳ್ಳುವುದುಂಟು. 'ಸುಬ್ಬಮ್ಮ' ದೇವರ ಆರಾಧನೆಯನ್ನು ಸೇರಿಸಿ ಗ್ರಾಮದೇವತೆಯ ಹಬ್ಬ ಆಚರಿಸುವುದುಂಟು. ಒಟ್ಟಾರೆ ಹರಿ-ಹರ-ಶಕ್ತಿಗಳ ಅರ್ಥಾತ್ ಶಾಕ್ತ, ಶೈವ, ವೈಷ್ಣವ ಸಂಗಮ ಭಾವಗಳ ಆರಾಧನೆ ಇಲ್ಲಿದೆ.

ಹರಿಸೇವೆಯು ಪ್ರಮುಖವಾಗಿ ನಾಮಧಾರಿ ಒಕ್ಕಲಿಗರಲ್ಲಿ ದಾಸಯ್ಯನ ಮುಂದಾಳ್ತನದಲ್ಲಿ ನಡೆಯುತ್ತದೆ. ಕೆಲವೆಡೆ ವೀರಶೈವರಲ್ಲಿರುವ ಲಿಂಗಾಯಿತ 'ತಿರುಪತಿ ಒಕ್ಕಲು'ಗಳು ಇದನ್ನು 'ಧೂಪದ ಸೇವೆ' ಎಂಬ ಹೆಸರಿನಲ್ಲಿ ಆಚರಿಸುತ್ತಾರೆ; ದಾಸಯ್ಯನಿಗೆ ನಿರ್ದಿಷ್ಟ ಅವಕಾಶ ನೀಡಿರುತ್ತಾರೆ. ನಂಜುಂಡೇಶ್ವರನ ಒಕ್ಕಲುಗಳಲ್ಲಿ ಜೋಗಪ್ಪನಿಗೆ ಓದೇಶ್ವರನ ಒಕ್ಕಲಿನಲ್ಲಿ ವೀರಶೈವ ಜಂಗಮನಿಗೆ ಅನುಗುಣ ಸೇವೆಯಲ್ಲಿ ಆದ್ಯತೆ. ಆದರೆ ಕೆಲವೆಡೆ ವೀರಶೈವರಿಗೆ ಮೀಸಲಾದ ಹರಸೇವೆ ಆಚರಣೆ ಇದೆ. ದಾಸಯ್ಯ ಅಥವಾ ಜೋಗಪ್ಪನ ಸಂಬಂಧ ಇಲ್ಲಿ ಕಾಣಬರುವುದಿಲ್ಲ.[1] ಸುಗ್ಗಿ ದೇವರ ಹಬ್ಬದಲ್ಲಿ ಬಸವಣ್ಣನ ಅಡ್ಡೆ ಹೊತ್ತು ಬರುವ ದಿನದಂದು ವೀರಭದ್ರನ ವಡಬುಗಳನ್ನು ಹೇಳಿಕೊಂಡು 'ಹರಸೇವೆ' ಆಚರಿಸುತ್ತಾರೆ. 'ಮಣೇವು' ಹಾಕುತ್ತಾರೆ.[2] ಕೊಡಗಿನಲ್ಲಿ ನಡೆಯುವ ಈ ಸೇವೆ ಹೀಗೆ ಮುಖ್ಯ ಹಬ್ಬದ ಒಂದು ಅಂಗವಾಗಿಯೋ, ಅಥವಾ ಪ್ರತ್ಯೇಕವಾಗಿಯೋ ನಡೆಯುತ್ತದೆ. ಈ ಹರಿಸೇವೆ-ಹರಸೇವೆಯ ಇನ್ನೊಂದು ಅಂಗವಾಗಿ ಹಿರಿಯರ ವಾರ್ಷಿಕ ಆರಾಧನೆಯನ್ನು ಸುಗ್ಗಿ ದೇವರ ಹಬ್ಬ (ಸುಗ್ಗಿ ಕಟ್ಟೆ ಹಬ್ಬ)ದ ಜೊತೆಗೆ ತಳಕು ಹಾಕಿ ಆ ಸಂಬಂಧದ ವೀರಗಲ್ಲುಗಳನ್ನು 'ಹರಿಸೇವೆ ಕಲ್ಲು' ಹರಿಸೇವೆ ಕಟ್ಟೆ ಎಂದೂ ಕರೆಯುತ್ತಾರೆ.

ಕೊಡಗಿನಲ್ಲಿ ಇಂದು ಕೆಲವೇ ಕಡೆ 'ಹರಿಸೇವೆ

---

1 ಹಾಸನ ಜಿಲ್ಲೆ ಅರಕಲಗೂಡು ತಾಲೂಕು ಸೋಂಪುರ ಹೋಬಳಿ ಮುಸಕತ್ತೂರು ಶಂಕರಲಿಂಗ ದೇವಸ್ಥಾನದಲ್ಲಿ, ಹನ್ನೆರಡು ವರ್ಷಗಳಿಗೊಮ್ಮೆ 'ಹಲಗೆ ಜಂಗು' (ಅಳಗ ಜಂಪ) ಹಿಡಿದ ಮೂರು ದಿನದ ಹಬ್ಬ, ಮುಂಗಾರು ಸಮಯದಲ್ಲಿನ ಹಬ್ಬದಲ್ಲಿ ವೀರಭದ್ರ ಹಲಗೆ, ಖಡ್ಗ ಹಿಡಿದು 'ಹರಸೇವೆ' ನಡೆಸುತ್ತಾರೆ. ಮಣೇವು ಹಾಕುತ್ತಾರೆ. ಇಲ್ಲಿ ವೀರಶೈವರದೇ ಪೂರ್ಣ ನೇತೃತ್ವ.

2 ಕೊಡಗಿನ ಯಡೂರು ಸುಗ್ಗಿ ಕಟ್ಟೆ ಹಬ್ಬದಲ್ಲಿನ ಹರಸೇವೆಯಲ್ಲಿಯೂ ಬಸವಣ್ಣನ ಅಡ್ಡೆ ಹಾಕುವಲ್ಲಿ 'ಮಣೇವು' ಹಾಕುತ್ತಾರೆ. ಗೌಡ ಜನಾಂಗದವರು, ಕತ್ತಿವರಸೆ ಸಹಿತ ಇದರಲ್ಲಿ ಪಾಲ್ಗೊಂಡು ಮಣೇವು ತಿನ್ನುತ್ತಾರೆ. ಆದರೆ ಅದು 'ಮಣೇವು'ಗಳ ರಾಶಿ ಆಗದೆ, ಸಾಂಕೇತಿಕ 'ಮಣೇವು' ಆಗಿದೆ.

ಕಲ್ಲು'ಗಳ ಆರಾಧನೆ ನಡೆಯುತ್ತದೆ.[3] ಮನೆತನದ ಹಿರಿಯನ ಶೌರ್ಯದ ಅಥವಾ ಸ್ಥಳೀಯ ಗ್ರಾಮದ ಸಂದು ಹೋದ ವೀರರ ಶೌರ್ಯದ ಪ್ರತೀಕವಾಗಿ ನೆಟ್ಟಿರುವ ವೀರ ಗಲ್ಲುಗಳ ಕಟ್ಟೆಯನ್ನು ಹರಿಸೇವೆಕಲ್ಲು, ಹರಿಸೇವೆಕಟ್ಟೆ ಎಂದೂ ಕರೆಯುವ ರೂಢಿ ಇದೆ; 'ಹರಿಸೇವೆ'ಯ ಆಚರಣೆಗಳನ್ನೂ ಇಲ್ಲಿ ಅಳವಡಿಸಿಕೊಂಡಿರುವುದೂ ಉಂಟು. ಇವುಗಳಲ್ಲಿ ಜನಪದ ಆಚರಣೆಗಳ ಸಾಂಸ್ಕೃತಿಕ ಇತಿಹಾಸವಿದೆ. ಸಂಸ್ಕೃತೀಕರಣದ ಇತಿಹಾಸವೂ ಇಡಿ ಕಿರಿದು ಬಂದಿದೆ. ಈ ಕಾರಣ ಹರಿಸೇವೆಯ ಅರ್ಥ, ಅಡಕ ವಿರುವ ಪಾರಿಭಾಷಿಕ ಶಬ್ದಗಳ ವಿವರ ತಿಳಿದು ನಂತರ ಅದರ ವಿವಿಧ ಮುಖಗಳು-ಒಕ್ಕಲುಗಳು, ಹರಿಸೇವೆ-ಹರ ಸೇವೆ, ಭೈರವಸೇವೆ, ಕೆಂಚರಾಯನ ಸೇವೆಗಳ ಇತಿಹಾಸ, ಶಾಸನ ಪುರಾವೆ ಹಾಗು ಹರಿಸೇವೆ ಕಲ್ಲುಗಳಲ್ಲಿ ಸಾಂಬಂ ಧಿಕ ಅನ್ವಯ ಕುರಿತು ಪ್ರಸ್ತುತ ವಿಶ್ಲೇಷಣೆ ಇದೆ. ಇದರಿಂದ ತಿರುಪತಿಯ ಶೈವ-ವೈಷ್ಣವ ಸಂಘರ್ಷ ಹಾಗೂ ನಂತರದ ಸಮನ್ವಯ ಇತಿಹಾಸ, ಗೌಡ ಜನಾಂಗದಲ್ಲಿನ ಶೈವ-ನಾಮಧಾರಿ ಒಕ್ಕಲುಗಳ ಇತಿಹಾಸವನ್ನು ಹೆಕ್ಕಲೂ ಅನುಕೂಲವಾಗುತ್ತದೆ.

ಹರಿಸೇವೆ, ಹರಸೇವೆ ಕುರಿತೇ ಮುಖ್ಯವಾಗಿ ಸಾಹಿತ್ಯ ಕೃತಿಗಳಲ್ಲವೆಂದರೂ, ಅವುಗಳ ಅನ್ವಯ-ಅರ್ಥ ಗಳನ್ನು ವೆಂಕಟರಮಣನ ಸೇವೆಯ ಅಂಗವಾಗಿ ಹೇಳಿ ರುವ ಕೃತಿಗಳಿವೆ. ಲೇಖನಗಳು ವಿರಳವಾಗಿವೆ. ಜನಪದ ಗೀತೆಗಳಿವೆ. ಆದರೆ ಹರಿಸೇವೆಯ ವೈವಿಧ್ಯತೆಗಳ ಕುರಿತಂತೆ ಕೊಡಗಿನಲ್ಲಿ ಚಾಲ್ತಿಯಲ್ಲಿರುವ ರೂಢಿಗಳೆಲ್ಲವನ್ನು ದಾಖಲೆ ಮಾಡಿಲ್ಲ; ತೌಲನಿಕ ಅಧ್ಯಯನ ನಡೆಸಿಲ್ಲ. ಆದಾಗಿ ಪ್ರಸ್ತುತ ಪ್ರಯತ್ನ.

ತಿರುಪತಿ ಯಾತ್ರೆಗೆ ಹೋಗಿ ಬಂದವರು ತಂದ ತೀರ್ಥ ಪ್ರಸಾದವನ್ನು ದಾಸಯ್ಯನ ಮೂಲಕ ಪೂಜಿಸಿ ಬಂಧು ಬಳಗ ಹಾಗು ಊರಿನವರನ್ನು ಕರೆದು ಹಂಚು ವುದೇ ಹರಿಸೇವೆ. ಇದು ಸ್ಥೂಲ ವಿವರಣೆ.

ಹರಿಸೇವೆ-(ಕೆಂಚರಾಯ) ಭೈರವಸೇವೆಯ ಜೊತೆಗೆ ಶ್ರಾವಣಮಾಸ, ರಾಮನವಮಿ, ಕೃಷ್ಣ ಜನ್ಮಾ ಷ್ಟಮಿ ಉಪವಾಸ ವ್ರತಗಳು, ನಾಮಧಾರಿ ಒಕ್ಕಲುಗಳ ಮುಖ್ಯ ಹಬ್ಬ ಹರಿದಿನಗಳಾಗಿವೆ. ಹರಿಸೇವೆಯಲ್ಲಿ ಕೆಂಚ ರಾಯನ ಸೇವೆಯ ಮೂಲಕ ಮುಕ್ತಾಯವಾಗುತ್ತದೆ.[4] ಸಾಗರ, ಪುತ್ತೂರು, ಸುಳ್ಯ ಸಂಪಾಜೆಯ ಗೌಡ ನಾಮ ಧಾರಿಗಳ ಕುಲಾಚಾರವೆಲ್ಲ ಕಟ್ಟೆ ಮನೆಯವರ[5] ನಿರ್ದೇಶ ನಕ್ಕೆ ಒಳಪಟ್ಟವೆ. ಶೈವ ಪಂಥೀಯ ಗೌಡರೆಲ್ಲ ಹಿರಿಯರ ಹಬ್ಬವನ್ನು ಆಶ್ವಯುಜ ಶುದ್ಧ ಪಿತೃ ಪಕ್ಷದಲ್ಲಿ ಆಚರಿಸಿ ದರೆ, ಬಯಲುಸೀಮೆಯ ನಾಮಧಾರಿಗಳು ಶ್ರಾವಣ ಮಾಸದಲ್ಲಿ ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಶುದ್ಧ ಸಾತ್ವಿಕಾಹಾರದ ಎಡೆ ಮಾತ್ರ ಬಳಕೆ ಇರುತ್ತದೆ. ಹರಿ ಸೇವೆಯನ್ನು ಬಹಳ ವೈಭವದಿಂದ ಆಚರಿಸುವ ಇವರು, ಮನೆತನದಲ್ಲಿ ನಡೆದು ಬಂದಂತೆ ಆ ಊರಿನ ಒಬ್ಬರು

---

3 ಎಂ.ಜಿ. ನಾಗರಾಜ್ : ಶಾಸನ ಶಿಲ್ಪಗಳು, ಬೆಂಗಳೂರು, ೧೯೯೦, ಪು. ೩೩-೩೪, ಉಲ್ಲೇಖ ರೀತ್ಯ, ಉತ್ತರ ಕನ್ನಡದ ಕಾಯ್ಕಿಣಿಯಲ್ಲಿ ವೀರಗಲ್ಲುಗಳಿಗೆ 'ದಿಬ್ಬಣ ಕಲ್ಲು'ಗಳೆಂದು ಕರೆವ ರೂಢಿ ಇದೆ. ಆದರೆ ಶಿರಸಿ ಬಳಿಯ ಎಸಳೆಯ ಈಶ್ವರ ದೇವಾಲಯದ ಬಳಿ ಶಾಸನಸ್ಥ ಶಿಲಾಮುಖಗಳು, ಅವುಗಳ ಹಿಂಬದಿಯಲ್ಲಿ ಕಳಶ, ಕುಂಭ, ಗೋವು, ಹಸ್ತಿ, ಗಣಪತಿ ಮುಂತಾದ ಶಿಲ್ಪಗಳು ಕಂಡರಣೆ ಆಗಿದ್ದು, ಅವುಗಳಿಗೂ 'ದಿಬ್ಬಣಕಲ್ಲು'ಗಳೆನ್ನುವುದುಂಟು. ಆದರೆ ೧೦ನೇ ಶತಮಾನದ ಈ ಶಾಸನಗಳು ಆ ಕಾಲದ ಕದಂಬರ ಶೌರ್ಯಸ್ಮಾರಕ, ವೀರಗಲ್ಲುಗಳಲ್ಲ; ಬದಲು ಆ ರಾಜರ ಆಳ್ವಿಕೆ ಸೂಚಿಸುವಂತಹ ವುಗಳಾಗಿವೆ.

4 ಮಾಕೋನಹಳ್ಳಿ ದೊಡ್ಡಮನೆ ದೊಡ್ಡಪ್ಪಗೌಡರು, ಗೌಡಸಮಾಜ ಗೌಡರಾಜ್ಯ, ೧೯೭೦ ಪು. ೯

5 ಕೊಡಗಿನ ಪೊನ್ನಂಪೇಟೆ ಕಾನೂರು ಹಾದಿಯಲ್ಲಿರುವ, ಚಿಕ್ಕ ಮಂಡೂರಿನಲ್ಲಿನ ಅಜ್ಜನಾಯಕನ ತಂದೆ ಚಿಟ್ಟಪ್ಪನಾಯಕ, 'ಕಟ್ಟೆಮನೆ ಚಿಟ್ಟಪ್ಪನಾಯಕ'ನೆಂದೇ ೧೭ನೇ ಶತಮಾನದಲ್ಲಿ ಪ್ರಸಿದ್ಧನಾದವ. ಈ 'ಕಟ್ಟೆಮನೆ' ಗೌಡ ಜನಾಂಗದ ಇಲ್ಲಿನ ಮುಖ್ಯಸ್ಥರ ಮನೆತನಕ್ಕೆ ಅನ್ವಯವೆನ್ನುವುದಾದರೆ, ದಕ್ಷಿಣ ಕೊಡಗಿನ ಚಿಕ್ಕಮಂಡೂರಿನಲ್ಲಿ ಒಂದು ಕಾಲಕ್ಕೆ ಗೌಡ ಜನಾಂಗವು ಪ್ರಾಮುಖ್ಯತೆ ಹೊಂದಿತ್ತು, ಎಂದಾಗುತ್ತದೆ. ಇಂದು ಆ ನೆಲೆಯಲ್ಲಿ ಹರಿಸೇವೆ ನಡೆಯುವುದಿಲ್ಲ. ಆದರೆ ನೆರೆಯ ಚಿಕ್ಕ ಸೊಡ್ಲೂರಿನ ಮಂದೆತವ್ವನ ಹಬ್ಬದಲ್ಲಿ ಹರಿಸೇವೆಯಲ್ಲಿನ ಜನಪದ ಆಚರಣೆಗಳು, ಸುಗ್ಗಿಹಬ್ಬದಾಚರಣೆಗಳು ಅಂತರ್ಗತವಾಗಿರುವುದನ್ನು ಕಾಣಬಹುದು.

ಅಥವಾ ಕಟ್ಟೆ ಮನೆಯವರು, ಗ್ರಾಮಸ್ಥರು ಹಾಗು ಬಂಧುಗಳ ಸಹಕಾರದಿಂದ ನಡೆಸುತ್ತಾರೆ. ಇಲ್ಲಿನ ಹರಿಸೇವೆ-ಭೈರವಸೇವೆ ಸಹಯೋಗ ಸಂಬಂಧ ಪಡೆದಿವೆ ; ಹರಿ-ಹರ ಸಮನ್ವಯ ಸಂಬಂಧವೆನಿಸಿವೆ.

ಉತ್ತರ ಕೊಡಗಿನ ಬಲಮುರಿ ಗ್ರಾಮದ ನೆಲೆಯಲ್ಲಿ ನಡೆವ ಹರಿಸೇವೆಯು ಬಯಲುಸೀಮೆಯ ಮಾದರಿಯನ್ನು ತುಸು ಹೋಲುತ್ತದೆ. ಯಾರಿಗೇ ಕಾಯಿಲೆ ಕಸಾಲೆ ಬಂದಾಗ, 'ಒಳ್ಳೇದು ಮಾಡು ದೇವರೆ ನಿನಗೆ ಹರಿಸೇವೆ ಮಾಡುತ್ತೇನೆ. ನಿನ್ನ ದೂತರಿಗೆ ನಾಲ್ಕು ಕಾಲು ಬೇಟೆ ಒಪ್ಪಿಸುತ್ತೇನೆ. ನಿನ್ನ ಮುಡುಪಿಗೆ ಎರಡು ಕೈಗೆ ಎರಡು ಹಣ ಹಾಕುತ್ತೇನೆ', ಎಂದೆಲ್ಲ ಹರಕೆ ಕಟ್ಟಿಕೊಳ್ಳುತ್ತಾರೆ. ವಾಸಿ ಆದ ನಂತರ ಅನುಕೂಲಿಸಿದಾಗ ಹರಿಸೇವೆಯ ಆಚರಣೆ ನಡೆಸಲಾಗುವುದು.

**ಕೊಡಗಿನ ಚೌಡ್ಲು ಗ್ರಾಮದಲ್ಲಿ ಹರಿಸೇವೆ** : ಒಂದು ವರ್ಷ ಸುಗ್ಗಿಕಟ್ಟೆಯ ಬಳಿ ಸುಗ್ಗಿ ದೇವರ ಹಬ್ಬ ನಡೆದರೆ ಮರುವರ್ಷ ವೀರಗಲ್ಲುಗಳ ಕಟ್ಟೆಯ ಬಳಿ ಹರಿಸೇವೆ ನಡೆಯುತ್ತದೆ. ಇಡೀ ಗ್ರಾಮದವರು ಸೇರಿ ನಡೆಸುವ ಸಾಮೂಹಿಕ ಹಬ್ಬವಿದು. ಈ ವೀರಗಲ್ಲು ಕಟ್ಟೆಯನ್ನು, ಹರಿಸೇವೆಯಕಟ್ಟೆ, ಚೌಡ್ಲಯ್ಯ ಮೂಡ್ಲಯ್ಯನಕಟ್ಟೆ,[6] ತೀರ್ಮಾನದ ಕಟ್ಟೆ ಎಂದೆಲ್ಲ ಅನುಗುಣ ಘಟನೆ ಹಾಗು ಇತಿಹಾಸವನ್ನು ಮೇಳೈಸಿ ಕರೆವ ರೂಢಿ ಇಲ್ಲಿದೆ. ಹರಿಸೇವೆಯು ವೀರಗಲ್ಲುಗಳ ಬಳಿ ನಡೆಯುವ ಕಾರಣ, ಅವು ಹರಿಸೇವೆ ಕಲ್ಲುಗಳೆಂದೂ ಕರೆಸಿಕೊಂಡಿರುವುದುಂಟು.

ಹರಿಸೇವೆಯು, ಸುಗ್ಗಿಕಟ್ಟೆ ಹಬ್ಬದಂತೆಯೆ ಯುಗಾದಿ ಕಳೆದ ಮೇಲೆ ಸಾಮಾನ್ಯವಾಗಿ ಮೇ ತಿಂಗಳ ಅಂತ್ಯದ ಒಳಗೆ ನಡೆಯುತ್ತದೆ.

ಚೌಡ್ಲು ಗ್ರಾಮದಲ್ಲಿ ಸುಗ್ಗಿದೇವರಹಬ್ಬ, ಹರಿಸೇವೆಯ ಹಬ್ಬದಾಚರಣೆಗಳು ಪರ್ಯಾಯ ವರ್ಷಗಳಲ್ಲಿ ಪ್ರತ್ಯೇಕವಾಗಿ ನಡೆಯುತ್ತವೆ. ಯಡೂರು ಸುಗ್ಗಿಕಟ್ಟೆ ಹಬ್ಬದಲ್ಲಿ ಹರಿಸೇವೆಯು, 'ಹರಸೇವೆ'ಯ ರೂಪದಲ್ಲಿ ಅಂತರ್ಗತವಾಗಿ ನಡೆಯುತ್ತದೆ. ಅಲ್ಲಿ ವೀರಭದ್ರನ ವಡಬುಗಳನ್ನು ಉಗ್ಗಡಿಸುತ್ತಾರೆ, ಮಣೇವು ಹಾಕುತ್ತಾರೆ. ಬಸವನ ಅಡ್ಡೆ ಹೊತ್ತು ಆವೇಶದಿಂದ 'ಹರಸೇವೆ' ನಡೆಸುತ್ತಾರೆ.

**ತಲ್ತರೆ ಶೆಟ್ಟಳ್ಳಿಯಲ್ಲಿ ಹರಿಸೇವೆ ಮತ್ತು ಹರಿಸೇವೆ ಕಲ್ಲುಗಳು** : ಹರಿಸೇವೆ ಹಬ್ಬದ ಆರಂಭಕ್ಕೆ ಬೀರೇದೇವರಿಗೆ ಗುರುವಾರದಂದು ಮೊದಲ ಪೂಜೆ ಸಲ್ಲುತ್ತದೆ. ಶುಕ್ರವಾರ ರಾತ್ರಿ ಏಳು-ಎಂಟು ಗಂಟೆಗೆ ಹರಿಸೇವೆ ಪೂಜೆ ಶುರುವಾಗುತ್ತದೆ.

ವಾರ್ಷಿಕ ಸುಗ್ಗಿಹಬ್ಬ ನಡೆಯುವ ಸಂದರ್ಭದಲ್ಲಿ ಹರಿಸೇವೆ ಕಲ್ಲುಗಳ ಬಳಿ ಸಾಮಾನ್ಯ ಪೂಜೆ ಅಷ್ಟೆ. ವಾಸ್ತವವಾಗಿ ಇಲ್ಲಿನ ಹರಿಸೇವೆಕಲ್ಲುಗಳು, ವೀರಗಲ್ಲುಗಳಾಗಿವೆ.

ಮೇ ತಿಂಗಳಿನಲ್ಲಿ ಮನೆಯ ಬಳಿ ಅಬ್ಬಿ ಹೊಳೆಯ ದಂಡೆಯಲ್ಲಿ ಈ ಆರಾಧನೆಯಲ್ಲಿ, ಎಡೆಗೆ ಬೇಕಾದ ಪಾಯಸ, ಅನ್ನ, ಸಾರು ಸಾತ್ವಿಕಾಹಾರವನ್ನು ಮಡಿಯಿಂದ ಸಿದ್ಧಮಾಡುತ್ತಾರೆ. ಎಡೆಯನ್ನು ತಂದು 'ಬಸವೇಗೌಡನ'–ಹರಿಸೇವೆ ಕಲ್ಲಿಗೆ ಅಭಿಷೇಕ ಪೂಜಾದಿಗಳ ನಂತರ ಸಮರ್ಪಿಸುತ್ತಾರೆ. ಗೌಡ ಹಾಗು ಹರಿಜನ ಒಕ್ಕಲುಗಳೂ ಇಲ್ಲಿಗೆ ಬರುತ್ತವೆ. ಹೀಗೆ ತಲ್ತರೆಶೆಟ್ಟಳ್ಳಿಯಲ್ಲಿ, ವೀರಶೈವರಿಂದ, ಚೌಡ್ಲುವಿನಲ್ಲಿ ಬ್ರಾಹ್ಮಣರಿಂದ ಹರಿಸೇವೆಕಲ್ಲುಗಳಿಗೆ ಸಾತ್ವಿಕ ಪೂಜೆ ನಡೆಯುತ್ತದೆ.

**ಹರಿಸೇವೆಯ ಇತಿಹಾಸ ಮತ್ತು ಕೊಡಗಿನ ಜನಪದರ ದೃಷ್ಟಿ** : ಒಂದು ಕಾಲಕ್ಕೆ ಗೌಡ ಜನಾಂಗದ ಆರಾಧ್ಯದೈವವು ಧಾರ್ಮಿಕ ರೂಪಾಂತರಗಳಿಗೆ ಒಳಗಾದಾಗ ಅನುಗುಣವಾಗಿ ಆ ಜನಾಂಗವು ಸಮನ್ವಯ ದೃಷ್ಟಿಯನ್ನು ಬೆಳಸಿಕೊಂಡಿತು. ಇದರ ಪರಿಶೀಲನೆಗಾಗಿ ತಿರುಪತಿ ದೇವರ ಸಮನ್ವಯ ಸಂಪುಟದ

---

6 ಎ.ಕ. ಸಂಪುಟ ೧ (ಪರಿಷ್ಕೃತ). ಚೌಡ್ಲು ೬೦, ರೀತ್ಯ ಚವುಡರಾಜ್ ಮನೆಯಾಗಿ ೧೩ನೆಯ ಶತಮಾನದಲ್ಲಿ ಇದ್ದ ಕಾರಣ ಈ ಕಟ್ಟೆಯ ವೀರಗಲ್ಲೊಂದಕ್ಕೆ ಆ ಹೆಸರನ್ನು ಆರೋಪಿಸಿ ಚೌಡಯ್ಯನಕಟ್ಟೆ ಎಂದು ಜನಪದರು ರೂಢಿ ಮಾಡಿಕೊಂಡಿರುವಂತಿದೆ.

ಉಗಮವನ್ನು ಕೆದಕಿ ನೋಡಬೇಕಾಗುತ್ತದೆ. ಕೊಡಗಿನಲ್ಲಿನ ಈ ಕುರಿತ ಆಚರಣೆಗಳ ಇತಿಹಾಸಕ್ಕೆ ಪೂರಕ. ಈ ಕುರಿತು ವಿವಿಧ ವಾದಗಳೂ ಇವೆ. ಮುಖ್ಯವಾಗಿ ಗೌಡ ಜನಾಂಗದ 'ಹರಿಸೇವೆ'ಯಲ್ಲಿ ವೈಷ್ಣವ ಪ್ರಭಾವವಿದೆ; 'ಭೈರವ (ಕೆಂಚರಾಯ) ಸೇವೆ'ಯಲ್ಲಿ ಶೈವ ಪ್ರಭಾವವಿದೆ. ಮಣೀವು ಹಾಕುವಲ್ಲಿ, ತಿನ್ನುವಲ್ಲಿ (ಅಖಂಡ ನೈವೇದ್ಯದ ಸಂಕೇತ!) ಶಾಕ್ತ ಪ್ರಭಾವವಿದೆ. ಇದು 'ಹರ-ಹರಿ-ಶಕ್ತಿ' ದೇವಸೇವೆಯ ವಿಶಿಷ್ಟ ತ್ರಿವೇಣಿ ಸಂಯೋಗ; ಸಹಭೋಗ.

ಶ್ರೀ ವೈಷ್ಣವ ಸಂಪ್ರದಾಯದ ನಾಮಧಾರಿ ಒಕ್ಕಲಿಗರು ಶಿವಮೊಗ್ಗ ಜಿಲ್ಲೆಯ ಮಲೆನಾಡು ತಾಲೂಕುಗಳು, ಚಿಕ್ಕಮಗಳೂರುಜಿಲ್ಲೆ ನರಸಿಂಹರಾಜಪುರ, ಮೂಡಿಗೆರೆಯ ಕಳಸ, ಬಾಳೂರು ಹೋಬಳಿಗಳು, ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು, ಸುಳ್ಯ ಬೆಳ್ತಂಗಡಿ ತಾಲೂಕು, ಕೊಡಗು ಮುಂತಾದ ಕಡೆ ಹೆಚ್ಚಾಗಿಯೂ, ಬಯಲುಸೀಮೆಯ ನಾಗಮಂಗಲ, ಕುಣಿಗಲ್, ಬೇಲೂರು, ಪಿರಿಯಾಪಟ್ಟಣ ಕಡೂರು ತಾಲೂಕು ಮತ್ತು ಬೆಂಗಳೂರು ಸಿಟಿಯಲ್ಲಿ ವಿರಳವಾಗಿದ್ದಾರೆ. ಆಧ್ಯಾತ್ಮಿಕವಾಗಿ ವೈಷ್ಣವ, ವೀರಶೈವರಲ್ಲಿ ನಡೆದ ವಾದ ವಿವಾದಗಳು ಒಕ್ಕಲಿಗ ಜನಾಂಗದ ಮೇಲೆಯು ಪರಿಣಾಮ ಬೀರಿತು. ಅನೇಕ ಒಕ್ಕಲಿಗ ಗೌಡ ಕುಟುಂಬಗಳು ಶುದ್ಧ ಸಸ್ಯಾಹಾರಿಗಳಾಗಿ ಲಿಂಗಧಾರಣೆ ಮಾಡಿ ವೀರಶೈವರಾದರು. ಆದರೆ ಮಲೆನಾಡು ಶೈವ-ನಾಮಧಾರಿಗಳ ನಡುವೆ ಬಾಂಧವ್ಯ ಬೆಳೆದು ಬಂದಿದೆ ಅಂದರೂ ನಾಮಧಾರಿ ಪಂಗಡ ಅನಾದಿ ಎಂದು ಅನ್ನಿಸುತ್ತಿಲ್ಲ. ರಾಮಾನುಜರ ಪ್ರಭಾವ, ಹೊಯ್ಸಳರಸನ ಮತಾಂತರಗಳ ಕಾರಣ. ಮೇಲುಕೋಟೆ ಮತ್ತು ಬೇಲೂರು, ಶ್ರೀ ವೈಷ್ಣವ ಪ್ರಸಾರ ಕೇಂದ್ರಗಳಾಗಿ, ಶೈವ ಸಂಪ್ರದಾಯದ ಹಲವಾರು ಒಕ್ಕಲಿಗ ಕುಟುಂಬಗಳೂ ಮತಾಂತರವಾಗಿ ವೈಷ್ಣವ ನಾಮಧಾರಿ ಒಕ್ಕಲಿಗರಾಗಿದ್ದಾರೆ.[7] ಆದರೆ ಕೊಡಗಿನ ಗೌಡ ಜನಾಂಗವು ತುಳುನಾಡು, ಐಗೂರು ಎಲ್ಲಿಂದಲೆ ಬಂದಿರಲಿ ಮೊದಲಿನ ಸ್ಥಳೀಯ ಗೌಡ ಜನಾಂಗದೊಡನೆ, ಶೈವ-ವೈಷ್ಣವ-ಶಾಕ್ತ ಸಮನ್ವಯಾಚಾರ ಸಾಧಿಸಿಕೊಂಡು ಐತಿಹಾಸಿಕ ನಡೆಯನ್ನು ನಡೆದಿದೆ.

ಐವತ್ತೆರಡು ವರ್ಷಗಳ ದೀರ್ಘ ರಾಜ್ಯಭಾರ ನಡೆಸಿದ ದೊಡ್ಡ ವೀರಪ್ಪ ಒಡೆಯನ ಜನಪ್ರಿಯ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ. ೧೬೮೭-೧೭೩೬) ನೆರೆಯ ನಾಡುಗಳಿಂದಲೂ ಕೊಡಗಿಗೆ ಬಂದು ನೆಲೆಸಿರುವಂತಿದೆ.[8] ಹೀಗೆಯೇ ಲಿಂಗರಾಜ ಒಡೆಯನ ಕಾಲದಲ್ಲಿಯೂ (ಕ್ರಿ.ಶ. ೧೮೧೦-೨೦), ಐಗೂರು, ಸೂಳ್ಯ ಅಮರ ಸೀಮೆಯ ಪಾಳೆಗಾರರೊಡನಿದ್ದ ಆತನ ಬಾಂಧವ್ಯ ಹಾಗು ಸಂಪರ್ಕದ ಕಾರಣ, ಕೊಡಗಿನತ್ತ ಆ ನೆಲೆಗಳಿಂದ ಕನ್ನಡ, ತುಳು ಭಾಷಿಕ ಗೌಡ ಒಕ್ಕಲಿಗರು, ಅರೆಭಾಷೆಯ ಗೌಡರು, ವೀರಶೈವರು ಬಂದು ವೀರಪ್ಪ ಒಡೆಯನ ಕಾಲದಲ್ಲಿ ಪಡೆದ ಪದ್ಧತಿಯಂತೆ ಅವರು ಜಮ್ಮ, ಉಂಬಳಿ ಪಡೆದರು. ಪಶ್ಚಿಮ ಕೊಡಗಿನ ಭಾಗಗಳಲ್ಲಿನ ಒಕ್ಕಲಿಗ ಗೌಡರು ಈಗಿನ ಜಮ್ಮ ಕೊಡಗರೆ ಆಗಿದ್ದಾರೆ. ಹಾಗೆ ಬಂದವರು ತಮ್ಮ ನೆಲದ ಉಪಸಂಸ್ಕೃತಿಯನ್ನು ಕೊಡಗಿನಲ್ಲಿ ಅಳವಡಿಸಿ ಸುಗ್ಗಿಕಟ್ಟೆ, ಹಬ್ಬ, ಹರಿಸೇವೆ, ಗ್ರಾಮದೇವತಾಹಬ್ಬ, ಕೆಡ್ಡಾಸಹಬ್ಬ ಮುಂತಾದುವುಗಳನ್ನು ಆಚರಿಸತೊಡಗಿದರು ಇಲ್ಲಿನ ಸಂಸ್ಕೃತಿಗೂ ಸ್ಪಂದಿಸಿದರು, ಹಾಗು ತನ್ಮಯರಾದರು.

ಈ ವಿವೇಚನೆಯ ಬೆಳಕಿನಲ್ಲಿ ಹರಿಸೇವೆಯನ್ನು, ವಿವಿಧ ಮುಖಗಳಲ್ಲಿ ಬಳಸಿಕೊಂಡ ಜನಪದರನ್ನು ವಿಂಗಡಿಸಬಹುದು. ಹಾಗೆಯೇ ಅವರ ಸಾಮರಸ್ಯದ ಬದುಕನ್ನು ಕಾಣಬಹುದು. ಶುದ್ಧನಾಮಧಾರಿ ವೈಷ್ಣವ ಪರಂಪರೆಯನ್ನು ಅನುಸರಿಸಿದವರು. ದಾಸಯ್ಯನ ನೇತೃತ್ವದಲ್ಲಿ ಹರಿಸೇವೆಯನ್ನು ನಡೆಸುತ್ತಾರೆ.

---

7 ಮಾಕೋನಹಳ್ಳಿ ದೊಡ್ಡಮನೆ ದೊಡ್ಡಪ್ಪಗೌಡರು : ಅದೇ, ಪು. ೭-೮

8 ಅಮರಮಾಗಣೆ-ಸುಳ್ಯ ಕಡೆಯಿಂದ ತುಳುವ (!) ಹಾಗು ಇತರೆ ಗೌಡ ಒಕ್ಕಲುಗಳು ಕೊಡಗಿಗೆ ಬಂದಿರುವ ಸಾಧ್ಯತೆಯನ್ನು ದೊಡ್ಡವೀರಪ್ಪ ಒಡೆಯನ ಕಾಲದಿಂದ ಹೆಕ್ಕಿ ರಾಜೇಂದ್ರನಾಮೆ ತಿಳಿಸಿದೆ. ಅದು ಸಂಭಾವ್ಯವೇ ಆಗಿದೆ.

ಶುದ್ಧ ಶಿವೋಪಾಸಕ ಗೌಡ ಒಕ್ಕಲುಗಳು ಜೋಗಪ್ಪನ ನೇತೃತ್ವದಲ್ಲಿ ಭೈರವಸೇವೆ (ಕೆಂಚರಾಯ) ಯನ್ನು ನಡೆಸುತ್ತಾರೆ.

ಇವೆರಡರ ಮಿಶ್ರಣವಾಗಿ ಆಚರಣೆಗಳನ್ನು ಹಮ್ಮಿಕೊಂಡಿರುವ ಲಿಂಗಾಯಿತ ಒಕ್ಕಲುಗಳು ಇದ್ದರೂ ಅವು ವಿರಳ ಸಂಖ್ಯೆಯಲ್ಲಿವೆ. ಶೈವ ಪ್ರಾಬಲ್ಯದ ಓದೇಶ್ವರನ ಒಕ್ಕಲುಗಳು ವೀರಶೈವ ಜಂಗಮರ ನೇತೃತ್ವದಲ್ಲಿ ಸೇವೆಗಳನ್ನು ನಡೆಸುತ್ತಾರೆ. ಆದರೆ ಇಂದು ಈ ಎಲ್ಲವೂ ಸಮನ್ವಯವಾಗಿವೆ. ಕೊಡಗಿನಲ್ಲಿ ಇವೆಲ್ಲದರ ಸಮೂಹ ಸಮನ್ವಯ ಸಾಕ್ಷಿಗಳಾಗಿ ಜನಪದ ಆಚರಣೆಗಳಲ್ಲಿ ವೀರರ ಆರಾಧನೆಗಳನ್ನು ಮೇಳೈಸಿ ಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ○

# ಸ್ಥಳೀಯ ಸಂಸ್ಥೆಗಳ ಅಥವಾ ಪಂಚಾಯತಿಗಳ ಇತಿಹಾಸದಲ್ಲಿ ಮೈಲಿಗಲ್ಲುಗಳು

ಜಿ.ಎಸ್. ದೀಕ್ಷಿತ್*

**ಆಧುನಿಕ ಯುಗದಲ್ಲಿ ಪಂಚಾಯತಿಗಳು ಅವಶ್ಯವೆ :**

ನಮ್ಮಲ್ಲಿಯ ಪುರಾತನ ರಾಜ್ಯಗಳ ಕೇಂದ್ರ ಮತ್ತು ಪ್ರಾಂತೀಯ ಸರ್ಕಾರಗಳಲ್ಲಿ ಪ್ರಜಾಸತ್ತೆಯ ಅಂಶಗಳು ಇರಲಿಲ್ಲ. ಸ್ಥಳೀಯ ಸಂಸ್ಥೆಗಳಲ್ಲಿ ಈ ಅಂಶಗಳನ್ನು ಬಹಳ ಹಿಂದಿನಿಂದಲೂ ನಾವು ಗುರುತಿಸಬಹುದು. ಪ್ರಜಾಸತ್ತಾತ್ಮಕವಾದ ಈ ಸ್ಥಳೀಯ ಸಂಸ್ಥೆಗಳನ್ನು ಪಂಚಾಯತಿಗಳೆಂದು ಕರೆಯಬಹುದು.[1] ಸ್ವಾತಂತ್ರ್ಯದ ತರುವಾಯ ನಾವು ಬ್ರಿಟಿಷ್ ಪಾರ್ಲಿಮೆಂಟಿನ ಪದ್ಧತಿಯನ್ನು ಅನುಸರಿಸುತ್ತಿದ್ದೇವೆ. ಈ ಹೊಸ ಪದ್ಧತಿಯ ಜತೆಗೆ ಹಳೆಯ ಪಂಚಾಯತಿ ಪದ್ಧತಿ ಹೇಗೆ ಸರಿ ಹೋಗುತ್ತದೆಯೆಂದು ಕೆಲವರು ಶಂಕಿಸುತ್ತಾರೆ. ಕಾನ್‌ಸ್ಟಿಟುಯೆಂಟ್ ಅಸೆಂಬ್ಲಿಯಲ್ಲಿ ಈ ವಿಷಯದ ಚರ್ಚೆ ನಡೆದಾಗ ಆಧುನಿಕ ಸಂಸ್ಥೆಗಳ ಪುರಸ್ಕರ್ತರೊಬ್ಬರು ಈ ಎರಡು ಪದ್ಧತಿಗಳು ಜತೆ ಜತೆಗೆ ಹೇಗೆ ಇರುತ್ತವೆಯೆಂದರೆ ವಿಮಾನ ಯುಗದಲ್ಲಿ ಎತ್ತಿನ ಗಾಡಿಯನ್ನು ಅವಲಂಬಿಸಿದ ಹಾಗೆ ಎಂದು ಪಂಚಾಯತಿಗಳನ್ನು ಹಳಿದರು. ನಲ್ವತ್ತು ವರ್ಷಗಳ ನಂತರ ಪಾರ್ಲಿಮೆಂಟರಿ ಪದ್ಧತಿಯಲ್ಲಿಯ ದೋಷಗಳು ಎದ್ದು ಕಾಣಲಾರಂಭಿಸಿವೆ. ಲೋಕಸಭೆ ಮತ್ತು ವಿಧಾನ ಸಭೆಗಳಲ್ಲಿ ಗೊಂದಲಗಳು ದಿನದಮಾತಾಗಿವೆ. ಈ ಗೊಂದಲಗಳನ್ನು ನಿವಾರಿಸಲು, ಕೆಲವರು ಅಮೆರಿಕೆಯ ಅಧ್ಯಕ್ಷೀಯ ಪದ್ಧತಿಯನ್ನು ಅನುಸರಿಸಬೇಕೆನ್ನುತ್ತಾರೆ. ಅಮೆರಿಕೆಯಲ್ಲಿಯೇ ಅಧ್ಯಕ್ಷೀಯ ಪದ್ಧತಿಯ ಬಗ್ಗೆ ಅಸಂತೋಷವಿದ್ದು ಅಲ್ಲಿಯ ಸುಧಾರಕರು ಪಾರ್ಲಿಮೆಂಟರಿ ಪದ್ಧತಿಯನ್ನು ಅನುಸರಿಸಬೇಕೆನ್ನುತ್ತಾರೆನ್ನುವುದು ಇಲ್ಲಿಯ ಸುಧಾರಕರಿಗೆ ತಿಳಿಯದು.

ಬೇರೆ ದೇಶದಲ್ಲಿ ಹುಟ್ಟಿ ಬೆಳೆದ ಪದ್ಧತಿಗಳು ನಮ್ಮ ವಾತಾವರಣಕ್ಕೆ ಸರಿ ಹೋಗದಿರಬಹುದು. ನಮ್ಮ ದೇಶದಲ್ಲಿಯೇ ಹುಟ್ಟಿ ಬೆಳೆದು ಪ್ರೋತ್ಸಾಹವಿಲ್ಲದ ಪಂಚಾಯತಿ ಪದ್ಧತಿಯ ಅನುಸರಣೆಯು ನಮ್ಮ ಸ್ಥಳೀಯ ಸಂಸ್ಥೆಗಳ ಯಶಸ್ಸಿಗೆ ಕಾರಣವಾಗಬಹುದು. ಇಷ್ಟೆ ಅಲ್ಲ ಅದರ ತಿರುಳನ್ನು ವಿಧಾನಸಭೆ ಮತ್ತು ಲೋಕಸಭೆಗಳಲ್ಲಿಯೂ ಅನುಸರಿಸಬಹುದು. ಈ ದೃಷ್ಟಿಯಿಂದ ನಮ್ಮ ಪಂಚಾಯತಿಗಳು, ಹಿಂದೆ ಹೇಗೆ ಕೆಲಸ ಮಾಡಿದವು. ಬ್ರಿಟಿಷರ ಕಾಲದಲ್ಲಿ ಹೇಗೆ ನಶಿಸಿದವು, ಈಗ ಅವುಗಳ ಪುನಃ ಪ್ರತಿಷ್ಠಾಪನ ಅವಶ್ಯವೇ, ಸಾಧ್ಯವೇ, ಎನ್ನುವ ಸಮಸ್ಯೆಗಳನ್ನು ನೋಡೋಣ. ಅದಕ್ಕೆ ಪೀಠಿಕೆಯಾಗಿ ಅದರ ಇತಿಹಾಸದಲ್ಲಿಯ ಮೈಲುಗಲ್ಲುಗಳನ್ನು ನೋಡೋಣ.

---

1 ಪ್ರಜಾಸತ್ತಾತ್ಮಕ ಸ್ಥಳೀಯ ಸಂಸ್ಥೆ ಅನ್ನುವುದಕ್ಕಿಂತ ಅದೇ ಅರ್ಥದ ಪಂಚಾಯತಿ ಎನ್ನುವ ಶಬ್ದ ಎಲ್ಲರಿಗೂ ತಕ್ಷಣ ತಿಳಿಯುವುದರಿಂದ ಆ ಶಬ್ದವನ್ನು ಇಲ್ಲಿ ಉಪಯೋಗಿಸಿದ್ದೇನೆ. ಪಂಚಾಯತಿ ಎನ್ನುವ ಶಬ್ದ ೧೯ನೆ ಶತಮಾನದ ಬ್ರಿಟಿಷ್ ಬರವಣಿಗೆಯಲ್ಲಿ ವಿಪುಲವಾಗಿ ಬಳಸಲ್ಪಟ್ಟಿದೆ. ಅವರು ಅದನ್ನು ಸೃಷ್ಟಿಸಲಿಲ್ಲ. ಹಿಂದಿನಿಂದಲೂ ಅದು ಬಳಕೆಯಲ್ಲಿರಬೇಕು. ಎಷ್ಟು ಹಿಂದೆ ಎನ್ನುವುದನ್ನು ಪತ್ತೆ ಹಚ್ಚಬೇಕಾಗಿದೆ.

## ಪಂಚಾಯತಿಗಳ ಉದಯ :

ಕರ್ನಾಟಕ ಇತಿಹಾಸದಲ್ಲಿ, ಸ್ಥಳೀಯ ಸಂಸ್ಥೆಗಳ ಆಡಳಿತವು ಪ್ರಜೆಗಳ ಕೈಯಲ್ಲಿರುವುದನ್ನು ಮೊಟ್ಟ ಮೊದಲು ನಾವು ನೋಡುವುದು ಇತಿಹಾಸ ಪ್ರಸಿದ್ಧವಾದ ಬಳ್ಳಿಗಾವೆಯಲ್ಲಿ. ಅಲ್ಲಿಯ ಕ್ರಿ.ಶ. ೬೮೫ರ ಶಾಸನದ ಪ್ರಕಾರ ಆ ಊರಿನ ಆಡಳಿತವು ಪಾರ್ವರ (ಮಹಾಜನಗಳ) ಮತ್ತು ಪ್ರಜೆಗಳ ಕೈಯಲ್ಲಿತ್ತು.[2] ಎರಡನೆಯ ಉದಾಹರಣೆಯು ಬಹಳ ಪ್ರಸಿದ್ಧವಾದದು. ಆದರ ಉಲ್ಲೇಖವು ಚಾಲುಕ್ಯ ಯುವರಾಜ ವಿಕ್ರಮಾದಿತ್ಯನ ಲಕ್ಷ್ಮೇಶ್ವರದ ಶಾಸನದಲ್ಲಿರುವುದು.[3] ಇದರ ತೇದಿ ಸು. ಕ್ರಿ.ಶ. ೭೨೫. ಇದರ ಪ್ರಕಾರ ಯುವರಾಜ ವಿಕ್ರಮಾದಿತ್ಯನು ಪುಲಿಗೆರೆಯ (ಈಗಿನ ಲಕ್ಷ್ಮೇಶ್ವರ) ಮಹಾಜನರಿಗೆ, ನಗರಗಳಿಗೆ (ವರ್ತಕರ ಶ್ರೇಣಿಗೆ) ಮತ್ತು ೧೮ ಪ್ರಕೃತಿಗಳಿಗೆ (ಪ್ರಜೆಗಳಿಗೆ) ಆ ಊರಿನ ಆಡಳಿತವನ್ನು ಹೇಗೆ ನಡೆಯಿಸಬೇಕೆನ್ನುವ ಆದೇಶವನ್ನು ಕೊಡುತ್ತಾನೆ. ಇದರಿಂದ ರಾಜರು ಅಥವಾ ಅವರ ಪರವಾಗಿ ಯುವರಾಜರು ಬಾದಾಮಿ ಚಾಲುಕ್ಯರ ಕಾಲದಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಸ್ವಾಯತ್ತತೆಯ ಅಧಿಕಾರವನ್ನು ಕೊಡುತ್ತಿದ್ದುದು ಸ್ಪಷ್ಟವಾಗುತ್ತದೆ. ಕರ್ನಾಟಕದಲ್ಲಿ ಸ್ವಾಯತ್ತ ಸ್ಥಳೀಯ ಸಂಸ್ಥೆಗಳ ಅಥವಾ ಪಂಚಾಯತಿಗಳ ಇತಿಹಾಸದಲ್ಲಿ ಇದು ಮೊದಲ ಮೈಲುಗಲ್ಲು.

## ಪಂಚಾಯತಿಗಳ ಉಚ್ಛ್ರಾಯ ಕಾಲ :

ಕ್ರಿ.ಶ. ೭ನೆಯ ಶತಮಾನದ ಕೊನೆಗೆ ಮತ್ತು ೮ನೆಯ ಶತಮಾನದ ಆದಿ ಭಾಗದಲ್ಲಿ ಉದಯಿಸಿದ ಪಂಚಾಯತಿಗಳು ರಾಷ್ಟ್ರಕೂಟರ ಕಾಲದಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗುವವರೆಗು ಉಚ್ಛ್ರಾಯ ಸ್ಥಿತಿಯಲ್ಲಿದ್ದವೆಂದು ಹೇಳಬಹುದು. ಹಳ್ಳಿ, ನಗರ, ನಾಡು ಮತ್ತು ಮಹಾನಾಡುಗಳಲ್ಲಿ ಜನರು ತಮ್ಮ ಪ್ರತಿನಿಧಿಗಳ ಮುಖಾಂತರ ಆಡಳಿತವನ್ನು ನಡೆಯಿಸುತ್ತಿದ್ದರು. ಪ್ರಜಾಸತ್ತೆಯಲ್ಲಿ ಅನೇಕ ಪ್ರಯೋಗಗಳನ್ನು ಮಾಡಿದರು. ತಮ್ಮ ಊರುಗಳಲ್ಲಿ ಸಮರ್ಪಕವಾದ ಆಡಳಿತ ಪದ್ಧತಿಗಳನ್ನು ನಿರ್ಮಿಸುವುದರಲ್ಲಿ ವಿಶೇಷ ಪ್ರಯತ್ನಗಳನ್ನು ಮಾಡಿದರು. ಹೊನ್ನಾಳಿಯ ಹತ್ತಿರವಿರುವ ಕೊಳ್ಳಿಗನಗಟ್ಟವೆನ್ನುವ ಊರಿನ ಪ್ರಜೆಗಳು ತಮ್ಮ ಊರಿನ ಹೊಸ ಘಟನೆಯು ಹಿಮಾಚಲದವರೆಗು ಪ್ರಸಿದ್ಧವಾಗಬೇಕೆಂದು ಆಶಿಸಿದರು.[4] ಊರಿನ ಪ್ರಜಾ ಮುಖಂಡರನ್ನು ತಿಂಗಳಿಗೊಂದು ಸಲ ಬದಲಾಯಿಸುವ ಪ್ರಯೋಗವನ್ನು ಕೆಲವು ಊರುಗಳೇ ಮಾಡಿದವು.[5] ಹೀಗೆ ಅನೇಕ ಪ್ರಜಾಸತ್ತೆಯಲ್ಲಿ ಪ್ರಯೋಗಗಳನ್ನು ಮಾಡುತ್ತಿದ್ದ ಕಾಲವದು. ಪ್ರಜಾಸತ್ತಾತ್ಮಕ ಪ್ರಯೋಗಗಳು ವೈವಿಧ್ಯಮಯವಾಗಿದ್ದವಲ್ಲದೆ ದೀರ್ಘಕಾಲ ಅಸ್ತಿತ್ವದಲ್ಲಿದ್ದವು. ಬಾಗಲಿ (ಬಳ್ಳಾರಿ ಜಿಲ್ಲೆ) ಅಗ್ರಹಾರದ ಉದಾಹರಣೆಯನ್ನು ತೆಗೆದುಕೊಂಡರೆ ಈಗ ಲಭ್ಯವಿರುವ ಅಲ್ಲಿಯ ಅನೇಕ ಶಾಸನಗಳಿಂದ ಹತ್ತನೆ ಶತಮಾನದ ಆದಿಯಿಂದ ಹದಿನಾಲ್ಕನೆಯ ಶತಮಾನದ ಆದಿಯವರೆಗು ಈ ಅಗ್ರಹಾರವು ಅಲ್ಲಿಯ ಮಹಾಜನಗಳ ಹತೋಟಿಯಲ್ಲಿದುದ್ದು ಕಂಡು ಬರುತ್ತವೆ. ಅವರ ಜತೆಗೆ ಅಲ್ಲಿಯ ಸಂಸ್ಥೆಗಳಾದ ಅಯ್ಯಾಪೊಳೆ ಐನೂರ್ವರೆಂಬ ವ್ಯಾಪಾರಿಗಳ ಶ್ರೇಣಿಯು, ತಂಬುಲಿಗ ಸಾಸಿರ್ವರು, ಮಲೆಯಾಳಿ ವರ್ತಕರು ಸಹಕರಿಸಿ ಆ ಊರಿನಲ್ಲಿ ಅನೇಕ ದೇವಸ್ಥಾನಗಳನ್ನು, ಕೆರೆಗಳನ್ನು ಛತ್ರಗಳನ್ನು ಕಟ್ಟಿಸಿ ಬಾಗಲಿಯ ಪ್ರಸಿದ್ಧಿಯನ್ನು ಎಷ್ಟರ ಮಟ್ಟಿಗೆ ಹೆಚ್ಚಿಸಿದರೆಂದರೆ ಹೊಯ್ಸಳ ಎರಡನೆಯ ವೀರ ಬಲ್ಲಾಳನು ಅದನ್ನು ಭೇಟಿ ಮಾಡಿದನು.[6]

---

2 ಎ.ಕ. VII-, ಶಿಕಾರಿಪುರ ೧೫೮ ಕನ್ನಡ ಪಾಠ ಪುಟ. ೨೬೧

3 ಎ.ಇಂ. XIV ಪುಟಗಳು ೧೯೦ ಮತ್ತು ಮುಂದೆ

4 ಎ.ಕ. VII ಹೊನ್ನಾಳಿ ೯೧ ಶಾಸನದ ಸಾಲುಗಳು ೩೬-೪೦

5 ಈ ಊರುಗಳು ಯಾವೆಂದರೆ ಸೆಟ್ಟಿಕೆರೆ ಮತ್ತು ತುರವೇಕೆರೆ (ತುಮಕೂರು ಜಿಲ್ಲೆ)
ಎ.ಕ. XII, ಚಿಕ್ಕನಾಯಕನಹಳ್ಳಿ ೨ ಮತ್ತು ತಿಪಟೂರು ೨ ಮತ್ತು ೪, ಈ ತಿಂಗಳಿಗೊಬ್ಬ ಮುಖಂಡನಿಗೆ ಮಾಸವೆಗ್ಗಡೆಯೆನ್ನುತ್ತಿದ್ದರು.

6 ಪ್ರೊ| ಜಿ.ಎಸ್. ದೀಕ್ಷಿತ್ : ಲೋಕಲ್ ಸೆಲ್ಫ್ ಗವರ್ನ್‌ಮೆಂಟ್ ಇನ್ ಮೇಡಿವಲ್ ಕರ್ನಾಟಕ ಪು.೧೩೧-೮

**ವಿಜಯನಗರದ ಕಾಲ :**

ಸ್ಥಳೀಯ ಸಂಸ್ಥೆಗಳ ಪ್ರಜಾಸತ್ತಾತ್ಮಕ ಆಡಳಿತಕ್ಕೆ ಹಿಂದಿನ ರಾಜರುಗಳು ಕೊಟ್ಟ ಹಾಗೆ ವಿಜಯನಗರದ ರಾಜರು ಪ್ರೋತ್ಸಾಹ ಕೊಡಲಿಲ್ಲ. ಇದಕ್ಕೆ ಕಾರಣ ಆ ರಾಜರ ಲಕ್ಷ್ಯವೆಲ್ಲಾ ಯುದ್ಧದ ಮೇಲೆ ಕೇಂದ್ರಿಕೃತವಾಗಿತ್ತು: ಬಹುಮನಿಯುವರೊಡನೆ ಯುದ್ಧವು ಎಡೆಬಿಡದೆ ನಡೆದಿತ್ತು. ಆದರೆ ಈ ಕಾಲದಲ್ಲಿ ಸ್ಥಳೀಯ ಸಂಸ್ಥೆಗಳು ನಶಿಸಿ ಹೋಗಲಿಲ್ಲ. ಡಾ|| ಮಹಾಲಿಂಗಂ ಟಿ.ವಿ.[7] ಮತ್ತು ಡಾ|| ಎನ್. ವೆಂಕಟರಮಣಯ್ಯನವರು[8] ಇವು ಸಂಪೂರ್ಣವಾಗಿ ನಶಿಸಿ ಹೋದವೆಂದು ಹೇಳುತ್ತಾರೆ. ಹಾಗೆ ಆಗಲಿಲ್ಲವೆಂದು ಡಾ|| ಎ.ವಿ. ವೆಂಕಟರತ್ನಂ[9] ಅವರು ತೋರಿಸಿಕೊಟ್ಟಿದ್ದಾರೆ.

**ಪಾಳೆಯಗಾರರ ಕಾಲ :**

ವಿಜಯನಗರ ಕಾಲದ ನಂತರ ಕರ್ನಾಟಕದಲ್ಲಿ ಮೈಸೂರಿನ ಒಡೆಯರು, ಅವರ ನಂತರ, ಹೈದರ್, ಟಿಪ್ಪು, ಮತ್ತು ಅವರ ಜತೆಗೆ ಕೆಳದಿ ನಾಯಕರು ಮತ್ತು ಅನೇಕ ಪಾಳೆಯಗಾರರು ಆಳಿದರು. ಇದನ್ನು ಪಾಳೆಯಗಾರರ ಕಾಲವೆಂದು ಕರೆಯಬಹುದು. ಈ ಎರಡು ಶತಮಾನಗಳಲ್ಲಿ (೧೭-೧೮) ಸ್ಥಳೀಯ ಸಂಸ್ಥೆಗಳ ಆಗು ಹೋಗುಗಳ ಬಗ್ಗೆ ಸಾಕಷ್ಟು ಸಂಶೋಧನೆಯಾಗಿಲ್ಲ. ಆದರೂ ಅವು ಇದ್ದೆ ಇದ್ದವು. ಯಾಕೆಂದರೆ ಆ ಕಾಲದ ಕೊನೆಗೆ ಬಂದ ಬ್ರಿಟಿಷ್ ಬರೆಹಗಾರರು ಅವು ಉತ್ತಮ ಕೆಲಸವನ್ನು ಮಾಡುತ್ತಿದ್ದವೆಂದು ಮುಕ್ತ ಕಂಠದಿಂದ ಹೊಗಳಿದ್ದಾರೆ. ಮತ್ತು ಇದೇ ಕಾಲದಲ್ಲಿ ಅವು ಮಹಾರಾಷ್ಟ್ರದಲ್ಲಿ ಊರ್ಜಿತ ಸ್ಥಿತಿಯಲ್ಲಿದ್ದುದು ನಮ್ಮಲ್ಲಿ ಆಯಾಗಾರರ ಪದ್ಧತಿಯೆನ್ನುವುದಕ್ಕೆ ಅಲ್ಲಿ ಬಾರಾ ಬಲೂತಿ ಪದ್ಧತಿಯೆನ್ನುತ್ತಾರೆ. ಎರಡೂ ಪದ್ಧತಿಗಳು ಪ್ರಜಾಸತ್ತೆಯ ಅಂಶಗಳನ್ನು ಒಳಗೊಂಡಿದ್ದವು.

**ಬ್ರಿಟಿಷರ ಕಾಲದಲ್ಲಿ ಅವನತಿ :**

ಬ್ರಿಟಿಷ್ ಅಧಿಕಾರಿಗಳು ಮೊಟ್ಟ ಮೊದಲು ನಮ್ಮಲ್ಲಿಗೆ ಬಂದಾಗ ಇಲ್ಲಿಯ ಪಂಚಾಯತಿಗಳು ಕೆಲಸ ಮಾಡುವುದನ್ನು ನೋಡಿ ಚಕಿತರಾದರು. ಮನ್ರೊ, ಮೆಟಕಾರ್ಫ್ ಎಲ್‌ಫಿನ್‌ಸ್ಟನ್ ಮುಂತಾದವರು ಭಾರತದಾದ್ಯಂತ ಇದ್ದ ಈ ಸಂಸ್ಥೆಗಳನ್ನು ಸಣ್ಣ ರಾಜ್ಯಗಳೆಂದು ಬರೆದಿದ್ದಾರೆ. ೧೯ನೇ ಶತಮಾನದ ಆದಿ ಭಾಗದಲ್ಲಿ, ಬ್ರಿಟಿಷ್ ಅಧಿಕಾರಿಗಳು ಬರೆದ V Repoart ಎನ್ನುವ ವರದಿಯು ಪಂಚಾಯತಿಗಳ ಆಳ್ವಿಕೆಯನ್ನು ಈ ರೀತಿ ಶ್ಲಾಘಿಸುತ್ತದೆ. "ಅನಾದಿ ಕಾಲದಿಂದಲೂ ಹಸದಳವಾದ ಪಂಚಾಯತಿಗಳ ಆಡಳಿತದಲ್ಲಿ ಈ ದೇಶದ ಜನರು ವಾಸಿಸಿದ್ದಾರೆ. ಹಳ್ಳಿಗಳ ಮೇರೆಗಳು ಬದಲಾಯಿಸಿರುವುದು ಅಪರೂಪ. ಅನೇಕ ಸಂದರ್ಭಗಳಲ್ಲಿ ಯುದ್ಧ, ಬರಗಾಲ, ಬೇನೆ ಮುಂತಾದವುಗಳಿಂದ ಹಳ್ಳಿಗಳು ಹಾಳಾಗಿದ್ದರೂ, ಅವು ಪುನರುದ್ಧಾರವಾದಾಗ, ಅದೇ ಮನೆತನಗಳು ಅದೇ ಮೇರೆಗಳು, ಅವೇ ಆಸ್ಥೆಗಳು (Interest) ಶತಮಾನಗಳವರೆಗೆ ಮುಂದುವರೆದಿವೆ. ಆಳರಸರು ಬದಲಾದರೂ ಹಳ್ಳಿಗಳಲ್ಲಿ ಬದಲಾವಣೆ ಇಲ್ಲ."[10]

ಈ ವರದಿಯ ಮೇಲೆ ಆರ್.ಸಿ. ದತ್ತರು ಈ ರೀತಿ ಟೀಕೆಯನ್ನು ಮಾಡಿದ್ದಾರೆ. "ಈ ಬರೆವಣಿಗೆಯು ಬಹಳ ಮಹತ್ವದ್ದು. ಯಾಕೆಂದರೆ ಈ ಪಂಚಾಯತಿಗಳ ಬಗೆಗೆ ಬರೆದವರು ಪುರಾತನ ಹಿಂದೂ ಕಾಲದವರಲ್ಲ. ೧೮ನೆಯ ಶತಮಾನದ ಈಸ್ಟ್ ಇಂಡಿಯಾ ಕಂಪನಿಯ ನೌಕರರು ತಾವು ನೋಡಿದ್ದನ್ನು ಮತ್ತು ಕೇಳಿದ್ದನ್ನು ತಮ್ಮ ಅಧಿಕೃತ ಬರೆಹಗಳಲ್ಲಿ ಹೀಗೆ ಬರೆದಿದ್ದಾರೆ." ಆರ್.ಸಿ. ದತ್ತರು ಹೀಗೆ ಹೇಳುತ್ತಾರೆ. "ಬ್ರಿಟಿಷ್ ಆಳರಸರು ಈ ಪಂಚಾಯತಿಗಳನ್ನು ಪೋಷಿಸಿ ಮುಂದು

---

7 ಟಿ.ವಿ. ಮಹಾಲಿಂಗಂ : ಸೌತ್ ಇಂಡಿಯನ್ ಪಾಲಿಟಿ ಪುಟ ೩೭೧-೨

8 ಎನ್. ವೆಂಕಟರಮಣಯ್ಯ : ಸ್ಟಡೀಸ್ ಇನ್ ದಿ ಹಿಸ್ಟರಿ ಆಫ್ ದಿ ಥರ್ಡ್ ಡೈನಾಸ್ಟಿ ಆಫ್ ವಿಜಯನಗರ ಪು. ೧೫೯

9 ಎ.ವಿ. ವೆಂಕಟರತ್ನಂ : ಲೋಕಲ್ ಗವರ್ನಮೆಂಟ್ ಇನ್ ವಿ ವಿಜಯನಗರ್ ಎಂಪೈರ್

10 ಆರ್.ಸಿ. ದತ್ : ದಿ ಎಕನಾಮಿಕ್ ಹಿಸ್ಟರಿ ಆಫ್ ಇಂಡಿಯಾ ಪು. ೮೦

ವರಿಸಿಕೊಂಡು ಹೋಗಿದ್ದರೆ ದೇಶಕ್ಕೆ ಒಳಿತಾಗು ತ್ತಿತ್ತು.[11] ಆದರೆ ಎರಡು ಕಾರಣಗಳು ಬ್ರಿಟಿಷರ ಆಳ್ವಿಕೆಯ ಪ್ರಾರಂಭದಿಂದ ಈ ಪಂಚಾಯತಿಗಳನ್ನು ಕ್ಷೀಣಗೊಳಿಸಿದವು. ಅವು ಯಾವೆಂದರೆ :

೧. ಜನರಿಂದ ಆದಷ್ಟು ಹೆಚ್ಚು ಕಂದಾಯವನ್ನು ಪಡೆಯಬೇಕೆಂಬ ಅವರ ದುರಾಸೆಯಿಂದ, ಪ್ರತಿಯೊಬ್ಬ ರೈತನೊಂದಿಗೆ ನೇರವಾಗಿ ಕರಾರು ಮಾಡಿಕೊಂಡರು. ಮೊದಲು ಪಟೇಲನ ಮುಖಾಂತರ ಹಳ್ಳಿಯ ಒಟ್ಟು ಕಂದಾಯವನ್ನು ವಸೂಲು ಮಾಡುತ್ತಿದ್ದರು ಇದರಿಂದ ಹಳ್ಳಿಯ ಒಗ್ಗಟ್ಟು, ಪಟೇಲನ ಮುಖಂಡತ್ವ ಅಬಾಧಿತವಾಗಿತ್ತು.

೨. ಎಲ್ಲಾ ರಾಜಕೀಯ ಮತ್ತು ನ್ಯಾಯದಾನ ಪದ್ಧತಿಗೆ ಸಂಬಂಧಪಟ್ಟ ಅಧಿಕಾರವನ್ನು ತಮ್ಮಲ್ಲಿ ಕೇಂದ್ರೀಕೃತ ಮಾಡಿಕೊಂಡರು. ಮೊದಲು ಪಟೇಲ ಮತ್ತು ಪಂಚಾಯತಿಗಳಲ್ಲಿ ಈ ಅಧಿಕಾರ ವಿರುತ್ತಿತ್ತು.

ಇವೆರಡು ಕಾರಣಗಳಿಂದ ಪಂಚಾಯತಿಗಳ ಸ್ವಾಯತ್ತತೆಗೆ, ಕೊಡಲಿ ಪೆಟ್ಟು ಬಿದ್ದು ಅವು ನಿರ್ವಿಣ್ಣವಾದವು.

ಕೆರೆಗಳ ಇತಿಹಾಸದಿಂದ ಈ ಹೊಸ ಪರಿಸ್ಥಿತಿಯನ್ನು ನಾವು ಅರ್ಥ ಮಾಡಿಕೊಳ್ಳಬಹುದು. ಪಟೇಲನ ಮುಂದಾಳತ್ವದಲ್ಲಿ ಪಂಚಾಯತಿಗಳು ಊರ್ಜಿತ ಸ್ಥಿತಿಯಲ್ಲಿರಬೇಕಾದರೆ, ಪ್ರತಿಯೊಂದು ಹಳ್ಳಿಗಳಲ್ಲಿರುವ ಕೆರೆಗಳನ್ನು ಬೇಸಗೆಯಲ್ಲಿ ಹೂಳು ತೆಗೆದು ಅವುಗಳನ್ನು ಸುಸ್ಥಿತಿಯಲ್ಲಿಟ್ಟುಕೊಂಡದ್ದರಿಂದ ಬೇಸಾಯಕ್ಕೆ, ಜನರಿಗೆ ಜಾನುವಾರುಗಳಿಗೆ, ನೀರಿನ ಪೂರೈಕೆ ಆಗುತ್ತಿತ್ತು. ಹೂಳು ತೆಗೆಯುವ ಖರ್ಚನ್ನು ಜನರು ವಹಿಸಿಕೊಳ್ಳುತ್ತಿದ್ದರು. ಪ್ರತಿಯೊಂದು ಹಳ್ಳಿಯಲ್ಲಿಯೂ ಇದ್ದ ಒಡ್ಡರಿಂದ ಈ ಕೆಲಸವನ್ನು ಮಾಡಿಸುತ್ತಿದ್ದರು. ಬ್ರಿಟಿಷ್ ಸರ್ಕಾರವು ಕಂದಾಯವನ್ನು ವಿಪರೀತ ಹೆಚ್ಚು ಮಾಡಿದ್ದರಿಂದ, ಜನರಲ್ಲಿ ಕೆರೆಗಳ ದುರಸ್ತಿಗೆ ಕೊಡುವ ಹಣ ಉಳಿಯಲಿಲ್ಲ. ಮತ್ತು ಅದೇ ಸರ್ಕಾರವು ಪ್ರತಿಯೊಬ್ಬ ರೈತನೊಡನೆ ಕಂದಾಯದ ಬಗ್ಗೆ ಕರಾರು ಮಾಡಿಕೊಂಡಿದ್ದರಿಂದ, ಊರಿನ ಒಗ್ಗಟ್ಟು ಮಾಯವಾಯಿತು. ಪಟೇಲನ ಅಧಿಕಾರ ಕಡಿಮೆಯಾಯಿತು. ಕೆರೆಗಳು ಹಾಳಾದವು. ಹಳ್ಳಿಗಳಲ್ಲಿ ಬಡತನ ಹೆಚ್ಚಾಯಿತು.

## ಸ್ವಾತಂತ್ರ್ಯದ ನಂತರ

ಸ್ವಾತಂತ್ರ್ಯ ಬಂದ ನಂತರವೂ ಪಂಚಾಯತಿಗಳ ಬಗೆಗೆ ಸರ್ಕಾರದ ಧೋರಣೆ ಬದಲಾಗಲಿಲ್ಲ. ತೀರ ಇತ್ತೀಚೆಗೆ ಆಡಳಿತದಲ್ಲಿ ವಿಕೇಂದ್ರೀಕರಣ ಅವಶ್ಯವೆಂದು ಎಲ್ಲರೂ ಮನಗಂಡಿದ್ದಾರೆ. ಆದರೆ ಜಿಲ್ಲಾ ಪರಿಷತ್ತು ಮತ್ತು ಮಂಡಳ ಪರಿಷತ್ತುಗಳಲ್ಲಿ ಲೋಕಸಭೆ ಮತ್ತು ವಿಧಾನ ಸಭೆಗಳಲ್ಲಿರುವ ಹಾಗೆ ಪಾರ್ಟಿ ಪದ್ಧತಿ, ಬಹುಮತ ಪದ್ಧತಿಗಳು ಜಾರಿಯಲ್ಲಿ ಇವು ಇದ್ದರೆ ಪಂಚಾಯತಿಗಳಿಗೆ ಎಷ್ಟು ಅಧಿಕಾರ ಕೊಟ್ಟರೂ, ಎಷ್ಟು ಹಣ ಕೊಟ್ಟರೂ, ಅವು ಹಿಂದಿನ ಪಂಚಾಯತಿಗಳ ಹಾಗೆ ಸರಾಗವಾಗಿ ಕೆಲಸ ಮಾಡುವುದಿಲ್ಲ. ಹಾಗೆ ಆಗಬೇಕಾದರೆ ಹಳ್ಳಿಯ ಜೀವನದಲ್ಲಿ ಮೂಲಭೂತ ಮಾರ್ಪಾಡುಗಳು ಅವಶ್ಯ. ಹಿಂದೆ ಇದ್ದ ಹಾಗೆ, ಕೆರೆಗಳನ್ನು ದುರಸ್ತಿ ಮಾಡಬೇಕು. ಹಳ್ಳಿಯ ಜನರಿಗೆ ದನ ಗೋಮಾಳಗಳನ್ನು ಅವರ ಹತೋಟಿಗೆ ಬಿಡಬೇಕು. ಎಲ್ಲಕ್ಕಿಂತ ಹೆಚ್ಚಾಗಿ ಹಿಂದೆ ಇದ್ದಹಾಗೆ ಬಹುಮತ ಪದ್ಧತಿ ಪಾರ್ಟಿ ಬದಲು ಒಮ್ಮತ ಪದ್ಧತಿ, ಪಂಚಾಯತಿಗಳಲ್ಲಿ ಊರ ಹಿರಿಯರ ನೇತೃತ್ವದಲ್ಲಿ ಒಗ್ಗಟ್ಟು, ಇವು ಅತ್ಯವಶ್ಯ. ○

---

11 ಅದೇ ಪು. ೮೧

# ಕದಂಬಳಿಗೆ ಸಾಸಿರನಾಡಿನ ಭೌಗೋಳಿಕ ವ್ಯಾಪ್ತಿ ಮತ್ತು ಪ್ರಾಚೀನತೆ

ಪಿ.ವಿ. ಕೃಷ್ಣಮೂರ್ತಿ

ವಿಸ್ತಾರವಾದ ಭೂಪ್ರದೇಶವನ್ನು ಆಡಳಿತದ ಅನುಕೂಲಕ್ಕಾಗಿ ಅನೇಕ ವಿಭಾಗ ಮತ್ತು ಉಪವಿಭಾಗ ಗಳಾಗಿ ವಿಂಗಡಿಸಿಕೊಳ್ಳುವುದು ಪ್ರಾಚೀನ ಕಾಲದಿಂದಲೂ ಪ್ರಚಲಿತವಿರುವ ಪದ್ಧತಿ. ಇಂತಹ ವಿಭಾಗಗಳಿಗೆ ಹೆಸರಿನ ಮುಂದೆ ಅಂಕಿಯನ್ನು ಬಳಸುವುದು ಪ್ರಾಚೀನ ಕರ್ನಾಟಕದ ವೈಶಿಷ್ಟ್ಯವಾಗಿತ್ತು. ಈ ಅಂಕೆ ಆಯಾ ಪ್ರಾಂತಗಳಲ್ಲಿಯ ಗ್ರಾಮ ಸಂಖ್ಯೆಯನ್ನು ಸೂಚಿಸುವುದೆಂದು ಈಗ ನಿರ್ಣಯಕ್ಕೆ ಬರಲಾಗಿದೆ. ಕದಂಬಳಿಗೆ-೧೦೦೦ ಎಂಬುದು ಅಂತಹ ಒಂದು ಪ್ರಾದೇಶಿಕ ವಿಭಾಗ.

ರಾಷ್ಟ್ರಕೂಟರ ಕನ್ನರದೇವನ ಕ್ರಿ.ಶ. ೯೩೦ರ ನಂದಿ ಗುಡಿಗ್ರಾಮದ ಕೇಟ್ಟಿಗ್ಗಂಟೆ ಸ್ಮಾರಕ ಶಿಲಾಶಾಸನದಲ್ಲಿ ಕಂಡುಬರುವ 'ಕದಂಬಳಿಗೆ ಸಾಯಿರ' ಎಂಬ ಉಲ್ಲೇಖದಿಂದ ಪ್ರಾರಂಭಿಸಿ, ಕದಂಬಳಿಗೆ ನಾಡು[2] ಕದಂಬಳಿಗೆ ನಾಡ ಸಾಯಿರ[3] ಕಡಂಬಳಿಗೆ ಸಾಹಿರ,[4] ಕದಂಬಟಿಂಗೆ ಸಾಸಿರ[5], ಕದಂಬವಾಡಿ ನಾಡು,[6] ಸಾಸಿರ[7] ಸಾಸಿರನಾಡು[8], ಕಡಂಬ ದೇಶ ಸಹಸ್ರ,[9] ಕದಂಬಳಿಕೆ ಸಾಯಿರ[9A] ಎಂಬ ಕಲ್ಯಾಣದ ಚಾಲುಕ್ಯರ ಕ್ರಿ.ಶ. ೧೧೨೩ರ ಯಾಳ ಹೊಳೆಯ ಶಾಸನದ ಕಾಲದ ವರೆಗೆ ಉಕ್ತನಾಗಿರುವ ಈ ನಾಡಿನ ಉಲ್ಲೇಖಗಳು ಗಮನ ಸೆಳೆಯುತ್ತವೆ. ಒಟ್ಟಾರೆ ಕ್ರಿ.ಶ. ಒಂಬತ್ತನೆಯ ಶತಮಾನದ ಉತ್ತರಾರ್ಧದಿಂದ ಹನ್ನೆರಡನೆಯ ಶತಮಾನದ ಪೂರ್ವಾರ್ಧದವರೆಗೆ, ಅಂದರೆ ಸುಮಾರು ೨೫೦ ವರ್ಷಗಳ ಕಾಲ ಈ ಪ್ರಾದೇಶಿಕ ವಿಭಾಗ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಹು ಖ್ಯಾತಿಯನ್ನು ಪಡೆದಿದ್ದಿತು.

ರಾಷ್ಟ್ರಕೂಟರ ಆಳ್ವಿಕೆಯ ಕಾಲದಲ್ಲಿ 'ಕದಂಬಳಿಗೆ ಸಾವಿರ' ಎಂಬ ಉಪವಿಭಾಗ ಅವರ ಯಾವ ಪ್ರಾಂತ್ಯದಲ್ಲಿ ಅಂತರ್ಗತನಾಗಿದ್ದಿತೋ ತಿಳಿದು ಬಂದಿಲ್ಲ. ಅಷ್ಟೇ ಅಲ್ಲ

---

1 ಎ.ಕ. ಸಂಪುಟ ೧೧, ದಾವಣಗೆರೆ ೧೯, ನಂದಿಗುಡಿ

2 ಅದೇ, ಚಿತ್ರದುರ್ಗ ೨೬. ಗೊಡಬನಾಳು, ಕ್ರಿ.ಶ. ೯೪೬ ?

3 ಅದೇ, ಹೊಳಲಕೆರೆ ೩೦, ಆಡನೂರು, ಕ್ರಿ.ಶ. ೯೬೪

4 ಅದೇ, ೨೩, ಗುಂಡೇರಿ ಕ್ರಿ.ಶ. ೯೬೮

5 ಅದೇ, ದಾವಣಗೆರೆ ೧೯, ಆವರಗೆರೆ, ಕ್ರಿ.ಶ. ೧೦೪೩

6 ಸೌ. ಇ. ಇನ್ಸ್ ಸಂಪುಟ ೯, ಭಾಗ ೧, ಸಂಖ್ಯೆ ೧೨೬ ಉಚ್ಚಂಗಿದುರ್ಗ ಕ್ರಿ.ಶ. ೧೦೬೪

7 ಎ.ಕ. ೧೧, ದಾವಣಗೆರೆ ೧೧, ಬೇತೂರು ಕ್ರಿ.ಶ. ೧೦೬೬

8 ಅದೇ, ದಾವಣಗೆರೆ, ೧೩೪, ಹಿರೇತೊಗಲೇರಿ, ಕ್ರಿ.ಶ, ೧೧೦೮ ?

9 ಅದೇ, ದಾಮಣಗೆರೆ ೧, ಕ್ರಿ.ಶ. ೧೧೨೩

9A ಜಯಮ್ಮ ಯಾಳಹೊಳೆಯ ದಾನಶಾಸನ, ಹರತಿಸಿರಿ (ಹೆಚ್.ವಿ. ವೀರನಾಯಕ 'ಹರತಿ' ನೆನಪಿನ ಸಂಪುಟ) ಹರ್ತಿಕೋಟೆ, ೧೯೮೭, ಪು-೬೯೧

ಅವರ ಕಾಲದ ಶಾಸನಗಳಲ್ಲಿ ಈ ಕದಂಬಳಿಗೆ-೧೦೦೦ದಲ್ಲಿ ಅಂತರ್ಗತವಾಗಿದ್ದ ಕೂರವಾದಿ-೩೦೦ರ ಹೊರತು ಬೇರೆ ಯಾವ ಉಪವಿಭಾಗಗಳೂ ಶಾಸನೋಕ್ತವಾಗಿಲ್ಲ.[10] ಆದರೆ ಈ ಕದಂಬಳಿಗೆ ನಾಡಿನಲ್ಲಿ ಅಂತರ್ಗತವಾಗಿದ್ದ ಅನೇಕ ಗ್ರಾಮಗಳ ಉಲ್ಲೇಖಗಳು ಮಾತ್ರ ಕಂಡು ಬರುತ್ತವೆ.

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಅವರ ಸಾಮ್ರಾಜ್ಯದ ದಕ್ಷಿಣಭಾಗದ ಅಂದರೆ, ತುಂಗಭದ್ರಾ ನದಿಯ ಆಸುಪಾಸಿನ ಭಾಗಗಳು, ನೊಳಂಬವಾಡಿ ಮೂವತ್ತಿಚ್ಛಾರ್ಸಿರವೆಂದು ಹೆಸರಾಗಿದ್ದಿತು.[11] ಈ ನೊಳಂಬವಾಡಿ ಮೂವತ್ತಿಚ್ಛಾರ್ಸಿರದ ಒಂದು ಪ್ರಮುಖ ಉಪವಿಭಾಗವೇ 'ಕದಂಬಳಿಗೆ ಸಾಯಿರ' ಎಂಬುದು.

ಈ ಕದಂಬಳಿಗೆ ಸಾಯಿರ ಪ್ರದೇಶದಲ್ಲಿ ಒಂದು ಸಾವಿರ ಗ್ರಾಮಗಳು ಅಂತರ್ಗತವಾಗಿದ್ದವು. ಕುಕ್ಕವಾಡಿ-೩೦೦, ಕೂರವಾಡಿ-೩೦೦ ಎಂಬ ದೊಡ್ಡ ಉಪ ಭಾಗಗಳು, ಕುಂದರ-೭೦, ಭ್ರಾಂತಿ-೩೦ ತಿಕಾಡು-೩೦, ಹೊನ್ನುಗಂದ-೩೦, ಬೆಲ್ತುರು-೧೨, ಅತ್ತಿಗೆರೆ-೧೨, ಪದಡೆ-೧೨ ಮುರ್ಚನೂರು-೧೨ ಮುಂತಾದ ಅನೇಕ ಉಪವಿಭಾಗಗಳು ಕದಂಬಳಿಗೆ ಸಾವಿರ ಪ್ರದೇಶಕ್ಕೆ ಸೇರಿದ್ದವು.

ಕದಂಬಳಿಗೆ ನಾಡಿನ ಪೂರ್ವಕ್ಕೆ ಹಡುವಗೆರೆ-500, ಬಲ್ಲಕುಂದೆ-೩೦೦, ಎಂಬ ಪ್ರದೇಶಗಳು, ಪಶ್ಚಿಮಕ್ಕೆ ತುಂಗಭದ್ರಾನದಿ-ಆಚಿನ ಭಾಗ ಸಾಂತಳಿಗೆ-೧೦೦೦ ಪ್ರದೇಶ, ಉತ್ತರಕ್ಕೆ (ಕದಂಬವಾಡಿ-ನಾಡ ಭಾಗವೇ ಆದ ?) ಕೋಳಿ-೫೦೦, ದಕ್ಷಿಣಕ್ಕೆ ಮಂಡಲಿ-೧೦೦೦ ಮತ್ತು ಗಂಗವಾಡಿ ಪ್ರಾಂತ್ಯಕ್ಕೆ ಸೇರಿದ ನಿರ್ಗುಂದ-೩೦೦ ಎಂಬ ಪ್ರದೇಶಗಳು ಮೇರೆಗಳಾಗಿದ್ದವು.

ರಾಷ್ಟ್ರಕೂಟರ ಕಾಲದಲ್ಲಿ ಕದಂಬಳಿಗೆ ಸಾಯಿರ ಪ್ರದೇಶವನ್ನು ಮಹಾಸಾಮಂತಾಧಿಪತಿಗಳಾದ ಕನ್ನಯ್ಯ ಅಥವಾ ಕನ್ನರಸ (ಕ್ರಿ.ಶ. ೮೮೯-೯೭೪),* ಸೂದ್ರಕಯ್ಯ (ಕ್ರಿ.ಶ. ೯೭೫-೭೮), ಪಡಿಯಂಕದೇವ (ಕ್ರಿ.ಶ. ೯೮೦), ಮುಳ್ಗುಂದ ಸಿಂದ ಶ್ರೀಮತ್ ಜಾತರಸರ್ (ಕಿ.ಶ. ೯೯೨) ಮುಂತಾದವರು ಆಳಿರುತ್ತಾರೆ. ಹಾಗೆಯೇ ಕಲ್ಯಾಣದ ಚಾಲುಕ್ಯರ ಪ್ರಾರಂಭದಕಾಲದಲ್ಲಿ ನೊಳಂಬ ವಂಶೀಯನಾದ ಇಮ್ಮಡಿ ನೊಳಂಬ ಪೆರ್ಮಾಡಿ ದೇವ (ಕ್ರಿ.ಶ. ೧೦೩೫-೩೭) ಆ ನಂತರದಲ್ಲಿ ಗಂಗ ವಂಶಿಯರಾದ ಗಂಗ ಪೆರ್ಮಾನಡಿ (ಕ್ರಿ.ಶ. ೧೦೪೦), ಗಂಗಪೆರ್ಮಾಡಿ ಬ್ರಹ್ಮಾದಿ ರಾಜ (ಕ್ರಿ.ಶ. ೧೦೫೮) ಮುಂತಾದವರು ಅವರ ಆಶ್ರಿತರಾಗಿ ಕದಂಬಳಿಗೆ ಮತ್ತು ಸುತ್ತಮುತ್ತಲ ಅನೇಕ ಪ್ರದೇಶಗಳನ್ನು ಆಳಿರುವುದು ಕಂಡುಬರುತ್ತದೆ. ಜೊತೆಗೆ ಕಲ್ಯಾಣದ ಚಾಲುಕ್ಯದ ರಾಜಕುಮಾರರು ಕೂಡ ಈ ಪ್ರದೇಶದ ಮೇಲೆ ತಮ್ಮ ಆಳಿಕೆಯನ್ನು

---

10 ಅದೇ, ಹೊಳಲಕೆರೆ ೨೩, ಗುಂಡೇರಿ, ಕ್ರಿ.ಶ. ೯೭೮

11 ನೊಳಂಬರು ಪ್ರಾರಂಭ ದಿಸೆಯಲ್ಲಿ ನೊಳಮ್ಬಳಿಗೆ ಸಾಸಿರ ಎಂಬ ಪ್ರದೇಶವನ್ನು ಆಳುತ್ತಿದ್ದು. ಕಾಲಕ್ರಮದಲ್ಲಿ ತಮ್ಮ ಪ್ರಭಾವವನ್ನು ಹೆಚ್ಚಿಸಿಕೊಂಡು ಸ್ವತಂತ್ರವಾಗಿ ನೊಳಂಬವಾಡಿ ಎಂಬ ವಿಸ್ತಾರವಾದ ಪ್ರದೇಶಕ್ಕೆ ಅಧಿಪತಿಗಳಾದರು. ಚಿತ್ರದುರ್ಗದ ಪೂರ್ವಕ್ಕಿರುವ ಆಂಧ್ರದ ಮಡಕಶಿರಾ ತಾಲೂಕಿನ ಹೇಮಾವತಿ/ಹೆಂಜೇರು ಅವರ ರಾಜಧಾನಿ. ನೊಳಂವಾಡಿ ಪ್ರಾಂತ್ಯವು ಕರ್ನಾಟಕದ ಚಿತ್ರದುರ್ಗ, ತುಮಕೂರು, ಕೋಲಾರ, ಬೆಂಗಳೂರು, ಹಾಸನ, ಬಳ್ಳಾರಿ, ಆಂಧ್ರದ ಅನಂತಪುರ, ಚಿತ್ತೂರು, ತಮಿಳುನಾಡಿನ ಉತ್ತರ ಆರ್ಕಾಟು ಮತ್ತು ಧರ್ಮಪುರಿ ಜಿಲ್ಲೆಗಳ ಭಾಗಗಳನ್ನು ಒಳಗೊಂಡಿದ್ದಿತು. ಕ್ರಿ.ಶ. ೮ನೇ ಶತಮಾನದಿಂದ ೧೧ನೇ ಶತಮಾನದ ಆದಿಭಾಗದವರೆಗೆ ಆಳಿದ ಇವರ ಶಾಸನಗಳಲ್ಲಿ 'ನೊಳಂಬವಾಡಿ-೩೨,೦೦೦' ಎಂಬ ಪ್ರಯೋಗ ಒಂದು ಬಾರಿ ಮಾತ್ರ ಕಂಡುಬಂದಿದೆ. ೧೧ನೇ ಶತಮಾನದ ನಂತರದಲ್ಲಿ ನೊಳಂಬವಾಡಿ ಪ್ರದೇಶವು ಚೋಳ, ಕಲ್ಯಾಣದ ಚಾಲುಕ್ಯ ಮತ್ತು ನಂತರ ಹೊಯ್ಸಳರಲ್ಲಿ ಹರಿದು ಹಂಚಿ ಹೋಯಿತು. ಕಲ್ಯಾಣದ ಚಾಲುಕ್ಯರ ವಶಕ್ಕೆ ಬಂದ ನೊಳಂಬನಾಡಿಯ ಸ್ವಲ್ಪ ಭಾಗವನ್ನೇ ಶಾಸನಗಳಲ್ಲಿ ನೊಳಂಬನಾಡಿ ೩೨,೦೦೦ ಎಂದು ವಿಶೇಷವಾಗಿ ಉಲ್ಲೇಖಿಸಲ್ಪಟ್ಟಿದೆ.

* ಆವರಣದಲ್ಲಿರುವ ತೇದಿ ವಿವರವು ; ಈ ಪ್ರದೇಶದಲ್ಲಿ ದೊರೆತ ಶಾಸನದ (ಅವರ ಆಳ್ವಿಕೆಯ ಪ್ರಾಚೀನ ಕಾಲವನ್ನು ಸೂಚಿಸುತ್ತದೆ.

ನಡೆಯಿಸಿರುತ್ತಾರೆ. ಕ್ರಿ.ಶ. ೧೦೬೨ರ ಶಾಸನವೊಂದರಲ್ಲಿ ರಾಜಕುಮಾರ ವಿಜಯಾದಿತ್ಯನ ಉಲ್ಲೇಖ ಬಂದಿದ್ದು, ಅವನನ್ನು ಮಾಂಡಲಿಕ ಮಕುಟ ಚೂಡಾಮಣಿ ಎಂದು ವರ್ಣಿಸಿದೆ. ಕ್ರಿ.ಶ. ೧೦೬೫ರ ಇನ್ನೊಂದು ಶಾಸನವು ರಾಜಕುಮಾರ ವಿಷ್ಣುವರ್ಧನ ಮಹಾರಾಜನ ಉಲ್ಲೇಖವನ್ನು ಮಾಡುತ್ತದೆ. ಕ್ರಿ.ಶ. ಸುಮಾರು ೧೧೦೦ರ ನಂತರದಲ್ಲಿಯಷ್ಟೇ ಮಾಂಡಲಿಕರಾದ ಪಾಂಡ್ಯ ವಂಶೀಯರ ಆಳಿಕೆ ಈ ಪ್ರದೇಶದ ಮೇಲೆ ಪ್ರಾರಂಭವಾಯಿತು.

ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಕದಂಬಗೆರೆ ಎಂಬ ಸ್ಥಳವು ಪ್ರಾಯಶಃ ಕದಂಬಳಿಗೆ ಸಾವಿರ ಪ್ರದೇಶದ ಕೇಂದ್ರ ಸ್ಥಳವಾಗಿದ್ದಿರಬೇಕೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುತ್ತಾರೆ.[12] ಕ್ರಿ.ಶ. ೧೦೬೪ರ ಉಚ್ಚಂಗಿದುರ್ಗದ ಶಾಸನವೊಂದು ; ಉಚ್ಚಂಗಿ ಪರ್ವತವು ಕದಂಬವಾಡಿ ನಾಡ ಮಧ್ಯದಲ್ಲಿ ಮೇರುವಿನಂತಿದ್ದಿತೆಂದು, ಆ ಪರ್ವತಕ್ಕೆ ಒಂದೊಂದು ಯುಗದಲ್ಲೂ ಒಂದೊಂದು ಹೆಸರಿದ್ದಿತೆಂದು ವರ್ಣಿಸುತ್ತದೆ.[13] ಕದಂಬ+ಅಳಿಕೆ=ಕದಂಬಳಿಕೆ>ಕದಂಬಳಿಗೆ ಎಂಬ ರೂಪ ಪಡೆದು, ಕದಂಬರ ಪ್ರಾರಂಭದ ಆಳಿಕೆಯ ಕಾಲದಲ್ಲಿನ ಭೂ ಸ್ಥಿತಿಯ ಸೂಚನೆಯನ್ನು ಇದು ನೀಡುವಂತೆ ತೋರುತ್ತದೆ. (ನೊಳಂಬರ ನೊಳಂಬಳಿಗೆ ಇದ್ದಂತೆ). ಇಲ್ಲಿ ಅಳಿಕೆ ಎಂಬ ಉತ್ತರ ಪದ, ಒಂದಾನೊಂದು ಕಾಲದಲ್ಲಿ ಗುಡ್ಡಗಾಡುಗಳಿಂದ ಕೂಡಿದ ನಿರ್ಜನ ಅಥವಾ ವಿರಳಜನ ಪ್ರದೇಶವಾಗಿದ್ದಿತು ಎಂದು ವಿದ್ವಾಂಸರು ಅಭಿಪ್ರಾಯ ಗಮನಾರ್ಹ.*

ಕಲ್ಯಾಣದ ಚಾಲುಕ್ಯರ ಕಾಲದ ಶಾಸನಗಳಲ್ಲಿ ಕದಂಬಳಿಗೆ ೧೦೦೦ಕ್ಕೆ ಸೇರಿದ ಬೆಲ್ತುರು-೧೨ರ ಮೊದಲ ಬಾಡ ಬೆಲ್ತುರ, ಅಂದರೆ ಈಗಿನ ದಾವಣಗೆರೆ ತಾಲೂಕಿನ ಬೇತೂರು ಗ್ರಾಮವು ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನ ಪ್ರಾರಂಭದ ನೆಲೆವೀಡಾಗಿದ್ದಿತು. ನೊಳಂಬವಾಡಿಯ ಪ್ರಸಿದ್ಧ ಸಾವಿರದಲ್ಲಿನ ಬೆಲ್ತೂರು ಲಕ್ಷ್ಮಿಗೆ ಜನ್ಮಭೂಮಿ, ಕೊಂಡಾಡುವ ಭೋಗ ಭೂಮಿ, ಸಮಸ್ತ ಜನಕ್ಕೆ ಸಂತಸವನ್ನುಂಟು ಮಾಡುವ ಗಂಧಸಾಳಿ ವನಾವಳಿಗಳಿಂದ ಕೂಡಿ ಚೆಲ್ವಿನ ಆಗರವಾಗಿದ್ದಿತೆಂದು ಶಾಸನವೊಂದು ಈ ನೆಲೆವೀಡನ್ನು ವರ್ಣಿಸುತ್ತದೆ.[14] ಆದರೆ ಕ್ರಿ.ಶ. ೧೧೩೦ರ ನಂತರದಲ್ಲಿ ಪಾಂಡ್ಯರು ತಮ್ಮ ರಾಜಧಾನಿಯನ್ನು ಉಚ್ಚಂಗಿಯ ನೆಲೆವೀಡಿಗೆ ಬದಲಿಸಿಕೊಂಡಂತೆ ಕಂಡು ಬರುತ್ತದೆ. ಕ್ರಿ.ಶ. ೧೧೬೯ರ ಶಾಸನವೊಂದರಲ್ಲಿ ಬೇತೂರನ್ನು ಹಳೆಯಬೀಡೆಂದು ಕರೆಯಲಾಗಿದೆ.[15] ಇವರು ಉಚ್ಚಂಗಿಗೆ ತಮ್ಮ ರಾಜಧಾನಿಯನ್ನು ಬದಲಿಸಿದ ಮೇಲೆ ಕದಂಬಳಿಗೆ ಸಾಸಿರ ಪ್ರದೇಶದ ಉಲ್ಲೇಖ ಸಂಪೂರ್ಣವಾಗಿ ನಿಂತೇ ಹೋಗುತ್ತದೆ. ಪಾರಂಪರಿಕವಾಗಿ ಕದಂಬಳಿಗೆ ನಾಡಿಗೆ ಇದ್ದ ಪ್ರಾಮುಖ್ಯತೆ ಈ ಪಾಂಡ್ಯ ವಂಶೀಯರು ಈ ಪ್ರದೇಶವನ್ನು ಆಳತೊಡಗಿದ ಕಾಲದಿಂದಲೇ ಕುಂಠಿತವಾಗಿರುವುದು ಶಾಸನಗಳಿಂದ ದೃಢ-ಪಡುತ್ತದೆ. ಉಚ್ಚಂಗಿ, ಕೋಗಳಿ-೫೦೦ಕ್ಕೆ ಸೇರಿದ್ದಿತು. ಕ್ರಿ.ಶ. ೧೦೫೪ಕ್ಕಿಂತ ಪೂರ್ವದಲ್ಲಿ ಕೋಗಳಿ-೫೦೦' ಎಂದಿದ್ದು ಆನಂತರದಲ್ಲಿ 'ಕೋಗಳಿನಾಡು' ಎಂದು ಮಾತ್ರ ಕರೆಯಲಾಗಿದ್ದು, ಕ್ರಿ.ಶ. ೧೧೮೯ರ ಶಾಸನವೊಂದರಲ್ಲಿ[16] ಕೋಗಳಿ ನಾಡೊಳಗ್ಗದ ಕದಂಬಳಿಗೆ ಸಾಯಿರ' ಎಂದಿರುವುದನ್ನು ಗಮನಿಸಿದರೆ ಕದಂಬಳಿಗೆ ಸಾವಿರವು ಹನ್ನೊಂದನೆಯ ಶತಮಾನದ ಮಧ್ಯ ಭಾಗದಿಂದಲೇ ತನ್ನ ಪ್ರಧಾನತೆಯನ್ನು ಕಳೆದುಕೊಳ್ಳತೊಡಗಿತೆಂದು ಹೇಳಬೇಕಾಗುತ್ತದೆ. ಆದರೆ ಒಂದು ಕಾಲಕ್ಕೆ ಕೋಗಳಿ ಪ್ರದೇಶವನ್ನು ಒಳಗೊಂಡಂತೆ ಕದಂಬವಾಡಿನಾಡು ಅಸ್ತಿತ್ವದಲ್ಲಿದ್ದಿತೆಂದು ಹೇಳಲು ಕ್ರಿ.ಶ. ೧೦೬೪ರ ಉಚ್ಚಂಗಿದುರ್ಗದ ಶಾಸನವು ಆಧಾರ ಒದಗಿಸುತ್ತದೆ.[17]

---

12 M.S. Krishna Murthy : The Nolamebas, Mysore, 1980, P. 196
13 ಸೌ.ಇಂ.ಇ., ಸಂ. ೯, ಭಾಗ ೧, ಸಂಖ್ಯೆ ೧೨೬, ಉಚ್ಚಂಗಿ ದುರ್ಗ
* ಕೆಮ್ತೂರು ರಘುಪತಿಭಟ್ಟ : ತುಳುನಾಡಿನ ಸ್ಥಳನಾಮಗಳು, ಬೆಂಗಳೂರು, ೧೯೭೯, ಪು. ೮೪
14 ಎ.ಕ., ೧೧, ದಾವಣಗೆರೆ ೩, ಅನೆಕೊಂಡ, ಕ್ರಿ.ಶ. ೧೧೨೧
15 ಅದೇ, ದಾವಣಗೆರೆ ೬, ಬೇತೂರು
16 ಅದೇ, ದಾವಣಗೆರೆ ೧೨, ಬೇತೂರು
17 ಸೌ.ಇಂ.ಇ., ಸಂ. ೯, ಭಾಗ ೧, ಸಂಖ್ಯೆ ೧೨೬, ಉಚ್ಚಾಂಗಿದುರ್ಗ

ಕದಂಬಳಿಗೆ ನಾಡಿನ ಉಲ್ಲೇಖ ಕ್ರಿ.ಶ. ಒಂಬತ್ತನೆಯ ಶತಮಾನದಿಂದೀಚೆಗಷ್ಟೇ ಶಾಸನಗಳಲ್ಲಿ ಕಂಡುಬಂದರೂ, ವಾಸ್ತವವಾಗಿ ಕರ್ನಾಟಕದ ಪ್ರಪ್ರಥಮ ಕನ್ನಡ ಅರಸು ಮನೆತನವಾದ ಕದಂಬ ವಂಶದ ಆಳಿಕೆಯ ಕುರುಹು ಇದಾಗಿರಬೇಕು. ಕದಂಬ ಸಾಮ್ರಾಜ್ಯದ ಸ್ಥಾಪಕನಾದ ಮಯೂರಶರ್ಮನು ತನ್ನ ಆಳ್ವಿಕೆಗೆ ಅಸ್ತಿಭಾರವನ್ನು ಈಗಿನ ಚಿತ್ರದುರ್ಗ ಜಿಲ್ಲೆಯ ಪರಿಸರದಲ್ಲೇ ಹಾಕಿದ್ದನೆಂದು ಹೇಳಲು, ಈ ಪ್ರದೇಶದಲ್ಲಿ ದೊರೆಯುವ ಕದಂಬರ ಶಾಸನಗಳು ಮತ್ತು ಅವರ ಬಗ್ಗೆ ದಟ್ಟವಾಗಿ ಪ್ರಚಲಿತವಿರುವ ಐತಿಹ್ಯಗಳೂ ಅವಕಾಶ ನೀಡುತ್ತವೆ. ಈ ದಿಸೆಯಲ್ಲಿ ಖ್ಯಾತ ಇತಿಹಾಸ ಸಂಶೋಧಕ ದಿ|| ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರ ಅನೇಕ ಲೇಖನಗಳು ಅಮೂಲ್ಯವಾದ ಮಾಹಿತಿಗಳನ್ನು ಒದಗಿಸಿ ಬೆಳಕು ಚೆಲ್ಲುತ್ತವೆ.[18]

ಕದಂಬರ ಪ್ರಸಿದ್ಧ ತಾಳಗುಂದ ಶಾಸನದಲ್ಲಿ[19] ಉಕ್ತವಾಗಿರುವ ಐತಿಹಾಸಿಕ ಅಂಶಗಳಲ್ಲಿನ: 'ಪಲ್ಲವರ ಅಂತಪಾಲರನ್ನು (ಗಡಿಯರಕ್ಷಕ ದಳ) ಮೊದಲು ಸೋಲಿಸಿದ್ದು, ಶ್ರೀ ಪರ್ವತದವರೆಗಿನ ಘೋರಾರಣ್ಯದಲ್ಲಿ ಠಾಣ್ಯ ಹೂಡಿದ್ದು, ಪಲ್ಲವರ ಅಧೀನ ರಾಜರಾಗಿದ್ದ ಬೃಹದಾಣರು ಮೊದಲಾದವರಿಂದ ಕಪ್ಪಕಾಣಿಕೆಗಳನ್ನು ಕಿತ್ತುಕೊಂಡಿದ್ದೇ ಅಲ್ಲದೆ ಪಲ್ಲವರಿಂದ ಪಶ್ಚಿಮ ಸಮುದ್ರದಿಂದ ಪ್ರೇಹಾರದವರೆಗಿನ ಭೂಮಿಯನ್ನು ಪಡೆದುಕೊಂಡಿದ್ದು', ಇತ್ಯಾದಿ ವಿವರಗಳು ಈ ದಿಸೆಯಲ್ಲಿ ವಿವೇಚಿಸಲು ಅವಕಾಶ ನೀಡುತ್ತವೆ.

ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ಮತ್ತು ಶ್ರೀ ಗೋವಿಂದ ಪೈ ಅವರ ಲೇಖನಗಳಿಂದ ಪ್ರಸಿದ್ಧ ತಾಳಗುಂದ ಶಾಸನದಲ್ಲಿನ ಶ್ರೀ ಪರ್ವತ ಎಂಬುದಕ್ಕೆ 'ತ್ರಿಪರ್ವತ' ಎಂಬ ಭಿನ್ನಪಾಠವಿರುವಂತೆ ತಿಳಿದು ಬರುತ್ತದೆ. ಶ್ರೀ ಗೋವಿಂದ ಪೈ ಅವರು ಈ ತ್ರಿ ಪರ್ವತವನ್ನು ಮೊಳಕಾಲ್ಮೂರು ತಾಲೂಕಿನ ಉಂಕೆದುರ್ಗದ ಸಮೀಪದಲ್ಲಿರುವ ಉಚ್ಚಂಗಿಯೆಂಬ ಬೆಟ್ಟಗಳೊಂದಿಗೆ ಸಮೀಕರಿಸಿರುತ್ತಾರೆ.[20] ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರಾದರೋ ಇದನ್ನು ಹರಪ್ಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗವೆಂದು ಅಭಿಪ್ರಾಯ ಪಟ್ಟಿರುತ್ತಾರೆ.[20A] ಹಾಗೆಯೇ, ಇದೇ ಶಾಸನದ 'ಪ್ರೇಹಾರ' ಎಂಬುದಕ್ಕೆ 'ಪ್ರೇಮಾರ' ಎಂಬ ಪಾಠವಿರುವಂತೆ ತೋರುತ್ತದೆ. ಶ್ರೀ ಜೋಯಿಸರು ಇದನ್ನು ವೇದಾವತಿ ನದಿಯೆಂದು ತಮ್ಮ ಲೇಖನವೊಂದರಲ್ಲಿ ಗುರುತಿಸಿರುತ್ತಾರೆ.[20B] ಇದರಿಂದ ಕದಂಬರ ಪ್ರಾರಂಭ ಕಾಲದ ಪೂರ್ವದ ಎಲ್ಲೆ ತ್ರಿಪರ್ವತ ಮತ್ತು ವೇದಾವತಿ ನದಿಗಳ ಅಂಚಿನವರೆಗೂ ಆವರಿಸಿತ್ತೆಂದಾಗುತ್ತದೆ. ಇದು ಶ್ರೀ ಪೈ ಅವರು ಸೂಚಿಸಿರುವ ಮೊಳಕಾಲ್ಮೂರು ತಾಲೂಕಿನ ಉಚ್ಚಂಗಿ ಎಂಬ ಬೆಟ್ಟ ಗುಡ್ಡಗಳ ಪರಿಮಿತಿಯನ್ನೇ ಪೋಷಿಸುತ್ತದೆ. ಆದರೆ ಆಂಧ್ರದ ನಾಗರ್ಜುನಕೊಂಡವನ್ನು ಶ್ರೀ ಪರ್ವತವೆಂದು ಪ್ರಾಕೃತ ಶಾಸನದಲ್ಲಿ ಕರೆದಿರುವುದು ಕಂಡುಬರುತ್ತದೆ. (Epigraphia Indica Vol. XX No. 1)

ಪ್ರಸಿದ್ಧ ಚಂದ್ರವಳ್ಳಿಯ ಮಯೂರಶರ್ಮನ ಶಾಸನದಲ್ಲಿ ಉಕ್ತವಾಗಿರುವ ಸೇನ್ದ್ರಕವೆಂಬುದು ಇಂದಿನ ಆಲೂರು, ಆದವಾನಿ, ಕರ್ನೂಲು ತಾಲೂಕು ಪ್ರದೇಶಗಳನ್ನೊಳಗೊಂಡಿದ್ದಂಥ ಸಿಂಧವಾಡಿ ನಾಡು ಎಂದು ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ಗುರುತಿಸಿರುತ್ತಾರೆ.[21]

---

18 ಉದಾಹರಣೆ : ಸಂಸ್ಕೃತ ಮತ್ತು ಕನ್ನಡ ಜೈಮಿನಿ ಭಾರತಗಳಲ್ಲಿನ ಚಂದ್ರಹಾಸ ಉಪಖ್ಯಾನದ ನಾಯಕ ಚಂದ್ರಹಾಸನನ್ನು ಕದಂಬ ಮಯೂರ ಶರ್ಮನೊಂದಿಗೆ ಗುರುತಿಸಿರುವುದು, ಇತ್ಯಾದಿ. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಸಂ : ಲಕ್ಷ್ಮಣ್ ತೆಲಗಾವಿ, ಡಾ|| ಎಂ.ವಿ. ಶ್ರೀನಿವಾಸ್, ಚಿತ್ರದುರ್ಗ, ೧೯೭೬. ಪು. ೧೫೫-೧೭೧

19 ಎ.ಕ., ಸಂ. ೭, ಶಿಕಾರಿಪುರ, ೧೭೬ ತಾಳಗುಂದ, ಕ್ರಿ.ಶ.ಸು. ೪೫೦ (೩ ನೇ ಸಾಲು)

20 ಜಯ ಕರ್ನಾಟಕ, ಸಂಪುಟ ೧೧, ಪುಟ, ೧೦೭

20A ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು ಪು. ೩೨೯

20B ಅದೇ ಪುಟ. ೨೭೯

21 ಅದೇ, ಪು, ೩೮೨

ಕ್ರಿ.ಶ. ಸುಮಾರು ೧-೨ನೇ ಶತಮಾನಗಳಿಂದ ಕ್ರಿ.ಶ. ೧೦ನೆಯ ಶತಮಾನದ ಆದಿಭಾಗದವರೆಗೆ ಬಾಣರು ಕರ್ನಾಟಕದ ಈಗಿನ ಕೋಲಾರ ; ಆಂಧ್ರದ ಚಿತ್ತೂರು, ಕಡಪ, ತಮಿಳುನಾಡಿನ ಧರ್ಮಪುರಿ ಮತ್ತು ಉತ್ತರ ಆರ್ಕಾಟು ಜಿಲ್ಲೆಗಳ ಹಲವು ಭಾಗಗಳನ್ನು ಆಳಿರುವುದು ಕಂಡು ಬರುತ್ತವೆ. ಪ್ರಾಯಶಃ ಇವರನ್ನೇ ಬೃಹತ್ ಬಾಣರೆಂದು ತಾಳಗುಂದದ ಶಾಸನದಲ್ಲಿ ಕರೆಯಲಾಗಿರುವುದು. ಈ ಪ್ರದೇಶ ಇಂದಿನ ಚಿತ್ರದುರ್ಗ ಜಿಲ್ಲೆಗೆ ಆಗ್ನೇಯಕ್ಕೆ ಬರುತ್ತದೆ. ಅಂದರೆ ಪಲ್ಲವರ ಕಂಚಿಗೂ ಕದಂಬಳಿಗೆ ಪ್ರದೇಶಕ್ಕೂ ಸರಿ ಸುಮಾರು ಮಧ್ಯಭಾಗ ಇದಾಗಿರುತ್ತದೆ.

ಈ ಹಿನ್ನೆಲೆಯಲ್ಲಿ, ಕದಂಬರು ಪ್ರಾರಂಭದಲ್ಲಿ ತಮ್ಮ ಧೈರ್ಯ ಸಾಹಸಗಳಿಂದ ತಮ್ಮ ನೆಲೆಯನ್ನು ಸ್ಥಾಪಿಸಿದ ಪ್ರದೇಶ (ಚಿತ್ರದುರ್ಗ ಜಿಲ್ಲೆ ಮತ್ತು ಅದರ ಆಸುಪಾಸಿನ ಪ್ರದೇಶಗಳು ; ಅದರಲ್ಲೂ ಕದಂಬಳಿಗೆ ಪ್ರದೇಶವೇ ಅದರ ಹೃದಯ ಭಾಗವಾಗಿದ್ದಿತೆಂದು ಹೇಳಬಹುದು.

ಪ್ರಸಿದ್ಧ ರಾಜವಂಶವೊಂದರ ಮೂಲ ಪ್ರದೇಶವನ್ನು ಸಮಕಾಲೀನವಾಗಿಯಾಗಲೀ ಅಥವಾ ನಂತರದಲ್ಲಿಯಾಗಲೀ ಗುರುತಿಸಲ್ಪಡುತ್ತಿದ್ದ ಪದ್ಧತಿಯೊಂದು ಪ್ರಚಲಿತವಿದ್ದಿತೆಂದು ತೋರುತ್ತದೆ. ಇದಕ್ಕೆ ಉದಾಹರಣೆ : 'ನೊಳಂಬಳಿಗೆ ನಾಡು.' ಇದು ನೊಳಂಬರ ನೊಳಂಬವಾಡಿಯ ಮೂಲಪ್ರದೇಶವೆಂದು ನಿರ್ಣಯಿಸಲಾಗಿದೆ. ಹಾಗೆಯೇ ಕದಂಬಳಿಗೆ ಎಂಬುದು ಕೂಡ ಕದಂಬರ ಮೂಲ ಪ್ರದೇಶವಾಗಿದ್ದಿತೆಂದು ಹೇಳಬಹುದು. (ಸಾಂತಳಿಗೆ ಎಂಬುದು ಇದಕ್ಕೆ ಇನ್ನೊಂದು ಉದಾಹರಣೆ) ಆದರೆ ಕದಂಬಳಿಗೆಯು ಪ್ರಸ್ತಾಪ ಕದಂಬರ ಕಾಲದ ಶಾಸನಗಳಲ್ಲಿ ಉಕ್ತವಾಗಿರುವಂತೆ ತೋರುತ್ತಿಲ್ಲ. ಕದಂಬರ ನಂತರದಲ್ಲಿ ಈ ಪ್ರದೇಶ ಬಾದಾಮಿ ಚಲುಕ್ಯರ ವಶವಾಯಿತು. ಆಗ ಇದು ಪ್ರಾಯಶಃ ಅವರ 'ಉಚ್ಚಶೃಂಗ ವಿಷಯ'ದಲ್ಲಿ ಅಂತರಗತವಾಗಿದ್ದಿರಬೇಕು. ಒಟ್ಟಾರೆ ಕದಂಬಳಿಗೆ ಸಾಯಿರದ ಪ್ರಸ್ತಾಪ ರಾಷ್ಟ್ರಕೂಟರ ಕಾಲದಿಂದಷ್ಟೇ ಕಂಡು ಬಂದಿರುವುದನ್ನು ಮೇಲೆಯೇ ಗಮನಿಸಿದ್ದೇವೆ.

ಬೇರೆ ಬೇರೆ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಕೆಲವು ಆಡಳಿತ ವಿಭಾಗಗಳನ್ನು ಗಮನಿಸಿದರೆ ; ಒಂದು ರಾಜವಂಶ ಪತನದ ನಂತರ, ಅವರು ಆಳಿಹೋದ ಪ್ರದೇಶವನ್ನು ಆಕ್ರಮಿಸಿಕೊಂಡವರು, ತಾವು ಸಾಧಿಸಿದ ದಿಗ್ವಿಜಯದ ಸೂಚಕವಾಗಿ ಆಳಿ ಹೋದ ರಾಜ ವಂಶಗಳ ಹೆಸರಿನಲ್ಲೇ, ಆ ಮೂಲ ಪ್ರದೇಶಗಳನ್ನು ಕರೆಯುತ್ತಿದ್ದ ಅಂಶ ಗಮನ ಸೆಳೆಯುತ್ತದೆ. ಇದು ಒಂದು ರೀತಿಯಲ್ಲಿ ತಮ್ಮ ದಿಗ್ವಿಜಯದ ಅಹಂ ಅನ್ನು ಮೆರೆಸುವ ರೀತಿಯೂ ಆಗಿದ್ದಿತೆಂದು ಅನಿಸುತ್ತದೆ. ಉದಾಹರಣೆಗೆ : ಕಲ್ಯಾಣದ ಚಾಲುಕ್ಯರ ವಶಕ್ಕೆ ನೊಳಂಬವಾಡಿಯ ಸ್ವಲ್ಪ ಭಾಗವಷ್ಟೇ ಬಂದಿತು. ಆ ಭಾಗವನ್ನು ತಾವು ನೊಳಂಬರ ವಿರುದ್ಧ ಸಾಧಿಸಿದ ವಿಜಯವೋ ಎಂಬಂತೆ ನೊಳಂಬವಾಡಿ ೩೨,೦೦೦ ಎಂದು ಹೆಗ್ಗಳಿಕೆಯಿಂದ ಕರೆದುಕೊಂಡಿದ್ದಾರೆ. ಇದೇ ರೀತಿ ಇವರ ವಶಕ್ಕೆ ಬಂದ ಗಂಗರ ಗಂಗವಾಡಿ ಪ್ರದೇಶದ ಅಲ್ಪಭಾಗವನ್ನು ಕೂಡ ಗಂಗವಾಡಿ-೯೬,೦೦೦ ಎಂದು ಕರೆದಿರುತ್ತಾರೆ. ವಿಜಯನಗರದ ಅರಸರು ತಮ್ಮ ವಶಕ್ಕೆ ಬಂದ ಹೊಯ್ಸಳರ ಪ್ರದೇಶವನ್ನು ಇತರ ಅನೇಕ ವಿಭಾಗಗಳನ್ನು ಆಳುತ್ತಿದ್ದ ಉಚ್ಛಂಗಿಯ ಪಾಂಡ್ಯರ ಹೆಸರಿನಲ್ಲಿ ಅವರ ನಂತರ ಪಾಂಡ್ಯ ದೇಶವೆಂದು ಕರೆದಿರುವ ಅಂಶ ಹೊಯ್ಸಳ ಮತ್ತು ವಿಜಯನಗರ ಕಾಲದ ಶಾಸನಗಳಿಂದ ವ್ಯಕ್ತವಾಗುತ್ತದೆ.[22]

ಕ್ರಿ.ಶ. ೯ನೇ ಶತಮಾನದಿಂದ ೧೨ನೇ ಶತಮಾನದವರೆಗೆ ಸಾಕಷ್ಟು ಖ್ಯಾತವಾಗಿದ್ದ ಕದಂಬಳಿಗೆ ಸಾಸಿರ ಪ್ರದೇಶವು ಸಾಂಸ್ಕೃತಿಕವಾಗಿ ಸಮಕಾಲೀನ ಕರ್ನಾಟಕದ ಪರಂಪರೆಯನ್ನೇ ಅನುಸರಿಸಿರುವುದು ಕಂಡು ಬರುತ್ತದೆ.

ಕದಂಬಳಿಗೆ ಸಾಯಿರ ಪ್ರದೇಶದಲ್ಲಿ ಕಂಡು ಬಂದಿರುವ ದೇವಾಲಯುಗಳು ಕೇವಲ ದೇವಸ್ಥಾನಗಳಷ್ಟೇ ಆಗಿರಲಿಲ್ಲ. ಅವುಗಳಲ್ಲಿ ಅನೇಕವು ನೈಷ್ಠಿಕ ತಪೋಧನರಾದ ಕಾಳಾಮುಖ ಸ್ಥಾನಿಕರ ಆವಾಸ ಸ್ಥಾನಗಳಾಗಿದ್ದು ವಿದ್ಯಾರ್ಥಿ ತಪೋಧನರನ್ನು ಹೊಂದಿದ್ದ

22 ಸಿ.ವಿ. ಕೃಷ್ಣಮೂರ್ತಿ : 'ಚಿತ್ರದುರ್ಗ ಜಿಲ್ಲೆಯ ಚಾರಿತ್ರಿಕ ಭೂಗೋಳ'. ಹರತಿಸಿರಿ, ಹರ್ತಿಕೋಟೆ, ೧೯೮೭ . ಪು. ೩೯೩

ಮಠಗಳನ್ನು ಪಡೆದಿದ್ದವು. ಕಾಕಂಬಾಳ ಸ್ಥಳವು ಒಂದು ಪ್ರಸಿದ್ಧ ಕಾಳಾಮುಖ ಸ್ಥಾನವಾಗಿದ್ದಿತು. ಇದು ಪಂಚ ಮಠ ಸ್ಥಾನವೆಂದು ಖ್ಯಾತಿಯನ್ನು ಪಡೆದಿದ್ದಿತಲ್ಲದೆ ಜೈನ ಕೇಂದ್ರವೂ ಆಗಿದ್ದಿತು. ಹಾಗೆಯೇ ಅಸಗೋಡು ಕೂಡ ಒಂದು ಕಾಳಾಮುಖ ಸ್ಥಾನವಾಗಿದ್ದಿತು. ಈ ಅವಧಿಯಲ್ಲಿ ಶಾಸನೋಕ್ತವಾಗಿರುವ ಬಹುತೇಕ ದೇವಾಲಯಗಳೆಲ್ಲವೂ ಶೈವ ಪರವಾಗಿದ್ದು, ಒಂದೊಂದು ದೇವಾಲಯವೂ ಒಬ್ಬೊಬ್ಬ ಸ್ಥಾನಿಕವನ್ನು ಪಡೆದ್ದಿದಿತು. ಕ್ರಿ.ಶ. ೧೦೫೪ರ ನಂತರ, ವೈಷ್ಣವ ದೇವಾಲಯಗಳ ಪ್ರಸ್ತಾಪ ಈ ಪ್ರದೇಶದಲ್ಲಿ ಕಂಡುಬರುತ್ತದೆ. ಅವುಗಳಲ್ಲಿ ಕೊಡಗನೂರು ಅಗ್ರಹಾರದ ವಿಷ್ಣುದೇವರು, ಬಾಡದ ಅಗ್ರಹಾರದ ನಾರಾಯಣದೇವರು, ಎಲವಟ್ಟಿಯ ನಾರಾಯಣ ದೇವರು ಮತ್ತು ದಾವಣಗೆರೆಯ ಶಾಸನದಲ್ಲಿ ಉಕ್ತವಾಗಿರುವ ವಾಸುದೇವ ದೇಗುಲಗಳು ಮುಖ್ಯವಾದವುಗಳಾಗಿವೆ.

ಕ್ರಿ.ಶ. ೯೬೪ರಲ್ಲಿ ಜಕ್ಕಿ ಎಂಬುವವಳು ಕಾಕಂಬಾಳದಲ್ಲಿ ಬಸದಿಯೊಂದನ್ನು ಕಟ್ಟಿಸಿದಳು. ಕ್ಯಾಸಾಪುರಂ




ಶಾಸನವೊಂದರಲ್ಲಿ ಬಸದಿಯ ರಾಮಚನ್ದ್ರ ಕಿತ್ರ್ಯಯ್ಯ ಎಂಬುವವನ ಉಲ್ಲೇಖ ಬಂದಿದೆ. ಕ್ರಿ.ಶ. ೧೦೬೨ರ ಕಂದಗಲ್ಲು ಗ್ರಾಮದ ಶಾಸನದಲ್ಲಿ ಜಿನಾಲಯದ ಪ್ರಸ್ತಾಪವಿದೆ. ಶಾಬನೂರಿನ ಶಾಸನವೊಂದು ಶ್ರೀಮತ್ ಪಿರಿಯ ದಂಡನಾಯಕಿತಿ ಕಾಳಿಯಕ್ಕವ್ವೆ ಎಂಬುವವಳಿಂದ ಪಾರ್ಶ್ವದೇವರ ಬಸದಿ ನಿರ್ಮಾಣವಾದ ಬಗ್ಗೆ ತಿಳಿಸುತ್ತದೆ.

ಕದಂಬಳಿಗೆ ಪ್ರದೇಶದಲ್ಲಿ ಅನೇಕ ಅಗ್ರಹಾರಗಳು ಅಸ್ತಿತ್ವದಲ್ಲಿದ್ದವು ; ಅನಾದಿ ಅಗ್ರಹಾರ ತೆಂಕಣ ಅಯ್ಯಾವೊಳೆಯೆಂದು ಕೊಡಗನೂರನ್ನು ಕರೆಯಲಾಗಿದೆ. ಬೆಳ್ವನೂರು, ಬಾಡದ ಮತ್ತು ಕಬ್ಬೂರು ಸ್ಥಳಗಳು ಪ್ರಸಿದ್ಧ ಅಗ್ರಹಾರಗಳಾಗಿದ್ದು, ಕ್ರಮವಾಗಿ ೪೮, ೧೨೦, ೫೨, ೨೬೦ ಸಂಖ್ಯೆಯ ಮಹಾಜನರನ್ನು ಪಡೆದಿದ್ದವು. ಮಣಲಕೆರೆ, ಬನವಾಸಿನಾಡಿನ ತುಂಬೆಗನ ಹೊಸೂರು ಸ್ಥಳಗಳು ಕೂಡ ಅಗ್ರಹಾರಗಳಾಗಿದ್ದವು.

ಒಟ್ಟಾರೆ ಕದಂಬಳಿಗೆ ಪ್ರದೇಶವು ಸಮಕಾಲೀನವಾಗಿಯಾಗಲೀ ಅಥವಾ ನಂತರದಲ್ಲಿಯಾಗಲೀ, ಅಸ್ತಿತ್ವವನ್ನು ಪಡೆದು ಸಾಕಷ್ಟು ವಿಸ್ತಾರವಾದ ಭೂಪ್ರದೇಶವನ್ನು ಒಳಗೊಂಡಿದ್ದಿತು. ರಾಷ್ಟ್ರಕೂಟರ ಆಳ್ವಿಕೆಯ ಕಾಲಕ್ಕೆ ಒಂದು ಸಾವಿರ ಗ್ರಾಮಗಳ ಪರಿಮಿತಿಯನ್ನು ಪಡೆದು ವಿಶೇಷವಾಗಿ ಇಂದಿನ ಚಿತ್ರದುರ್ಗ ಜಿಲ್ಲೆಯ ದಾವಣಗೆರೆ, ಹರಿಹರ, ಕ್ವಚಿತ್ತಾಗಿ ಜಗಳೂರು, ಚಿತ್ರದುರ್ಗ, ಹೊಳಲಕೆರೆ ಹಾಗೂ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ಮತ್ತು ಕೂಡ್ಲಿಗಿ ತಾಲೂಕುಗಳ ಹಲವು ಭಾಗಗಳನ್ನೊಳಗೊಂಡಿದ್ದಿತು. ಕಲ್ಯಾಣದ ಚಾಲುಕ್ಯರ ಪ್ರಾರಂಭ ಕಾಲದಲ್ಲಿ ಅವರ ಆಶ್ರಿತ ಮಾಂಡಲಿಕರಾಗಿ ನೊಳಂಬ ಮತ್ತು ಗಂಗ ವಂಶೀಯರೂ, ನಂತರದಲ್ಲಿ ಕಲ್ಯಾಣದ ಚಾಲುಕ್ಯರ ರಾಜಕುಮಾರರು ಈ ಪ್ರದೇಶವನ್ನು ಆಳಿರುತ್ತಾರೆ. ಕ್ರಿ.ಶ. ೧೧೦೦ರ ಸುಮಾರಿನಲ್ಲಿ ಈ ಪ್ರದೇಶದ ಮೇಲೆ ತಮ್ಮ ಆಳ್ವಿಕೆಯನ್ನು ಪ್ರಾರಂಭಿಸಿದ ಕಲ್ಯಾಣದ ಚಾಲುಕ್ಯರರೆನಿಸಿಕೊಂಡಿದ್ದ ಉಚ್ಚಂಗಿಯ ಪಾಂಡ್ಯರ ಆಳಿಕೆಯೊಂದಿಗೆ ಈ ನಾಡಿನ ಪ್ರಸ್ತಾಪ ಕ್ಷೀಣವಾಗುತ್ತದೆ. ○

# ವಿಜಯನಗರದ ಪ್ರಾಂತೀಯ ಧೋರಣೆಗೆ ಸ್ಥಳೀಯ ಪ್ರತಿಕ್ರಿಯೆ

ಡಾ|| ಬಿ. ವಸಂತಶೆಟ್ಟಿ

ವಿಜಯನಗರ ಸಾಮ್ರಾಜ್ಯದ ಪ್ರಾಂತೀಯ ಧೋರಣೆಗೆ ಸ್ಥಳೀಯ ಪ್ರತಿಕ್ರಿಯೆ ಹೇಗಿತ್ತೆಂಬುದನ್ನು ಬಾರಕೂರು ಮತ್ತು ಮಂಗಳೂರು ಪ್ರಾಂತ (ರಾಜ್ಯ) ಗಳಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡುವುದು ಈ ಪ್ರಬಂಧದ ಉದ್ದೇಶ.

ಉತ್ತಮ ಆಡಳಿತ ನೀಡುವ ಉದ್ದೇಶದಿಂದ ವಿಜಯನಗರದ ಅರಸರು ಸಾಮ್ರಾಜ್ಯವನ್ನು ವಿವಿಧ 'ರಾಜ್ಯ'ಗಳಾಗಿ ವಿಭಾಗಿಸಿದ್ದರು. ಈಗಿನ ದಕ್ಷಿಣ ಕನ್ನಡ ಜಿಲ್ಲೆ ವಿಜಯನಗರ ಸಾಮ್ರಾಜ್ಯದ ಎರಡು .ರಾಜ್ಯ' ಗಳಾದ ಬಾರಕೂರು ಮತ್ತು ಮಂಗಳೂರು ರಾಜ್ಯಗಳನ್ನು ಒಳಗೊಂಡಿತ್ತು. ವಿಜಯನಗರದ ಸಾಮ್ರಾಟರು ಈ ಎರಡು ಆಡಳಿತ ವಿಭಾಗಗಳಿಗೆ ಕಾಲಕಾಲಕ್ಕೆ ರಾಜ್ಯಪಾಲರುಗಳನ್ನು ನೇಮಿಸುತ್ತಿದ್ದರು. ಆಗಾಗ ರಾಜ್ಯಪಾಲರುಗಳ ವರ್ಗಾವಣೆ ನಡೆಯುತ್ತಿದ್ದುದರಿಂದ ಈ ಪ್ರದೇಶದಲ್ಲಿ ಆಡಳಿತ ನಡೆಸಿದ ರಾಜ್ಯಪಾಲರುಗಳ ದೊಡ್ಡ ಪಟ್ಟಿಯೇ ನಮಗೆ ದೊರೆಯುತ್ತದೆ. ಇವರು ತಮ್ಮ ಆಡಳಿತದ ಸಮಯದಲ್ಲಿ ಕೇಂದ್ರ ಸರಕಾರದ ಹಿತವನ್ನು ನಿರ್ಲಕ್ಷಿಸುವಂತಿರಲಿಲ್ಲ. ಅಂತೆಯೇ ಸ್ಥಳೀಯಾಡಳಿತ ಸಂಸ್ಥೆಗಳ ವಿಶೇಷಾಧಿಕಾರವನ್ನೂ ಉಲ್ಲಂಘಿಸುವಂತಿರಲಿಲ್ಲ. ಪ್ರಾಂತ ಅಥವಾ ಕೇಂದ್ರ ಸರಕಾರಕ್ಕೆ ಬರಬೇಕಾದ ತೆರಿಗೆ ಸಂಗ್ರಹಿಸುವ ಕಾರ್ಯಕ್ಕೆ ಚ್ಯುತಿ ಬಾರದಂತೆ ಹಾಗೂ ಕೇಂದ್ರದ ಧೋರಣೆಗಳನ್ನು ಜಾರಿಗೆ ತರುವಲ್ಲಿ ಸ್ಥಳೀಯ ಸಂಸ್ಥೆಗಳು ಅಥವಾ ಪ್ರಜೆಗಳ ಹಿತಕ್ಕೂ ಧಕ್ಕೆ ಬಾರದಂತೆ ಬಹಳ ಜಾಗರೂಕತೆಯಿಂದ ವರ್ತಿಸಬೇಕಾಗಿತ್ತು. ರಾಜ್ಯಪಾಲರುಗಳ ದಬ್ಬಾಳಿಕೆಗೆ ಪ್ರಜೆಗಳು ಒಳಗಾದಾಗ ಸಾಮ್ರಾಟರು ಮಧ್ಯ ಪ್ರವೇಶಿಸಿ ನ್ಯಾಯದಾನ ಮಾಡಿದ ಅನೇಕ ಘಟನೆಗಳು ಪಶ್ಚಿಮ ಕರಾವಳಿಯ ಬಾರಕೂರು ಮತ್ತು ಮಂಗಳೂರು ರಾಜ್ಯಗಳಲ್ಲಿ ದೊರೆಯುತ್ತವೆ.[1]

ಸ್ಥಳೀಯ ಸಂಸ್ಥೆಗಳಿಂದ ಅಧಿಕಾರವನ್ನು ಕೇಂದ್ರಕೆ ವರ್ಗಾಯಿಸುವ ಕ್ರಮವನ್ನು ವಿಜಯನಗರದ ಅರಸರು ಕೈಗೊಳ್ಳಲಿಲ್ಲ.[2] ಪ್ರಜೆಗಳ ಮೇಲೆ ರಾಜ್ಯಪಾಲರುಗಳ ದಬ್ಬಾಳಿಕೆಯನ್ನು ಅವರು ಸಹಿಸುತ್ತಿರಲಿಲ್ಲ, ಅಂತಹ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳುತ್ತಿದ್ದರು.

ಕ್ರಿ. ಶ. 1404 ರಲ್ಲಿ ಮಹಾಬಲದೇವ ಒಡೆಯ ರಾಜ್ಯವನ್ನಾಳುತ್ತಿದ್ದಾಗ ಅಲ್ಲಿ 'ನಖರ-'ಹಂಜಮಾನ' ವ್ಯಾಪಾರಿ ಸಂಘಗಳ ಸೆಟ್ಟಿತನದ ಅನ್ಯಮಾನ್ಯ ಸಮಯ ಸಂಕೇತಗಳನ್ನು ರದ್ದುಗೊಳಿಸಿದ್ದನ್ನು ಪ್ರತಿಭಟಿಸಿದ ಹತ್ತು ಕೇರಿಯ ಹಲರು, ಸ್ಥಾನಪತಿ (ಪುರಸಭೆಯ ಅಧ್ಯಕ್ಷ) ಚಿಕ್ಕಣ್ಣನ ಮೂಲಕ ಸಾಮ್ರಾಟ ಇಮ್ಮಡಿ

1. Mahalingam T. V. Administration agnd Social Life under Vijayanagar, IInd Edn, Part I (Madras 1969) P. 197.
2. Salefore B. A, Social and Political Life in the Vijayanagar Empire vol I (Madras 1934) p. 342.

ಬುಕ್ಕನಿಗೆ ದೂರಿತ್ತರು. ಸಾಮ್ರಾಟನ ಆಜ್ಞೆಯಂತೆ ಗೋವೆಯ ಬಾಚಣ್ಣ ಒಡೆಯ ತನಿಖೆ ನಡೆಸಿ ಮಹಾಬಲ ದೇವ ತಪ್ಪಿತಸ್ಥನೆಂದು ತೀರ್ಮಾನವಾದಾಗ ತೊಂದರೆ ಗೊಳಗಾದವರಿಗೆ ಪರಿಹಾರ ನೀಡಲಾಯಿತು.[3] ವಿಶೇಷ ಸ್ಥಾನಮಾನಗಳಿಗೆ ಚ್ಯುತಿ ಬಂದಾಗ ಜನರು ಅಸಹಾಯಕ ರಾಗಿರುವ ಅಗತ್ಯವಿರಲಿಲ್ಲ.

ಕ್ರಿ.ಶ. 1418ರಲ್ಲಿ ಮಂಗಳೂರಿನಲ್ಲಿ ರಾಜ್ಯಪಾಲ ನಾಗಿದ್ದ ತಿಮ್ಮಣ್ಣ ಒಡೆಯ ಸೈನ್ಯವನ್ನು ಹಂಜಮಾನ (ಮುಸ್ಲಿಂ ವ್ಯಾಪಾರಿ ಸಂಘ) ರ ಮೇಲೆ ಹರಿಯಬಿಟ್ಟು ಅವರ ಪಳ್ಳಿಗಳನ್ನು ಸುಟ್ಟುಹಾಕಿದ.[4] ಪೂರ್ವಮರ್ಯಾದೆ ಗನುಗುಣವಾಗಿ ಹಂಜಮಾನದವರು[5] ನಡೆದುಕೊಂಡಿದ್ದರೂ ರಾಜ್ಯಪಾಲನ ದಬ್ಬಾಳಿಕೆಯ ವರ್ತನೆಯಿಂದ ಅಲ್ಲಿನ ಮುಸ್ಲಿಮರು ಪ್ರತಿಭಟನಾರ್ಥ ಊರು ಬಿಟ್ಟು ಹೋದ ವಿಚಾರ ಸಮ್ರಾಟನಿಗೆ ತಿಳಿದು, ಅವನು ಬೈಚ ದಂಣಾಯಕನಿಗೆ ವಿಷಯ ಪರಿಶೀಲಿಸುವಂತೆ ತಿಳಿಸಿದ. ರಾಜ್ಯಪಾಲರು ತಪ್ಪಿತಸ್ಥನೆಂದು ಖಚಿತವಾದಾಗ, ಅವನೇ ಆ ತಪ್ಪನ್ನು ಸರಿಪಡಿಸಿ ಪರಿಹಾರ ನೀಡುವಂತೆ ಸೂಚಿಸ ಲಾಯಿತು. ತಿಮ್ಮಣ್ಣ, ಒಡೆಯನು ಮಂಗಳೂರು ರಾಜ್ಯದ 'ಕಟ್ಟಳೆಯವ'ರಾದ ಬಂಗ, ಚೌಟ, ಅಜಿಲ ಮುಂತಾದವರೊಡನೆ ಚರ್ಚಿಸಿ ಮಂಗಳೂರಿನಲ್ಲಿ **ಜಮಾತು**ಪಳಿಗೆ 'ಧರ್ಮಪರಿಹಾರ' ನೀಡಿದ. ಹೀಗೆ ತಿಮ್ಮಣ್ಣ ಒಡೆಯನು ಜಮಾತಿನವರ ಪ್ರತಿಭಟನೆಗೆ ಮತ್ತು ಕೇಂದ್ರ ಸರಕಾಳದ ಒತ್ತಡಕ್ಕೆ ಮಣಿಯಬೇಕಾಯಿತು.

ಅಣ್ಣಪ್ಪ ಒಡೆಯ ಬಾರಕೂರು ರಾಜ್ಯದ ರಾಜ್ಯ ಪಾಲನಾಗಿದ್ದಾಗ ಕ್ರಿ.ಶ. 1436ರಲ್ಲಿ ಶಿವಳ್ಳಿ (ಉಡುಪಿ) ಯಲ್ಲಿ ಸಮಸ್ಯೆಯೊಂದನ್ನು ಇದಿರಿಸಬೇಕಾಯಿತು. ಅವನು ಶಿವಳ್ಳಿಯ ಮೇಲೆ ಧಾಳಿಮಾಡಿ ಆ ಊರನ್ನೇ ಹಾಳುಗೆಡಹಿದ.[6] 'ಕಟ್ಟಳೆಯವರು' ಮತ್ತು ಬಾರಕೂರಿನ ಹತ್ತುಕೇರಿಯವರು ಸೇರಿ ಅಲ್ಲಿನ ಗ್ರಾಮಸ್ಥರನ್ನು ಸಾಂತ್ವನಗೊಳಿಸಿದರು. ಅಣ್ಣಪ್ಪಒಡೆಯನ ಈ ಕ್ರಮ ದಿಂದ ಉಡುಪಿಯ ಶ್ರೀಕೃಷ್ಣ ದೇವಾಲಯವೂ ತೊಂದರೆ ಗೊಳಗಾಗಿತ್ತು. ಬಾರಕೂರಿನ ಪುರಸಭೆ ಮತ್ತು ಪ್ರಾಂತೀಯ ಸಮಿತಿಯವರ (Provincial Council) ಮಧ್ಯ ಪ್ರವೇಶದಿಂದ ತೊಂದರೆಗೊಳಗಾದವರಿಗೆ ಪರಿಹಾರ ದೊರೆಯಿತು.

ರಾಜ್ಯಪಾಲರು ದಬ್ಬಾಳಿಕೆ ನಡೆಸಿದ ಇನ್ನೊಂದು ಉದಾಹರಣೆ ಬಾರಕೂರು ರಾಜ್ಯದ ರಾಜ್ಯಪಾಲನಾಗಿದ್ದ ತಿಮ್ಮಣ್ಣ ಒಡೆಯನದು. ಉಡುಪಿ ತಾಲೂಕಿನ ಚಾಂತಾರು ಮತ್ತು ಹಾರಾಡಿ ಗ್ರಾಮಗಳಲ್ಲಿ ದೊರೆತ ಎರಡು ಹೊಸ ಶಾಸನಗಳು ಅಲ್ಲಿ ನಡೆದ ಎರಡು ಘಟನೆ ಗಳನ್ನು ಉಲ್ಲೇಖಿಸುತ್ತವೆ. ಚಾರದ ತಿಮ್ಮಣ್ಣ ಒಡೆಯ ಕ್ರಿ.ಶ. 1442 ಮತ್ತು 1444ರ ಮಧ್ಯೆ ಬಾರಕೂರಿನ ರಾಜ್ಯಪಾಲನಾಗಿದ್ದಾಗ ಚಾಂತಾರಿನಲ್ಲಿ ಈಶ್ವರ ಉಂಗುರ ವಳ್ಳಿಯ ಮನೆಯನ್ನು "ಸುಟ್ಟು ಹಾಳುಮಾಡಿ ಮರನೂ ಕಡಿದು ದಾರೆಮೇರೆಯನೂ ತಪ್ಪಿಸಿದ್ದರಿಂದ" ಉಂಗುರ ವಳ್ಳಿ ಪ್ರತಿಭಟಿಸಿ ಊರು ಬಿಟ್ಟುಹೋದ.

ಹಾರಾಡಿಯಲ್ಲಿ ವಾರಂಬಳ್ಳಿಯ ಮೇಲೂ ಇಂತ ಹದೇ ದಬ್ಬಾಳಿಕೆಯನ್ನು ತಿಮ್ಮಣ್ಣ ಒಡೆಯ ಮಾಡಿದ. ಅವನು ಬ್ರಹ್ಮಾವರ ಪಡುವ ಭಾಗದ ಗ್ರಾಮಿಣಿಯಾಗಿದ್ದ ಅಂಣವೋರಂಬಳ್ಳಿಯ ಮನೆಯನ್ನು ಸೂರೆಗೈದು ಸುಟ್ಟು ಹಾಕಿದ್ದರಿಂದಾಗಿ ಆ ವೋರಂಬಳ್ಳಿ ಮನೆಯವರು ಈ ಜಾಗ ಬಿಟ್ಟು ಹೋದರು. ಈ ಎರಡೂ ಮನೆತನಗಳವರು ಗ್ರಾಮಿಣಿಗಳಾಗಿದ್ದು ಈ ಪ್ರದೇಶದಲ್ಲಿ ಸಾಕಷ್ಟು ಪ್ರಭಾವಿ ಗಳಾಗಿದ್ದವರು. ಬಲಾತ್ಕಾರದ ತೆರಿಗೆ ಸಂಗ್ರಹಕ್ಕೆ **ಸಂಬಂಧಿಸಿದಂತೆ** ಈ ಘಟನೆ ನಡೆದಿರಲೂಬಹುದು. ನಂತರ ರಾಜ್ಯಪಾಲನಾಗಿ ಬಂದ ರೂಪಣ್ಣ ಒಡೆಯನು

3. S.I.I. Vol. VII No. 349; Ramesh K. V. A History of South Kanara (Dharwad, 1970) p. 162.
4. S.I.I. Vol VII No. 182.
5. Gururaja Bhat P, Studies in Tulava History and Culture (Kallianpur, 1975) pp. 194-95; Kamath S. U., 'Hanjamana', The Journal of the Institute of Iudian Studies, (Udupi 1978) vol I.
6. S.I.I. vol VII No. 296.

ಕ್ರಿ.ಶ. 1447ರಲ್ಲಿ ಈ ಊರುಗಳಿಗೆ ಬಂದು ಗ್ರಾಮ ಗಳನ್ನು ಸಂತೈಸಿ ನೊಂದವರಿಗೆ ಪರಿಹಾರ ನೀಡಿದ.[7]

ಕ್ರಿ.ಶ. 1451–52 ರಲ್ಲಿ ಬಾರಕೂರು ರಾಜ್ಯದ ರಾಜ್ಯಪಾಲನಾಗಿದ್ದ ಭಾನಪ್ಪ ಒಡೆಯ ಮಟಪಾಡಿಯಲ್ಲಿ ಉಂಗುರಪಳ್ಳಿಯ 'ಅನ್ಯಮಾನ್ಯ'ವನು ತಪ್ಪಿಸಿದರಿಂದ ಪ್ರತಿಭಟನಾರ್ಥ ಅವನು ಊರನ್ನೇ ತ್ಯಜಿಸಿದ. ನಂತರ ರಾಜ್ಯಪಾಲನಾಗಿ ಬಂದ ಪಂಡರಿದೇವ ಒಡೆಯ ಭಾನಪ್ಪ ಒಡೆಯನನ್ನೂ ಅಧಿಕಾರಿ ಹರಿಯಪ್ಪನನ್ನೂ ಕರೆದುಕೊಂಡು ಮಟಪಾಡಿಗೆ ಬಂದು ಉಂಗುರಪಳ್ಳಿಯನ್ನು ಊರಿಗೆ ವಾಪಸು ಕರೆಸಿ ಅವನಿಗೆ ಪರಿಹಾರ ನೀಡಿದ (ಕ್ರಿ.ಶ. 1415) "ಮಟಪಾಡಿ ಗ್ರಾಮ ಹದಿನೈದು" ಮನವಿ ಮಾಡಿಕೊಂಡ ಮೇರೆಗೆ ಉಂಗುರಪಳ್ಳಿ ವಾಪಸು ಬಂದ, ಅವನಿಗೆ ಪರಿಹಾರ ದೊರೆಯಿತು. ಊರ ಹಾಲ ಹಬ್ಬ ವನ್ನು ನಡೆಸುವ ಅಧಿಕಾರವನ್ನೂ ಅವನಿಗೆ ನೀಡ ಲಾಯಿತು.[8]

ವಿಜಯನಗರದ ಬಾರಕೂರು ರಾಜ್ಯದಲ್ಲಿ ಸಾಮ್ರಾ ಜ್ಯದ ತೆರಿಗೆ ನೀತಿಗೆ ಕ್ರಿ.ಶ. 1536 ರಲ್ಲಿ ಪ್ರತಿಭಟನೆ ವ್ಯಕ್ತವಾದಂತೆ ಕಾಣುತ್ತದೆ. 'ರಾಜಕಾರ್ಯಕ್ಕಾಗಿ' ಉಪ್ಪೂರು ಗ್ರಾಮದ ಮೇಲೆ ರಾಜ್ಯಪಾಲ ಕೊಂಡಪ್ಪ ಒಡೆಯ ಸೈನ್ಯದೊಂದಿಗೆ ಧಾಳಿಮಾಡಿದ. ಊರಿನವರ ಪ್ರಬಲ ಪ್ರತಿಭಟನೆ ಹಿಂಸಾರೂಪ ತಳೆಯಿತು. ಹಲವು ಗಂಡಸರು ಪ್ರಾಣ ಕಳೆದುಕೊಂಡರು, ಹೆಂಗಸರ ಮೇಲೂ ರಾಜ್ಯಪಾಲನ ಕಡೆಯವರು ಕೈಮಾಡಿದರು. ಕೊನೆಗೂ ಕೊಂಡೆಪ್ಪ ಒಡೆಯ ಈ ಊರಿನ ಶಿವಕೇಕುಡೆಗೆ ಹೆಣ್ಣಿನ ನಿರಿಗೆಗೆ (ಪರಿಶುದ್ಧಿಗಿ) ಪರಿಹಾರ ನೀಡ ಬೇಕಾಯಿತು. ಕೋಟೇಶ್ವರನ ಶಾಸನ ಸೂಚಿಸುವಂತೆ ಪ್ರಾಯಶಃ ಕೊಂಡಪ್ಪ ಒಡೆಯ ತನ್ನ ಹುದ್ದೆಯನ್ನು ಕಳೆದುಕೊಳ್ಳಬೇಕಾಯಿತು.

ಕ್ರಿ.ಶ. 1544 ರಲ್ಲಿ ಆಚಪ್ಪ ಒಡೆಯ ಬಾರಕೂರು ರಾಜ್ಯವನ್ನು ಆಳುವಾಗ ಕೋಟಿಕೇರಿಯ ಸೆಟ್ಟಿಕಾರ ಬೆಮ್ಮಬಾಲೆಸೆಟ್ಟಿಯ ಮಗಳ ಮೇಲೆ ಅತ್ಯಾಚಾರವೆಸ ಗಿದ್ದರಿಂದ ("ನಿಮ್ಮ ಹೆಣ್ಣಿನ ಮೇಲೆ ತಪ್ಪಿಸಿದಕೆ....") ಬಾರಕೂರಿನ ಹತ್ತು ಕೇರಿಯವರ ಪ್ರತಿಭಟನೆಯನ್ನು ಇದಿರಿಸಬೇಕಾಯಿತು. ಪುರಸಭೆಯವರ ಈ ಪ್ರತಿಭಟನೆ ಯಿಂದಾಗಿ ಆಚಪ್ಪ ಒಡೆಯ ತನ್ನ ತಪ್ಪಿಗಾಗಿ ಬೆಮ್ಮ ಬಾಲೆಸೆಟ್ಟಿ ವಂಶಪಾರಂಪರ್ಯವಾಗಿ ಉಪ್ಪಿಲಾಡಿಯಲ್ಲಿ (ಬನ್ನಾಡಿ) ಅರಮನೆಯ ಭೂಮಿಯಲ್ಲಿನ ಆದಾಯ ಅನುಭವಿಸಿ ಬರುವಂತೆ ಪರಿಹಾರವನ್ನು ನೀಡಿದ.

ಎಷ್ಟೇ ಜಾಗರೂಕವಾಗಿ ಕಾರ್ಯನಿರ್ವಹಿಸ ಬೇಕಾದ ಪರಿಸ್ಥಿತಿಯಿದ್ದರೂ ಕೆಲವು ರಾಜ್ಯಪಾಲರು ವಿವಿಧ ಸಂದರ್ಭಗಳಲ್ಲಿ ತಮ್ಮ ಅಧಿಕಾರ ಮೀರಿ ದಬ್ಬಾ ಳಿಕೆಯಿಂದ ವರ್ತಿಸಿದರು. ಕೆಲವು ಸಂದರ್ಭಗಳಲ್ಲಿ ಹೆಚ್ಚಿನ ತೆರಿಗೆ ಇಂತಹ ಪರಿಸ್ಥಿತಿಗೆ ಎಡೆಮಾಡಿಕೊಟ್ಟಿರ ಬಹುದು. ಇದಕ್ಕಿಂತ ಹೆಚ್ಚಾಗಿ ತೆರಿಗೆ ಸಂಗ್ರಹಿಸುವ ರೀತಿ, ಬಲಾತ್ಕಾರ ಇತ್ಯಾದಿ ಜನರ ಪ್ರತಿಭಟನೆಗೆ ಕಾರಣ ವಾಗಿರಬಹುದು. ಶಕ್ತಿಪ್ರಯೋಗದ ಪ್ರತಿಭಟನೆ ಸಾಧ್ಯ ವಾಗದಿದ್ದಾಗ ಜನ ಊರು ಬಿಟ್ಟು ಹೋದ ಉದಾಹರಣೆ ಗಳು ನಮಗೆ ದೊರೆಯುತ್ತವೆ. ಹೀಗೆ ಜನ ಊರು ತ್ಯಜಿಸಿ ಹೋಗುವುದು ರಾಜ್ಯದ ಆಡಳಿತಕ್ಕೆ ಕೆಟ್ಟ ಹೆಸ ರನ್ನು ತರುತ್ತಿದ್ದರಿಂದ ಸರಕಾರ ಕೂಡಲೇ ಕ್ರಮ ಕೈಗೊಳ್ಳುತ್ತಿತ್ತು.[10] ಮಂಗಳೂರು ಮತ್ತು ಬಾರಕೂರು ರಾಜ್ಯಗಳಲ್ಲಿ ಈ ರೀತಿಯ ಪ್ರತಿಭಟನೆಯನ್ನು ಸಲ್ಲಿಸಿ ಜನ ನ್ಯಾಯ ದೊರಕಿಸಿಕೊಂಡಿದ್ದರು. ಕೆಲವು ಬಾರಿ ಒಗ್ಗ ಟ್ಟಾಗಿ ಶಕ್ತಿಪ್ರಯೋಗದ ಪ್ರತಿಭಟನೆಯನ್ನೂ ಸಲ್ಲಿಸಿ ದ್ದರು.

ಮೇಲಿನ ಎಲ್ಲಾ ಉದಾಹರಣೆಗಳಿಂದ ದಬ್ಬಾಳಿಕೆ

---

7. ವಸಂತಶೆಟ್ಟಿ. ಬಿ; ಬ್ರಹ್ಮಾವರದ ಇತಿಹಾಸ, (ಬ್ರಹ್ಮಾವರ, ೧೯೮೮) ಪು. ೨೩–೨೪ ಮತ್ತು ೪೭–೪೯.
8. ಅದೇ, ಪು. ೨೪-೨೫. ಹೊಸತಾಗಿ ದೊರೆತ ಈ ಶಾಸನದ ಪೂರ್ಣ ಪಾಠ ಪು. ೪೯-೫೦ ರಲ್ಲಿದೆ.
9: ARSIE 1928-29 No. 487 & Ramesh K. V. Opcit p. 225. S.I.I. vol IX pt No. 578.
10. cf :-Mahalingam T.V; opcit, pp. 93–94. "The King is never prosperous even though he conquers the seven dvipas who has an officer who does not call back the subjects when they leave the state on account of suffering".... says Amuktamalyada.

ಯನ್ನು ಜನ ಸಹಿಸಿ ಸುಮ್ಮನಿರುತ್ತಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ತೊಂದರೆಗೊಳಗಾದವರ ಸಹಾಯಕ್ಕಾಗಿ ಪುರಸಭೆಗಳು, ಗ್ರಾಮಸಭೆಗಳು ಮುಂದೆ ಬರುತ್ತಿದ್ದವು. ಜನರ, ವ್ಯಾಪಾರಿ ಸಂಘಗಳ ಅಥವಾ ಜನರ ಪ್ರತಿನಿಧಿಗಳ ಕೆಲವು ವಿಶೇಷ ಅಧಿಕಾರಗಳನ್ನು ಕೇಂದ್ರ ಅಥವಾ ಪ್ರಾಂತೀಯ ಸರಕಾರ ಕಸಿದುಕೊಳ್ಳುವಂತಿರಲಿಲ್ಲ. ರಾಜ್ಯಪಾಲನ ವಿರುದ್ಧ ದೂರು ಬಂದಲ್ಲಿ ತನಿಖೆ ನಡೆಸಿ ಸಾಮ್ರಾಟ ಕ್ರಮ ತೆಗೆದುಕೊಳ್ಳುತ್ತಿದ್ದ, ಪ್ರಜೆಗಳಿಗೆ ಸಾಮ್ರಾಟನಿಂದ ನ್ಯಾಯ ದೊರೆಯುತ್ತಿತ್ತು, ಅನ್ಯಾಯವಾದಾಗ ಜನ ಕ್ಷಿಪ್ರವಾಗಿ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಿದ್ದರು. ನ್ಯಾಯ ದೊರಕಿಸಿಕೊಳ್ಳಲು ವಿವಿಧ ರೀತಿಯಲ್ಲಿ ಪ್ರಯತ್ನಿಸಿ ಸಫಲರಾಗುತ್ತಿದ್ದರು. ಇಂತಹ ಪ್ರತಿಕ್ರಿಯೆ ಆಡಳಿತ ವ್ಯವಸ್ಥೆಯ ಮೇಲೆ ತನ್ನದೇ ಆದ ಪರಿಣಾಮವನ್ನು ಬೀರಿತು. ○

# ಹೊಯ್ಸಳರ ಕಾಲದಲ್ಲಿ ಕೈಗಾರಿಕೆಗಳು

ಆರ್. ಗೋಪಾಲ್

ಯಾವುದೇ ಒಂದು ದೇಶದ ಸಂಪತ್ತಿಗೆ ಆ ದೇಶದ ಕೈಗಾರಿಕೆಗಳೇ ಮೂಲ ಕಾರಣ. ಆದ್ದರಿಂದ ಕೈಗಾರಿಕೆಗಳು ಹೊಯ್ಸಳರ ಕಾಲದ ಆರ್ಥಿಕ ಬೆಳವಣಿಗೆಗೆ ಬೆನ್ನೆಲುಬಾಗಿತ್ತೆಂದು ಹೇಳಬಹುದು. ಕೈಗಾರಿಕಾ ಉತ್ಪನ್ನಗಳ ಮೇಲೆ ತೆರಿಗೆ ವಿಧಿಸುತ್ತಿದ್ದ ಮಾಹಿತಿಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಸಾಹಿತ್ಯಾಧಾರಗಳು ಮತ್ತು ಅಂದಿನ ಕಾಲದ ಸಮಕಾಲೀನ ಗ್ರಂಥಗಳು ಹೊಯ್ಸಳರ ಕಾಲದ ಕೈಗಾರಿಕೆಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ. ಅಂದಿನ ಕಾಲದ ಕೈಗಾರಿಕೆಗಳಾದ ಜವಳಿ ಉದ್ಯಮ, ಬಣ್ಣ ಕಟ್ಟುವುದು, ಕಬ್ಬಿನ ಉತ್ಪನ್ನಗಳು, ಎಣ್ಣೆ ತಯಾರಿಕೆ, ಲೋಹಗಳ ಉತ್ಪನ್ನ, ಕಬ್ಬಿಣ ಮತ್ತು ಗಣಿ ಕೈಗಾರಿಕೆ, ಮಡಕೆ ಮಾಡುವುದು, ಉಪ್ಪಿನ ತಯಾರಿಕೆ, ಕಲ್ಲಿನ ಕೆತ್ತನೆ, ಬುಟ್ಟಿ ನೇಯುವುದು, ಆಭರಣಗಳ ತಯಾರಿಕೆ, ಮನೆ ಕಟ್ಟುವುದು, ಮರಗೆಲಸ ಮುಂತಾದ ಕೈಗಾರಿಕೆಗಳು ಮಹತ್ವದ ಸ್ಥಾನವನ್ನು ಹೊಂದಿದ್ದವು. ಬೃಹತ್ ಕೈಗಾರಿಕೆಗಳಿಗಿಂತ ಗೃಹಕೈಗಾರಿಕೆಗಳೇ ಪ್ರಮುಖವಾಗಿದ್ದು ಉತ್ಪನ್ನಗಳು ಹೆಚ್ಚು ಕೌಶಲ್ಯಪೂರ್ಣವಾಗಿದ್ದವು. ಉತ್ಪನ್ನಗಳನ್ನು ರಸ್ತೆಯ ಬದಿಯಲ್ಲಿ, ಅಂಗಡಿಗಳಲ್ಲಿ ಮತ್ತು ಸಂತೆಗಳಲ್ಲಿ ಮಾರಾಟ ಮಾಡಲಾಗುತ್ತಿತ್ತು. ಸಾಮಾಜಿಕ ಸ್ಥಿತಿಯನ್ನು ಪರಿಗಣನೆಗೆ ತೆಗೆದುಕೊಂಡಾಗ ಗೃಹ ಕೈಗಾರಿಕೆಗಳು ವಂಶಪಾರಂಪರ್ಯವಾಗಿ ಬೆಳೆದು ಬಂದಿರುವುದನ್ನು ಕಾಣಬಹುದಾಗಿದೆ.

ಜವಳಿ ಉದ್ಯಮದ ಮೇಲೆ ಹಲವು ಶಾಸನಗಳು ಬೆಳಕನ್ನು ಚೆಲ್ಲುತ್ತವೆ. ದಾರಗಳ ಮೇಲೆ ನೂಲುದೆರೆ[1] ಎಂಬ ತೆರಿಗೆಯನ್ನು ಸಂಗ್ರಹಿಸುತ್ತಿದ್ದ ಬಗ್ಗೆ ಕೋಲಾರದ ಶಾಸನವು ವಿವರಣೆ ನೀಡುತ್ತದೆ. ಮಗ್ಗದ ಮೇಲೆ ಮಗ್ಗದೆರೆ[2] ಎಂಬ ತೆರಿಗೆಯನ್ನು ವಸೂಲು ಮಾಡುತ್ತಿದ್ದ ಬಗ್ಗೆ ಚಾಮರಾಜನಗರ ಶಾಸನವೊಂದು ಮಾಹಿತಿ ನೀಡುತ್ತದೆ. ಹೊಲಿದ ಬಟ್ಟೆಗಳ ಮೇಲೂ ತೆರಿಗೆ ಹಾಕಿರುವುದನ್ನು ಚಿತ್ರದುರ್ಗದ[3] ಶಾಸನವೊಂದು ತಿಳಿಸುತ್ತದೆ. ಜವಳಿ ಉದ್ಯಮವು ಪ್ರಮುಖ ಉದ್ಯಮಗಳಲ್ಲೊಂದಾಗಿದ್ದು ಹದಿನಾಲ್ಕನೇ ಶತಮಾನದ ಮಧ್ಯಭಾಗದಲ್ಲಿ ಸುಮಾರು ಐದುಸಾವಿರ ನೇಕಾರರಿದ್ದರೆಂದು ಅಪ್ಪಾದೊರೈಯವರ[4] ಬರವಣಿಗೆಯಿಂದ ತಿಳಿದು ಬರುತ್ತದೆ. ಹತ್ತಿ, ಉಣ್ಣೆ, ರೇಷ್ಮೆ ಇವುಗಳು ಜವಳಿಯ ಪ್ರಮುಖ ಕಚ್ಚಾ ವಸ್ತುಗಳಾಗಿದ್ದವು. ಸೀರೆ, ಕುಪ್ಪಸ, ಪಂಚೆ, ಅಂಗಿ, ರಗ್ಗು, ಶಾಲು, ರುಮಾಲು ಮುಂತಾದವುಗಳನ್ನು ಹಲವು ಬಣ್ಣ ಮತ್ತು ಹಲವು ವಿನ್ಯಾಸದಲ್ಲಿ ಕಲಾತ್ಮಕವಾಗಿ ತಯಾರಿಸುತ್ತಿದ್ದರು. ಉಣ್ಣೆ ರಗ್ಗಿನ[5] ತಯಾರಿಕೆಯ ಬಗ್ಗೆ ದೊಡ್ಡಬಳ್ಳಾಪುರದ ಶಾಸನವು

1 E.C. X, Kl. 28, Dt. 1291
2 M.A.R. 1937, Ch, 52, pp. 202-03
3 E.C. XI, Cd. 21
4 Appadorai, Economic Condition of South India P. 452
5 E.C. IXDb, . 31

ಉಲ್ಲೇಖನ ಮಾಡುತ್ತದೆ. ಉಣ್ಣೆ ರಗ್ಗಿನ ತಯಾರಿಕೆಯಲ್ಲಿ ದಾವಣಗೆರೆ[6] ಮತ್ತು ದೊಡ್ಡಬಳ್ಳಾಪುರಗಳು ಪ್ರಮುಖ ತಯಾರಿಕಾ ಸ್ಥಳಗಳಾಗಿದ್ದವು ಎಂದು ಶಾಸನಗಳಿಂದ ತಿಳಿದುಬರುತ್ತದೆ.

ಬಟ್ಟೆಗಳಿಗೆ ಬಣ್ಣವನ್ನು ಕಟ್ಟಿ ಹಲವು ವಿನ್ಯಾಸದಲ್ಲಿ ನೇಯುತ್ತಿದ್ದ ಅವುಗಳಿಗೆ ಕಸೂತಿಯನ್ನು ಸಹ ಮಾಡುತ್ತಿದ್ದರು. ಚನ್ನಪಟ್ಟಣದ ಶಾಸನವೊಂದು[7] ಬಟ್ಟೆಗಳಿಗೆ ಬಣ್ಣ ಕಟ್ಟುವ ಕೈಗಾರಿಕೆಗಳ ಮೇಲೆ ತೆರಿಗೆ ಹಾಕುತ್ತಿದ್ದುದನ್ನು ಉಲ್ಲೇಖಿಸುತ್ತದೆ.

ಹೊಯ್ಸಳರ ಕಾಲದಲ್ಲಿ ಕಬ್ಬು ಪ್ರಮುಖ ಬೆಳೆಗಳಲ್ಲೊಂದಾಗಿದ್ದು ಕಬ್ಬಿನಿಂದ ಬೆಲ್ಲವನ್ನು ತಯಾರಿಸುತ್ತಿದ್ದರು. ಬೆಲ್ಲದ ತಯಾರಿಕೆಗೆ ಅಲದೆರೆ[8] ಎಂಬ ತೆರಿಗೆಯನ್ನು ಸಂಗ್ರಹಿಸುತ್ತಿದ್ದುದರ ಬಗ್ಗೆ ಕೋಲಾರದ ಶಾಸನವು ತಿಳಿಸುತ್ತದೆ. ಕಬ್ಬಿನ ಉತ್ಪನ್ನಗಳ ಯಂತ್ರಗಳ ಮೇಲೆ (Sugarcane mills) ತೆರಿಗೆ ಹಾಕುತ್ತಿದ್ದುದರ ಬಗ್ಗೆ ಕಡೂರಿನ ಶಾಸನ[9] ಮಾಹಿತಿ ನೀಡುತ್ತದೆ. ಸಂತೆಯಲ್ಲಿ ಮಾರುತ್ತಿದ್ದ ಬೆಲ್ಲದ ಮೇಲೂ ತೆರಿಗೆ ಹಾಕಲಾಗುತ್ತಿತ್ತೆಂದು ದೊಡ್ಡಬಳ್ಳಾಪುರದ[10] ಶಾಸನ ತಿಳಿಸುತ್ತದೆ.

ಎಣ್ಣೆ ಕೈಗಾರಿಕೆಯು ಮತ್ತೊಂದು ವಿಧದ ಕೈಗಾರಿಕೆಯಾಗಿದ್ದು, ಎಣ್ಣೆಯ ಬೀಜಗಳನ್ನು ಗಾಣದಲ್ಲಿ ಆಡಿಸಿ ಎಣ್ಣೆ ತೆಗೆಯಲಾಗುತ್ತಿತ್ತು. ತೆಂಗಿನಕಾಯಿಯಿಂದ ಎಣ್ಣೆ ತಯಾರುಮಾಡುತ್ತಿದ್ದ ಬಗ್ಗೆ ಬೇಲೂರಿನ ಶಾಸನ[11] ತಿಳಿಸುತ್ತದೆ. ಗಾಣದಿಂದ ಎಣ್ಣೆ ತೆಗೆಯುತ್ತಿದ್ದ ಕೈಗಾರಿಕೆಗಳ ಮೇಲೆ ಗಾಣದೆರೆ[12] ಎಂಬ ತೆರಿಗೆ ವಿಧಿಸುತ್ತಿದ್ದುದನ್ನು ಇಮ್ಮಡಿ ಬಲ್ಲಾಳನ ಬಳ್ಳಾರಿಯ ಶಾಸನ ತಿಳಿಸುತ್ತದೆ. ಎಣ್ಣೆಯನ್ನು ಅಡಿಗೆಗೆ ಮತ್ತು ದೀಪಗಳಿಗೆ ಉಪಯೋಗಿಸಲಾಗುತ್ತಿತ್ತು. ದೇವಾಲಯದ ಪಕ್ಕದಲ್ಲಿ ಗಾಣವೊಂದನ್ನು ಸಾರ್ವಜನಿಕರ ಉಪಯೋಗಕ್ಕಾಗಿ ನಿರ್ಮಿಸಲಾಗಿದ್ದು ಉಪಯೋಗಿಸಿದವರು ಸ್ವಲ್ಪ ಭಾಗ ಎಣ್ಣೆಯನ್ನು ಬಾಡಿಗೆ ರೂಪದಲ್ಲಿ ಕೊಡಬೇಕಾಗಿತ್ತು. ಆ ಎಣ್ಣೆಯಿಂದ ಊರ ದೇವರ ಗುಡಿಯಲ್ಲಿ ದೀಪವನ್ನು ಹಚ್ಚಲು ಉಪಯೋಗಿಸಲಾಗುತ್ತಿತ್ತೆಂದು ಮೈಸೂರಿನ[13] ಶಾಸನವೊಂದ ತಿಳಿಸುತ್ತದೆ.

ಲೋಹಗಳ ತಯಾರಿಕೆಯು ಹೊಯ್ಸಳರು ಕಾಲದಲ್ಲಿ ಅತ್ಯಂತ ಪ್ರಮುಖ ಕೈಗಾರಿಕೆಯಾಗಿತ್ತು. ಇದರ ಕಾಯಕವನ್ನು ವೀರ ಪಾಂಚಾಲರು[14] ಎಂಬ ಒಂದು ಮಧ್ಯಮ ವರ್ಗ ಅವಲಂಬಿಸಿತ್ತು. ವೀರ ಪಾಂಚಾಲರೆಂದರೆ ಕಮ್ಮಾರರು, ಬಡಗಿಗಳು, ಕಲ್ಲು ಕುಟಿಗರು, ಲೋಹ ತಯಾರಕರು ಮತ್ತು ಆಭರಣ ತಯಾರಕರು ಇವರನ್ನು ವಿಶ್ವಕರ್ಮ[15] ಕುಲದವರ ಎಂದು ಸಹ ಕರೆಯಲಾಗುತ್ತಿತ್ತು. ರಾಜರು ಮತ್ತು ಶ್ರೀಮಂತರು ವಿಶ್ವಕರ್ಮ ಕುಲದವರ ಕಲಾಪ್ರೌಢಿಮೆಗೆ ಮತ್ತು ಅಭಿವೃದ್ಧಿಗೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದರು.

ಕಬ್ಬಿಣ ಕೈಗಾರಿಕೆಯು ಈ ಕಾಲದ ಪ್ರಮುಖ ಕೈಗಾರಿಕೆಯೊಂದಾಗಿದ್ದು ಗುಬ್ಬಿ, ಚಿಕ್ಕನಾಯಕನಹಳ್ಳಿ ಮಾಗಡಿ ಮತ್ತು ಚನ್ನಪಟ್ಟಣಗಳು ಪ್ರಮುಖ ಕಬ್ಬಿ,

6 S. Gururajachar, Op.Cit., p. 72
7 E.C. X, Cp. 66
8 E.C. X, Kl. 110
9 E.C. VI, Kd. 49, p. 10, Dt. 1297
10 E.C. IX, Db. 31
11 E.C.V, Bl.155
12 S.I. IX, Part-I, No. 324, Dt. 1197-98
13 M.A.R. 1932, p. 237
14 E.C. VII, Sk. 118
15 A.R.I.E., 1917, No. 804

ಕೈಗಾರಿಕ ಪ್ರದೇಶಗಳಾಗಿದ್ದವೆಂದು ಕಡೂರಿನ ಶಾಸನ[16] ತಿಳಿಸುತ್ತದೆ. ಕಬ್ಬಿಣಗಳಿಂದ ಸಾಮಾನ್ಯವಾಗಿ ಆಯುಧಗಳನ್ನು ತಯಾರಿಸುತ್ತಿದ್ದರು. ಕಮ್ಮಾರ ವೃತ್ತಿಯ ಮೇಲೆ ತೆರಿಗೆ[17] ವಿಧಿಸುತ್ತಿದ್ದುದನ್ನು ಶಾಸನವೊಂದು ತಿಳಿಸುತ್ತದೆ. ಕತ್ತಿ, ಭರ್ಜಿ, ಬಿಲ್ಲು, ಮತ್ತು ಬಾಣಗಳನ್ನು ಸಾಮಾನ್ಯವಾಗಿ ತಯಾರಿಸಲಾಗುತ್ತಿತ್ತು. ಈ ಆಯುಧಗಳನ್ನು ಹೊಯ್ಸಳ ಮೂರನೇ ಬಲ್ಲಾಳನು ಮಹಮದಿಯರ ದಾಳಿಯಲ್ಲಿ ಉಪಯೋಗಿಸಿರುವುದನ್ನು ಅಮೀರ್‌ಖುಸ್ರು[19] ತನ್ನ ಬರವಣಿಗೆಯಲ್ಲಿ ತಿಳಿಸಿದ್ದಾನೆ. ಕಬ್ಬಿಣದ ಗಣಿಗಳ ಮೇಲೆ ತೆರಿಗೆ ಹಾಕಿರುವುದನ್ನು ಬೇಲೂರಿನ[20] ಶಾಸನವೊಂದು ತಿಳಿಸುತ್ತದೆ. ಸುತ್ತಿಗೆ, ಕತ್ತರಿ ಮತ್ತು ಅಡಿಗಲ್ಲುಗಳ ಮೇಲೆ ತೆರಿಗೆ ವಿಧಿಸಿರುವುದನ್ನು ಚಿಕ್ಕಮಂಗಳೂರಿನ[21] ಶಾಸನವೊಂದು ತಿಳಿಸುತ್ತದೆ. ಗಣಿಗಳನ್ನು ನೋಡಿಕೊಳ್ಳಲು ಸೂಪರಿನ್‌ಟೆನ್‌ಡೆಂಟ್[22] (ಆಕಾರ ಮಾಂಡಲಿಕ)ಗಳಿದ್ದರೆಂದು ಶಾಸನದಿಂದ ತಿಳಿದು ಬರುತ್ತದೆ.

ಹೊಯ್ಸಳರ ಕಾಲದಲ್ಲಿ ಮರದ ಕೆತ್ತನೆಯು ಮತ್ತೊಂದು ಪ್ರಮುಖ ಕೈಗಾರಿಕೆಯಾಗಿತ್ತು. ಬಾಗಿಲು, ತೊಲೆ, ಕುರ್ಚಿ, ಎತ್ತಿನಗಾಡಿಗಳು[23], ರಥಗಳು, ನೇಗಿಲು[24], ದೇವಾಲಯದ ಶಿಖರ[25] ಮುಂತಾದವುಗಳನ್ನು ತಯಾರಿಸಲಾಗುತ್ತಿತ್ತು. ಕ್ರಿ.ಶ. ೧೭೫೭–೯೮ರಲ್ಲಿ ಬೇಲೂರಿನ ಚೆನ್ನಕೇಶವ ದೇವಾಲಯದ ಮರದ ಶಿಖರವನ್ನು ಬದಲಾಯಿಸಿದುದನ್ನು ಶಾಸನ ಉಲ್ಲೇಖಿಸುತ್ತದೆ. ಮಾವು, ಹಲಸು, ಬೇವು ಮುಂತಾದ ಮರಗಳನ್ನು ಮರಗೆಲಸಕ್ಕೆ ಹೆಚ್ಚಾಗಿ ಉಪಯೋಗಿಸಲಾಗುತ್ತಿತ್ತು. ಬಿದಿರನ್ನು ಉಪಯೋಗಿಸಿ ಬುಟ್ಟಿ[26], ತಡಿಕೆ ಕಣಜ[27]ಗಳನ್ನು ತಯಾರಿಸಲಾಗುತ್ತಿತ್ತು. ಬುಟ್ಟಿ ನೇಕಾರರು ತಮ್ಮದೇ ಆದ ಶ್ರೇಣಿಯನ್ನು[28] ಹೊಂದಿದ್ದರು. ಬುಟ್ಟಿ ನೇಕಾರರ ಮೇಲೆ ತೆರಿಗೆ[29] ವಿಧಿಸಿರುವುದನ್ನು ಶಾಸನ ಉಲ್ಲೇಖಿಸಿದೆ.

ಕೆಲವು ಬಡಗಿಗಳನ್ನು ದೇವಾಲಯುಗಳ ಸಂರಕ್ಷಣೆಗೆ ಅವರ ಜೀವನಕ್ಕೆ ರಾಜರು ದತ್ತಿಗಳನ್ನು ಬಿಟ್ಟಿದ್ದರ ಬಗ್ಗೆ ಶಾಸನ ಉಲ್ಲೇಖಿಸುತ್ತದೆ. ಮುಮ್ಮಡಿ ನರಸಿಂಹನ ಕಾಲದಲ್ಲಿ ಮರಿಯಾನೆಯೋಜ ಮತ್ತಿತರ ಬಡಗಿಗಳನ್ನು ಸೋಮನಾಥಪುರದ ದೇವಾಲಯದ ಸಂರಕ್ಷಣೆಗೆ ನೇಮಿಸಿದ್ದು ಸಂರಕ್ಷಣ ವೆಚ್ಚವಾಗಿ ದತ್ತಿ ನೀಡಿರುವುದನ್ನು ಟಿ. ನರಸಿಪುರದ[30] ಶಾಸನ ವಿವರಿಸುತ್ತದೆ.

ಕಲ್ಲುಕೆತ್ತನೆ ಹೊಯ್ಸಳರ ಕಾಲದ ಮತ್ತೊಂದು ಕೈಗಾರಿಕೆಯಾಗಿದ್ದು ಹಲವು ಶಾಸನಗಳು ಇದರ ಮೇಲೆ ಬೆಳಕು ಚೆಲ್ಲುತ್ತವೆ. ಈ ಕಾಲದಲ್ಲಿ ಶಿಲ್ಪಿಗಳ ಒಂದು ವರ್ಗವೇ ಇದ್ದು ಹೊಯ್ಸಳರ ಕಲೆಯುನ್ನು ಅಂತರ

---

16 E.C. VI, Kd. 49
17 M.A.R. 1916, p. 51, Dt. 1077 A.D.
18 M.A.R. 1910, p. 35
19 Khazains ul-Futuh of Amir Khusran, p. 84
20 E.C.V, Bl. 166, Dt. 1279 A.D.
21 M.A.R. 1916, p. 51, Dt. 1077 A.D.
22 E.C.V, Bl. 166, Dt. 1279 A.D.
23 M.A.R. 1916, p.51
24 M.A.R. 1910, p. 35
25 M.A.R. 1911, No.63, p.50
26 E.C. IV, Hu. 24, Dt. 1162
27 E.C.V, Bl. 59, p. 58
28 E.C.V, Tn. 96
29 E.C., IV, Hn. 24, Dt. 1162
30 E.C.V, Tn. 96

ರಾಷ್ಟ್ರೀಯ ಮಟ್ಟಕ್ಕೇರಿಸಿದ್ದಾರೆ. ಇವರು ಉಪಯೋಗಿಸಿರುವ ತಾಂತ್ರಿಕತೆ, ಶಿಲ್ಪಜ್ಞಾನ, ದೇವಾಲಯಗಳ ನಿರ್ಮಾಣಕ್ಕೆ ತೋರಿರುವ ಶ್ರಮ, ಮುಂತಾದವು ಇವರ ಕಲಾಪ್ರೌಢಿಮೆಯನ್ನು ಎತ್ತಿಹಿಡಿದಿವೆ.

ಕ್ರಿ.ಶ. ೧೨೬೮ರ ಮುಮ್ಮಡಿ ನರಸಿಂಹನ[31] ಟಿ. ನರಸೀಪುರದ ಶಾಸನವು ಮಲ್ಲಿತಮ್ಮ[32], ಮಸಣಿತಮ್ಮ, ಬಾಲೆಯ, ಚಂದೇಯ, ಚಾಮಯ್ಯ, ಭರ್ಮಯ್ಯ, ನಂಜಯ್ಯ, ಭರತ, ಯಲಮಸಯ ಮುಂತಾದ ಖ್ಯಾತ ಶಿಲ್ಪಿಗಳನ್ನು ಹೆಸರಿಸುತ್ತದೆ. ಈ ಶಿಲ್ಪಿಗಳು ತಮ್ಮ ಕಲಾವಿದ್ವತ್ತಿನಿಂದ ರಾಜರು ಮತ್ತು ಶ್ರೀಮಂತರಿಂದ ಪ್ರಶಸ್ತಿಗಳನ್ನು ಪಡೆದು ಸಮಾಜದಲ್ಲಿ ಒಂದು ಗೌರವದ ಸ್ಥಾನವನ್ನು ಹೊಂದಿದ್ದರು. ಶಿಲ್ಪಕಲೆಯಲ್ಲಿ, ವೀರಗಲ್ಲು, ಮತ್ತು ದೇವಾಲಯಗಳ ನಿರ್ಮಾಣದಲ್ಲಿ ಹೆಚ್ಚು ಲಾಭವಿದ್ದುದರ ಫಲವೋ ಏನೋ ಇವರ ಮೇಲೆ ಸಹ ತೆರಿಗೆ ಹಾಕಲಾಗುತ್ತಿತ್ತೆಂದು ಹುಣಸೂರಿನ[33] ಶಾಸನ ತಿಳಿಸುತ್ತದೆ.

ಲೋಹಗಳಿಂದ ವಸ್ತುಗಳ ತಯಾರಿಕೆಗೆ ಚಿನ್ನ, ಬೆಳ್ಳಿ, ಹಿತ್ತಾಳೆ, ತಾಮ್ರ, ಕಬ್ಬಿಣ ಮುಂತಾದ ಲೋಹಗಳನ್ನು ಉಪಯೋಗಿಸಲಾಗುತ್ತಿತ್ತು. ಕ್ರಿ.ಶ. ೧೨೬೮ರ ಚನ್ನಪಟ್ಟಣದ[34] ಶಾಸನದಲ್ಲಿ ಬೆಳ್ಳಿಯಿಂದ ತಟ್ಟೆಗಳನ್ನು ಮಾಡಿಸಿ ದೇವಾಲಯಕ್ಕೆ ಅರ್ಪಿಸಿದುದರ ಉಲ್ಲೇಖವಿದೆ. ಹಿತ್ತಾಳೆ ಕೆಲಸದವರ ಮೇಲೂ ತೆರಿಗೆ[35] ಸಂಗ್ರಹಿಸಿರುವುದನ್ನು ನೋಡಬಹುದಾಗಿದೆ. ಪಾತ್ರೆಗಳು, ತಟ್ಟೆಗಳು, ಲೋಟಗಳು, ಬೋಗುಣಿ, ಬೇಸಿನ್‌ಗಳು, ಮುಂತಾದ ದಿನನಿತ್ಯ ಬಳಕೆಯ ವಸ್ತುಗಳನ್ನು ತಯಾರಿಸಲಾಗುತ್ತಿತ್ತು.

ಆಭರಣಗಳ ತಯಾರಿಕೆಯು ಹೊಯ್ಸಳರ ಕಾಲದಲ್ಲಿ ಪ್ರಮುಖ ಮತ್ತು ಮಹತ್ವವುಳ್ಳ ಕೈಗಾರಿಕೆಯಾಗಿತ್ತು. ಆಭರಣಗಳನ್ನು ಮುಖ್ಯವಾಗಿ ಚಿನ್ನ, ಬೆಳ್ಳಿ ಮತ್ತು ತಾಮ್ರಗಳಿಂದ ಮಾಡಲಾಗುತ್ತಿತ್ತು. ಹೊಯ್ಸಳರ ಕಾಲದಲ್ಲಿ ಚಿನ್ನದ ಗಣಿಗಳಿದ್ದು ಅವುಗಳ ಮೇಲೆ ತೆರಿಗೆ[36] ವಿಧಿಸುತ್ತಿದ್ದುದನ್ನು ಬೇಲೂರಿನ ಶಾಸನ ತಿಳಿಸುತ್ತದೆ. ಚಿನ್ನದ ತಟ್ಟೆ[37] ಮತ್ತು ಬೆಳ್ಳಿಯ ತಟ್ಟೆ[38]ಗಳನ್ನು ದೇವಾಲಯಗಳಿಗೆ ಕಾಣಿಕೆಯಾಗಿ ನೀಡಿರುವುದನ್ನು ಶಾಸನಗಳು ತಿಳಿಸುತ್ತವೆ.

ಚಿನ್ನಾಭರಣಗಳು ಆದೇಶದ ಸಂಪತ್ತಿನ ಪ್ರತೀಕವಾಗಿದ್ದವು. ಅರಸೀಕೆರೆಯ ಶಾಸನವೊಂದು ಚಿನ್ನಾಭರಣದ ಖಜಾನೆಯನ್ನು ನೋಡಿಕೊಳ್ಳಲು ಮಾಣಿಕ್ಯ ಭಂಡಾರಿ[39] ಎಂಬ ಅಧಿಕಾರಿಯಿದ್ದನೆಂದು ತಿಳಿಸುತ್ತದೆ. ಮತ್ತೊಂದು ಅರಸೀಕೆರೆಯ ಶಾಸನವು[40] ಮುಮ್ಮಡಿ ನರಸಿಂಹನ ಕಾಲದಲ್ಲಿ ರತ್ನ ಪರಿಣಿತರು ಇದ್ದ ಬಗ್ಗೆ ಮಾಹಿತಿ ನೀಡುತ್ತದೆ. ಕೋಲಾರ ಶಾಸನವು[41] ಅಕ್ಕಸಾಲಿಗರ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತು ಎಂದು ತಿಳಿಸುತ್ತದೆ. ಅರಸೀಕೆರೆಯ ಶಾಸನವು[42] ಕಿವಿಯೋಲೆಯ ಉಲ್ಲೇಖವನ್ನು ಮಾಡುತ್ತದೆ. ನಾಣ್ಯ ತಯಾರಿಕೆಯಲ್ಲಿ ಗುಣವನ್ನು ಕಾಪಾಡುವ ದೃಷ್ಟಿಯಿಂದ

---

31 E.C. III, p. 48, Dt. 1268
32 E.C.V, Bl. 59,
33 E.C. IV, Hu.24,
34 E.C. IX, Cp 65
35 M A.R. 1910, p. 35
36 E.C.V, Bl. 166
37 E.C. IX, Cp. 65
38 H.J.M.U. Vol. II,
39 E.C.V, Ak. 123
40 Ibid, Ak. 108,
41 E.C.X, Kl. 28, Dt. 1291
42 E.C.V, Ak. 110, Dt. 1142

ನಾಣ್ಯಪರೀಕ್ಷಕರಿದ್ದು[43] ಅವರುಗಳ ಮೇಲೆ ತೆರಿಗೆ ವಿಧಿಸು ತ್ತಿದ್ದುದನ್ನು ಕಡೂರಿನ ಶಾಸನವೊಂದು ವಿವರಿಸುತ್ತದೆ.

ಹೊಯ್ಸಳರ ಕಾಲದಲ್ಲಿ ಅಕ್ಕಸಾಲಿಗರ ವೃತ್ತಿ ಅಥವಾ ಕೈಗಾರಿಕೆ ವಂಶಪಾರಂಪರ್ಯವಾಗಿತ್ತು. ಅಕ್ಕಸಾಲಿಗರು ಕೌಶಲ್ಯಪೂರ್ಣವಾಗಿ ಆಭರಣಗಳನ್ನು ತಯಾರಿಸಿ ಖ್ಯಾತರಾಗಿದ್ದು ರಾಜರು ಮತ್ತು ಶ್ರೀಮಂತ ರುಗಳಿಂದ ಪ್ರಶಸ್ತಿಗಳನ್ನು ಪಡೆದಿದ್ದರು. ಮುಮ್ಮಡಿ ನರಸಿಂಹನ ಕಾಲದಲ್ಲಿ ಸೋಮನಾಥಪುರದ ದೇವಾಲಯದ ಆಭರಣಗಳನ್ನು ವಂಶಪಾರಂಪರ್ಯವಾಗಿ ಸಂರಕ್ಷಿಸಿ ಕೊಂಡು ಬಂದುದಕ್ಕಾಗಿ ದತ್ತಿ[44] ನೀಡಿದುದನ್ನು ಟಿ. ನರಸೀಪುರದ ಶಾಸನ ತಿಳಿಸುತ್ತದೆ. ಕ್ರಿ.ಶ. ೧೨೯೬ರ ಮಳವಳ್ಳಿ ಶಾಸನವು[45] ಮುಮ್ಮಡಿ ನರಸಿಂಹನು ಬೇಲೂರಿನ ಅಕ್ಕಸಾಲಿಗನು ಕೌಶಲ್ಯಪೂರ್ಣವಾಗಿ ಆಭರಣ ತಯಾರಿಸಿ ಕೊಟ್ಟುದಕ್ಕಾಗಿ ಕಾಣಿಕೆ ನೀಡಿರುವುದನ್ನು ವಿವರಿಸುತ್ತದೆ.

ಬಳೆ ಮತ್ತು ಮಣಿಗಳ ಕೈಗಾರಿಕೆ ಮತ್ತೊಂದು ವಿಧವಾಗಿದ್ದು ಸೇನಹಳ್ಳಿ, ಕಲ್ಲಕುಂದರಗೆರೆ ಮತ್ತು ನಿಟ್ಟೂರು ಪ್ರಮುಖ ತಯಾರಿಕ ಸ್ಥಳಗಳಾಗಿದ್ದವೆಂದು ಶಾಸನವೊಂದು[46] ತಿಳಿಸುತ್ತದೆ.

ಕುಂಬಾರಿಕೆಯು ಮತ್ತೊಂದು ರೀತಿಯ ಕೈಗಾರಿಕೆ ಯಾಗಿದ್ದು ಕಡಿಮೆ ಬಂಡವಾಳದಲ್ಲಿ ಸಾಮಾನ್ಯ ಜನರಿಗೆ ಅವಶ್ಯಕವಾದ ವಸ್ತುಗಳನ್ನು ತಯಾರಿಸುವಂತ ಕೈಗಾರಿಕೆ ಯಾಗಿತ್ತು. ಮಡಿಕೆಗಳು, ಬೋಗುಣಿಗಳು, ಗುಡಾಣ ಗಳು, ಹೆಂಚುಗಳು ಮತ್ತು ಇಟ್ಟಿಗೆಗಳನ್ನು ಕೈಯಿಂದ ಹಲವು ಬಣ್ಣಗಳಲ್ಲಿ, ಹಲವು ಆಕಾರಗಳಲ್ಲಿ ಮತ್ತು ಹಲವು ವಿನ್ಯಾಸಗಳಲ್ಲಿ ತಯಾರಿಸುತ್ತಿದ್ದರು. ಈ ಕುಂಬಾರ ವೃತ್ತಿಯ ಮೇಲೂ ತೆರಿಗೆ[47] ಹೇರಿರುವುದನ್ನು ಚಿಕ್ಕಮಂಗಳೂರಿನ ಶಾಸನ ತಿಳಿಸುತ್ತದೆ.

ಹಗ್ಗಗಳನ್ನು ನಾರು ಮತ್ತು ಚರ್ಮಗಳಿಂದ ತಯಾರಿಸುತ್ತಿದ್ದು ಚರ್ಮದ ಹಗ್ಗಗಳ ಮೇಲೆ ತೆರಿಗೆ[48] ವಿಧಿಸಿರುವುದನ್ನು ಕ್ರಿ.ಶ. ೧೯೯೧ರ ಮುಮ್ಮಡಿ ಬಲ್ಲಾಳನ ಕಡೂರಿನ ಶಾಸನ ತಿಳಿಸುತ್ತದೆ.

ಉಪ್ಪಿನ ತಯಾರಿಕೆಯು ಮತ್ತೊಂದು ವಿಧದ ಕೈಗಾರಿಕೆಯಾಗಿದ್ದು ಉಪ್ಪಿನ ತಯಾರಿಕರ ಮೇಲೆ ತೆರಿಗೆ[49] ವಿಧಿಸಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಆದರೆ ಹೊಯ್ಸಳರ ಕಾಲದಲ್ಲಿ ಸಮುದ್ರದ ನೀರಿನಿಂದ ಉಪ್ಪು ತಯಾರಿಸುತ್ತಿದ್ದ ಬಗ್ಗೆ ಸರಿಯಾದ ಮಾಹಿತಿ ದೊರೆಯುವುದಿಲ್ಲ.

ಮನೆ ಕಟ್ಟುವುದು ಮತ್ತೊಂದು ವಿಧದ ಕೈಗಾರಿಕೆ ಯಾಗಿದ್ದು ಭವ್ಯವಾದ ಮನೆ ಮತ್ತು ದೇವಾಲಯ ಗಳನ್ನು ನಿರ್ಮಿಸಲಾಗುತ್ತಿತ್ತು. ಮನೆಗಳ ಮೇಲೆ ತೆರಿಗೆ ಹಾಕಿರುವುದರ ಬಗ್ಗೆ ಚನ್ನಪಟ್ಟಣದ[50] ಶಾಸನ ಮಾಹಿತಿ ನೀಡುತ್ತದೆ. ○

43 E.C. VI, Kd. 49,
44 E.C.V, Tn. 96
45 E.C. IV, Ml. 65
46 K.I. Vol. II, No. 40
47 M.A.R. 1916, p. 51, Dt. 1077 A.D.
48 E.C. VI, Kd. 49, & M.A.R. 110, p. 35
49 M.A.R. 1910, p. 35
50 M.A.R. 1942, Dt. 1270

# ಟಂಕಾಧಿಕಾರಿ ಏಚಿಸೆಟ್ಟಿ

**ಡಾ॥ ಎ.ವಿ. ನರಸಿಂಹಮೂರ್ತಿ**

ಶಾಸನಗಳಲ್ಲಿ ನಾಣ್ಯಶಾಸ್ತ್ರಕ್ಕೆ ಸಂಬಂಧಿಸಿದ ಮಾಹಿತಿಗಳು ಹೇರಳವಾಗಿ ದೊರಕುತ್ತವೆಯಾದರೂ, ಅವುಗಳನ್ನು ನಾಣ್ಯಶಾಸ್ತ್ರಜ್ಞರು ಸರಿಯಾಗಿ ಬಳಸಿಕೊಂಡಿಲ್ಲವೆಂದರೆ ತಪ್ಪಾಗಲಾರದು.[1] ವಿವಿಧ ನಾಣ್ಯಗಳ ಹೆಸರುಗಳು, ಅವುಗಳ ಪ್ರಭೇದಗಳು, ಟಂಕಶಾಲೆಯ ಹೆಸರುಗಳು ಮುಂತಾದ ಮಾಹಿತಿಗಳು ಶಾಸನಗಳಲ್ಲಿ ಪ್ರಾಸಂಗಿಕವಾಗಿ ಕಾಣ ಬರುತ್ತವೆ.[2] ಅದೇ ರೀತಿಯಲ್ಲಿ ಟಂಕಶಾಲೆಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಗಳ ವಿಷಯವೂ ಕೆಲವು ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಇಂತಹ ಒಬ್ಬ ಟಂಕಾಧಿಕಾರಿ ಏಚಿಸೆಟ್ಟಿ. ಇವನ ವಿಷಯ ಮುಮ್ಮಡಿ ತೈಲನ ನರಗುಂದದ ಶಾಸನವೊಂದರಲ್ಲಿ ವಿವರವಾಗಿ ಹೇಳಲ್ಪಟ್ಟಿದೆ.[3] ಈ ಶಾಸನ ನರಗುಂದದಲ್ಲಿರುವ ಚಾಲುಕ್ಯ ದೊರೆ ಮುಮ್ಮಡಿ ತೈಲನ ಕಾಲಕ್ಕೆ ಸೇರಿದ್ದು, ಅಲ್ಲಿನ ಶಂಕರಲಿಂಗ ದೇವಾಲಯದ ರಂಗ ಮಂಟಪದಲ್ಲಿದೆ. ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ.

ಈ ಶಾಸನದ ಮುಖ್ಯ ಉದ್ದೇಶವೆಂದರೆ, ನರಗುಂದದ ಒಂದು ಭಾಗವಾದ ಹೇಮಂಗೇರಿಯಲ್ಲಿ ವಾಸವಾಗಿದ್ದ ಕುಪ್ಪಟಿ ಏಚಿಸೆಟ್ಟಿಯು ಬಡ ಜನಗಳ ಊಟಕ್ಕಾಗಿ ಕೊಟ್ಟ ದಾನಗಳ ವಿವರಗಳನ್ನು ತಿಳಿಸುವುದು. ಏಚಿಸೆಟ್ಟಿಯ ವಂಶಾವಳಿಯೂ ಹೇಳಲ್ಪಟ್ಟಿದೆ. ಅದು ಹೀಗೆ ಕಂಡಂತೆ ಇದೆ.

ಮಹದೇವ ಸೆಟ್ಟಿ — ದೇವ ಕಬ್ಬೆ
| ಮಗ
ಏಚಿ ಸೆಟ್ಟಿ — ಮಲ್ಲಿ ಕಬ್ಬೆ
|
ಅರ್ಜುನ ಸೆಟ್ಟಿ —
| ತಮ್ಮ
ಏಚಿ ಸೆಟ್ಟಿ — ಗೊಜ್ಜಿ ಕಬ್ಬೆ

ಏಚಿಸೆಟ್ಟಿಯು ಬಹಳ ಪ್ರಾಮಾಣಿಕನಾಗಿಯೂ, ಒಳ್ಳೆಯ ನಡತೆಯುಳ್ಳವನಾಗಿಯೂ, ಯಾವ ವಿಧವಾದ ಕೆಟ್ಟ ಗುಣಗಳೂ ಅವನಲ್ಲಿ ಕಾಣದೇ ಇದ್ದುದರಿಂದ, ಇವನೇ ಟಂಕಾಧಿಕಾರಿಯ ಕೆಲಸಕ್ಕೆ ಯೋಗ್ಯನಾದ ವ್ಯಕ್ತಿಯೆಂದು ತೈಲ ಮಹಾರಾಜನು ಇವನನ್ನು ಆ ಕೆಲಸಕ್ಕೆ ನಿಯಮಿಸಿದನು. ಅದಕ್ಕನುಗುಣವಾಗಿ ಕಾರ್ಯವನ್ನು ಏಚಿಸೆಟ್ಟಿಯು ನಿರ್ವಹಿಸಿದನು. ಅದನ್ನು ಗಮನಿಸಿದ ತೈಲನು ಇವನಿಗೆ ಹೇಮಕುಪ್ಪಟಿ ಎಂಬ ಬಿರುದನ್ನು ಕೊಟ್ಟನು. ಇವನು ಕುಪ್ಪಟಿ ಏಚಿಸೆಟ್ಟಿ ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದನು.

---

1 ಇತ್ತೀಚೆಗೆ ಈ ವಿಷಯದಲ್ಲಿ ಆಸಕ್ತಿ ಹೆಚ್ಚುತ್ತಿದೆ ಎಂಬುದು ಸಮಾಧಾನದ ಅಂಶ. ಕರಾಷಿಮ ಅವರಿಂದ ಸಂಪಾದಿಸಲ್ಪಟ್ಟ ಗ್ರಂಥ. 'ಇಂಡಸ್‌ವ್ಯಾಲಿ ಟು ಮೆಕಾಂಗ್ ಡೆಲ್ಟ ; ಇದರಲ್ಲಿ ಎ.ವಿ. ನರಸಿಂಹಮೂರ್ತಿ ; ದಿ ರೋಲ್ ಆಫ್ ಎಪಿಗ್ರಫಿ ಇನ್ ದಿ ಸ್ಟಡಿ ಆಫ್ ಸೌತ್ ಇಂಡಿಯನ್ ನ್ಯೂಮಿಸ್‌ಮ್ಯಾಟಿಕ್ಸ್. ಪು. ೭೭-೮೬

2 ಇತಿಹಾಸ ದರ್ಶನ, ಸಂ. ೩, ಸಂಚಿಕೆ ೧, ಪು. ೨೧೯-೨೨೪ "ಶಾಸನೋಕ್ತ ಗದ್ಯಾಣ ಪ್ರಭೇದಗಳು"

3 ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್, ಸಂ. ೧೮, ಶಾಸನ ಸಂಖ್ಯೆ ೧೬೦

ಏಚಿಸೆಟ್ಟಿಯನ್ನು ಅಚ್ಚಿನ ಅಧಿಕಾರಿ ಎಂದು ಕರೆಯಲಾಗಿದೆ. ಇವನು ನಾಣ್ಯಗಳ ಶುದ್ಧಾ ಶುದ್ಧತೆಯನ್ನು ತೀರ್ಮಾನಿಸುವಲ್ಲಿ ಪರಿಣತಿಯನ್ನು ಹೊಂದಿದ್ದನು. ಆದರಿಂದಾಗಿ ಈ ಕೆಲಸಕ್ಕೆ ಇವನೇ ಯೋಗ್ಯನೆಂದು ತೀರ್ಮಾನ ಮಾಡಲಾಯಿತು. ಇಲ್ಲಿ ಬಳಸಲಾಗಿರುವ ಪದ ಅಚ್ಚು ಎನ್ನುವುದು ಗಮನಾರ್ಹ. ಅಚ್ಚು ಎನ್ನುವ ಪದಕ್ಕೆ ಎರಡು ಅರ್ಥಗಳನ್ನು ಹೇಳಬಹುದು. ಮೊದಲನೆಯದಾಗಿ ಮರದಲ್ಲಿಯೋ, ಮಣ್ಣಿನಲ್ಲಿಯೋ, ಲೋಹದಲ್ಲಿಯೋ ಆಕಾರವನ್ನು ಕೊರೆದು ಅದರಲ್ಲಿ ಎಗಕದ ದ್ರವ್ಯವನ್ನು ಹುಯ್ದು ಬಿಂಬವನ್ನು ಮಾಡಿಕೊಳ್ಳುವ ಸಾಧನ.[4] ಕಟ್ಟೆ ತೊಣೆಯಲ್ಲಿದ್ದ ಟಂಕಶಾಲೆಯಲ್ಲಿ ನವಿಲಿನ ಅಚ್ಚನ್ನು ಹೊಂದಿದ್ದ ನಾಣ್ಯಗಳನ್ನು ಲೊಕ್ಕಿ ಗದ್ಯಾಣಗಳನ್ನಾಗಿ ಪರಿವರ್ತಿಸುವುದೇ ಮುಖ್ಯವಾದ ಕೆಲಸವಾಗಿದ್ದಿತೆಂದು ಶಾಸನವೊಂದು ತಿಳಿಸುತ್ತದೆ.[5] ಇದರಲ್ಲಿ ನವಿಲಚ್ಚಿನ ಪೊನ್ ಅಂದರೆ ನವಿಲಿನ ಚಿತ್ರವನ್ನು ಹೊಂದಿದ್ದ ಪೊನ್ ನಾಣ್ಯವೆಂಬುದು ಖಚಿತವಾಗುತ್ತದೆ. ಅಚ್ಚಿನ ಮೊಳೆ, ಅಚ್ಚಿನ ಕಾಣೆ ಮುಂತಾದ ಪದಗಳು ನಾಣ್ಯ ತಯಾರಿಕೆಯಲ್ಲಿ ಉಪಯೋಗದಲ್ಲಿದ್ದ ಸಾಧನಗಳೆಂದು ಮತ್ತೊಂದು ಶಾಸನದಿಂದ ತಿಳಿಯ ಬರುತ್ತದೆ.[6]

ಅಚ್ಚು ಎನ್ನುವ ಪದ ಇನ್ನೊಂದು ಅರ್ಥದಲ್ಲಿ ನಾಣ್ಯವನ್ನು ನಿರ್ದೇಶಿಸುತ್ತದೆ. ಕ್ರಿ.ಶ. ೧೧೩೩ರ ಶಾಸನದಲ್ಲಿ ಎರಡು ಅಚ್ಚುಗಳನ್ನು ದಾನ ಮಾಡಿದ ಸಂಗತಿಯನ್ನು ತಿಳಿಸುತ್ತದೆ.[7] ಮತ್ತೊಂದು ಶಾಸನ ಹನ್ನೆರಡು ಸಾವಿರ ಅಚ್ಚಿನ ದಾನವನ್ನು ಹೇಳುತ್ತದೆ.[8] ಚೋಳರ ಕಾಲದ ತಮಿಳು ಶಾಸನಗಳಲ್ಲಿಯೂ ಅಚ್ಚು ಎನ್ನುವ ಪದ ನಾಣ್ಯ ಎಂಬ ಅರ್ಥದಲ್ಲೇ ವಿಶೇಷವಾಗಿ ಬಳಕೆಯಾಗಿದೆ. ಉದಾಹರಣೆಗೆ ಚೋಳರಾಜ ರಾಜನ ಶ್ರೀರಂಜನ್ ಶಾಸನದಲ್ಲಿ ಅಚ್ಚುಗಳನ್ನು ದಾನವಾಗಿ ಕೊಟ್ಟ ವಿಷಯ ಪ್ರಸ್ತಾಪಿತವಾಗಿದೆ. ತಿರುವಾಂಕೂರಿನ ಇತ್ತೀಚಿನ ಶಾಸನಗಳಲ್ಲಿಯೂ ಅಚ್ಚು ಎನ್ನುವ ಪದ ನಾಣ್ಯ, ಅದರಲ್ಲಿಯೂ ವಿಶೇಷವಾಗಿ ಚಿನ್ನದ ನಾಣ್ಯದ ಅರ್ಥದಲ್ಲಿಯೇ ಬಳಕೆಯಾಗಿದೆಯೆಂದು ಕೆ.ಜಿ. ಕೃಷ್ಣನ್ ಹೇಳಿದ್ದಾರೆ.[9] ಮರಾಠೀ ಗ್ರಂಥ ದ್ರವ್ಯ ಪರೀಕ್ಷೆಯಲ್ಲಿ ಥಕ್ಕೂರಫೇರು, ಸೇವುಣರ ನಾಣ್ಯಗಳನ್ನು ಹೇಮಾಚ್ಚು ಎಂದು ಕರೆದಿದ್ದಾನೆ.[10] ಈ ಎಲ್ಲ ಉಲ್ಲೇಖಗಳನ್ನೂ ಗಮನಿಸಿದರೆ. ಅಚ್ಚಿನಿಂದ ತಯಾರಾದ, ಪಂಚ್ ಮಾರ್ಕ್ ತಾಂತ್ರಿಕತೆಗೆ ವಿರುದ್ಧವಾದ ನಾಣ್ಯಗಳನ್ನು ಅಚ್ಚು ಎಂದು ವ್ಯವಹರಿಸುತ್ತಿದ್ದರು ಎಂಬುದು ಗೊತ್ತಾಗುತ್ತದೆ. ಆದುದರಿಂದ ಅಚ್ಚಿನ ಅಧಿಕಾರಿ ಎಂದರೆ ನಾಣ್ಯದ ಅಧಿಕಾರಿ ಅಥವಾ ಟಂಕಶಾಲೆಯ ಅಧಿಕಾರಿ ಎಂದು ಅರ್ಥ ಮಾಡಬಹುದು.

ಇಲ್ಲಿ ಗಮನಿಸಬೇಕಾದ ಇನ್ನೊಂದು ಪದವೆಂದರೆ ಕುಪ್ಪಟೆ, ಅಂದರೆ ಕಬ್ಬಿಣದ ಒಲೆ ಅಥವಾ ಅಗ್ಗಿಷ್ಟಿಕೆ. ಇದು ಯಾವ ರೀತಿ ನಾಣ್ಯಾಧಿಕಾರಿಯ ಸಾಧನಗಳಲ್ಲಿ ಮುಖ್ಯವಾಗಿದ್ದಿತು ಎಂಬುವುದು ಗಮನಿಸಬೇಕಾದ ಅಂಶ. ಏಚಿ ಸೆಟ್ಟಿಗೆ ಹೇಮಕುಪ್ಪಟೆ ಎಂಬ ಬಿರುದನ್ನು ಕೊಡಲಾಯಿತು ಎಂದೂ, ಇದರಿಂದಾಗಿ ಇವನು ಕುಪ್ಪಟೆ ಏಚಿಸೆಟ್ಟಿ ಎಂಬ ಹೆಸರಿನಿಂದ ಖ್ಯಾತನಾಗಿದ್ದನು ಎಂದು ಶಾಸನ ತಿಳಿಸುತ್ತದೆ. ಬಹುಶಃ ಇದು ಸಾಮಾನ್ಯವಾದ ಒಲೆ ಅಥವಾ ಅಗ್ಗಿಷ್ಟಿಕೆಯಾಗಿರದೆ, ನಾಣ್ಯಗಳ ಶುದ್ಧತೆಯನ್ನು ತಿಳಿಯುವಲ್ಲಿ ಉಪಯೋಗದಲ್ಲಿದ್ದ ಒಂದು ಸಾಧನ ವಿಶೇಷವಾಗಿರಬೇಕೆಂದು ಊಹಿಸಬಹುದು. ಪ್ರಾಚೀನ ಕಾಲದಲ್ಲಿ ನಾಣ್ಯಗಳ ಶುದ್ಧತೆಯನ್ನು ಪರೀಕ್ಷೆ ಮಾಡುವಾಗ ಈ ರೀತಿಯ ಸಾಧನಗಳನ್ನು ಬಳಸುತ್ತಿದ್ದರು ಎಂದು ವಿಜಯನಗರವನ್ನು ಸಂದರ್ಶಿಸಿದ ಅನೇಕ ಇತಿಹಾಸಕಾರರು ಹೇಳಿದ್ದಾರೆ.[11]

---

4 ಕನ್ನಡ ನಿಘಂಟು, ಸಂ. ಪು. ೯೮,

5 ಸೌ.ಇಂ.ಇ., ಸಂ. ೯, ಭಾಗ ೧. ಶಾಸನ ೧೬೪

6 ಅದೇ

7 ಅದೇ, ಶಾಸನ ೨೨೮, 'ತುಂಬಳ ಬೀಡಿನ ಶ್ರೀ ಪಂಚಲಿಂಗ ದೇವರ ಅಂಗ ಭೋಗ ರಂಗಕ್ಕಂ ಎರಡು ಅಚ್ಚು.'

8 ಹನ್ನೆರಡು ಸಾವಿರ ಅಚ್ಚಂ ಕೊಟ್ಟು...

9 ಎಪಿಗ್ರಾಫಿಯ ಇಂಡಿಕ, ಸಂ. ೩೩, ಪು. ೧೬೧

10 ನ್ಯೂಮಿಸ್‌ಮ್ಯಾಟಿಕ್ ಡೈಜೆಸ್ಟ್, ಸಂ. ೪, ಭಾಗ ೧, ಪು. ೩೧

11 ಬಾರ್ಬೋಸ ಅವರ ಗ್ರಂಥ, ಸಂ. ೧, ಪು. ೧೫೬, ವರ್ತೆಮ, ಪು. ೧೨೨

ನರಗುಂದದಲ್ಲಿ ಈ ಟಂಕಶಾಲೆಯಿದ್ದ ಸ್ಥಳಕ್ಕೆ ಹೇಮಗಿರಿ ಎಂಬ ಹೆಸರು ಇದ್ದುದನ್ನು ಗಮನಿಸಬೇಕು. ಚಿನ್ನದ ನಾಣ್ಯಗಳನ್ನು ತಯಾರು ಮಾಡುತ್ತಿದ್ದ ಸ್ಥಳ ಇದ್ದುದರಿಂದ ಇದಕ್ಕೆ ಹೇಮಗಿರಿ ಎಂಬ ಹೆಸರು ಬಂದಿರುವುದು ವೇದ್ಯನಾಗುತ್ತದೆ. ಸ್ಥಳನಾಮ ಅಧ್ಯಯನಕ್ಕೆ ಇದೊಂದು ಉತ್ತಮವಾದ ಮಾಹಿತಿಯಾಗಿದ್ದು, ಈ ರೀತಿಯ ಸ್ಥಳನಾಮಗಳು ಇರುವ ಜಾಗಗಳಲ್ಲಿ ಟಂಕಶಾಲೆಯಿದ್ದಿತೇ ಎಂಬುದು ವಿಚಾರ ಯೋಗ್ಯ ಸಂಗತಿ. ಪ್ರಾಚೀನ ನಾಣ್ಯಗಳ ಮೇಲೆ ಟಂಕಶಾಲೆಯ ಹೆಸರು ಉಲ್ಲೇಖಿತವಾಗದೇ ಇರುವುದರಿಂದ, ಟಂಕಶಾಲೆಗಳು ಎಲ್ಲೆಲ್ಲಿದ್ದವು ಎಂಬುದನ್ನು ತಿಳಿಯಲು ಸರಿಯಾದ ಮಾಹಿತಿಗಳು ದೊರಕುವುದು ಬಲು ಕಷ್ಟ.[12] ಹೀಗಾಗಿ ಕಲ್ಯಾಣದ ಚಾಲುಕ್ಯರ ಕಾಲದ ಟಂಕಶಾಲೆಗಳು ಇದ್ದ ಎಲ್ಲ ಸ್ಥಳಗಳ ಹೆಸರುಗಳೂ ನಮಗೆ ದೊರಕಿಲ್ಲ.[13] ಇಂತಹ ಪರಿಸ್ಥಿತಿಯಲ್ಲಿ ಈ ಶಾಸನ, ಚಾಲುಕ್ಯರ ಕಾಲದಲ್ಲಿ ನರಗುಂದದ ಹೇಮಗೀರಿಯಲ್ಲಿ ಒಂದು ಟಂಕಶಾಲೆಯಿದ್ದಿತು ಎನ್ನುವ ವಿಷಯವನ್ನು ತಿಳಿಸುತ್ತದೆ. ಒಟ್ಟಿನಲ್ಲಿ ನಾಣ್ಯಶಾಸ್ತ್ರ ಅಧ್ಯಯನಕ್ಕೆ ವಿಶಿಷ್ಟ ಕೊಡುಗೆಯನ್ನು ಈ ಶಾಸನ ಕೊಡುತ್ತದೆ. ○

---

12 ಸಾಮಾನ್ಯವಾಗಿ ಮಹಮ್ಮದೀಯರ ನಾಣ್ಯಗಳ ಮೇಲೆ ಟಂಕಶಾಲೆಯ ಹೆಸರು ಇರುತ್ತದೆ

13 ಈ ಕಾಲದಲ್ಲಿ ಟಂಕಶಾಲೆಗಳು ಲೊಕ್ಕಿಗುಂಡಿ, ಸೂಡಿ, ಲಕ್ಕುಂಡಿ, ಕಡಿತಿಣೆಗಳಲ್ಲಿದ್ದವು. ಎ.ವಿ. ನರಸಿಂಹ ಮೂರ್ತಿ : ಕಾಯಿನ್ಸ್ ಆಫ್ ಕರ್ನಾಟಕ, ಪು. ೬೮

# ವಿಜಯನಗರ ಕಾಲದಲ್ಲಿ ದಕ್ಷಿಣ ಕನ್ನಡದ ವ್ಯವಸಾಯಿಕ ಪದ್ಧತಿಯಲ್ಲಿ ಆರುವಾರ

—ಬಿ. ಜಗದೀಶ ಶೆಟ್ಟಿ

ಕರಾವಳಿ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಜಯನಗರ ಕಾಲದಲ್ಲಿ ಪ್ರಚಲಿತವಿದ್ದ ವಿವಿಧ ಆರುವಾರ ಪದ್ಧತಿಗಳ ಅಧ್ಯಯನವೇ ಈ ಪ್ರಬಂಧದ ಮುಖ್ಯ ಉದ್ದೇಶ. ಈ ಪ್ರಬಂಧ ರಚನೆಗೆ ಪ್ರಮುಖ ಆಧಾರ ಶಾಸನಗಳು.

ವಿಜಯನಗರ ಕಾಲದ ಶಾಸನಗಳಲ್ಲಿ ಹಣದ ಅವಶ್ಯಕತೆಯನ್ನು ಪೂರೈಸುವುದಕ್ಕಾಗಿ ಅನೇಕ ರೀತಿಯ ಆರುವಾರ ಪದ್ಧತಿಯ ಅಡವು ವಿಧಾನಗಳನ್ನು ಕಾಣಬಹುದು. ವಿಜಯನಗರ ಕಾಲದ ಶಾಸನಗಳಲ್ಲಿ ಹಲವು ಬಾರಿ ಉಲ್ಲೇಖಿಸಲ್ಪಟ್ಟಿರುವುದರಿಂದ ಅವುಗಳು ಬಹಳಷ್ಟು ಪ್ರಚಾರ ಪಡೆದಿದ್ದವೆಂದು ನಿಶ್ಚಯಿಸಬಹುದು. ಆರುವಾರ ಶಾಸನಗಳಲ್ಲಿ ಕಾಣುವ ಅತೀ ಪ್ರಸಿದ್ಧಿಯಾದ ಭೂ ಅಡವು ಪದ್ಧತಿಯಾಗಿದೆ. ಕಿಟ್ಟೆಲ್ ಅವರ ಪ್ರಕಾರ "ಸ್ವಾಧೀನದೊಂದಿಗೆ ಮಾಡುವ ಭೂ ಅಡವು ಕ್ರಮ ಆರುವಾರ ಎಂದೆನಿಸಿಕೊಳ್ಳುತ್ತದೆ"[1] ಆರುವಾರವನ್ನು "ಭೂಮಿಯನ್ನು ಪರಭಾರೆ ಮಾಡುವುದರೊಂದಿಗೆ ಮಾಡುವ ಭೂಅಡವು ಕ್ರಮ—ಅನುಭವದ ಹಕ್ಕಿನೊಂದಿಗೆ ಅಡವು"[2] ಎಂದೂ ವಿವರಿಸಲಾಗಿದೆ. ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನುವಲ್ ಆರುವಾರವನ್ನು ಸ್ಪಷ್ಟವಾಗಿ ವಿವರಿಸುತ್ತಾ "ಸ್ವಾಧೀನತೆಯೊಂದಿಗಿನ ಭೂಅಡವು ಆರುವಾರವೆಂದು ಕರೆಯಲ್ಪಡುವುದು"[3] ಎಂದಿದೆ.

ಹೀಗೆ ಆರುವಾರವನ್ನು ಒಂದು ಭೂಅಡವು ಕ್ರಮವಾಗಿ ಈ ಕೆಳಗಿನಂತೆ ವಿವರಿಸಬಹುದು. ಹಣವನ್ನು ಸ್ವೀಕರಿಸಿದನಂತರ ಹಣ ಕೊಟ್ಟವನಿಗೆ ಭೂಮಿಯನ್ನು ಹಸ್ತಾಂತರಿಸಿ ಮಾಡುವ ಭೂಅಡವು ಕ್ರಮವನ್ನು ಆರುವಾರವೆನ್ನಬಹುದು. ಈ ರೀತಿಯ ಅಡವು ಪದ್ಧತಿಯಲ್ಲಿ ಕೊಟ್ಟ ಹಣಕ್ಕೆ ಪೂರ್ಣ ಜವಾಬ್ದಾರಿ ಇದೆ. ಏಕೆಂದರೆ ಹಣಕ್ಕೆ ಭದ್ರತೆ ನೀಡಿದ ಭೂಮಿ ಹಣ ಕೊಟ್ಟವನಿಗೆ ಹಸ್ತಾಂತರಿಸಲ್ಪಡುತ್ತದೆ ಮಾತ್ರವಲ್ಲ, ಅವನೇ ಅದನ್ನು ಅನುಭವಿಸಿಕೊಂಡು ಬರುತ್ತಾನೆ. ಆದುದರಿಂದ ಆರುವಾರ ಒಂದು ಭೂಅಡವು ಕ್ರಮ ಎಂಬ ಅಂಶ ಶಾಸನಗಳಲ್ಲಿ ವಿವರಿಸಲ್ಪಟ್ಟಿರುವುದರಿಂದ ಆರುವಾರ ಎಂದರೆ ತೆರಿಗೆ ಎಂಬ ವಾದವನ್ನು ಒಪ್ಪುವುದು ಕಷ್ಟವಾಗುತ್ತದೆ.[4]

---

1 Kittil : *Kannada English Dictionary Revised and Enlarged Edition* vol I (Madras 1968) p. 168

2 Rao Narasinga Ullal : *A Kissamwar glossary of Kannada words*. (Delli 1985) P. 49

3 Sturroek J. : *Madras District Mannuals South kanara* Vol. I (Madras 1894) P. 130

4 Ramesh K. V. : *A History of south Kanara* (Dharwar 1970) P. 279

ಕುಂದಾಪುರ ತಾಲೂಕು ಬಸ್ರೂರಿನ ಒಂದು ಶಾಸನ ಮನೆಯ ಜಾಗ, ಮರಗಳು, 9 ನಾಗಂಡುಗ ಮೂಡೆ ಜಾಗ ಮತ್ತು ಅವುಗಳ ಉತ್ಪತ್ತಿ ಸೇರಿ 100 ವರಹ ಗದ್ಯಾಣಗಳನ್ನು ಪಡೆದು ಅಡವು ಮಾಡಿದ ವಿಷಯವನ್ನು ತಿಳಿಸುತ್ತದೆ.[5] ಮೇಲಿನ ಶಾಸನದಲ್ಲಿ ಹಣ ಪಡೆದುಕೊಂಡವನು ಹಣ ಕೊಟ್ಟವನಿಗೆ ಭೂಮಿ ಯೊಂದಿಗೆ ಅದಕ್ಕೆ ಸಂಬಂಧಿಸಿದ ಎಲ್ಲಾ ಸೌಕರ್ಯ ಗಳನ್ನು ಹಸ್ತಾಂತರಿಸಿದುದನ್ನು ತಿಳಿಸುತ್ತದೆ. ಈ ರೀತಿ ಮಾಡಿದುದರಿಂದ ಭೂಮಿ ಪಡೆದುಕೊಂಡವನಿಗೆ ಅದರ ಪ್ರಯೋಜನವನ್ನು ಸಂಪೂರ್ಣವಾಗಿ ಪಡೆಯಲು ಸಹಾಯವಾದಂತಾಯಿತು.

ಬಸ್ರೂರಿನ ಕ್ರಿ.ಶಕ 1524ರ ಶಾಸನ ಆರುವಾರ ಸಾಲವಾಗಿ ಕೊಟ್ಟ 100 ಗದ್ಯಾಣ ಹಣಕ್ಕೆ 10 ಮೂಡೆ ಅಕ್ಕಿಯನ್ನು ಬಡ್ಡಿಯಾಗಿ ತೆಗೆದುಕೊಂಡ ವಿಷಯವನ್ನು ತಿಳಿಸುತ್ತದೆ.[6] ಮೇಲೆ ಹೇಳಿದ ಶಾಸನದಿಂದ ಹಾಗೂ ಇತರ ಶಾಸನಗಳಿಂದ ನಮಗೆ ತಿಳಿಯುವುದೇನೆಂದರೆ, ಸಾಮಾನ್ಯವಾಗಿ ಆರುವಾರ ಸಾಲಕ್ಕೆ ನಿಗದಿಪಡಿಸುತ್ತಿದ್ದ ಬಡ್ಡಿಯ ದರ ಶೇಕಡಾ 10. ಇಲ್ಲಿನ ಒಂದು ವಿಶೇಷತೆ ಯೆಂದರೆ ಹಲವಾರು ಶಾಸನಗಳು ಆರುವಾರದ ಬಗ್ಗೆ ತಿಳಿಸಿದರೂ ಸಹ, ಒಂದು ಮೂಡೆ ಭೂಮಿಯ ಮೇಲೆ ಸಾಮಾನ್ಯವಾಗಿ ಎಷ್ಟು ಹಣವನ್ನು ಸಾಲವಾಗಿ ನೀಡು ತ್ತಿದ್ದರು ಎಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಅಂದರೆ ಸಾಲದ ಮೊತ್ತವನ್ನು ನಿಗದಿಪಡಿಸುವಲ್ಲಿ, ಹಲವಾರು ವಿಷಯಗಳನ್ನು ಗಮನಕ್ಕೆ ತೆಗೆದುಕೊಳ್ಳು ತ್ತಿದ್ದರು. ಭೂಮಿಯ ಫಲವತ್ತತೆ, ನೀರಿನ ಸೌಕರ್ಯ, ಭೂಮಿಯಲ್ಲಿ ಒತ್ತೆ ಇಟ್ಟುಕೊಂಡವನಿಗೆ ಇರುವ ಆಸಕ್ತಿ ಹಾಗೂ ಇತರ ವಿಷಯಗಳು ಹೆಚ್ಚಾಗಿ ಸಾಲದ ಮೊತ್ತ ನಿಗದಿಪಡಿಸುವಲ್ಲಿ ಗಮನಕ್ಕೆ ತೆಗೆದುಕೊಳ್ಳುವ ವಿಷಯ ಗಳು. ಅಂತೆಯೇ ಎಲ್ಲಾ ವರ್ಗದ ಭೂಮಿಯನ್ನು ಸಾಲಕ್ಕೆ ಒಳಪಡಿಸುತ್ತಿದ್ದರು. ತೋಟವನ್ನು ಕೂಡಾ ಆರುವಾರಕ್ಕೊಳಪಡಿಸುತ್ತಿದ್ದರು.[7]

ನಮಗೆ ಲಭ್ಯವಿರುವ ಧಾರಗಳು ಈ ರೀತಿಯ ಅಡವು ಮಾಡುವಾಗ ತಯಾರಿಸುವ ಕಾಗದ ಪತ್ರಗಳ ಬಗ್ಗೆಯೂ ಹೇಳುತ್ತವೆ. ಹೀಗೆ ತಯಾರಿಸುವ ಕಾಗದ ಪತ್ರಕ್ಕೆ 'ಆರುವಾರ ಪತ್ರ' ಎಂದು ಹೆಸರು.[8] ಆರು ವಾರಕ್ಕೆ ಸಂಬಂಧಿಸಿದ ಎಲ್ಲಾ ನಿಯಮಗಳನ್ನು ಅಲ್ಲಿ ವಿವರವಾಗಿ ನಮೂದಿಸುವ ಕ್ರಮವಿತ್ತು. ಒಂದು ಶಾಸನ ಆರುವಾರ ಮಾಡುವುದಕ್ಕೆ ಸಂಬಂಧಿಸಿದ ಕಾರಣ ವನ್ನು ಹಾಗೂ ಇತರ ವಿಷಯಗಳನ್ನು ತಿಳಿಸುತ್ತದೆ.[9] ಆರುವಾರ ವ್ಯವಹಾರದಲ್ಲಿ ವ್ಯಕ್ತಿಗಳು ಮಾತ್ರವಲ್ಲ, ಸಂಸ್ಥೆಗಳು ಸಹ ಸಾಲುಗೊಳ್ಳುತ್ತಿದ್ದವು ಹಾಗೂ ಹಣ ವನ್ನು ಸಾಲವಾಗಿ ನೀಡುತ್ತಿದ್ದವು.[10]

ಆರುವಾರದಲ್ಲಿ ಹಲವು ವಿಧಗಳಿವೆ. ಅವುಗಳು ಯಾವುವೆಂದರೆ ಅರ್ಧಾರುವಾರ,[11] ಅಂತರಾರುವಾರ[12] ಮತ್ತು ಬಿಡಾರುವಾರ.[13] ಹೆಸರೇ ಸೂಚಿಸುವಂತೆ ಅರ್ಧಾರುವಾರು ಎಂದರೆ ಅರ್ಧ ಆರುವಾರ. ಆದರೆ ಈಗ ನಮಗೆ ಲಭ್ಯವಿರುವ ಆಧಾರಗಳ ಸಹಾಯದಿಂದ, ಅರ್ಧಾರುವಾರಕ್ಕೆ ಸಂಬಂಧಿಸಿದ ರೀತಿ, ನಿಯಮಗಳನ್ನು

---

5 511 vol IX : Pt II : No. 517
6 *Ibid*
7 *Ibid*
8 *Ibid* No. 446
9 *Ibvd* No. 460
10 Mudabidre Copper Plate Inscripition (In the Possession of Swamije of Jaian Mutt Mudabidre)
11 S.I.I. vol IX pt II: Nos 470; 471
12 *Abid* No. 512
13 *Abid*

ವಿವರವಾಗಿ ಹೇಳುವುದು ಕಷ್ಟ. ಅದನ್ನು ನಾವು ಹೇಗೆ ವಿವರಿಸಬಹುದೆಂದರೆ, ಭೂಮಿಯ ಭದ್ರತೆಯ ಮೇಲೆ ಆರುವಾರವಾಗಿ ಸಾಲತೆಗೆದುಕೊಂಡವ, ಆರುವಾರ ಮಾಡಿದ ಎಲ್ಲಾ ಭೂಮಿಯನ್ನು ಪರಭಾರೆ ಮಾಡದೆ ಅದರಲ್ಲಿ ಒಂದು ಭಾಗವನ್ನು ಮಾತ್ರ ತೆಗೆದುಕೊಂಡ ಹಣದ ಬಡ್ಡಿಗಾಗಿ ಪರಭಾರೆ ಮಾಡಿದರೆ ಹಾಗೂ ಉಳಿದ ಭಾಗ ಭದ್ರತೆ ಆಗಿದ್ದರೆ ಅದು ಅರ್ಧಾರುವಾರ ಎನಿಸಿ ಕೊಳ್ಳುವುದು.

ಅಂತರಾರುವಾರ ಎಂದರೆ "ಆರುವಾರ ಪದ್ಧತಿ ಯಂತೆ ಸಾಲ ತೆಗೆದುಕೊಂಡ ನಂತರ, ಇನ್ನೂ ಹೆಚ್ಚಿನ ಹಣ ಬೇಕಿದ್ದಲ್ಲಿ ಆಗ ಅಂತರಾರುವಾರ ಪದ್ಧತಿಯಂತೆ ಹಣ ತೆಗೆದುಕೊಳ್ಳಬಹುದು."[14] ಶಾಸನಗಳನ್ನು ಕೂಲಂಕಷ ವಾಗಿ ಪರಿಶೀಲಿಸಿದಲ್ಲಿ ಅಂತರಾರುವಾರವೆಂದಲ್ಲಿ ದ್ವಿತೀಯ ಬಾರಿಗೆ ಆರುವಾರಕ್ಕೊಳಪಡಿಸುವುದಲ್ಲ, ಬದಲಾಗಿ ಭೂಮಿಯನ್ನು ಅನುಭವಿಸುವ ಹಕ್ಕನ್ನು ಇನ್ನೊಬ್ಬನಿಗೆ ಹಸ್ತಾಂತರಿಸುವುದು (ಅಂದರೆ ಯಾವನು ಹಣವನ್ನು ನೀಡುತ್ತಾನೋ ಅವನಿಗೆ) ಎಂಬ ವಿಷಯ ಸ್ಪಷ್ಟವಾಗು ವುದು. ಇಲ್ಲಿ ಮೂಲ ಹಕ್ಕು ಮೂಲ ಅನುಭವದಾರನ ಹತ್ತಿರ ಇರುತ್ತದೆ.[15]

ಆರುವಾರದಲ್ಲಿ ಇನ್ನೊಂದು ವಿಧ ಬಿಡಾರುವಾರ. ಇದುವರೆಗಿನ ಅಭಿಪ್ರಾಯ ಎಂದರೆ 'ಬಿಡು' ಬೀಳು ಭೂಮಿ ಅಥವಾ ಬೇಸಾಯ ಮಾಡದೆ ಬಿಟ್ಟಿರುವ ಭೂಮಿ ಎಂದರ್ಥ. ಬಿಡಾರುವಾರವೆಂದರೆ ಬೇಸಾಯ ಯೋಗ್ಯವಾದ, ಆದರೆ ಬೇಸಾಯ ಮಾಡದೆ ಆರುವಾರ ವಾಗಿ ಬಿಟ್ಟ ಭೂಮಿಯ ಮೇಲೆ ವಿಧಿಸುವ ತೆರಿಗೆ.[16] ಆದರೆ ಅದು ಒಪ್ಪತಕ್ಕ ವಾದವಲ್ಲ. ಅದು ಬೇಸಾಯ ಮಾಡದ ಭೂಮಿಯ ಮೇಲೆ ವಿಧಿಸುವ ತೆರಿಗೆ ಅಲ್ಲ. ಶಾಸನಗಳಲ್ಲಿ ಕಂಡುಬರುವ 'ಬಿಡಾರುವಾರವಾಗಿ ಬಿಟ್ಟು ಕಡಂಗೊಂಡ'[17] ಮತ್ತು 'ಯಿ ಬಾಳ ಬಿಡಾರುವಾರವಾಗಿ ಬಿಟ್ಟು ಕಡಂಗೊಂಡದು ದೊಡ್ಡ ವರಹ 28'[18] ಮುಂತಾದ ವಿವರಗಳು ಬಿಡಾರುವಾರವೆಂದರೆ ಒಂದು ಅಡವು ಕ್ರಮ ಎಂಬ ಅಂಶವನ್ನು ಸ್ಪಷ್ಟಪಡಿಸುತ್ತವೆ. ಇಲ್ಲಿ ನಾವು ಗಮನಿಸಬೇಕಾದ ಅಂಶ ಏನೆಂದರೆ, ಬಿಡಾರು ವಾರದಲ್ಲಿ ಹಣವನ್ನು ಸಾಲವಾಗಿ ನೀಡಿ ಭೂಮಿಯನ್ನು ವಶಕ್ಕೆ ತೆಗೆದುಕೊಂಡ ವ್ಯಕ್ತಿ ಸ್ವಲ್ಪ ಸಮಯದ ನಂತರ ಭೂಮಿಯನ್ನು ಹಿಂದಕ್ಕೆ ಕೊಡಬೇಕು. ಭೂಮಿಯ ಮೂಲ ವಾರಸುದಾರ, ತಾನು ತೆಗೆದುಕೊಂಡ ಹಣಕ್ಕಿಂತ ಮೂರು ಪಾಲು ನೀಡಿ ಭೂಮಿಯನ್ನು ವಾಪಾಸು ಪಡೆ ಯುವ ಅವಕಾಶ ಬಿಡಾರುವಾರದಲ್ಲಿ ಇದೆ. ಅಂದರೆ ಬಿಡಾರುವಾರದಲ್ಲಿಯೂ ಭೂಮಿ ಪರಬಾರೆ ಮಾಡ ಬೇಕಾಗುತ್ತದೆ.[19] ಅಲ್ಲದೆ ಭೂಮಿಯೊಂದಿಗೆ ಅದಕ್ಕೆ ಸಂಬಂಧಿಸಿದ ಎಲ್ಲಾ ಸೌಕರ್ಯಗಳನ್ನು ಸಹ ಪರಬಾರೆ ಮಾಡುವ ಕ್ರಮವಿತ್ತು.[20] ಬಿಡಾರುವಾರವನ್ನು ಸಹ ಉತ್ತಮ ನೀತಿಯಲ್ಲಿ ದಾಖಲೆ ಮಾಡಿದ ಬಗ್ಗೆ ಹಾಗೂ ಬಿಡಾರುವಾರ ಪತ್ರವನ್ನು ವ್ಯವಸ್ಥೆ ಮಾಡುವ ಬಗ್ಗೆ ನಮಗೆ ಆಧಾರಗಳು ಸಿಗುತ್ತವೆ.[21]

ಇಲ್ಲಿ ಹೆಚ್ಚು ಗಮನಿಸಬೇಕಾದ ಅಂಶವೆಂದರೆ ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ಭಾಗದಲ್ಲಿ ಆರುವಾರಕೆ ಸಿಕ್ಕಿದಷ್ಟು ಉಲ್ಲೇಖಗಳು, ಜಿಲ್ಲೆಯ ದಕ್ಷಿಣ ಭಾಗದಲ್ಲಿ ಸಿಗುವುದಿಲ್ಲ. ಮೂಡಬಿದರೆಯ ಶಾಸನಗಳಲ್ಲಿ ಆರುವಾರ ಹಾಗೂ ಅದರ ವಿವಿಧ ವಿಧಗಳ ಬಗ್ಗೆ ಅನೇಕ ಉಪ

---

14 Bhat Gururaja P. *Studies in Tuluva History and Culture* (Kallianpur 1975) p. 203
15 S.I.I. vol IX pt II No. 525
16 Ramesh K.V. *AHOSK* (Dharwar 1970) p. 279
17 SII vol VII No. 368
18 SII vol IX pt II No. 517
19 SII vol VII No. 390
20 *Ibid* No 355
21 SII vol IX Pt II No. 655

ಹರಣೆಗಳು ಸಿಗುತ್ತವೆ.[22] ಮೂಡಬಿದರೆ ಪ್ರದೇಶದ ಹೆಚ್ಚಿನ ಶಾಸನಗಳು ಹಣ ಸಾಲ ಪಡೆಯಲು ಕಾರಣವನ್ನು ತಿಳಿಸುತ್ತಾ ಮದುವೆಗಾಗಿ ಹಣ ಸಾಲ ಪಡೆದುಕೊಂಡ ವಿಷಯವನ್ನು ತಿಳಿಸುತ್ತವೆ.[23]

ಆರುವಾರ ಅಡವು ಪದ್ಧತಿ ಭೂ ಪರಭಾರೆಗೆ ಒಂದು ಕಾರಣವಾಗಿತ್ತು. ಅದೇ ರೀತಿಯಲ್ಲಿ ತಾತ್ಕಾಲಿಕ ಭೂ ಒಡೆತನವು ಭೂ ಉತ್ಪತ್ತಿಯ ಮೇಲೆ ಪ್ರಭಾವ ಬೀರಿತು. ಅಂದರೆ ಸ್ವಲ್ಪ ಸಮಯದ ಮಟ್ಟಿಗೆ ಭೂಮಿಯ ಒಡೆತನವನ್ನು ಪಡೆದ ವ್ಯಕ್ತಿಗಳು ಅದರ ಅಭಿವೃದ್ಧಿಯಲ್ಲಿ ಯಾವ ಆಸಕ್ತಿಯನ್ನೂ ತೋರಿಸುವ ಸಾಧ್ಯತೆ ಇರಲಿಲ್ಲ.

ಇನ್ನೊಂದು ವಿಷಯವೆಂದರೆ ತುಂಬಾ ಹಣವಿದ್ದವರು ದೊಡ್ಡ ದೊಡ್ಡ ಭೂಮಾಲಿಕರಾಗುವುದು ಇದರಿಂದ ಸಾಧ್ಯವಾಯಿತು. ಇದು ಸಮಾಜದಲ್ಲಿ ಅವರ ಸ್ಥಾನಮಾನವನ್ನು ಹೆಚ್ಚಿಸಿತು. ಈ ಒಂದು ಅಡವು ಪದ್ಧತಿ ಪ್ರಚಲಿತವಿದ್ದುದರಿಂದ ಜನರಿಗೆ ಕುಟುಂಬದ ಅನೇಕ ಸಮಾರಂಭಗಳಿಗೆ ಹಣವನ್ನು ಪಡೆಯುವುದು ಸಾಧ್ಯವಾಯಿತು. ಒಟ್ಟಿನಲ್ಲಿ ಆರುವಾರ ಪದ್ಧತಿ ಸಮಾಜದಲ್ಲಿ ಜನರ ಸ್ಥಾನಮಾನ ಭೂ ಉತ್ಪತ್ತಿ ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಯ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತ್ತು.

---

22 Mudabidre copper plate Inscription No. 7. dated 1389 A. D (In the possession of Swamiji of Jaina Mutt, Mudabidre)

23 (i) Mudabidre Inscription No. 3

(ii) Copper plate Inscriptions of Lalitha Devi, Karnataka Bharati Samputa 17, Sanclike 3. January 1985.

* ಈ ಪ್ರಬಂಧ ತಯಾರಿಯಲ್ಲಿ ಸಹಕರಿಸಿದ ಡಾ। ಬಿ. ವಸಂತಶೆಟ್ಟಿ ಪ್ರಾಂಶುಪಾಲರು ಎಸ್.ಎಂ.ಎಸ್. ಕಾಲೇಜು, ಬ್ರಹ್ಮಾವರ, ದ.ಕ. ಅವರಿಗೆ ಕೃತಜ್ಞತೆಗಳು.

# "ಮತ್ತರ್"ನ ಆಧುನಿಕ ಭೂಪ್ರಮಾಣ ನಿರ್ಧರಿಸಲು ಸಾಧ್ಯವೇ ?

—ಶಿ. ರಾಜೇಂದ್ರಪ್ಪ

ಪ್ರಾಚೀನ ಕಾಲದ ದಾನ ಶಾಸನಗಳಲ್ಲಿ ದಾನ ನೀಡಿದ ಭೂಪ್ರಮಾಣವನ್ನು ಸೂಚಿಸುವಲ್ಲಿ ನಿವರ್ತನ,[1] ಮತ್ತರ್,[2] ಕಂಮ್ಮ,[3] ಪಟ್ಟಿಕಾ,[4] ಖಂಡುಗ,[5] ಸೊಲಗೆ,[6] ಕೊಳಗ,[7] ಬಳ್ಳ,[8] ತುಂಬು,[9] ಪುಟ್ಟಿ,[10] ಗುಳ,[11] ಕೂರಿಗೆ,[12] ಗುಂಟೆ[13] ಮುಂತಾದ ಪದಗಳು ವಿಸ್ತೃತ ಪ್ರಮಾಣದಲ್ಲಿ ಬಳಸಲ್ಪಟ್ಟಿವೆ. 'ನಿವರ್ತನ'[14] ವಿಶೇಷವಾಗಿ ಸಂಸ್ಕೃತ ಶಾಸನಗಳಲ್ಲಿ ಬಳಸಲ್ಪಟ್ಟಿದ್ದು, ಇದಕ್ಕೆ ಪರ್ಯಾಯವಾಗಿ ಕನ್ನಡ ಶಾಸನಗಳಲ್ಲಿ 'ಮತ್ತರು',[15] ತಮಿಳು ಶಾಸನಗಳಲ್ಲಿ ಪಟ್ಟಿಕಾ[16] ಬಳಸಲ್ಪಟ್ಟಿದೆಯೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ನಿವರ್ತನ, ಮತ್ತರ್, ಪಟ್ಟಿಕಾ, ಕಂಬ, ಗುಳ, ಗುಂಟೆ, ನೀಳ ಅಳತೆಗಳಾಗಿವೆ. ಇವುಗಳ ಮಾಪನದಲ್ಲಿ ವಿವಿಧ ಪ್ರಮಾಣದ ಅಳತೆಗೋಲುಗಳನ್ನು ಬಳಸುತ್ತಿದ್ದರೆಂಬ ಅಂಶ ಅಸಂಖ್ಯಾತ ಶಾಸನಗಳಿಂದ ವೇದ್ಯವಾಗುತ್ತದೆ. ಖಂಡುಗ, ಸೊಲಗೆ, ಕೊಳಗ, ಬಳ್ಳ, ತುಂಬು, ಪುಟ್ಟಿ, ಕೂರಿಗೆ ಬೀಜವರಿ ಆಧಾರಿತ ಮಾಪನ ಘಟಕಗಳಾಗಿವೆ

---

1 ಇಂ.ಆ. VI ಪು. ೨೪ ; ಅದೇ VII ಪು. ೩೫-೩೭

2 ಸೌ.ಇಂ.ಇ. IX ಭಾಗ ೧, ಶಾ.ಸಂ. ೪೬ ಪು.೨೬-೨೭

3 ಅದೇ, ಶಾ.ಸಂ. ೧೦೭, ಪು. ೮೨

4 ಟಿ.ವಿ. ಮಹಾಲಿಂಗಂ (೧೯೮೮) : ಇನ್‌ಸ್ಕ್ರಿಪ್ಷನ್ಸ್ ಆಫ್ ದಿ ಪಲ್ಲವಾಸ್ ಪು. ೬೪

5 ಎಂ.ಎ.ಆರ್. ೧೯೧೪, ಪು. ೨೭ ; ಕೆ.ವಿ. ರಮೇಶ್ (೧೯೮೮) : ಇನ್‌ಸ್ಕ್ರಿಪ್ಷನ್ಸ್ ಆಫ್ ದಿ ವೆಸ್ಟರ್ನ್ ಗಂಗಾಸ್, ಪು. ೯

6 ಎ.ಕ. III ನಾಗಮಂಗಲ ೨೬ ; ಕೆ.ವಿ. ರಮೇಶ್ : ಅದೇ, ಪು. ೧೨೯

7 ಸೌ.ಇಂ.ಇ. XVIII ಶಾ.ಸಂ. ೨೭೪, ಪು. ೩೫೭

8 ಎ.ಕ. I ೬೪ (೭೪) ಪು. ೪೩

9 ಎ.ಕ. X ಕೋಲಾರ ೨೨೯ ; ಕೆ.ವಿ. ರಮೇಶ್, ಪು. ೨೨೫ (ಅದೇ)

10 ಸೌ.ಇಂ.ಇ. V ಪು.೨೧೩ ; ಸಂ.ಇಂ.ಇ. VI ಸಂ. ೫೦೪

11 ಎ.ಕ. X ಭಾಗ-೧ ಪು. ೬೫ ; ಅದೇ ಭಾಗ-೨ ಪು. ೫೬ ; ಎ.ಇಂ. V ಪು. ೪೪೭

12 ಸೌ.ಇಂ.ಇ. XX ಪು. ೩೦೪

13 ಬಿ.ಆರ್. ಗೋಪಾಲ (೧೯೮೫) ; ವಿಜಯನಗರ ಇನ್‌ಸ್ಕ್ರಿಪ್ಷನ್ಸ್ ಸಂಪುಟ ೧ ಪು. ೫೯

14 ಉಲ್ಲೇಖ ಇರುವ ತಾಮ್ರಶಾಸನ ಅಸಂಖ್ಯಾತ ; ಯು.ಎನ್. ಘೋಷಾಲ್ : ದಿ ಅಗ್ರೇರಿಯನ್ ಸಿಸ್ಟಮ್ ಇನ್ ಏನ್‌ಶಂಟ್ ಇಂಡಿಯಾ ಪು. ೩೦

15 ಕ್ರಿ.ಶ. ೭ನೇ ಶತಮಾನದಿಂದ ೧೬ನೇ ಶತಮಾನದವರೆಗಿನ ಕನ್ನಡ, ತೆಲುಗು ಶಾಸನಗಳಿಗೆ ಹೇರಳವಾಗಿ ಉಲ್ಲೇಖಿಸಲ್ಪಟ್ಟಿದೆ ; ವಿವಿಧ ರೂಪಗಳಲ್ಲಿ

16 ಟಿ.ವಿ. ಮಹಾಲಿಂಗಂ (೧೯೫೫) : ಸೌತ್ ಇಂಡಿಯನ್ ಪಾಲಿಟಿ ಪು. ೧೫೦ ; ಘೋಷಾಲ್ ; ಅದೇ, ಪು. ೩೦

ಯಾದರೂ, ಕೆಲವು ಶಾಸನಗಳಲ್ಲಿ[17] ಖಂಡುಗದೊಂದಿಗೆ ಅಳತೆಗೋಲನ್ನೂ ಉಲ್ಲೇಖಿಸಿರುವುದು ಕಂಡುಬರುತ್ತದೆ. ಗಂಗರ ಕಾಲದ ಸಂಸ್ಕೃತ ಶಾಸನಗಳಲ್ಲಿ "ಖಂಡುಗವಾಪ"[18] ಪದದ ಪ್ರಯೋಗವಿದೆ.

ಸಂಸ್ಕೃತ ಶಾಸನಗಳಲ್ಲಿ ಸಾಮಾನ್ಯವಾಗಿ ಬಳಸಲ್ಪಟ್ಟಿರುವ "ನಿವರ್ತನ"ದ ಕನ್ನಡ ಅಪಭ್ರಂಶ 'ಮತ್ತರ್' ಎಂದು ಬಹುಪಾಲು ವಿದ್ವಾಂಸರು[19] ಒಪ್ಪಿದ್ದಾರೆ. ಇದನ್ನು ಸಮರ್ಥಿಸಲು ಕ್ರಿ.ಶ. ೮ನೇ ಶತಮಾನದ ಬಾದಾಮಿ ಚಲುಕ್ಯರ ಶಾಸನಗಳನ್ನು ಉಲ್ಲೇಖಿಸುತ್ತಾರೆ.[20] ಸಂಸ್ಕೃತ ಪದವಾದ 'ನಿವರ್ತನ' 'ಮತ್ತರ್' ರೂಪ ಹೇಗೆ ಹೊಂದಿತೆಂದು ಯಾರೂ ವಿವರಿಸಲು ಯತ್ನಿಸಿದಂತೆ ತೋರುತ್ತಿಲ್ಲ. ಮೇಲಾಗಿ ಪ್ರಾಚೀನ ಕಾಲದ ಈ ಮಾಪನಾ ಘಟಕಗಳಿಗೆ ಆಧುನಿಕ ಸಮಾನಾರ್ಥಕವನ್ನು ಸಮರ್ಪಕವಾಗಿ ಕಂಡುಕೊಳ್ಳಲೂ ಯತ್ನಿಸಿದಂತೆ ಕಾಣುತ್ತಿಲ್ಲ. ಈ ನಿಟ್ಟಿನಲ್ಲಿ ನಡೆದಿರುವ ಸಂಶೋಧನೆಗಳು ನಿರೀಕ್ಷಿಸಿದಷ್ಟು ಫಲಕಾರಿಯಾಗಿಲ್ಲ. ಅದಕ್ಕೆ ಕಾರಣ ಆಧಾರಗಳ ಅಲಭ್ಯತೆ ಎಂಬ ಅಂಶ ಮೇಲ್ನೋಟಕ್ಕೆ ಸಮಾಧಾನಕರ ಎನಿಸಿದರೂ, ಆಳಕ್ಕೆ ಇಳಿದಾಗ ಅಲ್ಲಗಳೆಯಲೇಬೇಕಾಗುತ್ತದೆ. ಚಾರಿತ್ರಿಕ ಆಕರಗಳ ಸಮೃದ್ಧ ಆಗರವಾಗಿರುವ ಈ ನಾಡಿನ ಆರ್ಥಿಕ ಇತಿಹಾಸ ಇನ್ನೂ ಅಂಧಕಾರದಲ್ಲಿ ಅಡಗಿರುವುದು ದುರದೃಷ್ಟಕರ.

ಸಂಸ್ಕೃತ ಶಾಸನಗಳಲ್ಲಿ ಸಾಮಾನ್ಯವಾಗಿ ಬಳಸಲ್ಪಟ್ಟಿರುವ 'ನಿವರ್ತನ', ಅಪರೂಪಕ್ಕೊಮ್ಮೆ ಕನ್ನಡ ಶಾಸನಗಳಲ್ಲೂ[21] ಬಳಸಲ್ಪಟ್ಟಿದೆ. ಇದನ್ನು ಇತಿಹಾಸಕಾರರು[22] ಗಮನಿಸಿದಂತೆ ತೋರುವುದಿಲ್ಲ. ಸಂಸ್ಕೃತದ 'ನಿವರ್ತನ' ಕನ್ನಡದ 'ಮತ್ತರ್' ರೂಪದ ನಡುವಣ ಕೊಂಡಿ ಪ್ರಾಯಶಃ ಕದಂಬ ಮಧುವರ್ಮನ ಕಾಲಕ್ಕೆ ಸೇರಿದ ಶಾಸನ ಒಂದರಿಂದ ಸ್ಪಷ್ಟವಾಗುತ್ತದೆ. ಆ ಶಾಸನದಲ್ಲಿ[23] ಆಶ್ಚರ್ಯವೆಂಬಂತೆ 'ವರ್ತನಿನ್', 'ಏಕವರ್ತನಿ' ಎಂಬ ಪ್ರಯೋಗಗಳಿವೆ. ಇದೇ ಮುಂದೆ 'ಮರ್ತರ್', 'ಮತ್ತರ್' ಎಂದು ಕನ್ನಡಕ್ಕೆ ರೂಪಾಂತರವಾಗಿರಬಹುದೇ ? ಎಂಬುದು ವಿದ್ವಾಂಸರ ವಿವೇಚನೆಗೆ ಬಿಟ್ಟದ್ದು.

ಕ್ರಿ.ಶ. ೮ನೇ ಶತಮಾನಕ್ಕೆ ಸೇರಿದ ಆಡೂರಿನ (ಏಕ ಶಿಲೆಯ ಮೇಲೆ ಕೆತ್ತಿರುವ ಸುಮಾರು ಒಂದೇ ಕಾಲಕ್ಕೆ ಸೇರಿದ ಎರಡು ಶಾಸನಗಳು) ಸಂಸ್ಕೃತ ಶಾಸನದಲ್ಲಿ[24] ನಿವರ್ತನ ಪ್ರಯೋಗವಿದ್ದು, ಕನ್ನಡ ಶಾಸನದಲ್ಲಿ[25] 'ಮತ್ತರ್'ನ ಉಲ್ಲೇಖವಿದೆ. ಈ ಶಾಸನಗಳಿಂದ 'ನಿವರ್ತನ'ಕ್ಕೆ ಪರ್ಯಾಯವಾಗಿ 'ಮತ್ತರ್' ಕನ್ನಡ ಶಾಸನಗಳಲ್ಲಿ ಪ್ರಯೋಗಿಸಲ್ಪಟ್ಟಿದೆ ಎಂಬ ಅಂಶ ಸ್ಪಷ್ಟವಾಗುತ್ತದೆ.

ಪ್ರಾಚೀನ ಶಾಸನಗಳಲ್ಲಿ ಈ ಮಾಪನಾ ಪದಗಳ ಬಳಕೆ ವಿಸ್ತೃತ ಪ್ರಮಾಣದಲ್ಲಿ ಬಳಸಲ್ಪಟ್ಟಿದ್ದರೂ, ಕಾಲಾಂತರದಿಂದಾಗಿ ಅವುಗಳ ಅಂದಿನ ಭೂಪ್ರಮಾಣದ ಗಾತ್ರ ಅಥವಾ ಅವುಗಳ ಇಂದಿನ ಸಮಾನಾರ್ಥಕಗಳ

---

17 ಎ.ಕ. I ಶಾಸನ ಸಂಖ್ಯೆ ನಂ. ೧ ಪು. ೧-೨ ; ಕೆ.ವಿ. ರಮೇಶ್ ; ಅದೇ, ಪು. ೬೫

18 ಎಂ.ಎ.ಆರ್. ೧೯೧೦ ಪು. ೧೦ ; ಕೆ.ವಿ. ರಮೇಶ್, ಅದೇ ಪು. ೩೯

19 ದೀಪಕ್‌ರಂಜನ್‌ದಾಸ್ (೧೯೬೯) : ಎಕನಾಮಿಕ್ ಹಿಸ್ಟರಿ ಆಫ್ ದಖ್ಖನ್, ಪು. ೫೦-೫೧ ; ಡಿ.ಸಿ. ಸರ್ಕಾರ್ (೧೯೬೬) ಇಂಡಿಯನ್ ಎಪಿಗ್ರಾಫಿಕ್ ಗ್ಲಾಸರಿ ಪು. ೨೦೦ ; ಎಂ.ವಿ. ಕೃಷ್ಣಪ್ಪ (೧೯೮೦) ಸೋಷಿಯಲ್ ಅಂಡ್ ಎಕನಾಮಿಕ್ ಕಂಡಿಷನ್ಸ್ ಆಫ್ ಕರ್ನಾಟಕ (೪೦೦-೧೦೦೦ ಕ್ರಿ.ಶ.) ಪು ೩೦೭; ಕೆ. ವಿಶ್ವನಾಥ (೧೯೮೬) ; ಅಗ್ರೇರಿಯನ್ ಸಿಸ್ಟಮ್ ಅಂಡರ್ ವಿಜಯನಗರ (ಅಪ್ರಕಟಿತ ಪ್ರೌಢ ಪ್ರಬಂಧ) ಪು. ೬೦

20 ಕೆ.ಐ I. ಶಾ. ಸಂಖ್ಯೆ ೩, ಪು ೪-೭

21 ಕೆ.ಐ. V ಶಾ. ಸಂಖ್ಯೆ ೧೧ ಪು. ೩೮ ; ಸೌ.ಇಂ.ಇ. XX ಶಾ. ಸಂ. ೫೫, ಪು. ೬೮

22 ಎಂ.ವಿ. ಕೃಷ್ಣಪ್ಪ (೧೯೮೦) ಅದೇ, ಪು. ೩೦೭

23 ಬಿ.ಆರ್. ಗೋಪಾಲ್ (೧೯೮೫) ; ಕಾರ್ಪಸ್ ಆಫ್ ಕದಂಬ ಇನ್‌ಸ್ಕ್ರಿಪ್‌ಷನ್ಸ್ ಸಂ-೧, ಪು. ೧೭೩

24 ಕೆ.ಐ. I. ನಂ. ೩ ಪು. ೪-೫

25 ಅದೇ, ನಂ. ೪ ಪು. ೬-೭

ಬಗ್ಗೆ ನಾವು ಸರ್ವಸಮ್ಮತವಾದ ಉತ್ತರ ಕಂಡುಕೊಳ್ಳಲಾಗಿದೆ. ಈ ದಿಸೆಯಲ್ಲಿ ಸಂಶೋಧನೆ ನಡೆಸಿರುವ ವಿದ್ವಾಂಸರು[26] ಅವುಗಳಿಗೆ ನೀಡಿರುವ ಆಧುನಿಕ ಸಮಾನಾರ್ಥಕಗಳು ವೈವಿಧ್ಯಮಯವಾಗಿವೆ. ಮೇಲಾಗಿ ಅವರಾರೂ ತಮ್ಮ ಅಭಿಪ್ರಾಯವನ್ನು ಸಾಕ್ಷ್ಯಾಧಾರಗಳೊಂದಿಗೆ ಸಮರ್ಥಿಸಲು ಯತ್ನಿಸದಿರುವುದು ಸೋಜಿಗವೆನಿಸುತ್ತದೆ. 'ನಿವರ್ತನ' ಭೂಮಾಪನಕ್ಕೆ ಆಧುನಿಕ ಭೂಪ್ರಮಾಣ ನೀಡುವ ವಿದ್ವಾಂಸರು,[27] ಆ ನಿರ್ಧಾರಕ್ಕೆ ತಾವು ಬರಲು ಕಾರಣವನ್ನು ಸಮರ್ಪಕವಾಗಿ ನೀಡಿಲ್ಲ. 'ನಿವರ್ತನ'ವನ್ನು ಉಲ್ಲೇಖಿಸುವ ಶಾಸನಗಳು, 'ರಾಜಮಾನ'[28]ದ ಉಲ್ಲೇಖವನ್ನು ಒಳಗೊಂಡಿದ್ದರೂ, ಅಳತೆಗೋಲಿನ ನಿಖರ ದಾಖಲೆ ಇಲ್ಲದಿರುವುದು ಇದಕ್ಕೆ ಪ್ರಮುಖ ಕಾರಣವಿರಬಹುದು. ಆದರೂ ಕೆಲವರು ಈ ಒಗಟನ್ನು ಒಡೆಯುವಲ್ಲಿ ಕೌಟಿಲ್ಯನ ನೆರವನ್ನು ಪಡೆದಂತೆ ತೋರುತ್ತದೆ.[29] 'ನಿವರ್ತನ'ದ ಆಧುನಿಕ ಭೂಪ್ರಮಾಣ ನಿರ್ಧರಿಸುವಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಅಂದಿನ 'ನಿವರ್ತನ', ಇಂದಿನ ಅರ್ಧ,[30] ಒಂದು,[31] ಒಂದೂವರೆ,[32] ನಾಲ್ಕು,[33] ನಾಲ್ಕು-ಐದು,[34] ಐದು,[35] ಒಂಬತ್ತು,[36] ಎಕರೆಗಳಿಗೆ ಸಮ ಎಂದು ಕೆಲವರು, ಇನ್ನೂ ಕೆಲವರು ಮುಕ್ಕಾಲು,[37] ಎರಡೂವರೆ,[38] ಹೆಕ್ಟೇರ್‌ಗಳಿಗೆ ಸಮವೆಂದು ಅಭಿಪ್ರಾಯಪಡುತ್ತಾರೆ. ಇದನ್ನೇ ಆಧಾರವಾಗಿಟ್ಟುಕೊಂಡು 'ಮತ್ತರ್' ಬಗ್ಗೆ ಬರೆದಿರುವ ವಿದ್ವಾಂಸರು, ಇವುಗಳಲ್ಲಿ ಒಂದನ್ನು ಒಪ್ಪಿಕೊಂಡಿರುವ ಅಂಶ ಅಧ್ಯಯನದಿಂದ ಖಚಿತವಾಗುತ್ತದೆ.[39] ಈ ಹಿನ್ನೆಲೆಯಲ್ಲಿ, ದಕ್ಷಿಣ ಭಾರತದಲ್ಲಿ ಕ್ರಿ.ಶ. ೭ನೇ ಶತಮಾನದಿಂದ ೧೩ನೇ ಶತಮಾನದ

---

26 ಡಿ.ಸಿ. ಸರ್ಕಾರ್ : ಇಂಡಿಯನ್ ಎಪಿಗ್ರಾಫಿ ; ಎ.ಎಸ್. ಅಲ್ತೇಕರ್: ರಾಷ್ಟ್ರಕೂಟಸ್ ಅಂಡ್ ದೆರ್ ಟೈಮ್ಸ್ ; ಆರ್. ಎಸ್. ಶರ್ಮ : ಲೈಟ್ ಆನ್ ಅರ್ಲಿ ಇಂಡಿಯನ್ ಸೊಸೈಟಿ ಅಂಡ್ ಎಕಾನಮಿ ; ಇಂಡಿಯನ್ ಫ್ಯೂಡಲಿಸಂ; ಜಿ.ಆರ್. ಕುಪ್ಪುಸ್ವಾಮಿ ಅಯ್ಯಂಗಾರ್ (೧೯೪೪) ಕಳಚೂರಿಸ್ ಅಂಡ್ ದೇರ್ ಟೈಮ್ಸ್ ; ಎಕನಾಮಿಕ್ ಕಂಡಿಷನ್ಸ್ ಆಫ್ ಕರ್ನಾಟಕ (೯೭೩-೧೩೩೬ ಕ್ರಿ.ಶ.) ; ಯು.ಎನ್. ಘೋಷಾಲ್ : ಅದೇ, ; ಕೆ.ಆರ್. ಬಸವರಾಜ, ಅಡ್ಮಿನಿಸ್ಟ್ರೇಷನ್ ಅಂಡರ್ ದಿ ಚಾಲುಕ್ಯಸ್ ಆಫ್ ಕಲ್ಯಾಣ ; ಹಾಗೂ ಇತರರು

27 ಅದೇ,

28 ಬಿ.ಆರ್. ಗೋಪಾಲ್ : ಕಾರ್ಪಸ್ ಆಫ್ ಕದಂಬ ಇನ್‌ಸ್ಕ್ರಿಪ್ಷನ್ಸ್, ಪು. ೧೭೩ ; ಇ.ಆ. VI ಪು. ೨೪ ; ಇ.ಆ. VII ಪು. ೩೫-೩೭ ; ಎ.ಇಂ. XXVII ಪು. ೫೯ ; ಸೌ.ಇಂ.ಇ. IX ಭಾಗ I ೪೮ ಪು. ೨೮ ಹಾಗೂ ಅಸಂಖ್ಯಾತ ಶಾಸನಗಳು

29 ಪ್ರಾಣ್‌ನಾಥ (೧೯೩೦) ; ಎ.ಸ್ಟಡಿ ಇನ್ ದ ಎಕನಾಮಿಕ್ ಕಂಡಿಷನ್ಸ್ ಆಫ್ ಏನ್‌ಶಂಟ್ ಇಂಡಿಯಾ. ಪು.೭೩

30 ಜಿ.ಆರ್. ಕುಪ್ಪುಸ್ವಾಮಿ ಅಯ್ಯಂಗಾರ್ (೧೯೭೦) : ಎಕನಾಮಿಕ್ ಕಂಡಿಷನ್ಸ್ ಆಫ್ ಕರ್ನಾಟಕ, ಪು. ೧೪೭

31 ಆರ್.ಎಸ್. ಶರ್ಮ (೧೯೬೬) : ಲೈಟ್ ಆನ್ ಅರ್ಲಿ ಇಂಡಿಯನ್ ಸೊಸೈಟಿ ಅಂಡ್ ಎಕಾನಮಿ ಪು. ೮೩

32 ಪ್ರಾಣ್‌ನಾಥ (೧೯೩೦) ; ಅದೇ, ಪು. ೭೩ ; ಆರ್.ಎಸ್. ಶರ್ಮ (೧೯೬೬) : ಅದೇ ಪು. ೭೩

33 ಎಸ್. ರಾಜೇಂದ್ರಪ್ಪ (೧೯೮೩) : ಅಗ್ರೇರಿಯನ್ ಸಿಸ್ಟಮ್ ಅಂಡರ್ ದ ಚಾಲುಕ್ಯಾಸ್ ಆಫ್ ಬಾದಾಮಿ (ಅಪ್ರಕಟಿತ ಪ್ರಬಂಧ ಮೈಸೂರು ವಿ.ವಿ., ಗ್ರಂಥಾಲಯ ಪು. ೭೪-೭೬)

34 ಆರ್.ಆರ್. ದಿವಾಕರ್ (೧೯೭೮) : ಕರ್ನಾಟಕ ತ್ರೂ ದ ಏಜಸ್, ಪು. ೨೨೯ ; ಎ.ಎಸ್. ಅಲ್ತೇಕರ್ ರಾಷ್ಟ್ರಕೂಟಾಸ್ ಅಂಡ್ ದೇರ್ ಟೈಮ್ಸ್ ಪು. ೨೨೦

35 ಜ್ಯೋತ್ಸ್ನಾಕಾಮತ್ (೧೯೭೮) : ಸೋಷಿಯಲ್ ಅಂಡ್ ಎಕನಾಮಿಕ್ ಕಂಡಿಷನ್ಸ್ ಅಂಡರ್ ದಿ ಚಾಲುಕ್ಯಾಸ್ ಆಫ್ ಬಾದಾಮಿ, ಪು. ೧೮೨, ಎಂ.ಎಸ್. ನಾಗರಾಜರಾವ್ (ಸಂ) (೧೯೭೮) : ಚಾಲುಕ್ಯಾಸ್ ಅಡ್ ಬಾದಾಮಿ

36 ಜಿ.ಆರ್. ಕುಪ್ಪುಸ್ವಾಮಿ ಅಯ್ಯಂಗಾರ್ : ಅದೇ, ಪು. ೧೪೭

37 ಎಚ್.ಪಿ. ರೇ (೧೯೮೬) : ಮೊನಾಸ್ಟ್ರೀಸ್ ಅಂಡ್ ಗಿಲ್ಡ್ ನೋಡಿ ಪು. ೧೦೦, ಅಡಿ ಟಿಪ್ಪಣಿ ೨

38 ಎಸ್. ರಾಜೇಂದ್ರಪ್ಪ (೧೯೮೪) : ಬಾದಾಮಿ ಚಲುಕ್ಯರ ಆಳ್ವಿಕೆಯಲ್ಲಿ ಕೃಷಿ ಪು. ೩೯-೫೦, ಮಾನವಿಕ ಕರ್ನಾಟಕ, ಸಂಪುಟ ೧೪ ಸಂಚಿಕೆ ೪ ಮೈಸೂರು

39 ಅಲ್ತೇಕರ್, ಜಿ.ಆರ್. ಕುಪ್ಪುಸ್ವಾಮಿ, ಎಂ.ವಿ. ಕೃಷ್ಣಪ್ಪ ಹಾಗೂ ಇತರರು

ವರೆಗೆ ಕನ್ನಡ, ತೆಲುಗು ಭಾಷೆಯ ಶಾಸನಗಳಲ್ಲಿ ಹೇರಳವಾಗಿ, (ಕರ್ನಾಟಕ, ಆಂಧ್ರ, ಮಹಾರಾಷ್ಟ್ರದ ದಕ್ಷಿಣ ತುದಿ) ಸಂಸ್ಕೃತ ಶಾಸನಗಳಲ್ಲಿ ವಿರಳವಾಗಿ ಬಳಸಲ್ಪಟ್ಟಿರುವ 'ಮತ್ತರ್'[40] ಭೂಮಾಪನಾ ಘಟಕಕ್ಕೆ ಸಮನಾದ ಆಧುನಿಕ ಭೂಪ್ರಮಾಣ ನಿರ್ಧರಿಸಲು ಸಾಧ್ಯವೇ ? ಎಂದು ವಿವೇಚಿಸೋಣ.

ಪ್ರಾಚೀನ ಕರ್ನಾಟಕಾಂಧ್ರ ನಾಡಿನ ದೇಶಿಯ ಭಾಷೆಯ ಶಾಸನಗಳಲ್ಲಿ 'ಮತ್ತರ್' ಪದ ಪ್ರಯೋಗ ವಿವಿಧ ರೂಪಗಳಲ್ಲಿ ಕಾಣಿಸಿಕೊಳ್ಳುತ್ತದೆ. ಈ ಪದ ಶಾಸನಗಳಲ್ಲಿ ಮರುತ್ತು,[41] ಮತ್ತಲ್,[42] ವೆಳೆಮತ್ತರು,[43] ಮರುಂತು,[44] ಮರುಂತುರ್ಲ್,[45] ಮತ್ತರ,[46] ಮತ್ತರು,[47] ಮರುತುರು,[48] ಮಟ್ಲು,[49] ಮರ್ತುರು,[50] ಮರ್ತುಂಡಲ,[51] ಮತ್ತ,[52] ಮ,[53] ಮುಂತಾದ ರೂಪಗಳಲ್ಲಿ ಪ್ರಯೋಗಿಸಿರುವುದನ್ನು ಇತಿಹಾಸಕಾರರು ಗುರುತಿಸಿದ್ದಾರೆ. ಕ್ರಿ.ಶ. ೭ನೇ ಶತಮಾನದ ಆರಂಭದಲ್ಲಿ ಆಂಧ್ರ ಪ್ರದೇಶದ ಶಾಸನಗಳಲ್ಲಿ ಮೊಟ್ಟಮೊದಲ[54] ಬಾರಿಗೆ ಕಾಣಿಸಿಕೊಂಡು, ಕ್ರಮೇಣ ನೆರೆಯ ಕರ್ನಾಟಕ ಪ್ರಾಂತ್ಯಕ್ಕೂ, ಮಹಾರಾಷ್ಟ್ರದ ದಕ್ಷಿಣ ಭಾಗಕ್ಕೂ ವಿಸ್ತರಿಸಿರುವಂತೆ ತೋರುತ್ತದೆ. ಕರ್ನಾಟಕದಲ್ಲಿ 'ಮತ್ತರ'ನ ಪ್ರಾಚೀನ ಉಲ್ಲೇಖ[55] ಇಮ್ಮಡಿ ಪುಲಿಕೇಶಿಯ ಹಿರೇಬಿದರಿ ಶಿಲಾಶಾಸನದಲ್ಲಿ ದೊರಕುತ್ತದೆ. 'ಮತ್ತರ್' ಪದ ಪ್ರಯೋಗ ಬಾದಾಮಿ ಚಾಲುಕ್ಯರ ಕಾಲದಲ್ಲಿ ಚಲಾವಣೆಗೆ ಬಂದ ಅಂಶ ಸುಸ್ಪಷ್ಟವಾಗಿದ್ದರೂ, ಗಂಗರ[56] ಕಾಲದ ಶಾಸನಗಳಲ್ಲಿ ಇದರ ಬಳಕೆ ವಿರಳವಾಗಿದ್ದು, ಹೊಯ್ಸಳರ ಶಾಸನಗಳಿಂದ ನಂತರದಲ್ಲಿ ಇದು ದಕ್ಷಿಣ ಕರ್ನಾಟಕದಲ್ಲೂ ಬಳಕೆಗೆ ಬಂದ ಅಂಶ ಸ್ಪಷ್ಟವಾಗುತ್ತದೆ. ಈ ಮಾಪನವನ್ನು ಎಲ್ಲಾ ಮಾದರಿಯ ಭೂಮಾಪನದಲ್ಲಿ ಬಳಸುತ್ತಿದ್ದರೆಂಬ ಅಂಶ ಅನೇಕ ಶಾಸನಗಳಿಂದ ವಿದಿತವಾಗುತ್ತದೆ.[57]

---

40 ಕ್ರಿ.ಶ. ೫-೧೬ನೇ ಶತಮಾನಕ್ಕೆ ಸೇರಿದ ಸಂಸ್ಕೃತ ಶಾಸನಗಳ ಸರ್ವೇಕ್ಷಣದಲ್ಲಿ ಇದು ನನ್ನ ಗಮನಕ್ಕೆ ಬಂದಿಲ್ಲ. ಆದರೂ ದೊರಕುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಹುಲಗೂರು ತಾಮ್ರಶಾಸನ ನಿವರ್ತನ, ಕಮ್ಮ ಎರಡನ್ನೂ ಉಲ್ಲೇಖಿಸುತ್ತದೆ. (ಕೆ.ಐ. IV ೫೪ ಪು. ೧೦೫-೨೦)

41 ಎ.ಆರ್.ಐ.ಇ. ೧೯೫೯-೬೦ ನಂ. ೧೦ ಪು. ೨೧; ಡಿ.ಸಿ. ಸರ್ಕಾರ್ : ಇಂಡಿಯನ್ ಎಪಿಗ್ರಾಫಿಕ್ ಗ್ಲಾಸರಿ ಪು. ೨೨೦

42 ಎ.ಇಂ. XXX ಪು. ೭೧ ; ಎ.ಇಂ. XXXVII ಪು. ೩೮೩

43 ಜೆ.ಇ.ಎಸ್.ಐ. XIV ಪು. ೭೮ ; ಸೌ.ಇಂ.ಇ. XVIII ೩೧೧ ಪು. ೪೧೭-೧೮

44 ಅದೇ, VII ಪು. ೭೯

45 ಐ.ಎ.ಪಿ.ಸಿ.ಡಿ. I ಪು. ೧೮

46 ಸೌ.ಇಂ.ಇ. XVIII ೩೮೧ ಪು. ೪೬೨ ಹಾಗೂ ಇನ್ನಿತರ ಶಾಸನಗಳು

47 ಸೌ.ಇಂ.ಇ. IX ಭಾಗ-I ೧೫೯ ಪು. ೧೪೬

48 ವಿಶ್ವನಾಥ ಕೆ. ಅದೇ, ಪು. ೬೧ ; ಐ.ಎ.ಪಿ.ಸಿ.ಡಿ. I ಪು. ೨೪

49 ಎಂ.ಬಿ. ಚೋಯಿ (೧೯೭೬) : ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಹಾಗೂ ಸಾಹಿತ್ಯಿಕ ಅಧ್ಯಯನ ಪು. ೧೪೪-೧೪೫

50 ಅದೇ

51 ಪದ್ಮನಾಭಶಾಸ್ತ್ರಿ ಸಿ.ಎ. (೧೯೮೩) : ಅಡ್ಮಿನಿಸ್ಟ್ರೇಷನ್ ಇನ್ ಆಂಧ್ರ.೧೩ನೇ ಶತಮಾನದವರೆಗೆ ಪು. ೫೪೫

52 ಸೌ.ಇಂ.ಇ. IX ಭಾಗ I ಪು. ೮೫ ; ಅದೇ XVIII ೧೬೧ ಪು.೨೨೧ ; ಅದೇ XV ೧೯೯ ಪು. ೨೪೭

53 ಅದೇ IX ಭಾಗ I ೧೫೫ ಪು. ೧೩೮ ; ೧೦೨ ಪು. ೭೫

54 ಸೌ.ಇಂ.ಇ. IX ಭಾಗ I ೪೬ ಪು. ೨೬-೨೭

55 ಸೌ.ಇಂ.ಇ. XX ನಂ. ೨ ಪು. ೧-೨

56 ಎ.ಕ. VI ೧೩೩ ಪು. ೫೩

57 ಸೌ.ಇಂ.ಇ. XVIII ೨೮೦ ಪು. ೩೬೪ ; ಅದೇ IX ಭಾಗ I ೨೯೭ ಪು. ೩೨೪ ; ಕೆ.ಐ. IV ೪೦ ಪು. ೫೮-೫೯ ; ಸೌ.ಇಂ.ಇ. IV ಭಾಗ I ೪೭ ಪು. ೨೭ ಇತ್ಯಾದಿ

ಕ್ರಿ.ಶ. ೭ನೇ ಶತಮಾನದಿಂದ ೧೫ನೇ ಶತಮಾನದ ವರೆಗೆ ಪ್ರಮುಖ ಭೂಮಾಪನ ಘಟಕವಾಗಿ ಗೋದಾವರಿಯಿಂದ ಕಾವೇರಿವರೆಗೆ ಬಳಕೆಯಲ್ಲಿದ್ದ 'ಮತ್ತರ್'ಗೆ ಆಧುನಿಕ ಸಮಾನಾರ್ಥಕವನ್ನು ೨/೩ ರಿಂದ ೯ ಎಕರೆ ವರೆಗೆ[58] ನೀಡಲೂ ಮುಂದಾಗಿದ್ದಾರೆ. ಈವರೆಗೆ ಈ ಕ್ಷೇತ್ರದಲ್ಲಿ ಸಂಶೋಧಿಸಿರುವ ವಿದ್ವಾಂಸರು 'ಮತ್ತರ್' 'ನಿವರ್ತನ'ದ ಕನ್ನಡ ಸಮಾನಾರ್ಥಕವಾದ ಕಾರಣ 'ಮತ್ತರ್'ನ ಸ್ವತಂತ್ರ ಅಧ್ಯಯನಕ್ಕೆ ಮುಂದಾಗದೆ 'ನಿವರ್ತನ'ಕ್ಕೆ ನೀಡಿರುವ ಆಧುನಿಕ ಭೂಪ್ರಮಾಣವನ್ನೇ 'ಮತ್ತರ್'ಗೂ ಅನ್ವಯಿಸಿಕೊಂಡಿರುವ ಅಂಶ ಸ್ಪಷ್ಟವಾಗುತ್ತದೆ.[59] ಇದಕ್ಕೆ ಬದಲಾಗಿ ಸಂಶೋಧಕರು 'ಮತ್ತರ್'ನ ಸ್ವತಂತ್ರ ಅಧ್ಯಯನ ನಡೆಸಿದ್ದರೆ ಮಹತ್ವದ ಮಾಹಿತಿ ಬೆಳಕಿಗೆ ಬರುತ್ತಿತ್ತು. ಅಂತಹ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಕ್ರಿ.ಶ. ೭ನೇ ಶತಮಾನದಿಂದ ೧೫ ನೇ ಶತಮಾನದ ವರೆಗಿನ ಪ್ರಕಟಿತ ಶಾಸನಗಳನ್ನು ಈ ಹಿನ್ನೆಲೆಯಲ್ಲಿ ಸಮೀಕ್ಷಿಸಲಾಗಿದ್ದು, ಈ ವಿಸ್ತೃತ ಸಮೀಕ್ಷೆಯಲ್ಲಿ ಬೆರಳೆಣಿಸುವಷ್ಟು ಶಾಸನಗಳಲ್ಲಿ[60] ದಾನ ನೀಡಿದ ಭೂ ಪ್ರಮಾಣದ ಖಚಿತ ಅಳತೆ ಕಂಡುಕೊಳ್ಳಲು ಸುಳಿವಿರುವುದು ಗಮನಕ್ಕೆ ಬಂದಿದ್ದು, ಮತ್ತಷ್ಟು ಆಳವಾದ ಅಧ್ಯಯನ ಮಾಡುವ ಅಗತ್ಯವಿದೆ. ಆರ್ಥಿಕ ಇತಿಹಾಸದ ಅಧ್ಯಯನದಲ್ಲಿ ತೊಡಗಿರುವ ಬಹು ಪಾಲು ವಿದ್ವಾಂಸರು ಪರಿಶೀಲಿಸಿರುವ,[61] ಅಸಂಖ್ಯಾತ ಸಂಶೋಧಕರು ತಮ್ಮ ಪ್ರೌಢ ಪ್ರಬಂಧದ ರಚನೆಯಲ್ಲಿ ಬಳಸಿಕೊಂಡಿರುವ ಶಾಸನವೊಂದು[62] 'ಮತ್ತರ್'ನ ಆಧುನಿಕ ಭೂ ಪ್ರಮಾಣ ನಿಷ್ಕರ್ಷಿಸಲು ನೆರವಾಗುತ್ತದೆಂಬ ಅಂಶ ವಿಸ್ಮಯವೆನಿಸಿದರೂ ಸತ್ಯವಾಗಿದೆ. ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ ಕ್ರಿ.ಶ. ೧೧೨೩ರ ಲಕ್ಷ್ಮೇಶ್ವರ ಶಿಲಾಶಾಸನವೊಂದು[63] 'ಮತ್ತರ್'ನ ಒಗಟನ್ನು ಭೇದಿಸಲು ಪೂರಕವಾದ ಮಹತ್ವದ ಮಾಹಿತಿಯನ್ನು ಒಳಗೊಂಡಿದೆ. ಈ ಶಾಸನ ಅರ್ಧ ಶತಮಾನಕ್ಕೂ ಹಿಂದೆಯೇ ಪ್ರಕಟಗೊಂಡಿದ್ದು ಅಸಂಖ್ಯಾತ ಸಂಶೋಧಕರು[64] ವಿವಿಧ ದೃಷ್ಟಿಕೋನದಿಂದ ಈ ಶಾಸನವನ್ನು ಪರಿಶೀಲಿಸಿದ್ದರೂ ಅವರ ಗಮನಕ್ಕೆ ಇಂತಹ ಮಹತ್ವದ ಸಂಗತಿ ಬಾರದಿರುವುದು ವಿಸ್ಮಯವೇ ಸರಿ ! ಪುಲಿಗೆರೆಯ ರಾಮೇಶ್ವರ

---

58 ಜಿ. ಆರ್. ಕುಪ್ಪುಸ್ವಾಮಿ ಅಯ್ಯಂಗಾರ್, ಎ. ಎಸ್. ಅಲ್ತೇಕರ್ ; ಎಂ. ವಿ. ಕೃಷ್ಣಪ್ಪ ; ಡಿ.ಸಿ. ಸರ್ಕಾರ್, ವಿಶ್ವನಾಥ ಕೆ., ಇತರರು

59 ಅದೇ., ೨/೩ ಎಕರೆಯಿಂದ ೯ ಎಕರೆ ವರೆಗೆ ಆಧುನಿಕ ಭೂ ಪ್ರಮಾಣ ನೀಡಿದ್ದಾರೆ.

60 ಸೌ.ಇಂ.ಇ. IX ಭಾಗ I ೧೦೭ ಪು. ೮೨ ; ಅದೇ. ೧೦೮ ಪು. ೮೩ ; ಸೌ.ಇಂ. ಇ. XX ೮೩ ಪು. ೧೦೪
ಸೌ.ಇಂ. ಇ. IX ಭಾಗ I ೧೧೮ ಪು. ೯೮ ; ಅದೇ. ೨೫೨, ಪು. ೨೬೫ ; ಅದೇ. ೧೯೭ ಪು. ೧೯೪ ;
ಸೌ.ಇಂ.ಇ. IX ಭಾಗ I ೧೯೯ ಪು. ೧೯೭ ; ಸೌ.ಇಂಇ. XVII ನಂ. ೪೪. ಪು ೮೯ ;
ಸೌ.ಇಂ.ಇ. IX ಭಾಗ II ೪೦೭, ಪು. ೪೧೪ ; ಸೌ.ಇಂ.ಇ. IX ಭಾಗ I, ೨೪೯, ಪು. ೨೩೮.

61 ಕೃಷ್ಣಮುರಾರಿ (೧೯೭೭) ; ದಿ ಚಾಲುಕ್ಯಸ್ ಆಫ್ ಕಲ್ಯಾಣ.
ಜಿ.ಆರ್. ಕುಪ್ಪು ಸ್ವಾಮಿ ಅಯ್ಯಂಗಾರ್ (೧೯೭೦): ಎಕನಾಮಿಕ ಕಂಡಿಷನ್ಸ್ ಆಫ್ ಕರ್ನಾಟಕ (೯೭೩-೧೩೩೬ ಕ್ರಿ.ಶ.)
ಕೆ.ಆರ್. ಬಸವರಾಜ : ದಿ ಆಡ್ಮಿನಿಸ್ಟ್ರೇಟಿವ್ ಸಿಸ್ಟಮ್ ಅಂಡರ್ ದಿ ಚಾಲುಕ್ಯಾಸ್ ಆಫ್ ಕಲ್ಯಾಣ ;
ಓಂ ಪ್ರಕಾಶ (೧೯೮೮) : ಅರ್ಲಿ ಇಂಡಿಯನ್ ಲ್ಯಾಂಡ್ ಗ್ರಾಂಟ್ಸ್ ಅಂಡ್ ಸ್ಟೇಟ್ ಎಕನಾಮಿ, ಅಲಹಾಬಾದ್.

62 ಎಸ್. ಜಿ. ಘಟಪಣದಿ (೧೯೭೭) : ಟ್ಯಾಕ್ಸೇಷನ್ ಇನ್ ಏನ್‌ಶಂಟ್ ಅಂಡ್ ಮಿಡೀವಲ್ ಕರ್ನಾಟಕ (ಅಪ್ರಕಟಿತ)
ಮಂಗಳ : ಪುಲಿಗೆರೆ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ, ಕ.ವಿ.ವಿ. ಗ್ರಂಥಾಲಯ)

63 ಸೌ.ಇ.ಇ. XX ೮೩ ಪು. ೧೦೪-೧೦೬

64 ಶೆಟ್ಟರ್.ಎಸ್.ಎಸ್. (೧೯೭೨) : ಲಕ್ಷ್ಮೇಶ್ವರದ ದೇವಾಲಯಗಳು, ಪು. ೯೪-೧
ಎಂ.ಬಿ. ಬೋಯಿ : ಲಕ್ಷ್ಮೇಶ್ವರದ ಶಾಸನಗಳು ಪು. ೯-೨೨
ಬಿ.ಆರ್. ಗೋಪಾಲ್ : ಪುಲಿಗೆರೆನಾಡು-ಐತಿಹಾಸಿಕ ಸಮೀಕ್ಷೆ ಪು. ೨೩-೩೫
[ಸದಾನಂದ ಕನವಳ್ಳಿ ಹಾಗೂ ಸಿ. ಕೆರಿಮನಿ (ಸಂ). (೧೯೭೨) ತಿರುಳ್ಗನ್ನಡನಾಡು ಪುಲಿಗೆರೆ]
ಮಹಾದೇವ ಸಿ. (೧೯೮೯) : ಲಕ್ಷ್ಮೇಶ್ವರದ ರಾಮಲಿಂಗ ದೇವಾಲಯ-ಒಂದು ಅಧ್ಯಯನ ಪು. ೫೪-೬೦,
ಇತಿಹಾಸ ದರ್ಶನ (೧೯೮೯) ಸಂಪುಟ ೪.

ದೇವಾಲಯಕ್ಕೆ ಸೇರಿದ ಮಠದಲ್ಲಿ ಕುಮಾರ ವ್ಯಾಕರಣದ ಅಧ್ಯಾಪನ-ಅಧ್ಯಯನದಲ್ಲಿ ತೊಡಗಿರುವ ಶಿಕ್ಷಕರ-ವಿದ್ಯಾರ್ಥಿಗಳ ಉದರ ಪೋಷಣೆಯ ಸಲುವಾಗಿ ೧೨ ಮತ್ತರ್ ಎರೆ ಮಣ್ಣನ್ನು ಕ್ರಮುಕ್ಕೆ ಕೊಂಡು ಅಗಸ್ತ್ಯ ದೇವ ಪಂಡಿತರಿಗೆ ದಾನ ನೀಡಿದ ಅಂಶವನ್ನು ನಿವೇದಿಸುವುದೇ ಈ ಶಾಸನದ ಉದ್ದೇಶವಾಗಿದ್ದು ಅದರ, ಮಹತ್ವ ದಾನ ನೀಡಿದ ಭೂಮಿಯು ಎಲ್ಲೆಯನ್ನು ಸೂಚಿಸುವ ಭಾಗದಲ್ಲಿ ಅಡಗಿದ್ದು, ಇದನ್ನು ಈವರೆಗೆ ಯಾರು ಗಮನಿಸಿರಲಿಲ್ಲ. ಸುಮಾರು ಎರಡು ವರ್ಷಗಳ ಹಿಂದೆ ಈ ಅಂಶ ನನ್ನ ಗಮನ ಸೆಳೆಯಿತು.

ದಾನ ನೀಡಿದ ಭೂಮಿಯ ಗಡಿಯನ್ನು ನಿರ್ದೇಶಿಸುತ್ತ, ದಾನ ನೀಡಿಕೆಯಲ್ಲಿ ಹದಿನಾಲ್ಕು ಬೆರಳ ಗೇಣಿನ ಪ್ರಮಾಣದ ೩೬ ಗೇಣಿನ ಗಡಿಂಬ ನಾರಾಯಣ ದೇವರಲ್ಲಿಯ ಗಳೆಯಲ್ಲಿ ಅಳೆದುದಾಗಿ ತಿಳಿಸುತ್ತ ೪೮ × ೫೬ ಗಳೆ ವಿಸ್ತೀರ್ಣದ ೧೨ ಮತ್ತರ್ ಎರೆ ಮಣ್ಣನ್ನು ದಾನ ನೀಡಿದುದಾಗಿ ಲಕ್ಮೇಶ್ವರದ ಶಾಸನ ಹೇಳುತ್ತದೆ. ಈ ವಿವರಣೆಯಿಂದ ದಾನವಾಗಿ ಕೊಟ್ಟಿರುವ ಕ್ಷೇತ್ರ ಆಯಾಕಾರದಲ್ಲಿರುವ ಅಂಶ ಸ್ಪಷ್ಟವಾಗುತ್ತದೆ.[65] ಗೇಣನ್ನು ಗಜಕ್ಕೆ ಮಾರ್ಪಡಿಸಿ, ಉದ್ದ × ಅಗಲದೊಂದಿಗೆ ಗುಣಿಸಿದಾಗ ಬರುವ ಒಟ್ಟು ಕ್ಷೇತ್ರಫಲವನ್ನು ೧೨ ರಿಂದ ಭಾಗಿಸಿ, ಬಂದ ಮೊತ್ತವನ್ನು ೪೮೪೦ ಚ. ಗಜದಿಂದ ಭಾಗಿಸಿದಾಗ 'ಮತ್ತರ್'ನ ಆಧುನಿಕ ಭೂಪ್ರಮಾಣ ಲಭಿಸುತ್ತದೆ.

೧೪ ಬೆರಳು = ೧ ಗೇಣು ; ೪ ಗೇಣು = ೧ ಗಜ.

೩೬ ಗೇಣು = ೯ ಗಜ ; ೪,೮೪೦. ಚ. ಗಜ = ೧ ಎಕರೆ.

ಕ್ಷೇತ್ರಫಲ = ಉದ್ದ × ಅಗಲ

ಉದ್ದ = ೪೮ × ೯ = ೪೩೨ ಗಜ

ಅಗಲ = ೫೬ × ೯ = ೫೧೪ ಗಜ

$$\frac{೪೩೨ \times ೫೦೪}{೧೨} = \frac{೧೮೧೧೪}{೪೮೪೦} = ೩.೭೪೮$$

೧ ಮತ್ತರ್ = ೩.೭೫ ಎಕರೆ

ಈ ಶಾಸನದಲ್ಲಿ ನಮೂದಿಸಿರುವ ಅಳತೆಯನ್ನು ಆಧರಿಸಿ ಲೆಕ್ಕಾಚಾರ ಮಾಡಿದಾಗ, ಈ ಶಾಸನದಲ್ಲಿ ದಾನ ನೀಡಿರುವ ೧೨ ಮತ್ತರ್ ಇಂದಿನ ೪೫ ಎಕರೆಗೆ ಸಮವೆಂದೂ, ೧ ಮತ್ತರ್ ಮೂರುಮುಕ್ಕಾಲು ಎಕರೆಗೆ ಸಮವೆಂದುಮನವರಿಕೆಯಾಗುತ್ತದೆ. ಆದರೆ ಇದೇ ಮೌಲ್ಯವನ್ನು ಪ್ರಾಚೀನ ಕರ್ನಾಟಕದ ಇತರ ಭಾಗಗಳಿಗೂ ಅನ್ವಯಿಸಲು ಆಗುತ್ತದೆಯೇ ? ಇದೇ ಮೌಲ್ಯವನ್ನು ಇತರ ಕಾಲದ ಶಾಸನಗಳಿಗೂ ಅನ್ವಯಿಸಲು ಬರುತ್ತದೆಯೇ ? ಎಂಬ ಪ್ರಶ್ನೆ ಸಂಶೋಧಕರನ್ನು ಕಾಡುವುದು ಸಹಜ. ಭೂಮಾಪನ ಪದ್ಧತಿ ಋಗ್ವೇದ[66] ಕಾಲದಷ್ಟು ಪುರಾತನವಾಗಿದ್ದು, ಭೂಮಾಪನದ ವಿವಿಧ ಪ್ರಕಾರಗಳ ವಿವರವಾದ ಮಾಹಿತಿಯನ್ನು ಕೌಟಿಲ್ಯನ ಅರ್ಥಶಾಸ್ತ್ರ[67] ಒಳಗೊಂಡಿದ್ದರೂ, ಶಾತವಾಹನರ ಕಾಲದ ಶಾಸನದಲ್ಲಿ ಭೂ ಅಳತೆಯಲ್ಲಿ ತೊಡಗುತ್ತಿದ್ದ

---

65 ....ಮಠದಲು ಕೌಮಾರ ವ್ಯಾಕರಣಮುಂ ಪೇಳ್ವುಪಾಧ್ಯಾಯರ ಜೀವಿತಕ್ಕಂವಲ್ಲಿ ಕೇಳ್ವ ತಪೋಧನರಶನಾಚ್ಛಾದನಕ್ಕಂ ಪದಿನಾಲ್ಕುಂ ಬೆರಲ ಗೇಣಲು ಮೂವತ್ತಾಱುಂ [ಬಾ] ಚ್ಚಿರ್ವಿಡಿಯ ಪ್ರಮಾಣಿನ ಗಡಿಂಬ ನಾರಾಯಣ ದೇವರಲ್ಲಿಯ ಘಳೆಯಲಳೆದು ಕೊಟ್ಟಿರೆಮತ್ತರ್ಪನ್ನೆರಡಕ್ಕಂ ಸೀಮೆ ಮೂಡಲ್ಲೊಜ್ಜನೂರ ದಾರಿಯಾ ದೆಸೆಯ ಘಳೆ ೫೬. ತೆಂಕಣ ಸೀಮೆ ಗಾವುಂಡ ವೊಲನಾ ದೆಸೆಯ ಘಳೆ ೪೮. ಪಡುವಣ ಸೀಮೆ ಗಾವುಂಡದೊಳಗಣ ಹಳ್ಳವಾ ದೆಸೆಯ ಘಳೆ ೫೬ । ಬಡಗಣ ಸೀಮೆ ಶ್ರೀ ಸ್ವಯಂಭೂ ಸೋಮೇಶ್ವರ ದೇವರ ಪೊಲನಾ ದೆಸೆಯ ಘಳೆ ೪೮....ಇಂತಿ ಧರ್ಮಮಂ...ಪ್ರತಿಪಾಳಿಸಿದರ್ (ಸೌ.ಇಂ.ಇ. XX ೮೩ ಪು. ೧೦೪-೧೦೫)

66 ಮಗನ್‌ಲಾಲ್ ಎ. ಬುಚ್ (೧೯೨೪) : ಎಕನಾಮಿಕ್ ಲೈಫ್ ಇನ್ ಏನಶಂಟ್ ಇಂಡಿಯಾ ಪು. ೧೪.ಬಂದೋಪಾಧ್ಯಾಯ ಎನ್.ಸಿ. (೧೯೨೫) ಎಕನಾಮಿಕ್ ಲೈಫ್ ಅಂಡ್ ಪ್ರೊಗ್ರೆಸ್ ಇನ್ ಏನಶಂಟ್ ಇಂಡಿಯಾ ಪು. ೧೦೧.

67 ಎಂ.ವಿ. ಕೃಷ್ಣರಾವ್ (೧೯೫೦) : ಸ್ಟಡೀಸ್ ಇನ್ ಕೌಟಿಲ್ಯ,

ರಜ್ಜುಕ[68] ಅಧಿಕಾರಿಗಳ ಉಲ್ಲೇಖವಿದ್ದರೂ, ಅಳತೆ ಗೋಲಿನ ಶಾಸನೋಲ್ಲೇಖ ದೊರಕುವುದು ಕದಂಬ[69]-ಗಂಗರ[70] ಕಾಲಕ್ಕೆ ಬಂದ ನಂತರವೇ. ಅದರಲ್ಲೂ ನಿರ್ದಿಷ್ಟ ಪ್ರಮಾಣದ ಅಳತೆಗೋಲಿನ ಪ್ರಥಮ ಉಲ್ಲೇಖ ದೊರಕುವುದು ಬಾದಾಮಿ ಚಲುಕ್ಯರ ಕುರುಗೋಡು[71] ಶಾಸನದಿಂದೀಚೆಗೆ. ಶಾಸನೋಕ್ತ ಅಳತೆಗೋಲಿನ ಪ್ರಾತಿನಿಧಿಕ ಸುಳಿವು ದೊರಕುವುದೂ ಕುರುಗೋಡಿನಲ್ಲೆ.[72] ಪ್ರಾಚೀನ ಶಾಸನಗಳಲ್ಲಿ ವಿವಿಧ ಪ್ರಮಾಣದ ಅಳತೆ ಗೋಲುಗಳು ಬಳಕೆಯಲ್ಲಿದ್ದು,[73] ಕೆಲವೊಮ್ಮೆ ಒಂದೇ ಶಾಸನದಲ್ಲೆ[74] ಬೇರೆ ಬೇರೆ ಪ್ರಮಾಣದ ಮೂರು ಅಳತೆ ಕೋಲನ್ನು ಬಳಸಿರುವುದನ್ನು ಕಂಡಾಗ ಈ ಪೌಲ್ಯವನ್ನು ಸಾರ್ವತ್ರಿಕವಾಗಿ ಎಲ್ಲಾ ಕಾಲಕ್ಕೂ-ಪ್ರದೇಶಗಳಿಗೂ ಅನ್ವಯಿಸುವುದು ಅಸಮಂಜಸವೆಂದು ಮೇಲ್ನೋಟಕ್ಕೆ ಸದ್ಯದ ಮಟ್ಟಿಗೆ ತೋರಿದರೂ, ಈ ನಿಟ್ಟಿನಲ್ಲಿ ಇನ್ನೂ ಸಾಕಷ್ಟು ಕಾರ್ಯ ನಡೆಯಬೇಕಾಗಿರುವುದರಿಂದ ಖಚಿತವಾಗಿ ಏನನ್ನೂ ಹೇಳಲು ಬಾರದಾಗಿದೆ. ಕಲ್ಯಾಣಿ ಚಾಲುಕ್ಯರ ಕಾಲದ ಕೆಲವು ಶಾಸನಗಳಲ್ಲಿ ದಾನ ಪ್ರಮಾಣ ೧೦೦೦ ಮತ್ತರ್‌ಗೂ ಮೀರುತ್ತದೆ.[75] ಮತ್ತೊಂದು ಶಾಸನ ಪುಲಿಗೆರೆ ನಾಡಿನ ೪೮,೦೦೦ 'ಮತ್ತರ್'ನ ತೆರಿಗೆ ಹಕ್ಕನ್ನು ದಾನ ನೀಡಿದ ಅಂಶವನ್ನು ಅರುಹುತ್ತದೆ.[76] ಮೇಲಾಗಿ ಒಂದೇ ಪ್ರದೇಶಕ್ಕೆ ಸೇರಿದ, ಒಂದೇ ಕಾಲದ ಶಾಸನಗಳಲ್ಲಿ ಬೇರೆ ಬೇರೆ ಪ್ರಮಾಣದ ಅಳತೆಗೋಲು ಬಳಕೆಯಲ್ಲಿರುವ ಅಂಶವೂ ಇತಿಹಾಸಕಾರರನ್ನು ತೊಡಕಿಗೆ ಸಿಲುಕಿಸುತ್ತದೆ. ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಸೇರಿದ ಕೆಲವು ಶಾಸನಗಳಿಂದ[77] ೧ ಮತ್ತರ್ ೯೦೦ ಕಮ್ಮಗಳಿಗೆ ಸಮವೆಂಬ ಅಂಶ ಬೆಳಕಿಗೆ ಬಂದಿದ್ದು, ಕಮ್ಮ (ಕಂಬ) ಮತ್ತರಿನ ಉಪಘಟಕವಾಗಿತ್ತೆಂಬ ಅಂಶ ಸ್ಪಷ್ಟವಾಗುತ್ತದೆ. ಲಕ್ಷ್ಮೇಶ್ವರ ಶಾಸನದ ಹಿನ್ನೆಲೆಯಲ್ಲಿ ೧ ಮತ್ತರ್ = ಮೂರುಮುಕ್ಕಾಲು ಎಕರೆ = ೧೫೦ ಗುಂಟೆ = ೯೦೦ ಕಮ್ಮಗಳಿಗೆ ಸಮವೆಂದು ಸ್ವೀಕರಿಸಿದರೆ ೧ ಕಮ್ಮ .೧೯೯ ಎಕರೆಗೆ (೫.೫' × ೩೩) ಸಮವಾಗುತ್ತದೆ.

**ನಮ್ಮ ಅಧ್ಯಯನದಿಂದ ಕೆಳಗಿನ ಅಂಶಗಳು ಸ್ಫುಟಗೊಳ್ಳುತ್ತವೆ.**

೧. ಲಕ್ಷ್ಮೇಶ್ವರ ಶಿಲಾಶಾಸನದ[78] ಪ್ರಕಾರ ೧ ಮತ್ತರ್ ಇಂದಿನ ಮೂರುಮುಕ್ಕಾಲು ಎಕರೆಗೆ ಸಮ.

---

68 ಟಿ.ವಿ. ಮಹಾಲಿಂಗಂ : ಸೌತ್ ಇಂಡಿಯನ್ ಪಾಲಿಟಿ ಪು. ೧೫೧

69 ಬಿ.ಆರ್. ಗೋಪಾಲ್ : ಕಾರ್ಪಸ್ ಕದಂಬ ಇನ್‌ಸ್ಕ್ರಿಪ್‌ಷನ್ಸ್ ಪು. ೬೭

70 ಎ.ಕ. I.೧. ಪು. ೧೨

71 ಸೌ.ಇಂ.ಇ. IX ಭಾಗ I. ೫೩ ಪುಟ. ೩೦

72 ಎಸ್. ರಾಜೇಂದ್ರಪ್ಪ (೧೯೮೩) : ಅಗ್ರೇರಿಯನ್ ಸಿಸ್ಟಮ್ ಅಂಡರ್ ದ ಚಲುಕ್ಯಸ್ ಆಫ್ ಬಾದಾಮಿ (ಅಪ್ರಕಟಿತ ಪ್ರಬಂಧ) ಮೈ.ವಿ.ವಿ. ಗ್ರಂಥಾಲಯ, ಪು. ೭೭

73 ವಿವಿಧ ಪ್ರಮಾಣದ, ವೈವಿಧ್ಯಮಯ ಹೆಸರನ್ನುಳ್ಳ ಅಳತೆಗೋಲುಗಳು ಬಳಕೆಯಲ್ಲಿದ್ದವೆಂಬ ಅಂಶ ಅಸಂಖ್ಯಾತ ಶಾಸನಗಳಿಂದ ವ್ಯಕ್ತವಾಗುತ್ತದೆ. ೧೨ ಗೇಣಿನಿಂದ ೮೦ ಗೇಣು ಉದ್ದದವರೆಗಿನ ಅಳತೆಗೋಲುಗಳು ಬಳಕೆಯಲ್ಲಿದ್ದ ಅಂಶ ನಮ್ಮ ಸರ್ವೇಕ್ಷಣದಲ್ಲಿ ಗುರುತಿಸಲಾಗಿದೆ. ವಿವಿಧ ಅಳತೆ ಪ್ರಮಾಣದ ಸುಮಾರು ೧೦೦ಕ್ಕೂ ಹೆಚ್ಚು ಅಳತೆ ಕೋಲುಗಳನ್ನು ಶಾಸನಗಳಲ್ಲಿ ಗಮನಿಸಬಹುದಾಗಿದೆ. ಉದಾ. ಸೌ.ಇಂ.ಇ. IX I. ೨೪೯. ಪು. ೨೩೮ ; ಅದೇ ೧೫೯. ಪು. ೧೪೬, ಅದೇ, ೨೩೪ ಪು. ೨೪೦ ; ಅದೇ, ೨೫೩, ಪು. ೨೬೬ ; ಅದೇ ೨೨೫ ಪು. ೨೨೯ ; ಅದೇ ೮೮, ಪು.೮೫ ; ಸೌ.ಇಂ.ಇ. XV ೨೩೦ ಪು. ೨೮೨ ; ಕೆ.ಐ. IV-I ಪು. ೧೧ ; ಕೆ.ಐ. II ೧೬ ಪು. ೬೮-೭೦ ; ಸೌ.ಇಂ.ಇ.XV ೧೦೨ ಪು. ೧೬೨.

74 ಎ.ಕ. IV ಪು. ೬೦

75 ಸೌ.ಇಂ.ಇ. IX-ಭಾಗ-I ೭೭ ಪು. ೪೬ ; ಎ.ಇ. III ಪು. ೨೩೦-೩ ; ಎ.ಆರ್.ಐ.ಇ. ೧೯೫೩-೫೪ ಪು. ೪೯

76 ಎ.ಇ. XVI ಪು. ೩೪

77 ಸೌ.ಇಂ.ಇ. XVIII ೧೪೬ ಪು. ೧೮೯ : ಅದೇ IX ಭಾಗ ೨೬೬ ಪು. ೨೯೭ ; ಅದೇ IX ಪು. ೧೬೫

78 ಸೌ.ಇಂ.ಇ. XX ೮೩ ಪು. ೧೦೪-೦೬

೨. ಕಮ್ಮ ಮತ್ತರಿನ ಉಪಘಟಕವಾಗಿದ್ದು ಲಕ್ಷ್ಮೇಶ್ವರ ಶಾಸನದ ಬೆಳಕಿನಲ್ಲಿ ೧ ಕಮ್ಮ=೦.೧೬೬ ಎಕರೆಗೆ ಸಮ.

೩. ಈ ಶಾಸನದ ಸಹಾಯದಿಂದ ಕಂಡುಕೊಂಡ 'ಮತ್ತರ್'ನ ಆಧುನಿಕ ಮೌಲ್ಯವನ್ನು ಬೇರೆ ಬೇರೆ ಕಾಲದಲ್ಲಿ, ಪ್ರದೇಶಗಳಲ್ಲಿ, ವಿವಿಧ ಪ್ರಮಾಣದ ಅಳತೆಗೋಲನ್ನು ಬಳಸಿ ನೀಡಿರುವ ದಾನಗಳಿಗೂ ಅನ್ವಯಿಸಿಲು ಸಾಧ್ಯವೇ ? ಎಂಬುದನ್ನು ಇತರೇ ಶಾಸನಗಳ ಹಿನ್ನೆಲೆಯಲ್ಲಿ ಪರಿಶೀಲಿಸಬೇಕಾಗಿದೆ.

೪. ವಿವಿಧ ಪ್ರಮಾಣದ ಅಳತೆಗೋಲುಗಳನ್ನು ಬಳಸಿ ನೀಡಿರುವ ದಾನಗಳ ಆಧುನಿಕ ಭೂಪ್ರಮಾಣವನ್ನು ಕಂಡುಕೊಳ್ಳುವುದು ಕಷ್ಟಸಾಧ್ಯವಾದರೂ ಅಸಾಧ್ಯವೇನಲ್ಲ.

೫. ವಿವಿಧ ಪ್ರದೇಶಗಳಲ್ಲಿ ಬಳಸಿರುವ ಅಳತೆಗೋಲುಗಳ ಪ್ರಾದೇಶಿಕ ಪಟ್ಟಿ ರಚಿಸಿ, ಅಳತೆಗೋಲುಗಳ ನಡುವೆ ಇರುವ ಸಾಮ್ಯತೆ ಗುರುತಿಸಿ, ಭೂಮಾಪನಾ ಸೂತ್ರ ಒಂದನ್ನು ರೂಪಿಸಿಗೊಂಡು, 'ಮತ್ತರ್'ನ ಬಳಕೆಯಲ್ಲಿ ಸಾರ್ವತ್ರಿಕತೆ ಇತ್ತೇ ? ಅಥವಾ ಪ್ರಾದೇಶಿಕ ವ್ಯತ್ಯಾಸವಿತ್ತೆ ಎಂಬುದನ್ನು ಖಚಿತ ಪಡಿಸಿಕೊಳ್ಳಬಹುದಾಗಿದೆ.

೬. ಕ್ರಿ.ಶ. ೧೧೨೩ರ ಲಕ್ಷ್ಮೇಶ್ವರದ ಈ ಶಾಸನ ಅರ್ಧ ಶತಮಾನದಷ್ಟು ಹಿಂದೆಯೇ ಪ್ರಕಟಗೊಂಡಿದ್ದರೂ,[79] 'ಮತ್ತರ್'ಗೆ ಸಂಬಂಧಿಸಿದಂತೆ ಬೆಳಕು ಚೆಲ್ಲುವ ಅಂಶವನ್ನು ವಿದ್ವಾಂಸರು ಗಣನೆಗೆ ತೆಗೆದುಕೊಳ್ಳದಿರುವುದನ್ನು ವೀಕ್ಷಿಸಿದಾಗ ಪ್ರಕಟಿತ ಶಾಸನಗಳ ಪರಿಪೂರ್ಣ ಪರಿಶೀಲನೆ ನಡೆಯಬೇಕಾಗಿದೆ ಎಂದು ಯಾರಿಗಾದರೂ ಅನಿಸದೆ ಇರದು. ಈ ಮಾದರಿಯ ಅಧ್ಯಯನ ನಡೆಸುವಲ್ಲಿ, ವಿಷಯಾನುಸಾರ ಸೂಚಿ ಸಿದ್ಧಪಡಿಸುವ ಅಗತ್ಯವಿದ್ದು, ಕಂಪ್ಯೂಟರ್ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವುದು ಅನಿವಾರ್ಯವಾಗಿದೆ.

೭. ಬಾದಾಮಿ ಚಲುಕ್ಯರ ಕಾಲದ ಕ್ರಿ.ಶ. ೬೫೦ರ ಕುರುಗೋಡಿನ ಕತ್ತೆಬಂಡೆ ಶಾಸನ[80] ನಿರ್ದಿಷ್ಟ ಅಳತೆ ಗೋಲಿನ ಪ್ರಾಚೀನ ಪ್ರಾತಿನಿಧಿಕ ಸುಳಿವನ್ನು ನೀಡುತ್ತದೆ.

೮. ಅಪ್ರಕಟಿತ ಶಾಸನಗಳ ಪ್ರಕಟನೆ ಶೀಘ್ರವಾಗಿ ಆಗಬೇಕಾಗಿದೆ.

೯. ಶಾಸನೋಕ್ತ ವಿವರಗಳ ಬೆಳಕಿನಲ್ಲಿ ಪ್ರಾಚೀನ ಸಮಾಜದ ವಿವಿಧ ರಂಗಗಳ ಮೇಲೆ ಬೆಳಕು ಚೆಲ್ಲುವಲ್ಲಿ ವಿಸ್ತೃತ ಪ್ರಮಾಣದಲ್ಲಿ ಕ್ಷೇತ್ರಕಾರ್ಯ ಪರಿವೀಕ್ಷಣೆ ಆಗಬೇಕಾಗಿದೆ. ಇತಿಹಾಸದ ವಿವಿಧ ಕ್ಷೇತ್ರಗಳಲ್ಲಿ ಕಾರ್ಯಪ್ರವೃತ್ತರಾಗಿರುವ ವಿದ್ವಾಂಸರ ನಡುವೆ ಸಮರ್ಪಕವಾದ ಸಂಪರ್ಕ ಸೇತುವಿನ ಕೊರತೆ ಎದ್ದು ಕಾಣುತ್ತಿದೆ. ಶಾಸನ ಶೋಧ, ಸಂಗ್ರಹ, ಪ್ರಕಟನೆ, ಅಧ್ಯಯನ ಹಾಗೂ ನಿರೂಪಣೆಗಳ ನಡುವೆ ಸಮನ್ವಯ ಏರ್ಪಡಬೇಕಾಗಿದೆ.

---

79 ಎ.ಆರ್.ಸೌ.ಇ.ಎ. ೧೯೩೫-೩೯ ಶಾಸನ ಸಂಖ್ಯೆ ೨೬

80 ೧೯೮೩ ರಷ್ಟು ಹಿಂದೆಯೆ ಈ ಬಗ್ಗೆ ಸಂಶಯ ಇದ್ದರೂ ೧೯೯೦ರ ವರೆಗೆ ಕ್ಷೇತ್ರಕಾರ್ಯಕ್ಕೆಂದು ಕುರುಗೋಡಿಗೆ ಹೋಗಲಾಗಿರಲಿಲ್ಲ. ದಿನಾಂಕ ೨೬-೮-೯೦ ರಂದು ಕ್ಷೇತ್ರಕಾರ್ಯಕ್ಕೆಂದು ಕುರುಗೋಡಿಗೆ ಹೋದಾಗ ನನ್ನ ಅನುಮಾನ ನಿಜವಾಯಿತು. ಅಳತೆಗೋಲಿನ ಅಸ್ತಿತ್ವವನ್ನು ಗುರುತಿಸಲು ಸಾಧ್ಯವಾಯಿತು. ಇದರ ಶೋಧದೊಂದಿಗೆ ಭಾರತದಲ್ಲಿ ಲಭ್ಯವಿರುವ ಅಳತೆಗೋಲುಗಳಲ್ಲಿ ಪ್ರಾಚೀನ ಅಳತೆಗೋಲು ಇದೆಂಬ ಮಹತ್ವದ ಅಂಶ ನನಗೆ ಮುದ ನೀಡಿದೆ.

# ಕರ್ನಾಟಕ ಕರಾವಳಿಯ ನೀರಾವರಿ ಇತಿಹಾಸ

(ಕ್ರಿ.ಶ. ೧೩೩೬–೧೮೦೦)

---

**ಡಾ॥ ಕೆ.ಜಿ. ವಸಂತ ಮಾಧವ**

ಮಾಜಾಳಿಯಿಂದ ಚಂದ್ರಗಿರಿ ನದಿಯವರೆಗೆ ಹಬ್ಬಿದ ಅಗಲ ಕಿರಿದಾದ ಕರ್ನಾಟಕ ಕರಾವಳಿಯ ನೀರಾವರಿ ತನ್ನದೇ ಆದ ವೈಶಿಷ್ಟ್ಯಗಳನ್ನು ಒಳಗೊಂಡಿದೆ. ಇಲ್ಲಿನ ನೀರಾವರಿಯು, ನದಿ ಹರಿಯುವ ರಚನೆ ಮತ್ತು ಮಳೆ, ಮುಖ್ಯವಾಗಿ ಹಿಂಗಾರುಗಳ ಮೇಲೆ ನಿರ್ಧರಿಸುತ್ತದೆ. ಇಲ್ಲಿನ ಬೇಸಾಯ ಭೂಮಿಗಳ ವರ್ಗೀಕರಣವು ಮುಖ್ಯವಾಗಿ ಕೊಳಗದ್ದೆ, ಸುಗ್ಗಿಯ ಬಂದ ಗದ್ದೆ, ಹೊಳೆಯ ತಡಿಯ ಗದ್ದೆ, ಕೊಡಲು ಗದ್ದೆ, ನೀರು ಯೆರಕ ಭೂಮಿ, ಕಟ್ಟಿನ ಬಯಲು ಇತ್ಯಾದಿ–ನೀರಾವರಿಯು ಬಳಕೆ ಇದ್ದುದ್ದನ್ನು ತಿಳಿಸುತ್ತದೆ. ಶಿಲಾ, ತಾಮ್ರ ಶಾಸನಗಳು, ಕಡತ ಮತ್ತು ವಿದೇಶಿ ಪ್ರವಾಸಿಗರಾದ ಬಾರ್ಬೋಸಾ, ಡೆಲ್ಲಾವಲ್ಲೆ, ಪೀಟರ ಮುಂಡಿ, ಅಲೆಗ್ಸಾಂಡರ ಹೆಮಿಲ್ಟನ್ ಮತ್ತು ಬುಕಾನನ ವರದಿಗಳು ಇಲ್ಲಿನ ನೀರಾವರಿಯ ವಿಚಾರ ಹೆಚ್ಚಿನ ಮಾಹಿತಿಯನ್ನು ನೀಡುತ್ತದೆ.

ಈ ಇತಿಹಾಸ ದಾಖಲೆಗಳ ಆಧಾರದಿಂದ ಕರಾವಳಿ ಕರ್ನಾಟಕದಲ್ಲಿ ಕೆರೆ, ಬಾವಿ, ನದಿ, ಹಳ್ಳ ನೀರು ಹರಿವ ತೋಡುಗಳ ನೀರಾವರಿಗಳ ಕ್ರಮಗಳಾಗಿದ್ದವು. ಇವುಗಳನ್ನು ಸುಗ್ಗಿ, ಕೊಳಕೆ ಮತ್ತು ತೆಂಗಿನ ತೋಟ ಮತ್ತು ಇನ್ನಿತರ ಬೆಳೆಗಳನ್ನು ಬೆಳೆಸಲು ಉಪಯೋಗಿಸುತ್ತಿದ್ದರು. ಇವುಗಳಲ್ಲಿ ಕೆರೆ ನೀರಾವರಿ ಪ್ರಾಚೀನವಾಗಿದ್ದವು ಎಂದು ಎಂಟನೇಯ ಶತಮಾನದ ವೆಲಿವಿಕುಡಿಯ ನೆಡುಂಜಯಂ (ಕ್ರಿ.ಶ. ೭೫೬-೮೧೬)ನ ತಾಮ್ರ ಶಾಸನದಿಂದ ತಿಳಿದು ಬರುತ್ತದೆ. ಈ ಶಾಸನವು ಮಂಗಳಾಪುರದಲ್ಲಿ ಕೆರೆಗಳು ಮತ್ತು ಅವುಗಳ ದಂಡೆಯಲ್ಲಿ ಪರಿಮಳ ಬೀರುವ ಹೂ ತೋಟಗಳಿದ್ದುವೆಂದು ತಿಳಿಸಿದೆ.[1] ಇಲ್ಲಿ ಸಿಕ್ಕಿದ ಕೆಲವು ಶಾಸನಗಳು ಕೆರೆಯನ್ನು ನೀರಾವರಿಗೆ ಉಪಯೋಗಿಸಿದ್ದನ್ನು ತಿಳಿಸುತ್ತವೆ. ಇಲ್ಲಿ ಸಿಕ್ಕಿದ ಶಾ.ಶಕ. ೧೩೦೮-೧೩೭೭[2]ರ ಶಾಸನವು ಕೂಳೂರಿನಲ್ಲಿ ಅಜಿಲ ಕೆರೆಯನ್ನು ನೀರಾವರಿಗೆ ಉಪಯೋಗಿಸಿ ಬಿಜವರಿ ೫ ಮುಡೆ ಗದ್ದೆ ಮಾಡಿದ್ದನ್ನು ತಿಳಿಸಿದೆ. ಇಷ್ಟಲ್ಲದೇ ಮೂಡಬಿದ್ರೆ, ಕಾರ್ಕಳ, ಪಡುವಣಂಮಾರುಗಳಲ್ಲಿ ಕೆರೆ ನೀರಾವರಿ ಬಳಕೆ ಇದ್ದದು ಈ ಪ್ರದೇಶದ ಶಾಸನಗಳ[3] ಅಧ್ಯಯನದಿಂದ ತಿಳಿದು ಬರುತ್ತವೆ. ಇಷ್ಟಲ್ಲದೆ ಕೆಲವು ಶಾಸನಗಳು ಕೆರೆಯ ರಚನಾ ಕ್ರಮ ತಿಳಿಸಿವೆ. ಬಸ್ರೂರಿನ ದೊಡ್ಡ ಕೆರೆಯಲ್ಲಿರುವ ಕ್ರಿ.ಶ. ೧೩೫೮ರ ಶಿಲಾಶಾಸನವು ಜೋಡು ಕೆರೆ ಕಂದಾವರದಲ್ಲಿದ್ದು ಅವುಗಳ ನೀರನ್ನು ಕೃಷಿಗೆ ಉಪಯೋಗಿಸಿ ಎರಡೂವರೆ ಮೂಡಿ ಭತ್ತದ ಉತ್ಪತ್ತಿ

---

1 ಎ.ಇಂ., XVII ಪು. ೪೦೧-೪೦೬, ವಿವರ ಡಾ॥ ಕೆ.ವಿ. ರಮೇಶ : ಎ ಹಿಸ್ಟರಿ ಆಫ್ ಸೌತ್ ಕೆನರಾ, ಪು. ೨೬೧

2 ಸೌ.ಇಂ.ಇನ್ಸ್. VII, ೧೮೯

3 ಅದೇ, ೨೨೯, ೨೩೦, ೨೬೫, ೪೪೨

4 ಸೌ.ಇಂ.ಇನ್ಸ್ IX–I, No 446

ಯನ್ನು ಪಡೆದುದನ್ನು ತಿಳಿಸಿದೆ.[4] ಕೆಳದಿ ವೆಂಕಟಪ್ಪನ ಆಳ್ವಿಕೆ ಕಾಲದ ಕ್ರಿ.ಶ. ೧೬೨೧ರ ಶಾಸನವು ಚೌಕಾಕಾರದ ಕೆರೆಯನ್ನು ಗೇರಸೊಪ್ಪೆಗೆ ಹೋಗುವ ರಸ್ತೆಯಲ್ಲಿ ಕೊನಪ್ಪವೆಂಬ ಅಧಿಕಾರಿ ಕಟ್ಟಿಸಿದ್ದನ್ನು ತಿಳಿಸಿದೆ.[5] ವಿದೇಶಿ ಪ್ರವಾಸಿಗರು ಕೆರೆ ನೀರಾವರಿ ಕ್ರಮ ಬಳಕೆಯಲ್ಲಿದದ್ದನ್ನು ತಿಳಿಸಿದ್ದಾರೆ. ಉದಾ : ಡೆಲ್ಲಾ ವೆಲ್ಲೆಯು ಕದ್ರಿಯ ಕೆರೆಗಳನ್ನು ವರ್ಣಿಸಿದ್ದಾನೆ. ಇದೇ ರೀತಿ ಹೊನ್ನಾವರ ರಾಮತೀರ್ಥ ಕೆರೆಯ ರಚನಾ ಕ್ರಮ ವರ್ಣಿಸಿ ಈ ಕೆರೆಯ ನೀರು ತೋಟ ಬೆಳೆಗಳಿಗೆ ಉಪಯೋಗಿಸುತ್ತಿದ್ದದನ್ನು ಆಂಗ್ಲ ಪ್ರವಾಸಿ ಕ್ರಿ.ಶ. ೧೭೨೦ರಲ್ಲಿ ಬಂದ ಹೆಮಿಲ್ಟನ್ ತಿಳಿಸಿದ್ದಾನೆ.[6] ಹತ್ತೊಂಬತ್ತನೆ ಶತಮಾನದ ಆದಿಯಲ್ಲಿ ಬಂದ ಬುಕಾನನ್ ಕೆರೆ ನೀರಾವರಿ ಕ್ರಮವು ಅಂಕೋಲಾ, ಮಂಗಳೂರುಗಳಲ್ಲಿ ಬಳಕೆ ಇದ್ದುದ್ದನ್ನು ತಿಳಿಸಿದ್ದಾರೆ. ಇಷ್ಟಲ್ಲದೆ ಹಳದಿಪುರ ಮತ್ತು ಅಂಕೋಲಾ ಪ್ರದೇಶಗಳಲ್ಲಿ ಕೆರೆಗಳು ಎಷ್ಟು ತಗ್ಗಿನ ಸ್ಥಳದಲ್ಲಿದ್ದುವೆಂದರೆ ಯಾವ ಕಾಲದಲ್ಲೂ ಇವುಗಳಲ್ಲಿ ನೀರು ಇರುತ್ತಿತ್ತು. ಈ ನೀರನ್ನು ಏತ ಮತ್ತು ಸಂಬಳಿಕೆಯ ಸಹಾಯದಿಂದ ಗದ್ದೆ ಮತ್ತು ತೋಟಗಳಿಗೆ ಹಾಯಿಸುತ್ತಿದ್ದರು ಎಂದು ಈ ಪ್ರವಾಸಿ ತಿಳಿಸಿದ್ದಾನೆ.[7]

ಹರಿದ ಹಳ್ಳ ನೀರಾವರಿ ಕ್ರಮ ಮಿರ್ಜಾನ, ಹಿರೆಗುತ್ತಿ ಹಳದಿಪುರಗಳಲ್ಲಿ ಬಳಕೆ ಇದ್ದುದ್ದನ್ನು ಈ ಪ್ರದೇಶಗಳಲ್ಲಿರುವ ಶಿಲಾ ಶಾಸನಗಳು ತಿಳಿಸಿವೆ. ಕ್ರಿ.ಶ. ೧೫೨೭ ಜುಗ್ (ಮಿರ್ಜಾನ)ದ ಶಾಸನದ ಅಧ್ಯಯನವು ಬೆಟ್ಟು ಗದ್ದೆ ಮತ್ತು ತೆಂಗಿನ ತೋಟದ ಬೇಸಾಯಕ್ಕೆ ಹರಿದ ಹಳ್ಳಗಳು ಉಪಯೋಗವಾಗುತ್ತಿದ್ದು ತಿಳಿಸುತ್ತದೆ.[8] ಸದಾ ಹರಿಯುವ ಹಳ್ಳಗಳ ನೀರನ್ನು ಎರಡು ಮತ್ತು ಮೂರನೆ ಬೆಳೆ ತೆಗೆಯಲು ಮಂಗಳೂರಿನ ಸಮೀಪದ ಫರಂಗಿಪೇಟೆ, ಬಂಟವಾಳ, ಕಾರ್ಕಳದಲ್ಲಿರುವ ಮಜಲು, ಬಯಲು, ಘಟ್ಟದ ಬುಡದಲ್ಲಿನ ಪ್ರದೇಶಗಳಲ್ಲಿ ಉಪಯೋಗಿಸುತ್ತಿದ್ದರು ಎಂದು ಬುಕಾನನ್ ತಿಳಿಸಿದ್ದಾನೆ.[9]

ಶಾಸನಗಳಲ್ಲಿ ಉಕ್ತವಾಗುವ ಹೊಳೆಯ ತಡಿಯ ಗದ್ದೆ, ಹೊಳೆಯೆಂಬ ಗದ್ದೆ, ಹರಿವ ಹೊಳೆಯ ಸ್ಥಳದ ಒಳಗಿನ ಗದ್ದೆ ಇತ್ಯಾದಿಗಳಿಂದ ಹೊಳೆಯ ನೀರಾವರಿ ಕ್ರಮ ಇದ್ದುವೆಂದು ತಿಳಿದು ಬರುತ್ತದೆ.[10] ಭಟ್ಕಳ, ಕಾಯ್ಕಿಣಿಗಳಲ್ಲಿ ಸಿಕ್ಕಿದ ಶಾಸನಗಳು ಹೊಳೆಗಳಿಗೆ ಅಡ್ಡ ಗೋಡೆ ರಚಿಸಿ ಕಾಲುವೆಯಿಂದ ನೀರು ತಂದು ಗದ್ದೆ ಮಾಡಿದ್ದನ್ನು ತಿಳಿಸಿದೆ.[11] ಇದರಿಂದ ಈ ಪ್ರದೇಶದಲ್ಲಿ ನದಿ ನೀರಾವರಿ ಬಳಕೆಗಳು ಇದ್ದುವೆಂದು ತಿಳಿಯಬಹುದು. ಉಪ್ಪುಂದ ದುರ್ಗಾಪರಮೇಶ್ವರಿ ದೇವಾಲಯದಲ್ಲಿರುವ ಕ್ರಿ.ಶ. ೧೪೭೯ರ ಶಾಸನವು ಜೋಗುರಿನ ಹೊಳೆಗೆ ತೊಂಡಲೆಗೆ ಅಣೆಕಟ್ಟು ಕಟ್ಟೆ ನೀರು ಹರಿಯುವ ತೋಡುಗಳಿಂದ ೭೦ ಬೀಜ ಮೂಡಿ ಗದ್ದೆ ಬೇಸಾಯ ನಡೆಸಿದ್ದನ್ನು ತಿಳಿಸಿದೆ.

ಭಟ್ಕಳದ ಬಯಲು ಪ್ರದೇಶವು ಆನೆಗರ ಸಮೀಪ ಹರಿಯುವ ಹೊಳೆಯ ನೀರಿನಿಂದ ಬೇಸಾಯವಾಗುತ್ತಿದ್ದು

5 ಎ.ಕ. VIII ಸಾಗರ ೫೪

6 ಎ ನ್ಯೂ ಅಕೌಂಟ್ ಆಫ್ ಈಸ್ಟ್ ಇಂಡೀಸ್ : I. ಪು. ೧೪೯

7 ಎ ಜರ್ನಿ : II ಪು. ೨೩೨, ೨೩೪, ೩೨೭

8 ಕ.ಇನ್ಸ್ VI ೬೯, ಪು. ೧೮೯,

9 ಎ ಜರ್ನಿ : ಪು. ೨೪೫, ೨೬೧

10 ಉಪ್ಪುಂದ ದುರ್ಗಾ ಪರಮೇಶ್ವರಿ ದೇವಾಲಯದಲ್ಲಿ ಎರಡು ತಾಮ್ರ ಶಾಸನಗಳು, ಕ್ರಿ.ಶ. ೧೪೫೧, ಕ್ರಿ.ಶ. ೧೪೭೯; ಕೋಟಿಕೇರಿ ಮೂಲ್ಕಿ ಬಸದಿಯಲ್ಲಿರುವ ತಾಮ್ರ ಶಾಸನ ಕ್ರಿ.ಶ. ೧೫೨೯
ಸೌ.ಇ.ಇನ್ಸ್ IX, II ೬೭೪

11 ಕ.ಇನ್ಸ್. III : ೧೧, ೧೪, ೧೬

ವನ್ನು ಕ್ರಿ.ಶ. ೧೬೩೭ ರಲ್ಲಿ ಬಂದ ಆಂಗ್ಲ ಪ್ರವಾಸಿ ಪೀಟರ್ ಮುಂಡಿ ವೀಕ್ಷಿಸಿದ್ದಾನೆ. ಇವನ ವರದಿಯಂತೆ ನದಿಯಲ್ಲಿ ಅಣೆಕಟ್ಟು ಕಟ್ಟಿ ಕಾಲುವೆ ಮುಖಾಂತರ ನೀರನ್ನು ಹಾಯಿಸಿ ಬತ್ತ, ತೆಂಗು, ಅಡಿಕೆ, ಕಬ್ಬು, ಮೆಣಸುಗಳ ಬೇಸಾಯ ಬಯಲು ಮತ್ತು ಮಕ್ಕಿಗದ್ದೆಗಳಲ್ಲಿ ನಡೆಯುವುದನ್ನು ತಿಳಿಸಿದ್ದು ಗಮನಾರ್ಹವಾಗಿದೆ.[12] ಪಂಚ ಗಂಗಾವಳಿ, ಶಾಂಭವಿ ಮತ್ತು ನೇತ್ರಾವತಿಗಳಲ್ಲಿ ಹರಿಯುವ ನೀರು (ಈ ನದಿಗಳ ಒಳ ಪ್ರದೇಶಗಳಲ್ಲಿ) ಅಕ್ಕಿ, ಕಬ್ಬು ಬೇಸಾಯಗಳಿಗೆ ಉಪಯೋಗಿಸುತ್ತಿದ್ದರೆಂದೂ, ಇದರಿಂದಾಗಿ ಬಸ್ರೂರು ಮೂಲ್ಕಿ ಮತ್ತು ಮಂಗಳೂರು ಅಕ್ಕಿ ರಫ್ತಿನ ಮುಖ್ಯ ಬಂದರುಗಳಾಗಿದ್ದುವೆಂದು ಹೆಮಿಲ್ಟನ್ ತನ್ನ ವರದಿಯಲ್ಲಿ ತಿಳಿಸಿದ್ದಾನೆ. ಬುಕಾನನ ನದಿಯ ನೀರಾವರಿ ಕ್ರಮಗಳು ಕರಾವಳಿಯಲ್ಲಿ ಬಳಕೆ ಇದ್ದುದ್ದನ್ನು ತಿಳಿಸುವುದಲ್ಲದೇ, ಬೆಳತಂಗಡಿ ಮತ್ತು ಭಟ್ಕಳದಲ್ಲಿ ನದಿಗಳಿಗೆ ಕಟ್ಟಿದ ಅಣೆಕಟ್ಟಿನ ರಚನಾ ಕ್ರಮಗಳನ್ನು ತಿಳಿಸಿದ್ದಾನೆ. ಈ ಅಣೆಕಟ್ಟುಗಳನ್ನು ಮಣ್ಣು ಮತ್ತು ಕಲ್ಲುಗಳನ್ನು ಉಪಯೋಗಿಸಿ ಪ್ರತಿ ವರ್ಷ ಕಟ್ಟುತ್ತಿದ್ದರೆಂದು ತಿಳಿಸಿದ್ದಾನೆ.[13]

ನೀರು ಹರಿವ ತೂಬುಗಳ ನೀರಾವರಿ ಕ್ರಮ ಶಾಸನ ಮತ್ತು ವಿದೇಶಿ ಪ್ರವಾಸಿಗರಾದ, ಪೀಟರ್ ಮುಂಡಿ ಮತ್ತು ಬುಕಾನನ್ ವರದಿಗಳಲ್ಲಿ ತಿಳಿಸಿದ್ದಾರೆ.[24]

ನೀರಾಶ್ರಯ (ಮದಗ) ನೀರಾವರಿ ಕ್ರಮ ಮಜಲು ಬೇಸಾಯಕ್ಕೆ ಉಪಯೋಗಿಸುತ್ತಿದ್ದರು. ಇಂತಹ ನೀರಾಶ್ರಯಗಳನ್ನು ಮಂಜೇಶ್ವರದ ದೇವಾಲಯದಲ್ಲಿರುವ ಹದಿನೆಂಟನೆ ಶತಮಾನದ ಕಡತಗಳು ಉಲ್ಲೇಖಿಸಿವೆ. ಬೆಳ್ತಂಗಡಿ, ಮಂಗಳೂರು ಮತ್ತು ಹೊನ್ನಾವರಗಳಲ್ಲಿ ಇದ್ದುದನ್ನು ಬುಕಾನನ್ ತಿಳಿಸಿದ್ದಾನೆ. ಇಲ್ಲಿನ ಜನರು ದೊಡ್ಡ ಪ್ರಮಾಣದ ನೀರಾಶ್ರಯ ರಚಿಸದೆ ಇರಲು ಕಾರಣವೇನೆಂದರೆ, ಇಲ್ಲಿ ಬರುವ ರಭಸದ ಮಳೆ. ಈ ಮಳೆಗಳು ಮದಗಗಳ ಕಟ್ಟೆಗಳನ್ನು ಒಡೆದು ಬೆಳೆಗಳಿಗೆ ನಾಶ ಮಾಡುತ್ತವೆಯೆಂದು ಈ ಪ್ರವಾಸಿ ಜನರಿಂದ ತಿಳಿದುಕೊಂಡಿದ್ದಾನೆ.[15]

ಬಾವಿಯ ನೀರಾವರಿ ಹೆಚ್ಚಾಗಿ ವ್ಯಯಕ್ತಿಕವಾಗಿತ್ತು. ಈ ನೀರಾವರಿಗಳ ನೀರಿನ ಹಂಚುವ ಕ್ರಮ ವ್ಯಕ್ತಿ ಮತ್ತು ಬೆಳೆ ಮತ್ತು ಭೂಮಿಯ ಸ್ವರೂಪಗಳನ್ನು ಅವಲಂಬಿಸಿಕೊಂಡಿದೆಯೆಂದು ಬಸ್ರೂರು, ಭಾರಕೂರು, ಬ್ರಹ್ಮಾವರ ಮತ್ತು ಉಪ್ಪುಂದ ತಾಮ್ರ ಶಾಸನ[16] ಇತ್ಯಾದಿಗಳ ಅಧ್ಯಯನದಿಂದ ತಿಳಿದು ಬರುತ್ತದೆ. ಅಪ್ರಕಟಿತ ಉಪ್ಪುಂದ ಶಾಸನದಂತೆ ರಾಮಚಂದ್ರ ತೀರ್ಥ ಸ್ವಾಮಿಗಳು ಒಕ್ಕಲುಗಳನ್ನು ಇರಿಸಿ ತೊಂಡಲೆ ಹೊಳೆಯ ನೀರಿನ ಕಾಲು ಅಂಶ ಪಡೆಯಬೇಕು. ಇನ್ನುಳಿದ ಅರ್ಧ ಅಂಶ ಹೆಗ್ಗಡೆ ಮುಂತಾದವರು ಉಪಯೋಗಿಸಿಕೊಳ್ಳಬೇಕು ಎಂದು ತಿಳಿಯುತ್ತದೆ.

**ಉಪಸಂಹಾರ :** ಕರಾವಳಿ ಕರ್ನಾಟಕ ನೀರಾವರಿ ಹಿಂಗಾರು ಮಳೆ ಮತ್ತು ನದಿಗಳು ಹರಿಯುವ ರಚನೆಗಳನ್ನು ಅವಲಂಬಿಸಿದೆ. ಇಲ್ಲಿ ದೊಡ್ಡ ಪ್ರಮಾಣದ ನೀರಿನ ಆಶ್ರಯಗಳು ರಚಿಸದೆ ಇರಲು ಕಾರಣವೇನೆಂದರೆ ಇಲ್ಲಿ ಬರುವ ರಭಸದ ಮುಂಗಾರು ಮಳೆ, ನದಿಯ ಒಳ ಪ್ರದೇಶ ಅಕ್ಕಿ, ಕಬ್ಬು ಮತ್ತು ಮೆಣಸು

12 ದಿ ಟ್ರ್ಯಾವೆಲ್ಸ್ ಆಫ್ ಪೀಟರ್ ಮುಂಡಿ ಇನ್ ಯೂರೋಪ್ ಅಂಡ್ ಏಷ್ಯಾ, ಸಂ. III : ಭಾಗ ೧, ಪು. ೭೮-೮೦, ೯೯

13 *Journey* II, P. 250, 292

14 SII. VII Nos. 243, 371, 375 ಉಪ್ಪುಂದ, ಶಾ.ಶಕ. ೧೪೭೯ರ ತಾಮ್ರ ಶಾಸನ ; *A Journey* 232, 292

15 *A Journey* 228, 253, 261, 302

16 ಸೌ.ಇಂ.ಇನ್ಸ್, ಭಾ-IX, II, No. 446, ಅದೇ VII, ೩೪೬, ಉಪ್ಪುಂದ ತಾಮ್ರ ಶಾಸನ ಕ್ರಿಸ್ತಶಕ. ೧೪೭೯

ಕೃಷಿಗೆ ಯೋಗ್ಯವಾಗಿದ್ದರೆ. ನದಿ ಮುಖ ಭೂಮಿ ತೆಂಗಿನ ಬೇಸಾಯಕ್ಕೆ ಯೋಗ್ಯವಾಗಿದೆ. ನದಿ ಹರಿಯುವ ದಿಕ್ಕು ಬದಲಾಗುತ್ತಿದ್ದುದರಿಂದ ಇಲ್ಲಿನ ಗಜನಿಯೆಂಬ ಫಲವತ್ತಾದ ಪ್ರದೇಶಗಳು ರಚಿತವಾಗುತ್ತವೆ.

ಕೆರೆಯ ನೀರಾವರಿ ಕ್ರಮ ಹೆಚ್ಚು ಬಳಕೆಯಲ್ಲಿದ್ದಿತ್ತು. ಸಾರ್ವಜನಿಕ ಮತ್ತು ವ್ಯಕ್ತಿಗತ ಕೆರೆಗಳು ಇಲ್ಲಿದ್ದವು. ಆದರೆ ವ್ಯಕ್ತಿಗತ ಕೆರೆಗಳೇ ಹೆಚ್ಚು.

ನೀರಾವರಿಯ ನೀರುಗಳನ್ನು ದಾಮಾಶಯವಾಗಿ ಹಂಚಿಕೊಳ್ಳುವ ಪದ್ಧತಿ ಇಲ್ಲಿ ಇದ್ದಿತ್ತು. ಹದಿನೇಳನೆ ಶತಮಾನದ ನಂತರ ವಿವಿಧ ರೀತಿಯ ನೀರಾವರಿಗಳು ಹೆಚ್ಚು ಹೆಚ್ಚು ಬಳಕೆಗೆ ಬಂದವು. ○

# ಕೆಳದಿ ಅರಸರ ಕಾಲದ ಮರಹಮ್ಮತೆ ಕಾಮಗಾರಿಗಳು

**ಡಾ|| ಕೆಳದಿ ವೆಂಕಟೇಶ್**

ವಿಜಯನಗರದ ಧ್ಯೇಯ ಉದ್ದೇಶವನ್ನೇ ತಮ್ಮ ಮೂಲ ಗುರಿಯಾಗಿಟ್ಟುಕೊಂಡು ರೂಪುಗೊಂಡ 'ಕೆಳದಿ' ಆ ಪರಂಪರೆಯನ್ನೆ ಮುಂದುವರೆಸಿಕೊಂಡು ಬಂದಿತು. ಕೆಳದಿ ಅರಸರು ರಾಜಧರ್ಮವೆನಿಸಿದ ಪ್ರಜಾರಕ್ಷಣೆ, ಧರ್ಮ ಪರಿಪಾಲನೆಗಳನ್ನು ತಮ್ಮ ಆಡಳಿತದ ಅವಧಿಯಲ್ಲಿ ಅನುಸರಿಸಿಕೊಂಡು ಬಂದರು.

ಪ್ರಸ್ತುತ ಈ ಪ್ರಬಂಧವು ಕೆಳದಿ ಅರಸರ ಕಾಲದ ಮರಹಮ್ಮತ್‌ಕಾಮಗಾರಿಯನ್ನು ಕುರಿತು ಚರ್ಚಿಸುವುದಾಗಿದೆ.

**ಪ್ರಜಾ ರಕ್ಷಣೆ:** ಕೆಳದಿ ಅರಸರಕಾಲದಲ್ಲಿ ಪ್ರಜೆಗಳಿಗೆ ಉತ್ತಮ ರಕ್ಷಣೆ ದೊರೆಯುತ್ತಿತ್ತು. ರಾತ್ರಿಯ ವೇಳೆಯಲ್ಲಿ ಗಸ್ತುತಿರುಗಲು 'ತಳವಾರ'ರು ಇರುತ್ತಿದ್ದರು.* ಅವರಿಗೆ ಅರಮನೆಯಿಂದ ಉಂಬಳಿ ಉತ್ತಾರಗಳು ದೊರೆಯುತ್ತಿತ್ತು.[1] ರಾಜ್ಯದ ರಸ್ತೆಗಳು ವಿಶಾಲವೂ, ಸುರಕ್ಷಿತವೂ ಆಗಿದ್ದಿತು. ಜಾಕೋಬಸ್ ಕ್ಯಾಂಟರ್ ವಿಕಾರನು ತನ್ನ ಪ್ರವಾಸಿಕಥನದಲ್ಲಿ ಅಪರಿಚಿತರೂ ಹಣದ ಚೀಲದೊಡನೆ ರಾತ್ರಿ ವೇಳೆಯಲ್ಲಿ ಎಲ್ಲಿ ಬೇಕಾದರೂ ಒಬ್ಬರೇ ಹೋಗಬಹುದಾಗಿತ್ತು, ದರೋಡೆ, ಹಿಂಸೆಗಳು ಕೆಳದಿ ರಾಜ್ಯದಲ್ಲಿ ಇರಲಿಲ್ಲ ಎಂಬುದಾಗಿ ಬರೆಯುತ್ತಾನೆ.[2] ತಪ್ಪು ಮಾಡಿದವರಿಗೆ ಕಠಿಣ ಶಿಕ್ಷೆ ವಿಧಿಸುತ್ತಿದ್ದರು. ಪ್ರಜೆಗಳಿಗೆ ತಮ್ಮ ಸಾಹಸದಿಂದ ರಕ್ಷಣೆ ಒದಗಿಸಿದವರಿಗೆ ಅರಮನೆಯಿಂದ ಗೌರವ ದೊರೆಯುತ್ತಿತ್ತು. ಕೋಡಿಹಳ್ಳಿ ಬಸವ ಎಂಬುವನು ರಾಜ್ಯದಲ್ಲಿ ತೊಂದರೆ ಕೊಡುತ್ತಿದ್ದ ಮಂಚಿ ಬರಮನ ತಲೆ ಕಡಿದು ಪ್ರಜೆಗಳಿಗೆ ರಕ್ಷಣೆ ಒದಗಿಸಿದ್ದರಿಂದ ಸರ್ಕಾರ ಅವನಿಗೆ ಉಂಬಳಿ ಬಿಟ್ಟಿರುವುದನ್ನು ಉದಾಹರಿಸಬಹುದು.[3]

**ಉದ್ಯಾನಗಳು :** ಉದ್ಯಾನಗಳು ವಿಜಯನಗರ ಕಾಲದಲ್ಲಿದ್ದಂತೆ ಈ ಕಾಲದಲ್ಲಿಯೂ ಇದ್ದಿತು. ಅವು ಸಾರ್ವಜನಿಕರಿಗೆ ಮತ್ತು ರಾಜರಿಗೆ ಪ್ರತ್ಯೇಕವಾಗಿದ್ದವು. ವಿಶೇಷ ಸಂದರ್ಭಗಳಲ್ಲಿ ರಾಜರ ಉದ್ಯಾನಗಳಿಗೆ ಪ್ರಜೆಗಳಿಗೆ ಪ್ರವೇಶ ದೊರೆಯುತ್ತಿತ್ತು.[4] ಇಕ್ಕೇರಿ ಅರಮನೆ

1 ಕಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಮತ್ತು ಸಂಪಾದನೆ, ಭಾಗ ೨ ಸಂಖ್ಯೆ ೨೧೩

2 ರೈಸ್, ಮೈಸೂರು ಭಾಗ ೨, ಪುಟ ೪೩೫, ಮೈಸೂರು ಗೆಜೆಟ್ ಭಾಗ ೫, ಪುಟ ೧೨೩೬

3 ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಮತ್ತು ಸಂಪಾದನೆ ಭಾಗ ೨. ಸಂಖ್ಯೆ ೧೨೮

* ತಳವಾರರು ಈಗಲೂ ಇರುವರು. ಆದರೆ ಅಂದು ಊರನ್ನು ಕಾಯುತ್ತಿದ್ದ ಈ ತಳವಾರರು ಇಂದು ತೋಟಕ್ಕೆ ಮಾತ್ರ ಸೀಮಿತರಾಗಿದ್ದಾರೆ.

4 ಹೆಚ್.ಎಲ್. ನಾಗೇಗೌಡ, ಪ್ರ.ಕಂ.ಇಂ. ಸಂ. ೪, ಪುಟ ೨೩೮

ಸಮೀಪ ರಾಜರಿಗೆ ಸಂಬಂಧಿಸಿದ ಉದ್ಯಾನವಿತ್ತು.[5] ಹಿರಿಯ ವೆಂಕಟಪ್ಪ ನಾಯಕನು ಆನಂದಪುರದ ಸಮೀಪ 'ಚಂಪಕ ಸರಸಿ' ಎಂಬ ಸರೋವರ ಮತ್ತು ಉದ್ಯಾನ ವನವನ್ನು,[6] ಸಾಗರದ ಮಹಾಗಣಪತಿ ದೇವಾಲಯದ ಸಮೀಪ ಚಂದನವನ (ಚಂದ್ರಮಾವಿನ ಕೊಪ್ಪಲು) ವನ್ನೂ[7] ಕೆಳದಿ ಅರಮನೆಗೆ ಸಮೀಪ 'ಸಂಪೆಕಟ್ಟೆ' ಎಂಬ ಕರೆ ಮತ್ತು ಮಾವಿನತೋಟವನ್ನು ನಿರ್ಮಿಸಿದ್ದನು.[8] ಭುವನಗಿರಿದುರ್ಗದ ಹೊರವಲಯದಲ್ಲಿ ಸುಂದರ ಸರೋವರವೂ ಇದೇ ಕಾಲದಲ್ಲಿ ನಿರ್ಮಾಣ ವಾಯಿತು.[9] ಎರಡನೆ ಸೋಮಶೇಖರ ನಾಯಕನು ಸಂಗಮೇಶ್ವರದಲ್ಲಿ ಒಂದು ಸರೋವರ ನಿರ್ಮಿಸಿದನು.[10]

**ಅರವಟ್ಟಿಗೆಗಳು :** ಈ ಕಾಲದಲ್ಲಿ ಒಂದೆಡೆ ಯಿಂದ ಇನ್ನೊಂದೆಡೆ ಪ್ರಯಾಣ ಮಾಡುವವರಿಗೆ ಬಾಯಾರಿಕೆಯನ್ನು ಇಂಗಿಸಿಕೊಳ್ಳಲು ದಾರಿಯ ಪಕ್ಕದಲ್ಲಿ ನೀರಿನ ವ್ಯವಸ್ಥೆ ಇರುತ್ತಿತ್ತು. ಸಾಮಾನ್ಯವಾಗಿ ಈ ವ್ಯವಸ್ಥೆಯು ದೇವಾಲಯ, ಮಠ, ಛತ್ರಗಳಲ್ಲಿ ಇರುತ್ತಿತ್ತು. ಸರ್ಕಾರವು ತನ್ನ ಖರ್ಚಿನಲ್ಲಿ ಈ ವ್ಯವಸ್ಥೆ ಮಾಡಿರುತ್ತಿತ್ತು. ಅಲೆಕ್ಸಾಂಡರ್ ಹ್ಯಾಮಿಲ್ಟ ನ್ನನು ತನ್ನ ಪ್ರವಾಸಿ ಕಥನದಲ್ಲಿ 'ಕೆಲವು ಕಡೆ'ಗಳಲ್ಲಿ ಗುಡಿಸಲುಗಳಿದ್ದುದಾಗಿಯೂ ಅಲ್ಲಿ ಬೆಳಗಿನ ಹೊತ್ತು ವಯಸ್ಸಾದವರು ಕುಳಿತಿರುತ್ತಿದ್ದರು ಮತ್ತು ಅವರು ಒಳ್ಳೆಯ ಕುಡಿಯುವ ನೀರನ್ನು ಒದಗಿಸುತ್ತಿದ್ದರು. ಇದರ ಪೂರ್ಣ ಖರ್ಚು ಸರ್ಕಾರದ್ದಾಗಿತ್ತು ಎಂಬುದಾಗಿ ಬರೆಯುತ್ತಾನೆ.[11]

**ಛತ್ರಗಳು :** ಆ ಕಾಲದಲ್ಲಿ ಅರವಟ್ಟಿಗೆಗಳಂತೆ ಪ್ರಯಾಣಿಕರಿಗೆ ಉಳಿಯಲು ಅಲ್ಲಲ್ಲಿ ಛತ್ರದ ವ್ಯವಸ್ಥೆಯೂ ಇತ್ತು. ಛತ್ರಗಳಲ್ಲಿ ಆಹಾರದ ವ್ಯವಸ್ಥೆ ಸಹ ಇತ್ತು. ಛತ್ರಗಳಿಲ್ಲದ ಕಡೆ ಊರಿನ ಹಿರಿಯರು, ಉದಾರಿಗಳ ಮನೆಯಲ್ಲಿ ಈ ಏರ್ಪಾಟು ಇರುತ್ತಿತ್ತು.[12] ಇವು ಸಾಮಾನ್ಯವಾಗಿ ದೇವಾಲಯ, ಮಠಗಳಿಗೆ ಹೊಂದಿ ಕೊಂಡು ಇರುತ್ತಿದ್ದವು. ಅಗ್ರಹಾರಗಳಲ್ಲಿಯೂ ಛತ್ರದ ವ್ಯವಸ್ಥೆ ಇತ್ತು. ಅವುಗಳಿಗೆ ಪ್ರತ್ಯೇಕ ದತ್ತಿಗಳನ್ನು ನೀಡುತ್ತಿದ್ದರು.[12] ಸದಾಶಿವ ನಾಯಕನ ಕಾಲದ ಶಾಸನವೊಂದು ಚಿಕ್ಕದಾಸಯ್ಯ ಎಂಬುವನು ಮೂವರು ಬ್ರಾಹ್ಮಣರಿಗೆ ಊಟದ ವ್ಯವಸ್ಥೆಗಾಗಿ ಛತ್ರಕ್ಕೆ ಭೂದಾನ ಮಾಡಿದ್ದನ್ನು ತಿಳಿಸುತ್ತದೆ.[13] ಸಂಕಣ ನಾಯಕನ ಕಾಲದ ಶಾಸನವು ೮ ಮಂದಿ ಬ್ರಾಹ್ಮಣರಿಗೆ ಕೇಶವ ಅಧಿಕಾರಿಯು ೧೬೦ ಖಂಡುಗ ಭತ್ತ ಕೊಡುವ ಭೂಮಿಯನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ.[14] ಹಿರಿಯ ಸಂಕಣ್ಣ ನಾಯಕನ ಸಾಮಂತ ಹೊನ್ನೆಕಂಬಳಿ ಒಡೆಯರು ಅಮ್ಮದೇವಿಯವರು ನಾಲ್ಕು ಜನರಿಗೆ ಭೋಜನಕ್ಕಾಗಿ ದಾನ ನೀಡಿದ್ದರು.[5] ಕ್ರಿ.ಶ. ೧೫೬೯ರ ಶಾಸನವೊಂದು ಮಣಿಗಾರ ಕೇರಿಯ ಶೆಟ್ಟಿಯರ ಮಗ ತಮ್ಮ ಶೆಟ್ಟಿಯು ಪ್ರತಿದಿನ ಭೋಜನಕ್ಕಾಗಿ ದಾನ

---

5 ಅದೇ ಪುಟ ೨೩೮-೩೯
6 ಕೆ.ನೃ.ವಿ. ಪುಟ ೭೬ ಮತ್ತು ಕ.ಶಾ.ಸಾಂ.ಅ ಮತ್ತು ಸಂ. ಭಾಗ ೨ ಸಂ. ೧೪೮, ಇತರೆ
7 ಕೆ.ನೃ.ವಿ. ಪು ೭೭-೭೮
8 ಕೆ.ನೃ.ವಿ. ಪು ೭೭-೭೯ (ಈಗಲೂ ಸಂವೇಕಟ್ಟೆ ಕೆರೆಯನ್ನು ಕೆಳದಿಯಲ್ಲಿ ಗಮನಿಸಬಹುದು)
9 ಅದೇ ಪು. ೮೨
10 ಅದೇ ಪು. ೧೯೨-೯೩
11 ಅಲೆಕ್ಸಾಂಡರ್ ಹ್ಯಾಮಿಲ್ಟನ್ : 'ಎ ನ್ಯೂ ಅಕೌಂಟ್ಸ್' ಭಾಗ ೧, ಪು. ೧೫೯
* ಲಿಂಗಣ್ಣ ಕವಿಯು ತನ್ನ ಕೆಳದಿ ನೃಪವಿಜಯದಲ್ಲಿ ತಿಳಿಸಿರುವಂತೆ ಹೂದೋಟಕ್ಕೆ ಅಗತ್ಯವಾದ ನೀರಾವರಿ ಸೌಲಭ್ಯಗಳು ಈಗಲೂ ಅಲ್ಲಿ ಕಂಡುಬರುತ್ತವೆ.
12 ಕೆ.ಶಾ.ಸಾಂ. ಅ ಮತ್ತು ಸಂ. ಭಾಗ 1, ಪುಟ ೨೧೫,
13 ಅದೇ ಭಾಗ ೨, ಸಂ. ೧೬೩
14 ಅದೇ ಭಾಗ ೨, ಸಂಖ್ಯೆ ೮
15 ಅದೇ ಭಾಗ ೨, ಸಂಖ್ಯೆ ೨೬
16 ಅದೇ ಭಾಗ ೨, ಸಂಖ್ಯೆ ೨೨

ನೀಡಿದ್ದನ್ನು ತಿಳಿಸುತ್ತದೆ.[17] ರಾಮರಾಜನಾಯಕನು ಹಿಂದಿನ ದಾನವು ಹಾಳು ಬಿದ್ದಿದ್ದರಿಂದ ಅದನ್ನು ಪುನಃ ಸರಿಪಡಿಸಿ ಹತ್ತು ಜನರಿಗೆ ಊಟದ ವ್ಯವಸ್ಥೆಗಾಗಿ ಛತ್ರಕ್ಕೆ ಬನವಾಸಿ ೧೨೦೦೦ ದ ಎಡೆನಾಡಿನಲ್ಲಿನ ಹೆಗ್ಗಡಸೆ ಗ್ರಾಮವನ್ನು ಕೊಟ್ಟಿದ್ದನು.[18] ವೀರಭದ್ರನಾಯಕನು ದೇವಾಲಯದಲ್ಲಿ ಊಟದ ವ್ಯವಸ್ಥೆಗಾಗಿ ೧೫ ವರಹ ಬೆಳೆಬಾಳುವ ಭೂಮಿದಾನ ಬಿಟ್ಟಿದ್ದನು.[19] ಸೋಮ ಶೇಖರ ನಾಯಕನು ಶಿವರಾಜಪುರ ಅಗ್ರಹಾರದಲ್ಲಿ ದೇವಾಲಯ ಮತ್ತು ಛತ್ರಕ್ಕೆ ಭೂದಾನ ಮಾಡಿದ್ದನು.[20] ಚೆನ್ನಮ್ಮಾಜಿಯು ಕೋಳಿವಾಡದ ಬೊಮ್ಮಯ್ಯ ಮತ್ತು ಕರಣಿಕ ಕೋನಯ್ಯನ ಕೇಳಿಕೆಯಂತೆ ಕೂಡಲಿ ಶೃಂಗೇರಿ ಮಠಕ್ಕೆ, ಛತ್ರಕ್ಕೆ ದಾನ ಮಾಡಿದಳು. ಛತ್ರದಲ್ಲಿ ಎಷ್ಟು ಜನರಿಗೆ ಅವಕಾಶವಿದೆ ಎಂಬುದು ಅವಕ್ಕೆ ಬಿಟ್ಟ ದಾನ ದಲ್ಲಿ ಸ್ಪಷ್ಟವಾಗಿ ನಮೂದಿಸಲಾಗಿರುತ್ತಿತ್ತು. ಮಠ, ಮಹತ್ತಿನ ಮಠಗಳೂ ಸಹ ಈ ಕೆಲಸವನ್ನು ನಿರ್ವಹಿಸು ತ್ತಿದ್ದವು.

**ಕೆರೆ, ಕೊಳ ಇತ್ಯಾದಿ** : ಕೆಳದಿ ಕಾಲದಲ್ಲಿ ಮರಹಮ್ಮತೆ ಇಲಾಖೆ ಮುಖಾಂತರ ನೀರಾವರಿ ಉಪಯೋಗಕ್ಕಾಗಿ ಕೆರೆ, ಕೊಳ, ಬಾವಿ ಮೊದಲಾದವು ರಾಜರಿಂದ, ಸಾರ್ವಜನಿಕರಿಂದ ನಿರ್ಮಾಣವಾಗುತ್ತಿತ್ತು. ಇವು ಹೆಚ್ಚಾಗಿ ಸಾರ್ವಜನಿಕ ಸ್ಥಳಗಳಲ್ಲಿ ನಿರ್ಮಿತವಾಗು ತ್ತಿತ್ತು. ಹೊಲಗಳಿಗೆ ನೀರಾವರಿ ಸೌಲಭ್ಯವನ್ನು ಕೆರೆಗಳ ಮೂಲಕ ಮಾಡುತ್ತಿದ್ದರು. 'ಕೆಳದಿ' ಸುತ್ತ ಮುತ್ತಲಲ್ಲಿ ಅಂದು ಹಲವು ಕೆರೆಗಳು ನಿರ್ಮಾಣ ಗೊಂಡವು. ಅವುಗಳಿಂದ ಚಿಕ್ಕಹಿಡುವಳಿಗಳಿಗೆ ತಕ್ಕಂತೆ ಎಕರೆ ಭೂಮಿಗಳಿಗೆ ನೀರಿನ ಸೌಲಭ್ಯ ದೊರಕಿಸಿಕೊಡ ಲಾಗಿತ್ತು. ಆ ಕಾಲದಲ್ಲಿ ನಿರ್ಮಾಣವಾಗಿರುವ ಕೆರೆಗಳನ್ನು ಈಗಲೂ ಗಮನಿಸಬಹುದು. ಕೆಲವನ್ನು ಇಲ್ಲಿ ಹೆಸರಿಸಿದೆ.*

| ನಂ. | ಕೆರೆಯ ಹೆಸರು | ಸಂ.ನಂ. | ವಿಸ್ತೀರ್ಣ | ಅಚ್ಚುಕಟ್ಟು |
|---|---|---|---|---|
| ೪೩೧ | ಬಂದಗದ್ದೆ ತೋಟದ ಮೇಲಿನ ಕೆರೆ | ೧೧೯ | | ೩೦ಎ. ೧೪ ಗುಂ. |
| ೪೩೨ | ಬಂದಗದ್ದೆ ಮೇಲಿನ ಕೆರೆ | ೧೨೧ | | ೪ ಎ. ೨೮ ಗುಂ. |
| ೪೩೩ | ಶ್ರೀನಿವಾಸನ ಕೆರೆ | — | | — |
| ೪೩೪ | ಸಂಪೆಕಟ್ಟೆ ಕೆರೆ | ೧ | | ೪ ಎ. ೨೯ ಗುಂ. ೫ ಎ. ೩೯ ಗುಂ. |
| ೪೩೫ | ಹಿರೇಕೆರೆ | ೧೨೭ | | ೧೦೮ ಎ. ೨೧ ಗುಂ. ೨೮೨ ಎ. ೧೨ ಗುಂ. |
| ೪೩೬ | ಹೊಲಗುಡಿ ಕೆರೆ (ಮಠದ ಕೆರೆ) | ೭೫ | (ಮಠದ ಆಸ್ತಿ) | |
| ೪೩೭ | ಹೊಸಕಟ್ಟೆನ ಕೆರೆ | ೫೮ | | ೫೬ ಎ. ೧೮ ಗುಂ. (ಈಗ ಈ ಕೆರೆ ಇಲ್ಲ) |
| ೪೩೮ | ಕಣಗಳು ಕೆರೆ | ೮೮ | — | ೩೬ ಎ. ೩೮ ಗುಂ. |
| ೪೩೯ | ಹಳ್ಳಿಬೈಲು ಗದ್ದೆ ಮೇಲಿನ ಕೆರೆ (ಜಡ್ಡಿನಬೈಲು ಕೆರೆ) | ೯೩ | — | ೬೦ ಎ. ೨ ಗುಂ. |

17 ಅದೇ ಭಾಗ ೨, ಸಂಖ್ಯೆ ೨೬
18 ಅದೇ ಭಾಗ ೨, ಸಂಖ್ಯೆ ೩೯
19 ಅದೇ ಭಾಗ ೨, ಸಂಖ್ಯೆ ೧೦೦
20 ಅದೇ ಭಾಗ ೨, ಸಂಖ್ಯೆ ೧೬೩
21 ಅದೇ ಭಾಗ ೨, ಸಂಖ್ಯೆ ೨೪೨

* ಸಾಗರ ತಾಲೂಕಿನಲ್ಲಿ ಒಟ್ಟು ೫೦೯ ಕೆರೆಗಳಿದ್ದು ಅವು ಸು. ೭೫೨೧ ಹೆ. ಭೂಮಿಗೆ ನೀರುಣಿಸುತ್ತಿವೆ.

| ನಂ. | ಕೆರೆಯ ಹೆಸರು | ಸ.ನಂ. | ವಿಸ್ತೀರ್ಣ | ಅಚ್ಚುಕಟ್ಟು |
|---|---|---|---|---|
| ೪೪೦ | ಕುಮರಿಗದ್ದೆ ಕೆರೆ | ೮೫ | — | (ಸ್ವಂತ ಆಸ್ತಿ. |
| ೪೪೧ | ಹೊಲಗುಡಿಗೆ ಕೆರೆ (ಮಠದ ಗದ್ದೆ) | ೭೪ | | ೩೩ ಎ. ೩೮ ಗುಂ. |
| ೪೪೨ | ಅಕ್ಕಿಮನೆ ಕೆರೆ | ೮೩ | — | — |
| ೪೪೩ | ತೆರವಿನಕೊಪ್ಪದ ಕೆರೆ | ೫೪ | — | |
| ೪೪೪ | ಕೆಳದಿಪುರದ ಕೆರೆ | ೧೦೨ | — | ೫೫ ಎ. ೩೦ ಗುಂ. |
| — | ಚೌಡಿಕೆರೆ | ೧೦೩ | — | — |
| — | ಅಜಾಪುರ ಚಿಟ್ಟೆಮಲ್ಲಪ್ಪನ ಕೆರೆ | | | ೧೧೧ ಎ. |
| — | ಮಲಂದೂರು ಗಾಣಿಗನ ಕೆರೆ | | ೨೫ ಎ. | ೧೬೦ ಎ. |
| — | ಎಡೆಹಳ್ಳಿ ಗೌರಿಕೆರೆ | | ೧೫ ಎ. | ೧೭೦ ಎ. |
| — | ಚೆನ್ನಶೆಟ್ಟಿಕೊಪ್ಪಚೆನ್ನಮ್ಮಾಜಿ ಕೆರೆ | | ೧೫ ಎ. | ೮೨ ಎ. |

(ಪ್ರಬಂಧದ ವಿಸ್ತಾರದ ಭಯದಿಂದ ಇಲ್ಲಿ 'ಕೆಳದಿ' ಆಸುಪಾಸಿನ ಕೆರೆಗಳನ್ನು ಮಾತ್ರ ಗಮನಿಸಲಾಗಿದೆ. ಇಂದೂ ಸಹ ಇವುಗಳಿಂದ ನೀರಾವರಿ ಸೌಲಭ್ಯವನ್ನು ಪಡೆದುಕೊಳ್ಳಲಾಗುತ್ತಿದೆ).[22]* ಹೀಗೆ ಅಂದು ಕೃಷಿಗೆ ಸಾಕಷ್ಟು ಪ್ರಾಮುಖ್ಯ ದೊರೆತಿತ್ತು. ಸೇತುವೆ ಒಡ್ಡುಗಳ ಮೂಲಕ ಕೃಷಿಗೆ ನೀರಾವರಿ ಸೌಲಭ್ಯ ಒದಗಿಸುತ್ತಿದ್ದರು. ಶಿವಪ್ಪನಾಯಕನು ಕಾವೇರಿ[23]ನದಿಗೆ ಸೇತುವೆ ಕಟ್ಟಿಸಿದ್ದನು.** ಸೋಮಶೇಖರ ನಾಯಕನ ಕಾಲದಲ್ಲಿ ಬಸವಯ್ಯನ ಭಕ್ತ ಹರಕೇರಿ ಎಂಬುವನು ಗುರುಲಿಂಗ ಸಮಾಧಿಯ ಮೇಲೆ ವಿರಕ್ತ ಮಠ ಮತ್ತು ಹಯನೂರು*** ಎಂಬಲ್ಲಿ 'ಬಸವನಒಡ್ಡು' ಎಂಬ ಸೇತುವೆಯನ್ನು ತುಂಗಾನದಿಗೆ ಕಟ್ಟಿಸಿದ್ದನು.[24] ಮೊದಲನೇ ಬಸಪ್ಪನಾಯಕನು ಜನೋಪಯೋಗಕ್ಕಾಗಿ ವೇಣುಪುರದಲ್ಲಿ ಶಿಲಾಸೇತುವೆಯನ್ನು ನಿರ್ಮಿಸಿದ್ದನು.[25] ವೀರಭದ್ರನಾಯಕನ ಕಾಲದಲ್ಲಿ ಇಕ್ಕೇರಿಯಲ್ಲಿ ಕೆರೆ ಕೆಲಸ ನಡೆಯುತ್ತಿದ್ದುದಾಗಿ ಪೀಟರ್ ಮಂಡಿ ಬರೆಯುತ್ತಾನೆ.[26] ವೆಂಕಟಪ್ಪನಾಯಕನಿಂದ ಕೆಳದಿಯ ಸಂಪೆಕಟ್ಟೆ ಕೆರೆ ನಿರ್ಮಾಣಗೊಂಡಿತು.[27] ವೇಶ್ಯೆಯೊಬ್ಬಳು ಕೆಳದಿಯ 'ಹಿರೇಕೆರೆ' ನಿರ್ಮಾಣ ಮಾಡಿಸಿದ ಬಗ್ಗೆ ಐತಿಹ್ಯವಿದೆ.[28] ಹಾಗೆಯೇ ಕವಲೆದುರ್ಗ, ನಗರ, ಆನಂದಪುರಗಳಲ್ಲಿಯೂ ಕೆರೆ ನಿರ್ಮಾಣವಾದವು. ಕೆರೆಗಳಲ್ಲಿ ತೂಬುವ್ಯವಸ್ಥೆ ಇತ್ತು. ಅದರ ಮೂಲಕ ನೀರನ್ನು ಹೊಲಕ್ಕೆ ಹಾಯಿಸುತ್ತಿದ್ದರು. ಚಂಪಕ ಸರಸಿಯ ನೀರು ಮಲಂದೂರು ಎಂಬಲ್ಲಿಗೆ ಹಾಯಿಸಲಾಗುತ್ತಿತ್ತು. ಅಂದಿನ ತೂಬು ವ್ಯವಸ್ಥೆಯೇ ಇಂದೂ ಮುಂದುವರೆದುಕೊಂಡು ಬಂದಿದೆ.*

22 ನೀರಾವರಿ ಇಲಾಖೆ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

23 ಕೆ.ನೃ.ವಿ, ಪು ೧೬೯

24 ಕೆ.ಶಾ.ಸಂ.ಅ. ಮತ್ತು ಸಂ. ಭಾಗ ೨ ಸಂಖ್ಯೆ ೩೨೩

25 ಕೆ. ನೃ.ವಿ., ಪು. ೧೭೬ ಫೋಟೋ ನೋಡಿರಿ

26 ಪೀಟರ್ ಮಂಡಿ, ಪ್ರ.ಕಂ.ಇಂ., ಸಂ. ೪, ಪು. ೩೩೫

27 ಕೆ.ನೃ ವಿ., ಪು. ೭೭-೭೮

28 ಕೆಳದಿ ಗುಂಡಾಜೋಯಿಸ್, ಕೆಳದಿ ಸಂಕ್ಷಿಪ್ತ ಇತಿಹಾಸ, ಪುಟ ೬೫-೬೬

** ಈ ಕುರಿತು ಇನ್ನೂ ಹೆಚ್ಚಿನ ಸಂಶೋಧನೆ ನಡೆಯುತ್ತಿದೆ

*** ಈಗಿನ ಅಯನೂರು ಇರಬಹುದೇ ?

* ಸಾಗರ ತಾ. ದಲ್ಲಿ ಸು. ೫೦೯ ಕೆರೆಗಳಿದ್ದು, ಅವು ಸುಮಾರು ೭೫೨೧ ಹೆ. ಜಮೀನಿಗೆ ನೀರುಣಿಸುತ್ತಿದೆ.

\+ ಒಂದುಕೆರೆಯಿಂದ ಇನ್ನೊಂದು ಕೆರೆಗೆ, ಕೆರೆಯ ನೀರು ಬರುತ್ತಿರುವಂತೆ ಹಿಂಬದಿಯಲ್ಲಿ ನಾಲ್ಕರಿಂದ ಐದು ಕೆರೆಗಳು ಇರುತ್ತಿತ್ತು. ಸಾಗರದ ಗಣಪತಿಕೆರೆ, ಕೆಳದಿ ಹಿರೇಕೆರೆ, ಚೆನ್ನಶೆಟ್ಟಿಕೊಪ್ಪದ ಕೆರೆಗಳಲ್ಲಿ ಇದನ್ನು ಗಮನಿಸಬಹುದು.

++ ಅಂದು ಕೆರೆಗಳು ಹಾಳಾಗದಂತೆ ಸರಪಂಚರು ಕಾಯುತ್ತಿದ್ದರು. ಅವನ್ನು ಹಾಳುಮಾಡಿದವರಿಗೆ ಕಠಿಣ ಶಿಕ್ಷೆ ಇತ್ತು.

ಕೆರೆ ಕೊಳಗಳು ಕುಡಿಯುವ ನೀರಿನ ವ್ಯವಸ್ಥೆಗಾಗಿ ಭಾವಿಗಳನ್ನು ರಾಜರು, ಸಾರ್ವಜನಿಕರು, ಮಠ, ದೇವಾಲಯಗಳಿಗೆ, ಸಾರ್ವಜನಿಕ ಸ್ಥಳಗಳಲ್ಲಿ ನಿರ್ಮಿಸುತ್ತಿದ್ದರು. ಅಂತಹ ಚಚ್ಚೌಕದ ಬಾವಿ, ಕೊಳಗಳನ್ನು ಈಗಲೂ ಕೆಳದಿ ರಾಜ್ಯದಲ್ಲಿ ಗಮನಿಸಬಹುದು.[29]

ಅಂದು ಯಾರಾದರೂ ನಿಧನಹೊಂದಿದರೆ ಅವರಿಗೆ ವಾರಸುದಾರರು ಯಾರೂ ಇರದಿದ್ದರೆ ಅವರ ಆಸ್ತಿಯಲ್ಲಿ ಸ್ವಲ್ಪ ಭಾಗವನ್ನು ಅವನ ಹೆಂಡತಿಗೆ ಕೊಟ್ಟು ಉಳಿದ ಭಾಗವನ್ನು ಕೆರೆ, ದೇವಾಲಯಗಳ ನಿರ್ಮಾಣಕ್ಕೆ ಬಳಸುತ್ತಿದ್ದರು. ಆ ಆಸ್ತಿ ಅರಮನೆಗೆ ತೆಗೆದುಕೊಳ್ಳುತ್ತಿರಲಿಲ್ಲ.[30]

**ಅರಮನೆ ನಗರ ನಿರ್ಮಾಣ :** ಅಂದು ಅರಮನೆಯು ಎತ್ತರದಲ್ಲಿ ನಿರ್ಮಾಣವಾಗುತ್ತಿತ್ತು. ನಗರದ ಅರಮನೆಯ ಚಿತ್ರವನ್ನು ೧೯೨೬ರ ಮೈಸೂರು ಪುರಾತತ್ವ ಇಲಾಖೆಯ ವರದಿಯಲ್ಲಿ

The Durbar hall outside the fort is entirely in ruins, there remaining only three walls of the central room opening to the Varandah in front of the building. The building seems to have covered an extensive ground measuring 84 × 36 yards divided into four portions : 1) a hall measuring about 15 × 36 yards opening into 2) a Totti 30 × 20 yards with covered plat-form on all the four sides, on which the eastern and western measure 11 × 36 yards each and the northern and the southeren platforms 8 × 30 yards each. The Totti is 3 feet deep and well paved with chiselled stone slabs on all the four sides. The western platform does not seems to have had a door to the west direct. It seems to have had a passage to the north side of the western platform leading into a passage east to west with a gate called 'Diddibagalu' to the north of the building as in the old palace in Mysore. The front portion of the Durbar hall seems to have consisted of three rooms 1) 6 × 17 yards 2) 5 × 17 yards and 3) 25 × 17 yards all opening into the Varandah measuring 10 × 36 yards in front of the building. The open space in front of the Verandah measures 11 × 36 yards. As the outer wall stretching north to south of the Central room made of the brick like laterite stones measures 3½ feet, and that extending east to west 2½ feet, the building seems to have had an upper storey, for holding Durbar during the Dasara and other occassions.[31]

ಎಂಬುದಾಗಿ ಕೊಡಲಾಗಿದೆ. ಅದು ಈಗ ಇನ್ನೂ ದುರವಸ್ಥೆಯನ್ನು ಕಂಡಿದೆ. ಅನುಬಂಧದಲ್ಲಿ ಈಗಿನ ಸ್ಥಿತಿಯ ನಕ್ಷೆ ಕೊಡಲಾಗಿದೆ.*

ಪಿಯತ್ರೋದೆಲ್ಲವಲ್ಲೆಯು 'ಈ ರೀತಿ ರಾಜಮಾರ್ಗಗಳಿಂದ ನಾವು ಕೋಟೆಯ ಒಳಭಾಗದಲ್ಲಿರುವ ಅರಮನೆ ಸಂದರ್ಶಿಸಲು ವಾಹನದಲ್ಲಿ ಹೊರಟೆವು. ಕೋಟೆಯ ಹೊರಭಾಗವು ಕಂದಕವನ್ನು ಒಳಭಾಗವು ಅಲ್ಲಲ್ಲಿ ಬುರುಜುಗಳನ್ನು ಒಳಗೊಂಡಿತ್ತು. ಮಹಾದ್ವಾರದ ಭಾಗದಲ್ಲಿ ದೊಡ್ಡದೂ ಇಕ್ಕಟ್ಟಾದುದೂ ಆದ ಎರಡು ಬುರುಜುಗಳಿದ್ದವು. ಕೋಟೆಯ ಒಳಭಾಗದಲ್ಲಿ ಬಹಳ ಮನೆಗಳಿದ್ದವು. ಹಲವು ಬೀದಿಯಲ್ಲಿ ಅಂಗಡಿ ಸಾಲುಗಳಿದ್ದವು. ಮಹಾದ್ವಾರದ ಉಭಯ ಪಾರ್ಶ್ವ

---

29 ಕೆ.ನೃ.ವಿ ಪು. ೧೦೨, ೧೦೪, ಕೆ.ಶಾ.ಸಂ. ಅ ಮತ್ತು ಸಂ. ಭಾಗ ೨. ಸಂಖ್ಯೆ ೪೭೭ ಇತರೇ

30 ಅದೇ ಭಾಗ ೨ ಸಂ. ೪೬

31 ಮೈ.ಪು.ಎ. ೧೯೨೬, ಪುಟ. ೧೦

* ನಕ್ಷೆ ನೋಡಿರಿ

ಗಳಲ್ಲಿ ರಕ್ಷಕರಿರುತ್ತಿದ್ದರು. ಅಲ್ಲಿಂದ ಮುಂದೆ ರಾಜ ನಿಬಂಧಿತ ಪ್ರದೇಶವಿತ್ತು. ಉಚ್ಚವರ್ಗದವರಿಗೆ ಮಾತ್ರ ಅಲ್ಲಿಂದ ಮುಂದೆ ಪ್ರವೇಶ ದೊರೆಯುತ್ತಿತ್ತು. ಮುಂದೆ ವಿಶಾಲವಾದ ಸಭಾಂಗಣ, ಅಲ್ಲಿ ಉಚ್ಚವರ್ಗದ ಅಧಿಕಾರಿಗಳು, ಇತರ ಗಣ್ಯರು ಆಸೀನರಾಗಿದ್ದರು...." ಮುಂತಾಗಿ ಬರೆಯುತ್ತಾನೆ.[32] ಈ ರೀತಿ ಅಂದು ಅರಮನೆ, ನಗರ ನಿರ್ಮಾಣವಾಗುತ್ತಿತ್ತು.

**ಸಾರಿಗೆ ವ್ಯವಸ್ಥೆ :** ಆ ಕಾಲದಲ್ಲಿ ರಾಜ್ಯದಲ್ಲಿ ಉತ್ತಮವಾದ ಸಾರಿಗೆ ವ್ಯವಸ್ಥೆ ಇತ್ತು. ಅಂದು ಭೂ ಮತ್ತು ಜಲಮಾರ್ಗಗಳು ಇದ್ದವು. ಭೂಮಾರ್ಗದಲ್ಲಿ ಹೆದ್ದಾರಿ, ಒಳದಾರಿಗಳು ಇದ್ದವು. ಜಲಮಾರ್ಗಗಳು ನದಿ ಸಮುದ್ರಗಳಾಗಿದ್ದವು. ವೆಂಕಟಪ್ಪನಾಯಕನ ರಾಜ್ಯದಲ್ಲಿ ರಾಜಮಾರ್ಗಗಳು ಸುರಕ್ಷಿತವಾಗಿದ್ದವು. ಹೊನ್ನಾವರ ಮಾರ್ಗವು ಸುರಕ್ಷಿತವಾಗಿತ್ತು. ಮತ್ತು ಸುಂದರವಾಗಿತ್ತು. ಇಕ್ಕೇರಿಗೆ ಹೋಗುವ ಮಾರ್ಗವು ವಿಶಾಲ ವೃಕ್ಷಗಳಿಂದ ಮೋಹಕವಾಗಿತ್ತು. ಧೂಪದ ಮರದ ಸಾಲುಗಳು ದಾರಿಯುದ್ದಕ್ಕೂ ಇದ್ದವು[33] ಎಂಬುದಾಗಿ ಡೆಲ್ಲಾವಲ್ಲೆ ಬರೆಯುತ್ತಾನೆ. ಜಾಕೋಬಸ್‌ನು ರಸ್ತೆಗಳು ಸೊಗಸಾಗಿದ್ದವು, ಸಾಲುಮರಗಳು ಪ್ರವಾಸಿಗರಿಗೆ ನೆರಳನ್ನೀಯುತ್ತಿದ್ದವು. ಪ್ರವಾಸಿಗರಿಗೆ ಒಳ್ಳೆಯ ರಕ್ಷಣೆ ಇತ್ತು, ರಸ್ತೆ ದರೋಡೆ ಇರಲಿಲ್ಲ ಎಂಬುದಾಗಿ ಬರೆಯುತ್ತಾನೆ.[34]

ಭೂಮಾರ್ಗದಲ್ಲಿ ಎತ್ತಿನ ಗಾಡಿ ಹೆಚ್ಚಾಗಿ ಬಳಕೆಯಲ್ಲಿತ್ತು.[35] ಶ್ರೀಮಂತರು ಕುದುರೆ, ಆನೆಗಳನ್ನು ಬಳಸುತ್ತಿದ್ದರು. ರಾಜರು ಪಲ್ಲಕ್ಕಿ ಉಪಯೋಗಿಸುತ್ತಿದ್ದರು. ಡೆಲ್ಲಾವಲ್ಲೆಯು ವೆಂಕಟಪ್ಪನಾಯಕನು ಮೊಮ್ಮಕ್ಕಳೊಡನೆ ಪಲ್ಲಕ್ಕಿಯಲ್ಲಿ ದೇವಾಲಯಕ್ಕೆ ಬಂದುದನ್ನು, ಅವರ ಹಿಂದೆ ಶ್ರೀಮಂತರು ಕುದುರೆಗಳಲ್ಲಿ ಬರುತ್ತಿದ್ದುದನ್ನು ಬರೆಯುತ್ತಾನೆ.

ಜಲಮಾರ್ಗಗಳಲ್ಲಿ ಹಾಯದೋಣಿ, ಹುಟ್ಟು ದೋಣಿ ಬಳಕೆಯಲ್ಲಿತ್ತು. ಒಂದುಕಡೆಯಿಂದ ಇನ್ನೊಂದು ಕಡೆಗೆ ದಾಟಿಸಲು ಹರಿಗೋಲು ಕಾರರು ಇರುತ್ತಿದ್ದರು. ಅವರಿಗೆ ಭೂಮಿ ಉಂಬಳಿ ಬಿಡಲಾಗುತ್ತಿತ್ತು. ಸೋಮಶೇಖರ ನಾಯಕನು ಹರಿಗೋಲು ರಂಗ ಭೋವಿ ಮೊದಲಾದ ಐವರಿಗೆ ದಾನ ನೀಡಿದ್ದಲ್ಲದೆ ಅಗತ್ಯವಿದ್ದಾಗ ಶಿವಮೊಗ್ಗದ ತುಂಗಾದಡದಲ್ಲಿ ಜನರನ್ನು ದಾಟಿಸಬೇಕೆಂದು ದಾನಪತ್ರ ನೀಡಿದ್ದನು.[36] ವೀರಮ್ಮಾಜಿಯು ಹರಿಗೋಲುಕಾರರಿಗೆ ಉಂಬಳಿ ನೀಡಿದ್ದಳು.[37]

**ಉಪ ಸಂಹಾರ :** ಕೆಳದಿ ಕಾಲದ ಮರಹಮ್ಮತೆ ಇಲಾಖೆಯ ಕಾರ್ಯವ್ಯಾಪ್ತಿ ಬಹುದೊಡ್ಡದು. ಇಲ್ಲಿ ಪ್ರಬಂಧದ ವಿಸ್ತಾರದ ಭಯದಿಂದ ಅದನ್ನು ಸಂಕ್ಷಿಪ್ತಗೊಳಿಸಿದೆ. ಕೇವಲ ಆ ಕಾಲದ ಮರಾಮತ್ ಕಾಮಗಾರಿ ಕೆರೆಗಳನ್ನೇ ತೆಗೆದುಕೊಂಡು ಸಂಶೋಧನೆ ನಡೆಸಲು ಅವಕಾಶವಿದೆ. ಇಂದಿನ ಈ ಸಾಮಾಜಿಕ ವ್ಯವಸ್ಥೆಯಲ್ಲಿ ಅದರ ಅಗತ್ಯವೂ ಕಂಡುಬರುತ್ತಿದೆ. ಈ ನಿಟ್ಟಿನಲ್ಲಿ ಪ್ರಯತ್ನ ನಡೆಯಲಿ ಎಂಬುದು ಈ ಪ್ರಬಂಧದ ಆಶಯ.

---

32 ಜಿ.ಎಸ್. ದೀಕ್ಷಿತ್, ಕೆಳದಿ ನಾಯಕರು, ಕ.ವಿ.ವಿ. ಧಾರವಾಡ, ೧೯೬೯, ಪು. ೫೭

33 ಹೆಚ್.ಎಲ್ ನಾಗೇಗೌಡ, ಪ್ರ.ಕಂ.ಇಂ., ಸಂ.೪, ಪುಟ ೨೨೯

34 ರೈಸ್, ಮೈಸೂರು, ಭಾಗ ೨, ಪು ೪೩೫

35 ಕೆ. ಶಾ.ಸಂ.ಆ. ಮತ್ತು ಸಂ. ಭಾಗ ೨, ಸಂಖ್ಯೆ ೧೮೨, ೨೨೨, ೨೨೫, ಇತರೇ

36 ಹೆಚ್.ಎಲ್. ನಾಗೇಗೌಡ, ಪ್ರ.ಕಂ.ಇಂ., ಸಂ.೪, ಪು. ೨೫೧

37 ಕೆ.ಶಾ.ಸಂ.ಆ. ಮತ್ತು ಸಂ. ಭಾಗ ೨, ಸಂಖ್ಯೆ ೧೮೫

38 ಕೆ.ಎನ್.ಚಿಟ್ನೀಸ್, ಕೆಳದಿ ಪಾಲಿಟಿ, ಕ.ವಿ.ವಿ. ಧಾರವಾಡ, ಪು. ೧೫೦

# ಕೆಳದಿ ಅರಸರ ಕಾಲದ ಕರಾವಳಿಯ ಮೂರು ಕೋಟೆಗಳು

ಬಿ. ಎಸ್. ಸುಭದ್ರಾ

ವಿಜಯನಗರ ಸಾಮ್ರಾಜ್ಯದಲ್ಲಿ ಸಣ್ಣ ಪಾಳೆಯ ಪಟ್ಟಾಗಿ ಪ್ರಾರಂಭವಾಗಿ ಕೆಳದಿ ನಾಯಕರ ಆಡಳಿತ, ವಿಜಯನಗರದ ಪತನಾನಂತರ ವಿಸ್ತಾರಗೊಂಡಿತು. ಸುಮಾರು ೨೬೦ ವರ್ಷಗಳ (ಕ್ರಿ. ಶ. ೧೪೯೯ರಿಂದ ೧೭೬೩ರವರೆಗೆ) ಇವರ ರಾಜ್ಯಭಾರವು ಇಂದಿನ ಶಿವಮೊಗ್ಗ ಜಿಲ್ಲೆ, ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಕರಾವಳಿಯ ಭಾಗಗಳು, ಭಾಗಶಃ ಚಿಕ್ಕಮಗಳೂರು ಜಿಲ್ಲೆ, ಹಾಸನ ಜಿಲ್ಲೆ ಹಾಗೂ ಕೇರಳದ ಭಾಗವಾಗಿರುವ ಕಾಸರಗೋಡು ಇವುಗಳನ್ನು ಒಳಗೊಂಡಿತ್ತು. ತಮ್ಮ ಆಳರಸರಂತೆಯೇ ವಾಣಿಜ್ಯ-ವ್ಯವಹಾರಗಳಲ್ಲೂ ಸಾಹಿತ್ಯ ಶಿಲ್ಪಕಲೆಗಳಲ್ಲೂ ಆಸಕ್ತಿವಹಿಸಿ ಸರ್ವಧರ್ಮ ಸಮನ್ವಯತೆಯನ್ನು ಕಾಯ್ದುಕೊಂಡ ಅರಸು ಮನೆತನವಿದು.

ಇವರ ಕಾಲದ ವಾಣಿಜ್ಯಚರಿತ್ರೆಯನ್ನು ಅವಲೋಕಿಸುವಾಗ ಕಂಡುಬರುವ ಗಮನಾರ್ಹ ಅಂಶವೆಂದರೆ ಕಡಲ ತೀರದ ವಾಣಿಜ್ಯ ಸಂಪರ್ಕಗಳು. ಪೋರ್ಚುಗೀಸರು, ಅರಬರು, ಇಂಗ್ಲಿಷರು ಹಾಗೂ ಡಚ್ಚರು ಅಕ್ಕಿ ಮತ್ತು ಕರಿಮೆಣಸಿನ ವ್ಯಾಪಾರಕ್ಕಾಗಿ ಕಡಲತೀರದಲ್ಲಿ ನೆಲೆಯೂರಿ ತಮ್ಮ ಲಾಭಕ್ಕಾಗಿ ಆಳರಸರೊಡನೆ ಸ್ನೇಹಹಸ್ತ ಚಾಚಿ, ಸಮಯಾವಕಾಶ ದೊರೆತಾಗ ತಮ್ಮ ಸೈನಿಕ ಶಕ್ತಿಯನ್ನು ಹೆಚ್ಚಿಸಿಕೊಂಡದ್ದು ಈಗ ಇತಿಹಾಸ. ಈ ವ್ಯಾಪಾರಕ್ಕಾಗಿ ದಕ್ಷಿಣ ಹಾಗೂ ಉತ್ತರಕನ್ನಡ ಜಿಲ್ಲೆಗಳ-ಕರಾವಳಿಯುದ್ದಕ್ಕೂ ಪ್ರಖ್ಯಾತವಾದ ಬಂದರುಗಳಿದ್ದವು. ಕುದುರೆಗಳು ಮತ್ತು ಯುದ್ಧಕ್ಕೆ ಬೇಕಾದ ಮದ್ದುಗುಂಡುಗಳಿಗಾಗಿ ಕೆಳದಿ ಅರಸರು ಈ ವಿದೇಶೀಯರನ್ನು ಅವಲಂಬಿಸಿದ್ದರು. ವ್ಯಾಪಾರವು ಸುಲಲಿತವಾಗಿ ನಡೆಯಲು ಹಾಗೂ ಆಯಾ ಪ್ರದೇಶಗಳನ್ನು ಕಾಯ್ದುಕೊಂಡು ಬರಲು ಕೆಳದಿಯ ಅರಸರು ಅನೇಕ ಕೋಟೆಗಳನ್ನು ಕಟ್ಟಿಸಿದ್ದರೆಂದು ಕೆಳದಿಯ ಇತಿಹಾಸದಿಂದ ತಿಳಿದುಬರುತ್ತದೆ.

ಸಾಹಿತ್ಯಿಕ ಅಂಶಗಳೊಡನೆ ಐತಿಹಾಸಿಕತೆಯೂ ಬೆರೆತಿರುವ 'ಕೆಳದಿ ನೃಪ ವಿಜಯ'ದ ಕರ್ತೃ ಲಿಂಗಣ್ಣ ಕವಿ ಹೇಳುವಂತೆ, ಕೆಳದಿ ಅರಸರಲ್ಲಿ ಹಿರಿಯ ವೆಂಕಟಪ್ಪ ನಾಯಕ. ಶಿವಪ್ಪನಾಯಕ, ಹಿರಿಯ ಬಸವಪ್ಪ ನಾಯಕ, ಇಮ್ಮಡಿ ಸೋಮಶೇಖರ ನಾಯಕ ಮೊದಲಾದ ಅರಸರು ಕನ್ನಡನಾಡಿನ ಕರಾವಳಿಯ ಉದ್ದಕ್ಕೂ ಅಲ್ಲಲ್ಲಿ ಕೋಟೆಗಳನ್ನು ಕಟ್ಟಿ ಅಥವಾ ಇದ್ದ ಕೋಟೆಗಳನ್ನು ಬಲಪಡಿಸಿ, ಕಾವಲಿಗೆಂದು ಸೈನಿಕರನ್ನು ಇಟ್ಟರು. ಇವುಗಳಲ್ಲಿ ಹೊನ್ನಾವರ, ಭಟ್ಕಳ, ಬಸರೂರು, ಕಂಡಲೂರು, ಕುಂದಾಪುರ, ಕಲ್ಯಾಣಪುರ, ಬಾರಕೂರು, ಮಂಗಳೂರು ಕೊಡಿಯಾಲ, ಕುಂಬಳೆ, ಕಾಸರಗೋಡು, ಚಂದ್ರಗಿರಿ, ಬೇಕಲ, ಉಳ್ಳಾಲ,ಮೂಲಿಕೆ, ಫಣಿಯಾಲ ಮೊದಲಾದ ಕೋಟೆಗಳು ಮಹತ್ವದ ಸ್ಥಾನ ಪಡೆದಿದ್ದವು.

ಕ್ಷೇತ್ರಕಾರ್ಯಕ್ಕೆಂದು ಇತ್ತೀಚೆಗೆ ಕಾಸರಗೋಡಿಗೆ ಭೇಟಿಯಿತ್ತಾಗ, ಪರಿಶೀಲಿಸಿದ ಬೇಕಲ, ಕುಂಬಳೆ ಮತ್ತು ಕಾಸರಗೋಡು — ಈ ಮೂರು ಕೋಟೆಗಳ ಇಂದಿನ ಸ್ಥಿತಿಗತಿಗಳ ಪ್ರತ್ಯಕ್ಷ ವಿವರಣೆ ಪ್ರಸ್ತುತ ಲೇಖನದ ಮುಖ್ಯ ವಿಷಯ.

**ಬೇಕಲಕೋಟೆ :** ಬೇಕಲ ಕೋಟೆಯ ಬಗ್ಗೆ

'ಕೆಳದಿ ನೃಪ ವಿಜಯು'ದಲ್ಲಿ ಮೊದಲಬಾರಿಗೆ ಪ್ರಸ್ತಾಪಿಸಿರುವುದು ಶಿವಪ್ಪನಾಯಕನ ಕಾಲದ (ಕ್ರಿ.ಶ. ೧೬೪೫-೧೬೬೫ ?) ವಿವರಣೆಯಲ್ಲಿ. 'ಇಂತು ಮಂಗಲೂರ ಕೋಟೆಯಂ ಕೊಂಡನಂತರ ಮಳವೆಯಂ ಕಟ್ಟಿ ಕೇಳೂರಂ ಸಾಧಿಸಿ ಬೇಕಲ ಚಿತ್ತಾರಿಗಳೆಂಬ ಕೋಂಟೆಗಳುಮಂ ಮತ್ತಂ ಚಂದ್ರಗಿರಿ ಮುಂತಾದ ಕೋಂಟೆಗಳುಮಂ ಬಲ್ಪುಗೈಸಿದನು'.[1] ಇನ್ನೂ ಮುಂದೆ ಹೋಗಿ ನಾಯಿಮಾರರನ್ನು ಸೋಲಿಸಿ ನೀಲೇಶ್ವರದಲ್ಲಿ 'ತೊಲಗದ ಕಂಬ'ವನ್ನು (ವಿಜಯಸ್ತಂಭವನ್ನು) ನಿಲ್ಲಿಸಿದ ಬಲಾಢ್ಯ ವ್ಯಕ್ತಿ.[2] (ತೊಲಗು=ಸೋಲು/ಸೋತುಹೋಗು ; ತೊಲಗದ=ಸೋಲದ/ಗೆಲುವಿನ/ವಿಜಯದ). H.A. Stevert ಅವರು "The two forts at Bekal and Chandragiri were originally under the Kollattiri or Cherkal Rajas until the time of Sivappa Nayaka's invasion"[3] ಎಂದು ಅಭಿಪ್ರಾಯಪಡುತ್ತಾರೆ.

ಎಂ. ಗಣಪತಿರಾವ್ ಐಗಳ್ ಅವರ ಅಭಿಪ್ರಾಯದಂತೆ ಶಿವಪ್ಪನಾಯಕನು "ಕ್ರಿ.ಶ. ೧೬೫೭ರಲ್ಲಿ ಪೋರ್ಚುಗೀಸರ ಬಾಧೆಯು ಹೆಚ್ಚಾಗಲು ಅವರ ಸ್ವಾಧೀನವಿದ್ದ ಕುಂದಾಪುರ, ಗಂಗೊಳ್ಳಿ, ಹೊನ್ನಾವರ, ಮಂಗಳೂರು ಕೋಟೆಗಳನ್ನು ಸ್ವಾಧೀನಪಡಿಸಿಕೊಂಡನು....ಕೊಲತನಾಡು ಅರಸನ ಸ್ವಾಧೀನವಿದ್ದ ಅಲವತ್ತು ನಾಡನ್ನೂ ಪಡುವನಾಡನ್ನೂ ಸ್ವಾಧೀನಪಡಿಸಿಕೊಂಡು ಅವನಿಂದ ಕಪ್ಪಕಾಣಿಕೆಗಳನ್ನು ಪಡೆದನು."[4]

'ಬೇಕಲ' ಕೋಟೆಯು ಪಶ್ಚಿಮ ಕರಾವಳಿಯಲ್ಲಿ ಅರಬ್ಬೀ ಸಮುದ್ರದಿಂದ ಮೂರು ದಿಕ್ಕುಗಳಲ್ಲಿಯೂ ಸುತ್ತುವರಿದಿರುವ ಸುಂದರ ಕೋಟೆ 'ಕಾಸರಗೋಡು' ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ಪಳ್ಳಿಕೆರೆ ಗ್ರಾಮಕ್ಕೆ ಸೇರಿದೆ. ಕಾಸರಗೋಡಿನಿಂದ ನೀಲೇಶ್ವರಕ್ಕೆ ಹೋಗುವ ಮಾರ್ಗದಲ್ಲಿ ಈ ಕೋಟೆ ಇದ್ದು ೩೦.೪೮ ಎಕರೆಗಳಷ್ಟು ವಿಸ್ತೀರ್ಣವುಳ್ಳದ್ದಾಗಿದೆ. ಆಯಕಟ್ಟಿನ ಪ್ರದೇಶದಲ್ಲಿದ್ದ ಈ ಕೋಟೆ ಕೆಳದಿ ಅರಸರ ಕಾಲದಲ್ಲಿ ರಕ್ಷಕನಂತೆ ತನ್ನ ಸುತ್ತಲಿನ ಪ್ರದೇಶವನ್ನು ಕಾಯುತ್ತಿತ್ತು. ಸಮುದ್ರ ಮಾರ್ಗವಾಗಿ ಯಾವುದೇ ಯುದ್ಧದ ಹಡಗು ಬಂದರೂ, ಕೂಡಲೇ ಗೋಚರವಾಗಿ, ಯುದ್ಧಸನ್ನದ್ಧರಾಗಲು ಸಹಾಯಕವಾಗುತ್ತಿತ್ತು.

ಈ ಕೋಟೆಗೆ ಉತ್ತರ ದಿಕ್ಕಿನಲ್ಲಿ ಪ್ರವೇಶದ್ವಾರವಿದೆ ; ಆಳವಾದ ಕಂದಕದಿಂದ ಕೂಡಿದೆ. ಇಂದಿಗೂ ಆಳವಾದ ಈ ಕಂದಕವನ್ನು ಕೋಟೆಗೆ ಪ್ರವೇಶಿಸುವ ಮೊದಲೇ ಕಾಣಬಹುದು. ಜಂಬಿಟ್ಟಿಗೆಯಲ್ಲಿ ಕಟ್ಟಿರುವ ಈ ಕೋಟೆ ಶತ್ರುಗಳು ಮುತ್ತಿಗೆ ಹಾಕಿದಾಗ 'ಜಲದುರ್ಗ'ದಂತೆ ಅಭೇದ್ಯವಾಗುತ್ತಿತ್ತು. ಇಕ್ಕೇರಿ ಅರಸರ ಕಾಲದಲ್ಲಿ ಇದು ಪ್ರಮುಖ ಕೋಟೆಯಾಗಿದ್ದು ದಕ್ಷಿಣದ ಕೇರಳದ ಅರಸರ ಆಕ್ರಮಣ ತಡೆಯಲು ಇದು ಅತ್ಯವಶ್ಯವಾಗಿತ್ತು.

ಶತ್ರುಗಳನ್ನು ದೂರದಿಂದಲೇ ವೀಕ್ಷಿಸಿ ಅವರನ್ನು ಫಿರಂಗಿಗಳಿಂದ ನಾಶಪಡಿಸಲು ಸಹಾಯಕವಾದ, ಎತ್ತರವಾದ ೧೮ ಬುರುಜುಗಳು ಇಂದಿಗೂ ಸುಸ್ಥಿತಿಯಲ್ಲಿವೆ. ವರ್ತುಲಾಕಾರದ ಈ ಕೋಟೆಯಲ್ಲಿ ಅಲ್ಲಲ್ಲಿ ಈ ಕಾವಲು ಬುರುಜುಗಳಿವೆ. ಸಮುದ್ರಮಟ್ಟದಿಂದ ಸುಮಾರು ೧೩೦ ಅಡಿಗಳಷ್ಟು ಎತ್ತರದಲ್ಲಿ ಈ ಕೋಟೆ ಕಟ್ಟಲ್ಪಟ್ಟಿದೆ. ಪಶ್ಚಿಮದಲ್ಲಿ ಅರಬ್ಬೀ ಸಮುದ್ರದುದ್ದಕ್ಕೂ ಕಟ್ಟಲಾಗಿರುವ ಕೋಟೆಯ ಗೋಡೆಯ ಉದ್ದ ಸುಮಾರು ೧೬೦ ಅಡಿಗಳಷ್ಟಿದೆ.[5] ಈ ಗೋಡೆಯ ದಪ್ಪ ಕೆಲವೆಡೆ ಒಂದು ಮೀಟರ್‌ನಷ್ಟಿದ್ದರೆ, ಇನ್ನು ಕೆಲವೆಡೆ ಎರಡು ಮೀಟರ್‌ಗಳಷ್ಟಿದೆ. ಸಮುದ್ರದ ಪಕ್ಕದ ಗೋಡೆಯು ಒಂದು ಮೀಟರ್‌ನಷ್ಟು ದಪ್ಪವಿದ್ದರೆ, ಭೂಭಾಗದ ಗೋಡೆ ಎರಡು ಮೀಟರ್ ಅಗಲವಿದೆ. ಈ ಕೋಟೆ ಗೋಡೆಯ ಒಳಭಾಗದಲ್ಲಿ ಗೋಡೆಯ ಪಕ್ಕದಲ್ಲಿಯೇ ೪-೫ ಅಡಿಗಳಷ್ಟು ಅಗಲವಾದ

1 ಕೆಳದಿ ನೃಪ ವಿಜಯ : ಲಿಂಗಣ್ಣಕವಿ. ಗದ್ಯಾನುವಾದ: ಕೆಳದಿ ಗುಂಡಾಜೋಯಿಸ್, ಸಪ್ತಮಾಶ್ವಾಸಂ, ವಚನ, ಪು. ೧೬೧
2 ಅದೇ, ಸಪ್ತಮಾಶ್ವಾಸಂ, ಕಂದಪದ್ಯ ೭, ಪು. ೧೬೧
3 ದಕ್ಷಿಣ ಕನ್ನಡ ಜಿಲ್ಲೆಯ ಕೈಪಿಡಿ : ಎಚ್.ವಿ. ಸ್ಟೀವರ್ಟ್ ೧೯೪೫ ಎ.ಡಿ.
4 ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ : ಎಂ. ಗಣಪತಿರಾವ್ ಐಗಳ್ ಪು. ೧೯೬
5 ಸಾವೆನೀರ್, ಗಿಲ್ಡ್ ಆಫ್ ಸರ್ವೀಸ್, ಕಾಸರಗೋಡು ೧೯೭೫

ದಾರಿಯಿದ್ದು ಅಶ್ವಗಳ ಸಂಚಲನೆಗೂ ಫಿರಂಗಿಗಾಡಿಗಳ ಸಂಚಾರಕ್ಕೂ ಸಹಕಾರಿಯಾಗಿದೆ.

ಕೋಟೆಯ ಮಧ್ಯದಲ್ಲಿರುವ ದೊಡ್ಡ ಬುರುಜು ೩೦ ಅಡಿಗಳಷ್ಟು ಎತ್ತರವಿದ್ದು ೮೦ ಅಡಿ ಸುತ್ತಳತೆಯಿದೆ. ಫಿರಂಗಿ ಗಾಡಿಗಳನ್ನು ಮೇಲಕ್ಕೂ ಕೆಳಕ್ಕೂ ಕೊಂಡೊಯ್ಯುವಂತೆ, ಇದರ ಒಂದು ಪಕ್ಕ ಇಳಿಜಾರಾಗಿದ್ದು, ಮೇಲೆ ಎಂಟು ದಿಕ್ಕುಗಳಲ್ಲಿಯೂ ಇರುವ ಆಯತಾಕಾರದ ದೊಡ್ಡ ಕಿಂಡಿಗಳಿಂದ ಸುತ್ತಲಿನ ಬಹು ದೂರದ ದೃಶ್ಯಗಳನ್ನು ಸ್ಪಷ್ಟವಾಗಿ ವೀಕ್ಷಿಸಬಹುದು.

ದಕ್ಷಿಣ ಭಾಗದ ಕೋಟೆ ಗೋಡೆಯ ಸಮೀಪದಲ್ಲಿ ಸುರಂಗವಿದ್ದು ಅದರ ಮೂಲಕ ಅರಬ್ಬೀ ಸಮುದ್ರಕ್ಕೆ ದಾರಿಯಿದೆ. ಕೋಟೆಯ ಪಶ್ಚಿಮ ಭಾಗದಲ್ಲೂ ಎರಡು ಗುಪ್ತದ್ವಾರಗಳಿದ್ದು ಇವುಗಳ ಮೆಟ್ಟಲುಗಳು ಸೀದಾ ಅರಬ್ಬೀ ಸಮುದ್ರಕ್ಕೆ ಕೊಂಡೊಯ್ಯುತ್ತವೆ ಕೋಟೆಯ ಪಶ್ಚಿಮ ಭಾಗದಿಂದ ನೀರಿನ ಒರತೆಯೊಂದು ಅಬ್ಬಿಯಾಗಿ ಸಾಗರಕ್ಕೆ ಇಳಿಯುತ್ತದೆ.

ಕೋಟೆಯ ಗೋಡೆಗಳಲ್ಲಿ ಕೆಲವೆಡೆ ಒಂದು ಕಿಂಡಿ, ಕೆಲವೆಡೆ ಒಂದು ಕಿಂಡಿಯೊಳಗೆ ಅಕ್ಕಪಕ್ಕದಲ್ಲಿ ಎರಡು ಕಿಂಡಿಗಳು, ಇನ್ನೂ ಕೆಲವೆಡೆ ಮೂರು ಕಿಂಡಿಗಳು– ಹೀಗೆ ಅನೇಕ ಬಗೆಯ ಕಿಂಡಿಗಳಿವೆ. ಕೆಲವು ನೇರವಾಗಿದ್ದರೆ, ಕೆಲವು ಕಿಂಡಿಗಳಿಂದ ಅಕ್ಕಪಕ್ಕ ಹಾಗೂ ಕೋಟೆಯ ಕೆಳಭಾಗದ ಸಮುದ್ರವನ್ನು ನೋಡಲು ಸಾಧ್ಯ. ಇವು ಬಂದೂಕುಗಳನ್ನಿಡಲು, ಮತ್ತು ಕೋಟೆಯನ್ನು ಎಚ್ಚರದಿಂದ ಸಂರಕ್ಷಿಸಲು ಮಾಡಿದಂಥ ಕಿಂಡಿಗಳು.

ಕೋಟೆಯ ಮುಂಭಾಗವು ಎತ್ತರದ ಗೋಡೆ ಹಾಗೂ ಬುರುಜುಗಳಿಂದ ಕೂಡಿದ್ದು ಭದ್ರವಾಗಿದೆ. ಸಮುದ್ರಕ್ಕೆ ತೀರಾ ಸಮೀಪದಲ್ಲಿ ಕೋಟೆಯ ಹೊರಗಡೆ ಮತ್ತೊಂದು ವರ್ತುಲಾಕಾರದ ಕಾವಲು ಬುರುಜಿದೆ. ಕೆಳಭಾಗ ಕಾಡುಗಲ್ಲುಗಳಿಂದ ಕಟ್ಟಲ್ಪಟ್ಟಿದ್ದು ಮೇಲ್ಭಾಗವನ್ನು ಜಂಬಿಟ್ಟಿಗೆಯಿಂದ ಕಟ್ಟಿದ್ದಾರೆ.

ಕಾವಲು ಬುರುಜುಗಳಲ್ಲಿ ಕೆಲವಕ್ಕೆ ವೀಕ್ಷಣಾ ಕಿಂಡಿಗಳು ಮಾತ್ರವಿದ್ದರೆ, ಕೆಲವು ಬುರುಜುಗಳಲ್ಲಿ ಆಯತಾಕಾರದ ದೊಡ್ಡ ಕಿಂಡಿಗಳಿದ್ದು ಫಿರಂಗಿಗಳನ್ನು ಇಡಬಹುದು. ಅರ್ಧ ಚಂದ್ರಾಕೃತಿಯ ಬುರುಜುಗಳು ಕೆಲವಾದರೆ, ವರ್ತುಲಾಕಾರದ ಬುರುಜುಗಳು ಹಲವು. ನಡುನಡುವೆ ಆಯತಾಕಾರದ ಕೆಲವು ಬುರುಜುಗಳೂ ಇವೆ. ಕೋಟೆಯ ಉತ್ತರ ದಿಕ್ಕಿನ ಬುರುಜೊಂದು ಎರಡು ಸುತ್ತುಗಳಿಂದ ಕೂಡಿದ್ದು ಹೆಚ್ಚಿನ ಸಂಖ್ಯೆಯ ಕಾವಲುಗಾರರು ಅಥವಾ ಸೈನಿಕರು ನಿಲ್ಲಬಹುದಾಗಿದೆ.

ಕೋಟೆಯ ಮಧ್ಯಭಾಗದಲ್ಲಿ ತೋಪುಖಾನೆಯಿದ್ದು ಸುಸ್ಥಿತಿಯಲ್ಲಿದೆ. ಪಕ್ಕದಲ್ಲಿಯೆ ಕೋಣೆಯೊಂದರ ಅವಶೇಷಗಳಿವೆ. ತೋಪುಖಾನೆಯಿಂದ ಎತ್ತರದ ಬತೇರಿಗೆ ಜಂಬಿಟ್ಟಿಗೆಯಿಂದ ಮಾಡಿದ ದಾರಿ ಹಾಗೂ ಗೋಡೆಗಳಿವೆ. ಕೋಟೆಯಲ್ಲಿ ಅಲ್ಲಲ್ಲಿ ಜಂಬಿಟ್ಟಿಗೆ ಕಲ್ಲುಗಳ ಸಮೂಹವಿದ್ದು ಹಲವು ಕಟ್ಟಡಗಳ ತಳಪಾಯವೂ ಇದೆ. ಎತ್ತರದ ಬತೇರಿಯ ಸಮೀಪವೇ ವರ್ತುಲಾಕಾರದ ಕೆರೆಯೊಂದಿದ್ದು, ಮೆಟ್ಟಲುಗಳಿಂದ ಕೂಡಿದೆ. ಕೋಟೆಯ ಅರ್ಧಭಾಗದಷ್ಟು ಸ್ಥಳವು ಪ್ರಸ್ತುತ ಪಿ.ಡಬ್ಲ್ಯು.ಡಿ. ಯವರ ವಶದಲ್ಲಿದ್ದು ಆ ಭಾಗದಲ್ಲಿ ಕೆಲವು ಕಟ್ಟಡಗಳನ್ನು ನಿರ್ಮಿಸಿದ್ದಾರೆ.

**ಕುಂಬಳೆ ಕೋಟೆ :** ಕಾಸರಗೋಡಿನಿಂದ ೯ ಮೈಲು ಉತ್ತರಕ್ಕೆ ಮತ್ತು ಮಂಗಳೂರಿನಿಂದ ೧೯ ಮೈಲು ದಕ್ಷಿಣಕ್ಕೆ ಸಮುದ್ರ ಮತ್ತು ಸಣ್ಣ ಹೊಳೆಯಿಂದ ಕೂಡಿದ ಅರ್ಧದ್ವೀಪದಂತಿರುವ ಭೂಭಾಗವೇ ಕುಂಬಳೆ. ಕುಂಬಳೆಯ ಬಗೆಗೆ ಕ್ರಿ.ಶ. ೧೫೧೪ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿ ಪ್ರಯಾಣ ಮಾಡಿದ ದುಆರ್ತೆ ಬಾರ್ಬೋಸನು: "ಕುಂಬಳೆಯಲ್ಲಿ ಒಬ್ಬ ಅರಸನು ವಿಜಯನಗರಕ್ಕೆ ಅಧೀನನಾಗಿ ರಾಜ್ಯಭಾರಮಾಡುತ್ತಿದ್ದಾನೆ. ಕುಂಬಳೆ ಬಂದರದಿಂದ ಮಾಲ್ದೀವಿಗಳಿಗೆ ಹೆಚ್ಚು ಅಕ್ಕಿಯು ಹೋಗುತ್ತಿದೆ"[6] ಎಂದು ತಿಳಿಸಿದ್ದಾನೆ.

---

6 ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ : ಎಂ. ಗಣಪತಿರಾವ್ ಐಗಳ್ ಪು. ೧೫೦

ಕೆಳದಿಯ ಅರಸನಾದ ಹಿರಿಯ ವೆಂಕಟಪ್ಪನ ಕಾಲದಲ್ಲಿ (ಕ್ರಿ.ಶ. ೧೫೯೨-೧೬೨೯) ಕುಂಬಳೆಯ ಅರಸು ವೆಂಕಟಪ್ಪನಾಯಕನಿಗೆ ಸೋತುದಾಗಿ 'ಕೆಳದಿ ನೃಪ ವಿಜಯು' ತಿಳಿಸುತ್ತದೆ.

"ಬಂಗಾಜಿಲ ಸಾವಂತ ಮ
ನಂಗೊಳಿಸುವ ಚೌಟಮೂಲ ಕುಂಬಳೆಯಿವರಂ
ಭಂಗಿಸಿ ತದ್ಧರೆಯುಮನು-
ತ್ತುಂಗ ಶ್ರೀ ಮಂಗಳೂರನುರೆ ಸಾಧಿಸಿದಂ"[7]

ನಂತರ ಆ ಕೋಟೆಗಳನ್ನು ಈ ನಾಯಕನು ಬಲಪಡಿಸಿದ್ದಾಗಿಯೂ ಲಿಂಗಣ್ಣ ಕವಿ ತಿಳಿಸುತ್ತಾನೆ.[7ಎ]

ಇಮ್ಮಡಿ ಸೋಮಶೇಖರನಾಯಕನ ಕಾಲದಲ್ಲಿಯೂ (ಕ್ರಿ.ಶ. ೧೭೧೫-೧೭೪೦) ಈ ಕುಂಬಳೆಯ ಅಧಿಪತಿಯಾದ ಅರಸನ ಪ್ರಸ್ತಾಪ ಬರುತ್ತದೆ.

"....ಕುಂಬಳೆಯಾ
ವರ ಸಾಮಂತನುರೆ ಪಿಡಿ
ತರಿಸುತೆ ದುರ್ಗದೊಳಗಂಕೆಯಂ ಮಾಡಿ
ಸಿದಂ"[8]

ಐಗಳ್ ಅವರ ಉಲ್ಲೇಖದಂತೆ "ಹಿರಿಯ ವೆಂಕಟಪ್ಪನಾಯಕನು ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿ ಪ್ರದೇಶದಲ್ಲಿ ಪೋರ್ಚುಗೀಸರೊಡನೆ ಯುದ್ಧ ಮಾಡಿ ಅವರನ್ನು ಸೋಲಿಸಿದನಂತರ ತುಳುರಾಜರನ್ನೆಲ್ಲ ಸೋಲಿಸುತ್ತ ಬಂದನು. ಆಗ ಬಂಗರಾಜನು ಕಾಸರಗೋಡಿಗೆ ಓಡಿಹೋಗಿ ಕುಂಬಳೆ ಅರಸನ ಮರೆಹೊಕ್ಕಿದ್ದನು."[9] ಇಲ್ಲಿಯೂ ಕುಂಬಳೆ ಅರಸನ ಪ್ರಸ್ತಾಪವಿದೆ.

"ವೆಂಕಟಪ್ಪನಾಯಕನು ತುಳು ಜೈನರಾಜರೊಡನೆ ಕಾಲು ಮಾಡಿಕೊಂಡು ರಾಜ್ಯದ ಭದ್ರತೆಗಾಗಿ ಕ್ರಿ.ಶ. ೧೬೦೮ರಲ್ಲಿ ಬಾರಕೂರು, ಕಲ್ಯಾಣಪುರ, ಕಂಡಲೂರು, ಮಲ್ಲಿಕಾರ್ಜುನಗಿರಿ, ಕಾರ್ಕಳ, ಮೂಲಿಕೆ, ಕೊಡೆಯಾಲ, ಮೂಡಬಿದಿರೆ, ಉಳ್ಳಾಲ, ಮಂಜೇಶ್ವರ, ಕುಂಬಳೆ, ಕಾಸರಗೋಡು, ಚಂದ್ರಗಿರಿ, ಫಣೆಯಾಲ, ಕೂಡಂಕುಯಿ, ಬಂದ್ಯಡ್ಕ ಕಾಂತಮಂಗಲ, ಬೆಳ್ಳಾರೆ, ಮೂಡುಕೊಡೆಯಾಲ (ಬೆಳ್ಳಾರೆಯ ಹತ್ತಿರ), ಶಿಶಿಲ, ಪುದುಬೆಟ್ಟು, ಕೊಲ್ಲೂರು ಬಾಜಿ, ಕಿದೂಟು ಈ ಸ್ಥಳಗಳಲ್ಲಿ ಬಲವಾದ ಕೋಟೆಗಳನ್ನು ಕಟ್ಟಿಸಿ ರಾಮರಾಜ ಕ್ಷತ್ರಿಯರೆಂಬ ಜನರನ್ನು ಈ ಕೋಟೆಗಳಲ್ಲಿ ಸೈನಿಕರಾಗಿ ನಿಯಮಿಸಿದನು."[10]

"ಇಮ್ಮಡಿ ಸೋಮಶೇಖರ ನಾಯಕನ ಕಾಲದಲ್ಲಿ 'ಕುಂಬಳೆ'ಯ ಅರಸನೂ ಕೋಲತ್ತರಸನೂ ಕನ್ನಡ ಜಿಲ್ಲೆಯ ದಕ್ಷಿಣ ಭಾಗವನ್ನು ಸುಲಿಗೆ ಮಾಡುತ್ತಿರಲು ಕುಂಬಳೆ ಅರಸನನ್ನು ಸೆರೆಹಿಡಿದು ವೇಣುಪುರದ ಕೋಟೆಯಲ್ಲಿಟ್ಟನು."[11]

ಹೀಗೆ ಕುಂಬಳೆಯು ಆ ಕಾಲದ ಉತ್ತಮ ಬಂದರವಾಗಿಯೂ ಮಾಂಡಲಿಕ ಪ್ರದೇಶವಾಗಿಯೂ ಇತ್ತು. ಬಾರ್ಬೋಸ (ಪೋರ್ಚುಗೀಸ್) ಕ್ರಿ.ಶ. ೧೫೧೪ರಲ್ಲಿ, ಪಿಯತ್ರೊ ಡೆಲ್ಲಾವಲ್ಲೆ (ಇಟಲಿ) ಕ್ರಿ.ಶ. ೧೬೨೩ರಲ್ಲಿ ಮತ್ತು ಬುಖನನ್ (ಇಂಗ್ಲೆಂಡ್) ಕ್ರಿ.ಶ. ೧೮೦೧ರಲ್ಲಿ ಈ ಪ್ರದೇಶವನ್ನು ಸಂದರ್ಶಿಸಿದ್ದರು.

ಪ್ರಸ್ತುತ ಅಧ್ಯಯನದ ಕುಂಬಳೆಕೋಟೆಗೆ 'ತೆಂಕುಂಬಳೆ' ಎಂದೂ ಕರೆಯುತ್ತಾರೆ. ಕುಂಬಳೆಪೇಟೆಯಿಂದ ಒಂದು ಮೈಲು ಉತ್ತರಕ್ಕೆ ಈ ಕೋಟೆಯಿದೆ. ಈಗ 'ಆರಿಕ್ಕಾಡಿ' ಎಂಬ ಹೆಸರೂ ಈ ಪ್ರದೇಶಕ್ಕಿದೆ. ಮೊದಲು ಮಾಯಿಲ ಅರಸರು ಕುಂಬಳೆಯನ್ನು ಆಳುತ್ತಿದ್ದರೆಂದೂ ನಂತರ ಅದು ಕೆಳದಿಯವರ ಕೈಗೆ

---

7 ಕೆಳದಿನೃಪವಿಜಯ, ಪೂರ್ವೋಕ್ತ, ಪಂಚಮಾಶ್ವಾಸಂ, ಕಂದಪದ್ಯ ೩೨
7ಎ ಅದೇ, ಪಂಚಮಾಶ್ವಾಸಂ, ವಚನ ಪು. ೧೨೪
8 ಅದೇ, ದಶಮಾಶ್ವಾಸಂ, ಕಂದಪದ್ಯ ೪೩
9 ಎಂ. ಗಣಪತಿರಾವ್ ಐಗಳ್ : ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ ಪು. ೧೮೪
10 ಅದೇ. ಪು. ೧೯೧-೯೨
11 ಅದೇ, ಪು. ೨೦೨

ಹೋಯಿತೆಂದೂ ತಿಳಿದುಬಂದಿದೆ. ಈ ಕೋಟೆಯನ್ನು 'ಇಕ್ಕೇರಿ ಕೋಟೆ' ಎಂದೂ ಕರೆಯುತ್ತಾರೆ.[12] ಇಕ್ಕೇರಿಯ ಅರಸರ ವಶದಲ್ಲಿದ್ದ ಕೋಟೆಯಾದ ಕಾರಣ ಈ ಹೆಸರು ಬಂದಿರಬೇಕು. ಇಕ್ಕೇರಿ ಹೆಸರಿನ ಇನ್ನೊಂದು ಬೀಡು ಅಥವಾ ನೆಲೆ ಪೆರಡಾಲ ಗ್ರಾಮದ 'ಕರಿಂಬಿಲ'ದ ಹತ್ತಿರ ಇದ್ದು ಅಲ್ಲಿ ಬೀಡಿನ ಅವಶೇಷಗಳಲ್ಲದೆ ಆ ಕಾಲ ದಲ್ಲಿ ಸ್ಥಾಪಿತವಾದ ಒಂದು ಶಿವದೇವಾಲಯವೂ ಇದೆ. ಡಾ॥ ಉಪ್ಪಂಗಳ ರಾಮಭಟ್ಟರು "ಇಕ್ಕೇರಿ ಅರಸರು ಕಂದಾಯ ವಸೂಲಿ ಮತ್ತು ಆಡಳಿತ ಸೌಕರ್ಯಕ್ಕಾಗಿ ಒಳಭಾಗಗಳಲ್ಲಿ ಕೆಲವು ನೆಲೆಗಳನ್ನು ನಿರ್ಮಿಸಿದ್ದಂತೆ ತೋರುತ್ತದೆ" ಎಂದು ಅಭಿಪ್ರಾಯಪಡುತ್ತಾರೆ.[12ಎ]

ಶಿರೆ (ಸಿರಿಯೆ) ಹಾಗೂ ಕುಂಬಳೆ (ಕುಂಭಿಳಾ) ಹೊಳೆಗಳು ಅಳಿವೆಗೆ ಕೂಡುವಲ್ಲಿ ಬಲವಾದ ಈ ಕೋಟೆ ಕಟ್ಟಲ್ಪಟ್ಟಿತು. ಕುನ್=ಗುಡ್ಡ, ಪೊಳೆ=ಹೊಳೆ. ಹೊಳೆ ಯಿಂದಾವೃತವಾದ ಗುಡ್ಡಪ್ರದೇಶ ಎಂದು "ಕುಂಬಳೆ" ಪದದ ಅರ್ಥವಾಗುತ್ತದೆ. ಈ ಅಳಿವೆಬಾಗಿಲು ಹಡಗುಗಳ ಎಡೆಯಾಟಕ್ಕೆ ಸದಾ ತೆರೆದಿದ್ದಿತು. ಈ ಕುಂಬಳೆ ರೇವಿ ನಲ್ಲಿ ಪರದೇಶಗಳಿಂದ ಬರುವ ಹಡಗುಗಳಿಂದ ಸುಂಕ ವಸೂಲಿ ಮಾಡುವ ಕೊತ್ವಾಲಕಟ್ಟೆಯೂ ಒಂದು ಇದ್ದಂತೆ ತಿಳಿದುಬರುತ್ತದೆ.[13]

ಸುಮಾರು ಹತ್ತು ಎಕರೆ ವಿಸ್ತಾರವಾದ ಚೌಕಾ ಕಾರದ ಬಲವಾದ ಕೋಟೆಯಾಗಿದ್ದ ಇದು ಉತ್ತರ ದಿಕ್ಕಿನಲ್ಲಿ ಎರಡು ದೊಡ್ಡ ಬುರುಜುಗಳನ್ನು ಹೊಂದಿದ್ದು, ನಡುವೆ ಹೆಬ್ಬಾಗಿಲಿದೆ. ಈ ಬುರುಜುಗಳ ಅವಶೇಷಗಳು ಇಂದಿಗೂ ಕಾಣುತ್ತಿವೆ. ಕೋಟೆಯ ಎತ್ತರವಾದ ಗೋಡೆಗಳು ಪೂರ್ವದಿಕ್ಕಿನಲ್ಲಿ ಉಳಿದಿವೆ. ಬುರುಜುಗಳ ಕುರುಹುಗಳೂ ಇವೆ. ಸುಮಾರು ೭ ಅಥವಾ ೮ ಬುರುಜು ಗಳಿದ್ದಿರಬಹುದಾದ ಸಣ್ಣ ಕೋಟೆ ಇದು. ಈ ಕೋಟೆಯ ಸುತ್ತಲೂ ಆಳವಾದ ಕಂದಕ ಕಂಡುಬರುತ್ತದೆ. ಆಗ್ನೇಯ ದಿಕ್ಕಿನಲ್ಲಿ ಗುಪ್ತದ್ವಾರವಿದೆ.

ಕೋಟೆಯೊಳಗೆ ಅಲ್ಲಲ್ಲಿ ಕಟ್ಟಡಗಳ ತಳಪಾಯದ ಅವಶೇಷಗಳಿವೆ ; ಹಾಳುಬಿದ್ದ ಒಂದೆರಡು ಬಾವಿಗಳಿವೆ, ಮುರಿದುಬಿದ್ದ ಶಿಲಾಕಂಬಗಳಿವೆ. ಕೋಟೆಯ ಮಧ್ಯದಲ್ಲಿ ವರ್ತುಲಾಕಾರದ ಬುರುಜೊಂದಿದ್ದು ಸುಮಾರು ೫೦ ಅಡಿ ಎತ್ತರವಿದೆ. ಇದನ್ನು ಇಳುಕಲ್ಲಿನ ಮೂಲಕ ಏರ ಬಹುದು. ಇದೊಂದೇ ಇದ್ದುದರಲ್ಲಿ ಸುಸ್ಥಿತಿಯಲ್ಲಿದೆ. ಬೇಕಲಕೋಟೆಯ ಬುರುಜನ್ನೇ ಹೋಲುವ ಇದರ ಮೇಲ್ಭಾಗವು ವೀಕ್ಷಣಾತಾಣವಾಗಿದ್ದು ಸುತ್ತಲಿನ ಪ್ರದೇಶಗಳು ಸ್ಪಷ್ಟವಾಗಿ ಕಾಣುತ್ತವೆ. ಕೋಟೆಯ ಗೋಡೆಯಲ್ಲಿ ಅಲ್ಲಲ್ಲಿ ಕಮಾನಿನಾಕಾರದ ಹಾಗೂ ಆಯತಾಕಾರದ ಸಣ್ಣ ಸಣ್ಣ ಕಿಂಡಿಗಳಿವೆ.

ಈ ಕೋಟೆಯ ಪ್ರದೇಶ ಇಂದು ಹಾಳುಬಿದ್ದಿದ್ದು 'ರಾಷ್ಟ್ರೀಯ ಹೆದ್ದಾರಿ ನಂ ೧೭' ಇದರ ನಡುವೆ ಹಾದು ಹೋಗಿರುವುದರಿಂದ, ಕೋಟೆಯು ಅರ್ಧಕ್ಕೆ ತುಂಡಾಗಿರು ವಂತೆ ಭಾಸವಾಗುತ್ತದೆ.

**ಕಾಸರಗೋಡು ಕೋಟೆ :** ಕೆಳದಿ ಅರಸರಲ್ಲಿ ಸದಾಶಿವನಾಯಕನು (ಕ್ರಿ.ಶ. ೧೫೪೦-೧೫೭೫) ಮೊದಲ ಬಾರಿಗೆ ಇಲ್ಲಿಯವರೆಗೂ ಬಂದು ಕರಾವಳಿಯ ತುಳು ರಾಜರನ್ನೆಲ್ಲ ಜಯಿಸಿ ಇಲ್ಲಿ 'ತೊಲಗದ ಕಂಬ' ವನ್ನು ನಿಲ್ಲಿಸಿದನೆಂದು ಲಿಂಗಣ್ಣಕವಿ ತಿಳಿಸುತ್ತಾನೆ.[14] 'ಶಿವತತ್ತ್ವರತ್ನಾಕರ' ಗ್ರಂಥವೂ ಇವನು 'ಜಯಸ್ತಂಭ' ವೊಂದನ್ನು ಸ್ಥಾಪಿಸಿದ ಬಗ್ಗೆ ತಿಳಿಸುತ್ತದೆ.[14ಎ] ಆದರೆ ಆಗ ಅವನು ಸ್ವತಂತ್ರ ರಾಜನಾಗಿರದೆ ವಿಜಯನಗರದ ಅಧೀನನಾಗಿದ್ದು ಅವರ ಆಜ್ಞೆಯಂತೆ ಕರಾವಳಿಯ ತುಳು ರಾಜರನ್ನೆಲ್ಲ ನಿಗ್ರಹಿಸುತ್ತಾನೆ.

---

12 ಬೇಕಲ ರಾಮನಾಯಕ: ಬಾಳಿದ ಹೆಸರು, ಪು. ೧೯

12ಎ ಗಡಿನಾಡಿನ ಕಿಡಿ : ಡಾ॥ ಉಪ್ಪಂಗಳ ರಾಮಭಟ್ಟ ಪು. ೩೩

13 ಅದೇ, ಪು. ೯೩

14 ಕೆಳದಿನೃಪವಿಜಯ : ಪೂರ್ವೋಕ್ತ ದ್ವಿತೀಯಾಶ್ವಾಸಂ, ಕಂದಪದ್ಯ ೪೧

14ಎ ಶಿವತತ್ವರತ್ನಾಕರ : ಬಸವರಾಜೇಂದ್ರ, ಕಲ್ಲೋಲ ೫, ತರಂಗ ೫, ಶ್ಲೋಕ ೪೭

ಹಿರಿಯ ವೆಂಕಟಪ್ಪನಾಯಕನು (ಕ್ರಿ.ಶ.೧೫೮೬-೧೬೨೯) ತುಳುರಾಜರನ್ನು ಸೋಲಿಸಿ ಅಲ್ಲಿಯ ಕೋಟೆಗಳನ್ನು ಬಲಪಡಿಸಿದಾಗ ಕಾಸರಗೋಡೂ ಅವುಗಳಲ್ಲಿ ಸೇರಿತ್ತು.[15]

ಚೆನ್ನಮ್ಮಾಜಿ (ಕ್ರಿ.ಶ. ೧೬೭೨-೧೬೯೭) ಪಟ್ಟಕ್ಕೆ ಬರುವ ಸಂದರ್ಭದಲ್ಲಿ ಕಾಸರಗೋಡು ತಿಮ್ಮಣ್ಣನಾಯಕ ಮತ್ತು 'ಸಬ್ಬುನೀಸ ಕೃಷ್ಣಪ್ಪಯ್ಯ'ರೆಂಬ ಪ್ರಧಾನ ವ್ಯಕ್ತಿಗಳ ಸಹಕಾರದಿಂದಲೇ ಅವಳು ಒಳಗಿನ ಶತ್ರುಗಳನ್ನೆಲ್ಲ ನಿಗ್ರಹಿಸಿದ್ದು ತಿಳಿದುಬರುತ್ತದೆ. ಈ ಕಾಸರಗೋಡು ತಿಮ್ಮಣ್ಣನಾಯಕ ಮುಖ್ಯ ವ್ಯಕ್ತಿಯಾಗಿದ್ದು ಸೇನೆಯ ಆಧಿಪತ್ಯವನ್ನೂ ವಹಿಸಿದ್ದು ಕೆಳದಿ ಅರಸರು ಹಲವಾರು ಯುದ್ಧಗಳಲ್ಲಿ ಜಯಗಳಿಸಲು ಕಾರಣನಾಗಿದ್ದಾನೆಂದು 'ಕೆಳದಿನೃಪವಿಜಯ'ದಿಂದ ತಿಳಿದುಬರುತ್ತದೆ.[16]

ಕಾಸರಗೋಡು ಕೋಟೆಯು ೫ ಎಕರೆ ೫ ಸೆಂಟ್ಸ್ ವಿಸ್ತೀರ್ಣವುಳ್ಳ ಸಣ್ಣ ಕೋಟೆ. ಇದು 'ತಲಂಗೆರೆ' ಗ್ರಾಮದ ವ್ಯಾಪ್ತಿಗೆ ಸೇರಿದೆ. ಕಾಸರಗೋಡು ತಾಲ್ಲೂಕು ಕಛೇರಿಯಿಂದ ನಗರ ಮಧ್ಯದ ಹಳೆಯ ಬಸ್ ನಿಲ್ದಾಣಕ್ಕೆ ಬರುವ ಪ್ರಧಾನ ರಸ್ತೆಯಿಂದ ಕೋಟೆ ರಸ್ತೆ ಕವಲೊಡೆಯುತ್ತದೆ. ಪಯಸ್ವಿನೀ ನದಿಗೆ ಹತ್ತಿರವಾಗಿ ಎತ್ತರವಾದ ಗುಡ್ಡೆಯಲ್ಲಿ ಈ ಕೋಟೆಯಿದೆ. ಜಂಬಿಟ್ಟಿಗೆಯಲ್ಲಿ (ಲ್ಯಾಟರೈಟ್) ಕಟ್ಟಿದ ಎತ್ತರದ ಗೋಡೆಗಳು ಮತ್ತು ಕೋಟೆಯ ಒಳಗೆ ದಕ್ಷಿಣ ದಿಕ್ಕಿನಲ್ಲಿ ಎತ್ತರದ ಬುರುಜೊಂದು ಕಾಣಸಿಗುತ್ತದೆ. ಈ ಕೋಟೆಗೆ ಪಶ್ಚಿಮದಲ್ಲಿ ರಾಜದ್ವಾರವಿದೆ. ಪೂರ್ವದಲ್ಲಿ ಗುಪ್ತದ್ವಾರವಿದ್ದಂತೆ ತಿಳಿದುಬಂದರೂ ಇಂದಿನ ಸ್ಥಿತಿಯಲ್ಲಿ ಅದನ್ನು ಕಂಡುಹಿಡಿಯುವುದು ಕಷ್ಟ. ಏಕೆಂದರೆ ಕೋಟೆಯ ತುಂಬ ವೃಕ್ಷಗಳ ಸಮೂಹವಿದೆ. ಎತ್ತರದ ಬುರುಜು ಹಾಗೂ ಮೆಟ್ಟಿಲುಗಳಿರುವ ಕೆರೆಯೊಂದಿದೆ. ಈ ಕೆರೆಯ ರಚನೆ ಬೇಕಲಕೋಟೆಯ ಬಾವಿಯ ರಚನೆಯನ್ನೇ ಹೋಲುತ್ತದೆ.

ಕೋಟೆಯ ಹೊರಗೆ ಸುತ್ತಲೂ ಆಳವಾದ ಕಂದಕವಿದ್ದು ಕೋಟೆ ಎತ್ತರದ ಸ್ಥಳದಲ್ಲಿದೆ. ಪೂರ್ವದಿಕ್ಕಿನಲ್ಲಿ ಅರ್ಧಚಂದ್ರಾಕೃತಿಯ ಬುರುಜೊಂದರ ಸ್ವಲ್ಪ ಭಾಗ ಮಾತ್ರ ಉಳಿದಿದ್ದು ಕೋಟೆಯ ಗೋಡೆಗಳನ್ನು ವೃಕ್ಷಗಳು ಹಾಳು ಮಾಡುತ್ತಿವೆ. ಕೋಟೆಯ ದಕ್ಷಿಣ ಭಾಗದ ಬುರುಜೊಂದು ಕುಸಿದುಬಿದ್ದು ತಗ್ಗಾಗಿದೆ. ಇದರ ಮೇಲೆ ನಿಂತು ನೋಡಿದರೆ ಪಯಸ್ವಿನೀ ನದಿ ಗೋಚರವಾಗುತ್ತದೆ. ಕೋಟೆಯ ಪ್ರವೇಶದ್ವಾರವು ಭದ್ರವಾಗಿದ್ದು ಇದ್ದುದರಲ್ಲಿ ಸುಸ್ಥಿತಿಯಲ್ಲಿದೆ. ಕೋಟೆಯ ಒಳಗೆ ಎರಡು ವಾಸಗೃಹಗಳಿದ್ದು ಜನರು ವಾಸಿಸುತ್ತಿದ್ದಾರೆ.

ಈ ಮೂರೂ ಕೋಟೆಗಳಲ್ಲಿಯ ಗಮನಾರ್ಹ ಅಂಶವೆಂದರೆ ಕೋಟೆಯ ಬಾಗಿಲ ಬಳಿಯ ಆಂಜನೇಯ ದೇವಾಲಯಗಳು. ಕೆಳದಿ ಅರಸರ ಕಾಲದ ಪ್ರತಿ ಕೋಟೆಯಲ್ಲಿಯೂ ಒಂದೊಂದು ಆಂಜನೇಯ ದೇವಾಲಯವಿದ್ದುದು ಗಮನಾರ್ಹವಾಗಿದೆ. ಪೂರ್ವಕ್ಕೆ ಅಭಿಮುಖವಾಗಿ ಕೋಟೆಗಳ ಬಾಗಿಲ ಬಳಿಯೇ ಇರುವ ಗರ್ಭಗುಡಿಯಲ್ಲಿ ಹೆಚ್ಚಿನ ಶಿಲ್ಪಕಲೆಯಿಲ್ಲ. ಆಯತಾಕಾರದ ಕಣಶಿಲೆಯಲ್ಲಿ (ಗ್ರಾನೈಟ್ ಸ್ಲ್ಯಾಬ್) ಕೆತ್ತಿದ ವಿಗ್ರಹಗಳು ಇದ್ದು ಇವುಗಳ ಭಂಗಿ ಒಂದೇ ತೆರನಾಗಿದೆ. ಬಲಗೈ ಅಭಯಮುದ್ರೆಯಲ್ಲಿದ್ದು ಎಡಗೈ ಸೊಂಟದ ಮೇಲಿದೆ. ಕಾಲಂದುಗೆ, ಕಂಠಾಭರಣಗಳು, ಪಾದುಕೆಗಳ ಕೆತ್ತನೆ ಎಲ್ಲವೂ ಸರಳವಾಗಿದೆ.

ಬೇಕಲಕೋಟೆಯ ಆಂಜನೇಯ ವಿಗ್ರಹವು ೧೧೪ ಸೆಂ.ಮಿ. ಎತ್ತರವಿದ್ದು ೬೦.೫ ಸೆಂ.ಮೀ. ಅಗಲವಿದೆ. ಇದರ ಪೀಠದ ಎತ್ತರ ೨೬ಸೆಂ.ಮೀ. ಇದ್ದು ಅಗಲ ೬೩ ಸೆಂ.ಮೀ. ಇದೆ. ಮುಖವು ಎಡಗಡೆ ತಿರುಗಿದ್ದು ಬಾಲವು ಬಲಗಡೆಯಿಂದ ತಲೆಯ ಮೇಲೆ ಬಂದಿದೆ. ಈ ದೇವಾಲಯದ ಗರ್ಭಗುಡಿ ಶಿಲೆಯದಾಗಿದ್ದು ಉಳಿದ ಭಾಗ ಜೀರ್ಣೋದ್ಧಾರಗೊಂಡಿದೆ.

ಕುಂಬಳೆಯ (ಆರಿಕ್ಕಾಡಿಯ) ಕೋಟೆಯ ವೀರಾಂಜನೇಯ ದೇವಾಲಯದ ಮೂರ್ತಿ ಸಣ್ಣದಿದ್ದು ಕಣಶಿಲೆಯಲ್ಲಿ ಕಂಡರಿಸಿದೆ. ಮೂರ್ತಿಯ ಎತ್ತರ ಸುಮಾರು ೪೫ ಸೆಂ.ಮೀ. ಇದ್ದು ಅಗಲ ೧೫ ಸೆ. ಮೀ.

---

15 ಅದೇ, ಪಂಚಮಾಶ್ವಾಸಂ, ಕಂದಪದ್ಯ ೩೨

16 ಅದೇ, ಅಷ್ಟಮಾಶ್ವಾಸಂ, ಪು. ೧೮೭, ನವಮಾಶ್ವಾಸಂ, ಪು. ೧೯೧-೯೩

ಇದೆ. ಇದೂ ಗರ್ಭಗುಡಿ ಸೇರಿದಂತೆ ಹೊಸದಾಗಿ ಜೀರ್ಣೋದ್ಧಾರಗೊಂಡಿರುವ ದೇವಾಲಯ.

ಕಾಸರಗೋಡು ಕೋಟೆಯ ಆಂಜನೇಯ ವಿಗ್ರಹವು ಉಳಿದೆರಡು ವಿಗ್ರಹಗಳಿಗಿಂತ ಸುಂದರವಾಗಿದೆ. ೧೩೧ ಸೆಂ.ಮೀ. ಎತ್ತರ ಮತ್ತು ೬೮ ಸೆಂ.ಮೀ. ಅಗಲವಿರುವ ಕಣಶಿಲೆಯ ಈ ಮೂರ್ತಿಯ ಕೆತ್ತನೆ ಸ್ಫುಟವಾಗಿದ್ದು ಇಂದಿನ ನಗರದ (ಅಂದಿನ ಬಿದನೂರು) ಆಂಜನೇಯ ವಿಗ್ರಹಗಳೊಡನೆ ಸಾಮ್ಯ ಇದೆ. ಪ್ರಭಾವಳಿಯಲ್ಲಿ ಸಿಂಹ ಮುಖವಿದೆ. ಕಟೀಬಂಧ, ಕಂಠಾಭರಣಗಳು, ತೋಳು, ಕೈಗಳಲ್ಲಿ ಆಭರಣಗಳ ಕೆತ್ತನೆ, ಧೋತರ, ಕಾಲಂದುಗೆ ಎಲ್ಲ ಸ್ಫುಟವಾಗಿದ್ದು ಸುಂದರವಾಗಿದೆ. ಎಡಗೈಯಲ್ಲಿ ಗದೆಯ ಶಿಲ್ಪವಿದೆ. ಇವೆಲ್ಲ ಬಿದನೂರಿನ ಶಿಲ್ಪಕಲೆಯನ್ನು ಹೋಲುತ್ತದೆ. ಮೂರ್ತಿಯ ವಿನಾ ಇಡೀ ಕಟ್ಟಡ ಜೀರ್ಣೋದ್ಧಾರಗೊಂಡಿದೆ.

ಮೇಲೆ ಹೇಳಿದ ಮೂರೂ ಕೋಟೆಗಳ ರಚನೆ ಬಿದನೂರ ಅರಸರ ಕಾಲದ್ದೆಂದು ವಾಸ್ತುಶಿಲ್ಪದ ಆಧಾರದಿಂದ ಹೇಳಬಹುದು. ಕಿಂಡಿಗಳು, ಬುರುಜುಗಳ ರಚನೆ, ಗೋಡೆಗಳು, ಕೋಟೆಯ ನಡುವಿರುವ ಎತ್ತರವಾದ ಬುರುಜು, ಕೋಟೆಯೊಳಗಿನ ಬಾವಿಯ ರಚನೆ, ಕೆರೆಯ ನಿರ್ಮಾಣ, ಆಂಜನೇಯ ದೇವಾಲಯ–ಎಲ್ಲದರಲ್ಲೂ ಸಾಮ್ಯವಿದೆ. ಎತ್ತರದ ಬುರುಜು ವೀಕ್ಷಣಾ ತಾಣವಾಗಿದ್ದು ಶತ್ರುಗಳು ದೂರದಲ್ಲಿ ಇರುವಾಗಲೇ ಗುರುತಿಸಲು ಸಹಾಯಕವಾಗುತ್ತಿತ್ತು.

"ಮರಾಟೆಯವರೂ ಪೋರ್ಚುಗೀಸರೂ ಬಂದು ಕರಾವಳಿಯ ಜನರಿಗೆ ಬಹಳ ಹಾವಳಿ ಮಾಡುತ್ತಿದ್ದರು. ಇಕ್ಕೇರಿ ನಾಯಕರು ಇದಕ್ಕಾಗಿ ಪ್ರತಿಯೊಂದು ಹೊಳೆಯ ದ್ವಾರದ ಇದಿರಿಗಾಗಲೀ ಹತ್ತಿರವಾಗಲೀ ಬಲವಾದ ಕೋಟೆಗಳನ್ನು ಕಟ್ಟಿಸಿ ಸೈನ್ಯವನ್ನಿಟ್ಟಿದ್ದರು,"[17] ಎಂಬ ಐಗಳ್‌ರವರ ಅಭಿಪ್ರಾಯ ಮೇಲಿನ ಕೋಟೆಗಳನ್ನು ನೋಡುವಾಗ ಸತ್ಯವೆಂದು ಕಂಡುಬರುತ್ತದೆ. ○

17 ಎಂ. ಗಣಪತಿರಾವ್ ಐಗಳ್ : ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಪು. ೨೨೬

[ಈ ಪ್ರವಾಸದಲ್ಲಿ ಸಹಕರಿಸಿದ ಗೆಳತಿ ಆಶಾಕಾಮತ್ ಹಾಗೂ ಶ್ರೀ ಗೋಪೀನಾಥ್ ಅವರಿಗೆ ಹಾರ್ದಿಕ ಕೃತಜ್ಞತೆಗಳು]

# ಸಂಸ್ಕೃತ ಗ್ರಂಥಗಳಲ್ಲಿ ಕೋಟೆಗಳ ವರ್ಣನೆ

**ಡಾ॥ ರಾಧಾಕೃಷ್ಣಮೂರ್ತಿ**

ಪ್ರಾಚೀನ ರಾಜನೀತಿಜ್ಞರಿಂದ ನಮೂದಿಸಲ್ಪಟ್ಟಿರುವ ರಾಜ್ಯದ ಏಳು ಮೂಲ ಅಂಶಗಳು ಅಥವಾ ಸಪ್ತಾಂಗಗಳು ಯಾವುವೆಂದರೆ ಸ್ವಾಮಿ (ಪ್ರಭು), ಅಮಾತ್ಯ (ಮಂತ್ರಿ), ರಾಷ್ಟ್ರ (ಸಂಸ್ಥಾನ), ದುರ್ಗ (ಕೋಟೆ), ಕೋಶ (ಖಜಾನೆ), ದಂಡ (ಸೈನ್ಯ) ಮತ್ತು ಮಿತ್ರರಾಜ್ಯ.[1] ಸಂಸ್ಥಾನವನ್ನು ಸ್ಥಾಪಿಸಲು ನಮೂದಿಸಲ್ಪಟ್ಟಿರುವ ಈ ಸಪ್ತ ಮೂಲತತ್ವಗಳಲ್ಲಿ 'ದುರ್ಗ' (ಕೋಟೆಗಳು, ಕೋಟೆಗಳಿಂದ ಆವೃತ್ತವಾದ ನಗರ, ಕೋಟೆಗಳಿಂದ ಭದ್ರಪಡಿಸುವಿಕೆ) ಬಹುಮುಖ್ಯವೆಂದು ಪರಿಗಣಿಸಲಾಗಿದೆ. ಏಕೆಂದರೆ ಅವು ರಾಷ್ಟ್ರೀಯ ರಕ್ಷಣಾ ವ್ಯವಸ್ಥೆಯಲ್ಲಿ ಮುಖ್ಯವಾದ ಸಂಬಂಧವನ್ನು ಸ್ಥಾಪಿಸುತ್ತವೆ.

ಕೋಟೆ ಅಥವಾ ರಕ್ಷಾವರಣ ಇದನ್ನು ಸಂಸ್ಕೃತದಲ್ಲಿ 'ದುರ್ಗ' ಮತ್ತು ಇಂಗ್ಲೀಷಿನಲ್ಲಿ 'ಫೋರ್ಟ್' ಎಂದು ಹೇಳುತ್ತಾರೆ. ಸೈನಿಕರುಗಳಿಂದ ಆವರಿಸಲ್ಪಟ್ಟ ರಕ್ಷಿತವಾದ ದೊಡ್ಡ ಸ್ಥಳ ಮತ್ತು ಸಾಮಾನ್ಯವಾಗಿ ಗೋಡೆಗಳು, ಕಂದಕಗಳು ಮತ್ತು ರಕ್ಷಣಾರ್ಥ ಕಾರ್ಯಗಳಿಂದ ಆವರಿಸಲ್ಪಟ್ಟ ರಕ್ಷಿತವಾದ ಹಿರಿದಾದ ಸ್ಥಳ ; ರಕ್ಷಿಸಲ್ಪಟ್ಟಿರುವ ಸ್ಥಳ. ಕೆಲವೊಮ್ಮೆ ಆಕ್ರಮಣವನ್ನು ಎದುರಿಸಲು ಬೇಕಾಗುವ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ರಕ್ಷಣಾ ಸಾಧನಗಳಿಂದ ಮತ್ತು ರಕ್ಷಣಾಕಾರ್ಯಗಳಲ್ಲಿ ತೊಡಗಿರುವ ಸಿಪಾಯಿಗಳಿಂದ ಸುತ್ತುವರಿಯಲ್ಪಟ್ಟ ಪಟ್ಟಣವೆಂದು ಭಾವಿಸುತ್ತಾರೆ. ಸಂಸ್ಕೃತದಲ್ಲಿ ಇದನ್ನು ದುರ್ಗ ಎಂದು ಕರೆಯುತ್ತಾರೆ. ಶತ್ರುಗಳಿಗೆ ಅಗಮ್ಯವಾದ ಹೊಂದಲಾಗದ ಮತ್ತು ದುರ್ಗಮವಾದ ಗೋಡೆಗಳಿಂದ ಕೋಟೆ ಕಟ್ಟಲ್ಪಟ್ಟಿರುತ್ತದೆ. ಪ್ರತಿಯೊಂದು ಕೋಟೆಯೂ ದುರ್ಗಾಧ್ಯಕ್ಷ ಅಥವಾ ದುರ್ಗಪಾಲಕ ಎಂಬ ಅಧಿಕಾರಿಯ ಅಧೀನದಲ್ಲಿರುತ್ತದೆ. ಸೈನಿಕ ಸಂಸ್ಥೆಯವರು ಈ ಅಧಿಕಾರಿಯನ್ನು ನೇಮಿಸಬಲ್ಲರು. ಈ ಅಧಿಕಾರಿ ಸೈನಿಕ ರಕ್ಷಣಾ ಕಾರ್ಯಗಳ ಕಲೆ ಅಥವಾ ವಿಜ್ಞಾನದಲ್ಲಿ ಅತಿ ಚಾಣಾಕ್ಷ (ದಕ್ಷ)ನಿರುತ್ತಾನೆ.

ರಾಜಕೀಯ ವಿಜ್ಞಾನ ಅಥವಾ ರಾಜನೀತಿ ಗ್ರಂಥಗಳಾದ ಕೌಟಿಲ್ಯನ ಅರ್ಥಶಾಸ್ತ್ರ, ಶುಕ್ರನೀತಿ, ಕಾಮಂದಕ ನೀತಿಸಾರ ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ಕೋಟೆಗಳನ್ನು ಕಟ್ಟಲು ಅಥವಾ ನಗರಗಳನ್ನು ಭದ್ರಗೊಳಿಸಲು ಒತ್ತು ಕೊಟ್ಟಿದ್ದಾರೆ.ರಾಜನು ತನ್ನ ರಾಣಿಯು,ತನ್ನ ಜನರ ಮತ್ತು ಸಂಪತ್ತಿನ ರಕ್ಷಣೆಗಾಗಿ ಭದ್ರವಾದ ಗೋಡೆ ಮತ್ತು ಬಾಗಿಲುಗಳುಳ್ಳ ಕೋಟೆಯುನ್ನು ಅವಶ್ಯಕವಾಗಿ ಕಟ್ಟಲೇಬೇಕೆಂದು ರಾಜನೀತಿ ಪ್ರಕಾಶದಲ್ಲಿ ಬೃಹಸ್ಪತಿಯ ವಚನ ಉಲ್ಲೇಖಿಸುತ್ತದೆ.[2] ಇದೇ ವಿಷಯವಾಗಿ

1 ಸ್ವಾಮ್ಯಮಾತ್ಯೌ ಪುರಂ ರಾಷ್ಟ್ರಂ ಕೋಶ ದಂಡೌ ಸಹೃತ್ ತಥಾ । ಸಪ್ತ ಪ್ರಕೃತಯೋ ಹ್ಯೇತಾಃ ಸಪ್ತಾಂಗಂ ರಾಜ್ಯಮುಚ್ಯತೆ । ಮನುಸ್ಮೃತಿ IX ೨೯೪ ಮತ್ತು ವಿಷ್ಣುಧರ್ಮೋತ್ತರ ಪುರಾಣ, III ೩ ಕಾಮಂದಕ ನೀತಿ.I-೧೬. ಅರ್ಥಶಾಸ್ತ್ರ VI ೧ ಇತ್ಯಾದಿ

2 ಆತ್ಮದಾರಾರ್ಥ ಲೋಕಾನಾಂ ಸಂಚಿತಾನಾಂ ತು ಗುಪ್ತಯೆ । ನೃಪತಿಃ ಕಾರಯೇದ್ದುರ್ಗಂ ಪ್ರಕಾರದ್ವಾರ ಸಂಯುತವ್ । —ರಾಜನೀತಿ ಪ್ರಕಾಶ— p. ೨೦೨ ವಾರಣಾಸಿ ೧೯೧೬

ಕೌಟಿಲ್ಯನೂ ತನ್ನ ಅರ್ಥಶಾಸ್ತ್ರದಲ್ಲಿ ಸವಿಸ್ತಾರವಾಗಿ ಬರೆದಿದ್ದಾನೆ. ಮತ್ತು ರಾಜನು ತನ್ನ ರಾಜ್ಯದ ಎಲ್ಲೆಯ ನಾಲ್ಕು ದಿಕ್ಕುಗಳಲ್ಲೂ ಶತ್ರುಗಳನ್ನು ತಡೆಗಟ್ಟಲು ಸೂಕ್ತವಾದ ಕೋಟೆಗಳನ್ನು ಕಟ್ಟಬೇಕೆಂದು ತಿಳಿಸಿದ್ದಾನೆ.[3] ಒಬ್ಬ ಬಿಲ್ಲುಗಾರ ಕೋಟೆಯ ಗೋಡೆಯ ಮರೆ (ರಕ್ಷಣೆ) ಯಲ್ಲಿ ನೂರಾರು ಶತ್ರುಗಳೊಂದಿಗೆ ಹೋರಾಡಬಹುದು ಮತ್ತು ನೂರಾರು ಬಿಲ್ಗಾರರು ಹತ್ತು ಸಾವಿರ ಶತ್ರುಗಳೊಂದಿಗೆ ಹೋರಾಡಬಹುದು ಎಂದು ಹೇಳುತ್ತಾ ಮನು ಕೋಟೆಗಳನ್ನು ಕಟ್ಟುವುದನ್ನು ಸಮರ್ಥಿಸಿದ್ದಾನೆ[4]. ಯುದ್ಧದಲ್ಲಿ ಸಾವಿರಾರು ಆನೆಗಳಿಂದ ಮತ್ತು ಲಕ್ಷಾಂತರ ಕುದುರೆಗಳಿಂದ ನಿರ್ವಹಿಸಲಾಗದ ಕಾರ್ಯವನ್ನು ಒಬ್ಬ ರಾಜ ಕೋಟೆಯ ಸಹಾಯದಿಂದ ಆಶ್ಚರ್ಯಕರವಾಗಿ ನಿರ್ವಹಿಸಬಲ್ಲನು ಎಂದು ಪಂಚತಂತ್ರದಲ್ಲಿ ದೃಢವಾಗಿ ಹೇಳಲ್ಪಟ್ಟಿದೆ.[5] ಕೋಟೆ ಇಲ್ಲದ ರಾಜನನ್ನು ವಿಷರಹಿತವಾದ ಹಾವಿನಂತೆ ಅಥವಾ ಮದ ರಹಿತವಾದ ಆನೆಯಂತೆ ಸುಲಭವಾಗಿ ಸ್ವಾಧೀನ ಪಡಿಸಿಕೊಳ್ಳಬಹುದು ಎಂದು ಶಿವತತ್ವರತ್ನಾಕರದ ಬಸವರಾಜ ಹೇಳುತ್ತಾನೆ.[6] ಇದೇ ರೀತಿಯ ಹೇಳಿಕೆಗಳು ಸಂಸ್ಕೃತದ ಅನ್ಯ ಗ್ರಂಥಗಳಲ್ಲಿಯೂ ದೊರೆಯುತ್ತವೆ.

ಕರ್ನಾಟಕದಲ್ಲಿ ವಿವಿಧ ರಾಜ ವಂಶಗಳ ಸಂಘಟನೆಯಲ್ಲಿ ಕೋಟೆಗಳು ಅತಿ ಮುಖ್ಯವಾದ ಪಾತ್ರಗಳನ್ನು ವಹಿಸಿವೆ. ಅನೇಕ ಶ್ರೇಷ್ಠ ರಾಜವಂಶಗಳ ಉತ್ಥಾನ ಮತ್ತು ಪತನಗಳಿಗೆ ಮುಖ್ಯ ಕಾರಣ ಕೋಟೆಗಳನ್ನು ಸ್ವಾಧೀನಪಡಿಸಿಕೊಳ್ಳುವಿಕೆ. ಕರ್ನಾಟಕದಲ್ಲಿ ಅನೇಕ ರಾಜವಂಶಸ್ಥರು ಸಮಯ-ಸಮಯಕ್ಕೆ ತಕ್ಕಂತೆ ಬೆಟ್ಟದ ಮೇಲೆ, ಭೂಮಿಯ (ನೆಲದ) ಮೇಲೆ ಮತ್ತು ಕರಾವಳಿ ಪ್ರದೇಶ ಮುಂತಾದ ಕಡೆ ಕೋಟೆಗಳನ್ನು ಕಟ್ಟುತ್ತಿದ್ದರು. ಪ್ರಾಚೀನ ಮತ್ತು ಮಧ್ಯಕಾಲೀನ ಸಂಸ್ಕೃತ ಗ್ರಂಥಗಳ ಅಧ್ಯಯನದಿಂದ ಕೋಟೆಗಳು, ವಿವಿಧ ಪ್ರಕಾರದ ಕೋಟೆಗಳು, ಅವುಗಳಲ್ಲಿ ಸಂಗ್ರಹಿಸಲ್ಪಡುತ್ತಿದ್ದ ಪದಾರ್ಥಗಳು, ವಾಸ್ತುಶಿಲ್ಪ ಶಾಸ್ತ್ರದ ಸವಿಸ್ತಾರ ವರ್ಣನೆ ಮುಂತಾದವುಗಳ ಬಗ್ಗೆ ವಿಫುಲವಾಗಿ ಸಮಾಚಾರಗಳು ತಿಳಿಯಲ್ಪಡುತ್ತವೆ.

ಕೌಟಿಲ್ಯ ನಾಲ್ಕು ಪ್ರಕಾರದ ಕೋಟೆಗಳನ್ನು ಪ್ರಸ್ತಾಪಿಸಿದ್ದಾನೆ. ಅವುಗಳು ಯಾವುವೆಂದರೆ—

೧. ಔದಕ :–ನಡುಗಡ್ಡೆ ಅಥವಾ ಆಳವಾದ ಕಂದಕಗಳಂತೆ ಸುತ್ತಲೂ ಆಳವಾದ ನೀರಿನಿಂದ ಸುತ್ತುವರೆಯಲ್ಪಟ್ಟ ನೀರಿನ ಕೋಟೆ.

೨. ಪಾರ್ವತ :–ಬೆಟ್ಟಗಳ ಮೇಲೆ ದೊಡ್ಡ ದೊಡ್ಡ ಕಲ್ಲು ಮತ್ತು ಬಂಡೆಗಳಿಂದ ಕಟ್ಟಿರುವುದು ಅಥವಾ ಭಯ ಹುಟ್ಟಿಸುವಂತೆ ಗುಹೆಯ ಮಾದರಿಯಲ್ಲಿರುವುದು.

೩. ಧಾನ್ವನ :–ಮರಳು ಭೂಮಿಯಲ್ಲಿ ನೀರಿಲ್ಲದೆ ಒಣ ಮರಳು ಮತ್ತು ಒಣ ಮಣ್ಣುಗಳನ್ನು ತುಂಬಿ ಕಟ್ಟಿದ ಕೋಟೆಗಳು.

೪. ವನ :–ಅನೇಕ ಚಿಕ್ಕಪುಟ್ಟ ಪಕ್ಷಿಗಳಿಂದ, ನೀರಿನಿಂದ ಕೂಡಿ ದಟ್ಟವಾಗಿರುವ ಅರಣ್ಯ ಕೋಟೆಗಳು.

ಈ ನಾಲ್ಕು ಪ್ರಕಾರದ ಕೋಟೆಗಳಲ್ಲಿ ಕೌಟಿಲ್ಯ ಮೊದಲನೆಯ ಎರಡು ಅಂದರೆ ಔದಕ ಮತ್ತು ಪಾರ್ವತಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟಿದ್ದಾನೆ. ಏಕೆಂದರೆ ಇವು ಅಧಿಕ ರಕ್ಷಣೆ ಕೊಡುತ್ತವೆ.[7]

---

3 ಅರ್ಥಶಾಸ್ತ್ರ II ೩-೪

4 ಏಕಂ ಶತಂ ಯೋಧಯತಿ ಪ್ರಾಕಾರಸ್ಥೋ ಧನುರ್ಧರಃ । ಶತಂ ದಶ ಸಹಸ್ರಾಣಿ ತಸ್ಮಾದ್ದುರ್ಗಂ ವಿಧೀಯತೇ ।–
ಮನು VII ೭೪

5 ಪಂಚತಂತ್ರ-II.
ನಗಜಾನಾಂ ಸಹಸ್ರೇಣ ನ ಚ ಲಕ್ಷೇಣ ವಾಜಿನಾಮ್ । ತತ್ಕರ್ಮ ಸಾಧ್ಯತೇ ರಾಜ್ಞಾಂ ದುರ್ಗೈಣೈಕೇನ ಯದ್ರಣೆ ।

6 ಶಿವತತ್ವ ರತ್ನಾಕರ V ೬-೪೬

7 ಅರ್ಥಶಾಸ್ತ್ರ-II

ಶುಕ್ರ ನೀತಿ ಒಂಭತ್ತು ಪ್ರಕಾರದ ಕೋಟೆಗಳನ್ನು ನಮೂದಿಸಿದೆ.

೧. ಐರಿಣ-ಹಳ್ಳಗಳು, ಮುಳ್ಳುಗಳು ಮತ್ತು ಕಲ್ಲುಗಳಿಂದ ಸುತ್ತುವರೆಯಲ್ಪಟ್ಟಿರುವುದು.

೨. ಪರಿಖ-ಆಳವಾದ ಕಂದಕಗಳಿಂದ ಸುತ್ತುವರೆಯಲ್ಪಟ್ಟಿರುವುದು.

೩. ಪರಿಘ-ಇಟ್ಟಿಗೆಗಳು, ಕಲ್ಲುಗಳು ಮತ್ತು ಮಣ್ಣುಗಳಿಂದ ತುಂಬಿದ ಹೊರ ಗೋಡೆಗಳು.

೪. ವನ-ದಟ್ಟವಾದ ಅರಣ್ಯದಲ್ಲಿದ್ದು ಮುಳ್ಳು ಮರಗಳಿಂದ ಆವೃತವಾಗಿರುವುದು.

೫. ಧನ್ವ-ಒಣ ಭೂಮಿಯಲ್ಲಿದ್ದು ನೀರಿಲ್ಲದೆ ಕೇವಲ ಮಣ್ಣಿನಿಂದ ಆವರಿಸಲ್ಪಟ್ಟಿರುವುದು.

೬. ಜಲ-ಎಲ್ಲಾ ಭಾಗಗಳಲ್ಲಿಯೂ ನೀರಿನಿಂದ ಸುತ್ತುವರೆಯಲ್ಪಟ್ಟಿರುವ ಕೋಟೆಗಳು.

೭. ಗಿರಿ-ನೀರಿಲ್ಲದ ನಿರ್ಜನ ಪ್ರದೇಶದಲ್ಲಿ ಎತ್ತರವಾದ ಗೋಡೆಗಳಿಂದ ಕಟ್ಟಿರುವುದು.

೮. ಸೈನ್ಯ-ಶಸ್ತ್ರಸನ್ನದ್ಧರಾದ ಸದೃಢರಾದ ಸೈನಿಕರಿಂದ ರಕ್ಷಿಸಲ್ಪಟ್ಟಿರುವ ಆವರಣ.

೯. ಸಹಾಯ-ಬಂಧುಗಳು ಮತ್ತು ಸ್ನೇಹಿತರ ಮನೆಗಳಿಂದ ಆವೃತವಾಗಿರುವುದು.

ಮೇಲೆ ಹೇಳಿದ ಪ್ರಕಾರಗಳಲ್ಲಿ ಶುಕ್ರನು ತನ್ನ ಅಭಿಪ್ರಾಯವನ್ನು ಹೀಗೆ ಹೇಳುತ್ತಾನೆ—'ಪರಿಖ'ಗಿಂತ ಐರಿಣ ಉತ್ತಮವಾಗಿದೆ. ಇದಕ್ಕಿಂತ ಪರಿಘಾ ಉತ್ತಮವಾದ ಕೋಟೆ. ವನ, ಪರಿಘಾಗಿಂತ ಹೆಚ್ಚು ರಕ್ಷಣೆಯನ್ನು ಕೊಡುತ್ತದೆ. ಸೈನಿಕ ಕೋಟೆ ಮತ್ತು ಸಹಾಯಕ ಕೋಟೆ ಬೇರೆ ಎಲ್ಲಾ ಕೋಟೆಗಳಿಗಿಂತಲೂ ಉತ್ತಮವಾದುದು.[8]

ಸ್ಮೃತಿಕಾರ ಮನು ಆರು ಪ್ರಕಾರದ ಕೋಟೆಗಳನ್ನು ತಿಳಿಸಿದ್ದಾನೆ. ಅವು ಯಾವುವೆಂದರೆ-ಧನು, ಮಹೀ, ಜಲ, ವೃಕ್ಷ, ಗಿರಿ ಮತ್ತು ನರದುರ್ಗ[9]. ಇವುಗಳಲ್ಲಿ ಧನುದುರ್ಗ ಒಣ ಮಣ್ಣಿನಿಂದ ಸುತ್ತುವರಿಯಲ್ಪಟ್ಟಿರುತ್ತದೆ. ಆದ್ದರಿಂದ ಬೇಸಿಗೆಯಲ್ಲಿ ಇದರ ಆಕ್ರಮಣ ಅಸಾಧ್ಯ. ಮಹಿದುರ್ಗ ಸುತ್ತಲೂ ಸುರಂಗಗಳಿಂದ ರಕ್ಷಿತವಾಗಿರುತ್ತದೆ. ಮನು ಗಿರಿ ದುರ್ಗವನ್ನು ಅತ್ಯುತ್ತಮವೆಂದು ಪರಿಗಣಿಸಿದ್ದಾನೆ. ಏಕೆಂದರೆ ಅದನ್ನು ಬಹಳ ಶ್ರಮದಿಂದ ಮಾತ್ರ ವಶಪಡಿಸಿಕೊಳ್ಳಲು ಸಾಧ್ಯ.[10]

ಪುರಾಣಗಳಲ್ಲಿಯೂ ಸಹ ಅನೇಕ ಪ್ರಕಾರದ ಕೋಟೆಗಳ ಪ್ರಸ್ತಾಪ ಮಾಡಿದ್ದಾರೆ. ವಾಯು ಪುರಾಣದಲ್ಲಿ ನಾಲ್ಕು ಪ್ರಕಾರದ, ಅಗ್ನಿ ಮತ್ತು ಮತ್ಸ್ಯ ಪುರಾಣಗಳಲ್ಲಿ ಆರು ಪ್ರಕಾರದ ಕೋಟೆಗಳ ಪ್ರಸ್ತಾಪವಿದೆ.[11] ಮಹಾಭಾರತದ ಶಾಂತಿಪರ್ವ, ವಿಷ್ಣುಧರ್ಮೋತ್ತರ ಪುರಾಣ, ವಿಷ್ಣುಧರ್ಮಸೂತ್ರ ಮುಂತಾದವುಗಳಲ್ಲಿ ಆರು ಬಗೆಯ ಕೋಟೆಗಳ ಪ್ರಸ್ತಾಪವಿದೆ.[12] ಭಾಗವತ ಪುರಾಣ ಶಸ್ತ್ರದುರ್ಗ (ಸೈನಿಕರಿಂದ ರಕ್ಷಿತವಾದ ದುರ್ಗ)ದ ಬಗ್ಗೆ ತಿಳಿಸುತ್ತದೆ. ಇದರೊಂದಿಗೆ ಜಲ, ಅಗ್ನಿ ಮತ್ತು ಅನಿಲ ದುರ್ಗ (ನೀರು, ಅಗ್ನಿ ಮತ್ತು ಬಲವಾದ ಗಾಳಿಯಿಂದ

---

8 ಶುಕ್ರನೀತಿ-IV-೮೫೦-೫೫
ಪರಿಖಾದ್ಯೈರಿಣಂ ಶ್ರೇಷ್ಠಂ ಪರಿಘಂ ತು ತತೋವನಮ್ ।
ತ ತೋಧನ್ವಂ ಜನಂ ತಸ್ಮಾದ್ ಗಿರಿದುರ್ಗಂ ತತಃ ಸ್ಮೃತಮ್ ॥

9 ಮನುಸ್ಮೃತಿ VII ೭೦
ಧನದುರ್ಗಂ ಮಹೀದುರ್ಗಂ ಅಬ್‌ದುರ್ಗಂ ವಾಕ್ಷಮೇವ ವಾ ।
ಗಿರಿದುರ್ಗಂ ನೃದುರ್ಗಂ ವಾ ಸಮಾಶ್ರಿತ್ಯ ವಸೇತ್ಪುರಮ್ ॥

10 ಸರ್ವೇಣ ತು ಪ್ರಯತ್ನೇನ ಗಿರಿದುರ್ಗಂ ಸಮಾಶ್ರಯೇತ್ ।
ಏಷಾಂ ಹಿ ಬಾಹುಗುಣ್ಯೇ ನ ಗಿಂದುರ್ಗಂ ವಿಶಿಷ್ಯತೆ ॥ —ಮನು VII ೭೧

11 ವಾಯು ಪುರಾಣ VII ೧೦೮, ಅಗ್ನಿಪುರಾಣಂ ೨೨೭.೪-೫.
ಮತ್ಸ್ಯ ಪುರಾಣ-೨೧೭. ೬-೭.

12 ಮಹಾಭಾರತ—ಶಾಂತಿಪರ್ವ-೫೬.೩೫
ವಿಷ್ಣುಧರ್ಮೋತ್ತರ ಪುರಾಣ II ೨೦-೬-೯
ವಿಷ್ಣು ಧರ್ಮಸೂತ್ರ ೩.೬

ಆವೃತ್ತವಾದ ಕೋಟೆಗಳು) ಗಳನ್ನು ತಿಳಿಸುತ್ತದೆ.[13] ನರದುರ್ಗವೇ ಅತ್ಯುತ್ತಮವೆಂದು ಮಹಾಭಾರತ ತಿಳಿಸುತ್ತದೆ.[14]

ಹನ್ನೆರಡನೇ ಶತಮಾನದ ಮೂರನೇ ಚಾಲುಕ್ಯ ಸೋಮೇಶ್ವರನ ಅಭಿಲಷಿತಾರ್ಥ ಚಿಂತಾಮಣಿ ಮತ್ತು ಹದಿನೇಳನೇ ಶತಮಾನದ ಕೆಳದಿಯ ಬಸವರಾಜನ ಶಿವತತ್ವ ರತ್ನಾಕರದ ಅಧ್ಯಯನ ಸಾಕಷ್ಟು ನಡೆಸಿ ಒಂಭತ್ತು ಪ್ರಕಾರದ ಕೋಟೆಗಳನ್ನು ನಮೂದಿಸಿದ್ದಾರೆ.[15]

೧. ಜಲದುರ್ಗ :–ಆಳವಾದ ನೀರಿನಿಂದ ಆವರಿಸಲ್ಪಟ್ಟಿರುವುದು.

೨. ಗಿರಿದುರ್ಗ :–ದುರ್ಗಮವಾದ ಬೆಟ್ಟದ ಮೇಲೆ ಕಟ್ಟಿ ಸುತ್ತಲು ನೀರಿನಿಂದ ಆವೃತವಾಗಿರುವುದು.

೩. ಪಾಷಾಣದುರ್ಗ :-ಬಂಡೆಗಳಿಂದ ರಚಿಸಿರುವುದು.

೪. ಇಷ್ಟಕದುರ್ಗ :-(Istaka) ಇಟ್ಟಿಗೆಗಳಿಂದ ಕಟ್ಟಿ, ಸುಣ್ಣ ಬಣ್ಣ ಬಳಿದು ಅಗಲವಾದ ಮತ್ತು ಆಳವಾದ ಕಂದಕಗಳಿಂದ ಸುತ್ತುವರಿಯಲ್ಪಟ್ಟಿರುವುದು.

೫. ಮೃತ್ತಿಕಾಮಯಮ್ :-ಮಣ್ಣಿನಿಂದ ಕಟ್ಟಿರುವುದು.

೬. ವನದುರ್ಗ :-ದಟ್ಟವಾದ ಮುಳ್ಳು ಮರಗಳಿಂದ ಆವರಿಸಲ್ಪಟ್ಟಿರುವುದು.

೭. ಮರುದುರ್ಗ :-ಕೋಟೆಯೊಳಗೆ ಸಾಕಷ್ಟು ನೀರನ್ನು ಸಂಗ್ರಹಿಸಿ ಮರುಭೂಮಿಯಲ್ಲಿ ಕಟ್ಟಿರುವುದು.

೮. ದಾರುಮಯ ದುರ್ಗ :-ಮರ ಮತ್ತು ಬಂಬು ಗಳಿಂದ ತಯಾರಿಸಿರುವುದು.

೯. ನರದುರ್ಗ :-ಸುತ್ತಲೂ ಶಸ್ತ್ರಸಜ್ಜಿತರಾದ ಯೋಧರಿಂದ ರಕ್ಷಿತವಾಗಿರುವುದು.

ಆಕಾಶ ಭೈರವಕಲ್ಪ ಎಂಬ ಶೈವ ತಂತ್ರದ ಭಾಗವಾದ "ಸಾಮ್ರಾಜ್ಯ ಲಕ್ಷ್ಮಿ ಪೀಠಿಕಾ" ಎಂದು ಕರೆಯಲ್ಪಡುವ ಗ್ರಂಥ ಚಕ್ರವರ್ತಿಗಳ ಕೆಲಸ ಕಾರ್ಯಗಳನ್ನು ವಿವರಿಸುತ್ತದೆ, ಮತ್ತು ಕೋಟೆ ಅವುಗಳ ರಕ್ಷಣಾ ಕಾರ್ಯವನ್ನು ಸಹ ವಿವರಿಸುತ್ತದೆ.[16] ವಾಸ್ತವವಾಗಿ ಈ ಗ್ರಂಥ ಕೋಟೆಗಳ ವಿವಿಧ ಪ್ರಕಾರಗಳು ಮತ್ತು ಅವುಗಳ ಹೆಚ್ಚಿನ ವಿವರಣೆಯನ್ನು ಕೊಡುತ್ತದೆ. ರಾಜರ ಮತ್ತು ಚಿಕ್ಕ ಸಂಸ್ಥಾನದ ಮುಖ್ಯಸ್ಥರ ಅತಿ ಹೆಚ್ಚಿನ ಬಲ ಈ ಕೋಟೆಗಳೇ ಎಂದು ಈ ತಂತ್ರಗಳು ತಿಳಿಸುತ್ತವೆ. ಕೋಟೆಯಿಂದ ರಕ್ಷಿತವಾಗಿಲ್ಲದ ಪಟ್ಟಣಗಳನ್ನು ಶತ್ರುಗಳು ಬಹು ಸುಲಭವಾಗಿ ಸ್ವಾಧೀನಪಡಿಸಿಕೊಳ್ಳಬಲ್ಲರು. ಆದ್ದರಿಂದ ಆಳುವವರು ಅತ್ಯವಶ್ಯಕವಾಗಿ ಕೋಟೆಗಳನ್ನು ಕಟ್ಟಬೇಕು.

ಎಂಟು ಪ್ರಕಾರದ ಕೋಟೆಗಳು ನಮೂದಿಸಲ್ಪಟ್ಟಿವೆ—ಗಿರಿದುರ್ಗ, ವನದುರ್ಗ, ಗಹ್ವರದುರ್ಗ, ಜಲದುರ್ಗ, ಕರ್ದಮದುರ್ಗ, ಮಿಶ್ರದುರ್ಗ, ನರದುರ್ಗ ಮತ್ತು ಕಾಷ್ಠದುರ್ಗ. ಎತ್ತರವಾದ ಬೆಟ್ಟದ ಮೇಲೆ ಅಗಲವಾದ, ಅಗಮ್ಯವಾದ, ಅವ್ಯಾಹತವಾಗಿ ನೀರಿನಿಂದ ಕೂಡಿದ, ಕಡಿದಾದ ಬಂಡೆಗಳನ್ನು ಹೊಂದಿದ ಮತ್ತು ಇಳಕಲಾದ ಮೇಲೆ ಮತ್ತು ಕೆಳಗೆ ಅನೇಕ ಪ್ರಾಕಾರಗಳಿಂದ ಸುತ್ತುವರೆಯಲ್ಪಟ್ಟಿರುವ, ಸುಲಭವಾಗಿ ಹತ್ತಲು ಅಸಾಧ್ಯವಾಗಿರುವ ಪಟ್ಟಣವನ್ನು ಗಿರಿದುರ್ಗ ಎಂದು ಹೇಳುತ್ತಾರೆ ಎಂದು ಗ್ರಂಥಗಳಲ್ಲಿ ವರ್ಣಿಸಿದ್ದಾರೆ. ಈ ಗಿರಿದುರ್ಗದಲ್ಲಿಯೂ ಎಂಟು ಪ್ರಕಾರಗಳಿವೆ ಎಂದು ಗಣಿಸಿದ್ದಾರೆ—

---

13 ಶ್ರೀಮದ್ ಭಾಗವತಂ X ೫೯.೩
ಗಿರಿದುರ್ಗಂ ಶಸ್ತ್ರದುರ್ಗಂ ಜಲರಸ್ನ್ಯಾನಿಲ ದುರ್ಗಂ

14 ಮಹಾಭಾರತ, ಶಾಂತಿ ಪರ್ವ ೫೬.೩೫

15 ಶಿವತತ್ವರತ್ನಾಕರ V ೬- ೫೬-೬೦
ಮನುಸ್ಮೃತಿ VII ೭೫

16 ಸಾಮ್ರಾಜ್ಯಲಕ್ಷ್ಮಿಪೀಠಿಕಾ ಪಟಲ ೩೩

೧. ಭದ್ರಮ್—ಎತ್ತರವಾದ, ವೃತ್ತಾಕಾರದ, ಹೊರ ಮೇಲ್ಮೈಸುತ್ತಲೂ ಥಳಕಿನಿಂದ ಕೂಡಿ, ಸಾಕಷ್ಟು ಗುಹೆಗಳು ಮತ್ತು ಪಥಿಕಾಶ್ರಮಗಳನ್ನು ಹೊಂದಿದ್ದು, ಸಂಪೂರ್ಣ ನೀರಿದ್ದು ಒಂದೇ ಒಂದು ಬಂಡೆಯ ಮೇಲೆ ಕಟ್ಟಲ್ಪಟ್ಟಿರುತ್ತದೆ.

೨. ಅತಿಭದ್ರಮ್ :—ನೆಲದಿಂದ ಮೇಲಿನವರೆಗೂ ವರ್ಗಾಕಾರದಲ್ಲಿದ್ದು ಅತಿ ಎತ್ತರವಾದ ಅಗಲವಾದ ಗುಹೆಗಳು ಮತ್ತು ನೀರಿನಿಂದ ಆವರಿಸಲ್ಪಟ್ಟಿರುತ್ತದೆ.

೩. ಚಂದ್ರ-ತಳದಲ್ಲಿ ದಂಡಾಕಾರದ, ಅತಿ ಅಗಲವಾದ, ತುದಿ ಚಂದ್ರನ ಆಕಾರದಲ್ಲಿದ್ದು ಬಹಳವಾದ ನೀರಿನಿಂದ ಕೂಡಿದ್ದು, ದೇವತೆಗಳಿಗೂ ಸಹ ಅಗಮ್ಯವಾಗಿರುತ್ತದೆ.

೪. ಅರ್ಧ ಚಂದ್ರ—ಅರ್ಧ ಚಂದ್ರಾಕಾರವಾಗಿದ್ದು, ಅತಿ ಹೆಚ್ಚು ಎತ್ತರವೂ ಅಲ್ಲದ ಅತಿ ಕಡಿಮೆಯೂ ಅಲ್ಲದ ಗುಹೆಗಳು, ಪಥಿಕಾಶ್ರಮಗಳು ಮತ್ತು ನೀರಿನಿಂದ ಕೂಡಿರುತ್ತದೆ.

೫. ನಾಭ—ತಳದಲ್ಲಿ ಸಂಕೀರ್ಣವಾಗಿದ್ದು, ತುದಿಯಲ್ಲಿ ಅಗಲವಾಗಿದ್ದು ಕ್ರಮವಾಗಿ ಹೆಚ್ಚುತ್ತಿದ್ದು ಕಮಲದ ಬೀಜದ ಸಿಂಬಿಯ ಆಕಾರದಲ್ಲಿರುತ್ತದೆ.

೬. ಸುನಾಭ—ತಳದಲ್ಲಿ ಅಗಲವಾಗಿದ್ದು ಮೇಲೆ ಹೋಗುತ್ತಾ ಹೋಗುತ್ತ ಚಿಕ್ಕದಾಗಿ ತುದಿಯಲ್ಲಿ ಕಿರಿದಾಗಿರುತ್ತದೆ.

೭. ರುಚಿರಮ್—ಸೋಪಾನ ಮಾರ್ಗದ ಮೆಟ್ಟಲುಗಳ ಉದ್ದ ಮತ್ತು ಅಗಲಗಳು ಕ್ರಮವಾಗಿ ಅಗಲವಾಗುತ್ತಿದ್ದು ಉಪ್ಪರಿಗೆಯಂತಿರುತ್ತದೆ ಮತ್ತು ಹೆಚ್ಚು ನೀರಿನಿಂದ ಕೂಡಿರುತ್ತದೆ.

೮. ವರ್ಧಮಾನಮ್—ಮೃದಂಗ ಅಥವಾ ಮದ್ದಲೆಯ ಆಕಾರದಲ್ಲಿ ಇರುತ್ತದೆ.

ಇದೇ ಗ್ರಂಥದಲ್ಲಿ ರಾಜರು ಕಟ್ಟದೆ ಬಿಟ್ಟುಬಿಡುವಂತಹ ಕೋಟೆಗಳ ಪಟ್ಟಿಯನ್ನೇ ಕೊಟ್ಟಿದ್ದಾರೆ.

ಸೂಚಿಮುಖಮ್—ಸೂಜಿಗಳ ಆಕಾರದಲ್ಲಿರುವತ್ತದೆ. ಕೇರು ಮೊರದ ಆಕಾರದಲ್ಲಿ, ಚಕ್ರದಂತೆ, ಮಧ್ಯದಲ್ಲಿ ತುಂಡಾದಂತೆ ಅಥವಾ ಸೀಳಿದಂತೆ ಇರುವ ಅತಿ ವಕ್ರವಾದ, ದಂಡಾಕಾರದ, ಮೇಲಿನಂತೆ ಇರುವ ಕೋಟೆ ವಾಸಿಸಲು ಯೋಗ್ಯವಲ್ಲ.

ಇದೇ ರೀತಿ 'ಸಾಮ್ರಾಜ್ಯ ಲಕ್ಷ್ಮಿ ಪೀಠಿಕಾ' ವನದುರ್ಗ, ಗಹ್ವರದುರ್ಗ ಇತ್ಯಾದಿಗಳನ್ನು ವರ್ಣಿಸಿದೆ.

ವನದುರ್ಗ ಅಂದರೆ ದಟ್ಟವಾದ ಮುಳ್ಳು ಮರಗಳು, ಪೊದೆಗಳು ಮತ್ತು ಬಳ್ಳಿಗಳಿಂದ ಅರಣ್ಯದಲ್ಲಿ ಕಟ್ಟಿರುವ ಕೋಟೆ. ರಹಸ್ಯಮಾರ್ಗಗಳು, ಅಗಮ್ಯ ಪ್ರದೇಶಗಳು, ಸೂರ್ಯನ ಕಿರಣಗಳೂ ಸಹ ಅಲ್ಲಿ ಪ್ರವೇಶಿಸಲಾರವು. ಸಿಂಹ, ಹುಲಿ ಮುಂತಾದ ವನ್ಯ ಪ್ರಾಣಿಗಳು ವಾಸಿಸುತ್ತಿದ್ದು ಭಯೋತ್ಪಾದಕವಾಗಿರುವಂತಹ ಕೋಟೆಗಳು. ಪುಲಿಂದ, ಪುಲ್ಕಸ, ಮ್ಲೇಚ್ಛ, ಶಬರ ಮುಂತಾದ ಪಂಗಡಗಳವರಿಂದ ಕಟ್ಟಲ್ಪಟ್ಟಿತು. ಸುತ್ತಲು ಅತಿ ಆಳವಾದ ಸಂಪೂರ್ಣ ನೀರಿನ ದೊಡ್ಡ ಸರೋವರಗಳು ಇರುತ್ತಿದ್ದವು.

ಗಹ್ವರದುರ್ಗ ನಗರವನ್ನು ರಕ್ಷಿಸುತ್ತದೆ. ಇದು ಸಮತಟ್ಟಲ್ಲದ; ಕೇವಲ ಕಲ್ಲುಬಂಡೆಗಳೇ ಇರುವ ಭೂಮಿಯ ಮೇಲೆ ಕಟ್ಟಿರುತ್ತವೆ. ಗವಿ ಮತ್ತು ಗುಹೆಗಳಂತಿರುತ್ತದೆ. ಸುತ್ತಲು ಎಲ್ಲ ಕಡೆ ದೊಡ್ಡ ಮತ್ತು ಚಿಕ್ಕ ಕಲ್ಲುಗಳಿರುತ್ತದೆ. ಹತ್ತಿರದಲ್ಲಿ ವಾಸ ಮಾಡುವವರಿಗೇ ಅದು ಅಗೋಚರವಾಗಿರುತ್ತದೆ. ಸಾಕಷ್ಟು ಮರ (ಸೌದೆ), ಹುಲ್ಲು ಮತ್ತು ನೀರು ಇರುತ್ತದೆ. ನೀರಿನ ಮಧ್ಯೆ ದ್ವೀಪದಂತೆ ಜಲದುರ್ಗ ಕಟ್ಟಲ್ಪಟ್ಟಿರುತ್ತದೆ. ಸುತ್ತಲು ಕೆಸರು ತುಂಬಿದ್ದು, ಜಾರುವ ಕೆಸರಿನ ಮಧ್ಯೆ ಮುಚ್ಚಿ ಹೋಗಿರುವ ಕೋಟೆ 'ಪಂಕದುರ್ಗ'. ಮಿಶ್ರದುರ್ಗ ಬೆಟ್ಟದ ಮೇಲೆ ಕಟ್ಟಲ್ಪಟ್ಟಿರುತ್ತದೆ. ಅಥವಾ ಕಾಡಿನಲ್ಲಿ ಮತ್ತು ಸುತ್ತಲು ಎಲ್ಲಾ ಕಡೆ ಜವಳು ಭೂಮಿ ಇದ್ದರೆ ಅದಕ್ಕೆ ಮಿಶ್ರದುರ್ಗ ಎಂದು ಕರೆಯುತ್ತಾರೆ. ನರದುರ್ಗ ಸುತ್ತಲೂ ವಿವಿಧ ಪ್ರಕಾರದ ಶಸ್ತ್ರಗಳಿಂದ ಸುಸಜ್ಜಿತರಾದ ಸೈನಿಕ ಯೋದ್ಧರಿಂದ ರಕ್ಷಿಸಲ್ಪಡುತ್ತದೆ. ಕೋಷ್ಠದುರ್ಗ ಎತ್ತರವಾದ ಪ್ರಾಕಾರಗಳನ್ನು ಹೊಂದಿರುತ್ತದೆ. ಸುತ್ತಲೂ ಸುರಂಗಗಳು ಅನೇಕ ರೀತಿಯ ಪದಾರ್ಥಗಳು, ಆಯುಧಗಳು, ಕಟ್ಟಿಗೆ

ಗಳು, ನೀರು ಮುಂತಾದವುಗಳು ಇರುತ್ತವೆ. ಆಕಾರ, ಪ್ರಾಕಾರಗಳ ಸಂಖ್ಯೆ ಮತ್ತು ಅವುಗಳ ಉದ್ದ-ಅಗಲಗಳಿಗನುಗುಣವಾಗಿ ವೇದಸ್ರ, ವರ್ತುಲ, ದೀರ್ಘ ವರ್ತುಲ, ಪಂಚಕೋಣ, ಷಟ್‌ಕೋಣ, ಅಷ್ಟಾಶ್ರ, ಪದ್ಮಸನ್ನಿಭ ಎಂದು ಕೋಷ್ಠ ದುರ್ಗದ ಎಂಟು ಪ್ರಕಾರದ ವಿವರಣೆಗಳೂ ಇವೆ.

ಮೇಲಿನ ಎಲ್ಲಾ ಗ್ರಂಥಗಳು ಕೋಟೆಯಲ್ಲಿ ಇಡಬಹುದಾದ ಪದಾರ್ಥಗಳ ಸೂಚಿಯನ್ನು ತಿಳಿಸುತ್ತವೆ. ಶತ್ರುಗಳು ಧಾಳಿಮಾಡಿದಾಗ ಅಂತಹ ಆಪತ್ತಿನ ಸಮಯದಲ್ಲಿ ಕೋಟೆಗಳು ತನ್ನಲ್ಲಿ ಎಲ್ಲವನ್ನು ಅಡಗಿಸಿಕೊಳ್ಳುವಂತಿರಬೇಕು. ಎಲ್ಲರೀತಿಯ ಶಸ್ತ್ರಗಳು, ಕಲ್ಲುಗಳು, ಮರಳು, ಪಾತ್ರೆಗಳು, ಔಷಧಗಳು, ಮೇವು, ಕಟ್ಟಿಗೆಗಳು, ಬೆಲ್ಲ, ತುಪ್ಪ, ಜೇನುತುಪ್ಪ, ಎಲ್ಲ ರೀತಿಯ ಎಣ್ಣೆಗಳನ್ನು ಸಂಗ್ರಹಿಸಿಡಬೇಕು. ರಾಜನು ಎಲ್ಲಾ ಧಾನ್ಯಗಳು, ಹಾಲು, ಬೆಣ್ಣೆ, ಮೊಸರು ಮುಂತಾದವುಗಳನ್ನು ಶೇಖರಿಸಿಟ್ಟಿರಬೇಕು. ಕೋಟೆಯ ಬಾಗಿಲು ಗುಪ್ತಸ್ಥಾನದಲ್ಲಿರಬೇಕು ಮತ್ತು ಅನೇಕ ವಿಧದ ಯಂತ್ರಗಳನ್ನು ಮತ್ತು ಆಯುಧಗಳನ್ನೂ ಸಹ ಕೋಟೆಯಲ್ಲಿ ಶೇಖರಿಸಿಟ್ಟಿರಬೇಕು.[17] 'ಸಾಮ್ರಾಜ್ಯಲಕ್ಷ್ಮಿ ಪೀಠಿಕಾ' ಗ್ರಂಥದಲ್ಲಿ ಹೇಳಿರುವ ಕೋಷ್ಠದುರ್ಗ ಸಹ ಒಂದು ಸಂಗ್ರಹ ಕೋಟೆ. ಅದು ಪ್ರತ್ಯೇಕವಾಗಿ ದಿನಿಸಿಗಳು, ಆಯುಧಗಳು, ಮೇವು, ಸಿಪಾಯಿಗಳು ಮುಂತಾದವುಗಳನ್ನು ಮುಂದಾಗಿ ಶೇಖರಿಸುವುದಕ್ಕಾಗಿಯೇ ಇರುವ ಕೋಟೆ. ಕೋಟೆಯ ಗೋಡೆಗಳು, ಬುರುಜುಗಳು, ಕಂದಕಗಳು, ಕಂಭಗಳು, ಸರೋವರಗಳು ಮುಂತಾದವುಗಳನ್ನು ರಚಿಸುವ ವಿಧಾನವನ್ನು ಕೌಟಿಲ್ಯ ಸೂಚಿಸುತ್ತಾನೆ.[18]

ಹನ್ನೆರಡು ಪ್ರಕಾರದ ಕೋಟೆಗಳು ಮತ್ತು ಅವುಗಳ ವಿನ್ಯಾಸ ಕೌಶಲಗಳ ವಿವರಣೆ ವಿಶ್ವಕರ್ಮ ವಾಸ್ತುಶಾಸ್ತ್ರಮ್ ಗ್ರಂಥದ ವಿಸ್ತಾರವಾದ ಅಧ್ಯಾಯದಲ್ಲಿ (ಅಧ್ಯಾಯ 10) ಅಡಗಿದೆ.

ಕೆಳದಿಯ ಮುಖ್ಯಸ್ಥರಾದ ಚೌಡಪ್ಪನಾಯಕ ಮತ್ತು ಶಿವಪ್ಪನಾಯಕರು ತಮ್ಮ ಆಧಿಪತ್ಯದ ಸಮಯದಲ್ಲಿ ಗಿರಿಕೋಟೆ, ನೆಲಕೋಟೆ, ಕರಾವಳಿ ತೀರದ ಕೋಟೆ ಮುಂತಾದ ಅನೇಕ ಕೋಟೆಗಳನ್ನು ಕಟ್ಟಿದ್ದರು. ರಾಜರು ಮತ್ತು ಮುಖ್ಯಸ್ಥರುಗಳು ಶತೃಗಳ ಕೋಟೆಗಳನ್ನು ವಶಪಡಿಸಿಕೊಂಡಾಗ ಕೋಟೆ-ಕೋಲಾಹಲ, ಸಪ್ತಾಂಗ ಹರಣ ಮುಂತಾದ ಬಿರುದು ಬಾವಲಿಗಳನ್ನು ಕೊಟ್ಟು ಅವರನ್ನು ಸನ್ಮಾನಿಸಲಾಗುತ್ತಿತ್ತು. ಸಂಸ್ಕೃತ ಗ್ರಂಥಗಳಲ್ಲಿ ಹೇಳಿರುವ ಕೋಟೆ ಮತ್ತು ದುರ್ಗಗಳ ವಿಷಯ ಬಹಳ ಕುತೂಹಲಕಾರಿಯಾಗಿದೆ. ಪಂಗಡದ ಮುಖ್ಯಸ್ಥರುಗಳು ತಮ್ಮನ್ನು ಮತ್ತು ತಮ್ಮ ಸಂಪತ್ತನ್ನೂ ಕಾಪಾಡಿಕೊಳ್ಳಲು ಐರಿಣ, ಮೃತ್ತಿಕಾಮಯ, ಮಹೀಮಯ, ದಾರುಮಯ ಮುಂತಾದ ಕೋಟೆಗಳನ್ನು ಕಟ್ಟಿದ್ದರು.

ಕರ್ನಾಟಕದ ನಕ್ಷೆಯಲ್ಲಿ ಅನೇಕ ಕೋಟೆಗಳನ್ನು ಗುರ್ತಿಸಿದ್ದಾರೆ. ಚರಿತ್ರೆ ಮತ್ತು ರಾಜಕೀಯ ವಿಜ್ಞಾನದ ವಿದ್ಯಾರ್ಥಿಗಳಿಗೆ ಈ ಪ್ರಾಚೀನ ಸ್ಮಾರಕಗಳನ್ನು ಪರಿಶೋಧಿಸಲು, ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ವರ್ಣಿಸಿರುವ ಕೋಟೆಗಳನ್ನು ಗುರುತಿಸಲು ಮತ್ತು ಅವುಗಳ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿಗಳನ್ನು ಸಂಗ್ರಹಿಸಲು ಅಭಿರುಚಿ ಹುಟ್ಟುತ್ತದೆ.

○

17 ಶಿವತತ್ವ ರತ್ನಾಕರ V ೩
18 ಅರ್ಥಶಾಸ್ತ್ರ II ೩

# ಹೊಸಗುಂದದ ನಾಡು - ಒಂದು ಅಧ್ಯಯನ

ಕೆ. ಜಗನ್ನಾಥ ಶಾಸ್ತ್ರಿ

ಹೊಸಗುಂದ, ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಒಂದು ಹಳ್ಳಿ. ಅಲ್ಲಿ ಈಗ ಒಂದು ಈಶ್ವರ ದೇವಾಲಯ ಮತ್ತು ಕಂಚಿ ಕಾಳಮ್ಮ ಎಂದು ಕರೆಯ ಲಾಗುವ ದೇವಾಲಯಗಳಿವೆ.

ಸಾಂತಾರ ವಂಶದ ಅರಸರು ಪೊಟ್ಟೆ ಪೊಂಬುರ್ಚ ವನ್ನು (ಈಗಿನ ಹುಂಚ) ರಾಜಧಾನಿಯನ್ನಾಗಿ ಮಾಡಿ ಕೊಂಡು ಕ್ರಿ.ಶ. ಏಳನೆಯ ಶತಮಾನದಿಂದ ೧೨ನೆಯ ಶತಮಾನದವರೆಗೆ ರಾಜ್ಯವಾಳಿದರು. ಹನ್ನೆರಡನೆಯ ಶತಮಾನದಲ್ಲಿ ಸಾಂತಾರ ದೊರೆ, ದೋರ ಸಮುದ್ರದ ಹೊಯ್ಸಳರಿಗೆ ಸೋತನು. ಆಗ ಅವರು ಎರಡು ಗುಂಪು ಗಳಾಗಿ ವಿಭಾಗವಾದರು. ಒಂದು ಶಾಖೆ ಕಳಸ ದಿಂದಲೂ ಮತ್ತೊಂದು ಶಾಖೆ ಹೊಸಗುಂದದಿಂದಲೂ ಆಳಿದರು.[1]

ಕಳಸದ ಸಾಂತಾರರು ಜೈನರು, ಹೊಸಗುಂದದ ಅರಸರು ಶೈವರು. ಕಳಸದಿಂದ ಆಳಿದ ಸಾಂತಾರರು, ತಾವು "ಶ್ರೀ ಪದ್ಮಾವತೀ ವರಪ್ರಸಾದಾನುಗ್ರಹರು" ಎಂದು ಕರೆದುಕೊಂಡಿದ್ದಾರೆ. ಹೊಸಗುಂದದ ಅರಸರು, ತಾವು ಪೊಟ್ಟೆ ಪೊಂಬುರ್ಚದ ಪುರವರಾಧೀಶ್ವರರೆಂದೂ, ಸಾಂತಳಿಗೆ ನಾಡಿನ ಒಡೆಯರೆಂದೂ ಕರೆದುಕೊಂಡು, ಭಿಲ್ಲೇಶ್ವರದೇವರ ದಿವ್ಯ ಪಾದಪದ್ಮಾರಾಧಕರೆಂದೂ ಕರೆದುಕೊಂಡಿದ್ದಾರೆ.

ನಾನು ಸಂಗ್ರಹಿಸಿರುವ "ಭಿಲ್ಲೇಶ್ವರ ಮಹಾತ್ಮೆ" ಎಂಬ ಪದ್ಯಗಳಲ್ಲಿ, ಈ ಪ್ರದೇಶವನ್ನು ಕನಕನಾಯಕ ಎಂಬುವನು ಆಳುತ್ತಿದ್ದನೆಂದೂ, ರಾಜಧಾನಿ ಕನಕಪುರ ಎಂದೂ ಹೇಳಲಾಗಿದೆ. ಈ ಕನಕನಾಯಕನು ಭಿಲ್ಲೇಶ್ವರ ದೇವರ ಭಕ್ತನೆಂದೂ ವರ್ಣಿಸಲಾಗಿದೆ. ಪದ್ಮಾವತಿ ಮಹಾತ್ಮೇ—ಎಂಬ ಪದ್ಯ ಕಾವ್ಯದಲ್ಲಿ ಜಿನದತ್ತ ರಾಯ ನಿಗೆ, ಒಬ್ಬ ಬೇಡರ ನಾಯಕನು ಈ ಪ್ರದೇಶವನ್ನು ಅರ್ಪಿಸಿದನೆಂದೂ, ಪದ್ಮಾವತಿ ದೇವಿಯ ಅಪ್ಪಣೆಯ ಮೇರೆಗೆ ಜಿನದತ್ತರಾಯನು ಕನಕಪುರದಲ್ಲಿ ಪದ್ಮಾವತಿ ದೇವಿಗಾಗಿ ಒಂದು ದೇವಾಲಯವನ್ನು ಕಟ್ಟಿದನೆಂದೂ, ಪೊಂಬುರ್ಚ ಎಂಬ ರಾಜಧಾನಿಯನ್ನು ಸ್ಥಾಪಿಸಿ, ರಾಜ್ಯ ವಾಳಿದನೆಂದೂ ಹೇಳಿದೆ.

ಈ ಎರಡು ಆಧಾರಗಳಿಂದ ಹೀಗೆ ಹೇಳಬಹುದು, ಜಿನದತ್ತ ರಾಯನಿಗೆ ಕನಕನಾಯಕ ರಾಜ್ಯವನ್ನು ವಹಿಸಿದನಂತರ, ತನ್ನ ಪರಿವಾರದೊಂದಿಗೆ ಅವನು, ಆ ಪ್ರದೇಶದಿಂದ ಹೊರಟು, ಹೊಸಗುಂದಕ್ಕೆ ಬಂದು ನೆಲೆಸಿ ದನು. ಕನಕಪುರ–ಎಂಬ ಹೆಸರು ಇಲ್ಲವಾಗಿ, ಆ ಸ್ಥಳ ದಲ್ಲಿ ಪೊಂಬುರ್ಚ ಎಂಬ ಪಟ್ಟಣ ಕಟ್ಟಲ್ಪಟ್ಟಿತು. ಭಿಲ್ಲೇಶ್ವರ ದೇವಾಲಯವಿದ್ದ ಪ್ರದೇಶದಲ್ಲಿ ಮತ್ತೊಂದು ಊರಿನ ರಚನೆಯಾಯಿತು. ಈ ಹೊಸ ಊರು, ಭಿಲ್ಲೇಶ್ವರ–ಎಂದೇ ಕರೆಯಲ್ಪಟ್ಟಿತು.

ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ.

1 ಎ.ಕ. VII, ಸೊರಬ ೧೯

ಶಾಸನಗಳನ್ನು ಅಧ್ಯಯನ ಮಾಡಿದಾಗ ಹೊಸಗುಂದದ ರಾಜಧಾನಿಯಿಂದ ಆಳಿದ ಕೆಲವು ಅರಸರ ವಿಚಾರಗಳು ತಿಳಿದು ಬರುತ್ತವೆ. ಅವುಗಳನ್ನು ಪರಿಚಯ ಮಾಡಿಕೊಡುವುದೇ ಈ ಪ್ರಬಂಧದ ಉದ್ದೇಶ.

೧. **ಬೊಮ್ಮರಸ :** ಹೊಸಗುಂದ ನಾಡಿನ ಇತಿಹಾಸವನ್ನು ಅಧ್ಯಯನ ಮಾಡಿದಾಗ ನಮಗೆ ಸಿಗುವ ಮೊದಲ ಅರಸ, ಬೊಮ್ಮರಸ. ಇವನನ್ನು ಶಾಸನಗಳಲ್ಲಿ "ಮಹಾಮಂಡಲೇಶ್ವರ"ನೆಂದೂ, "ಕೊಂಕಣಿಗರಾಯ ಬೇಂಟೆಕಾರ"ನೆಂದೂ, "ತುಳುರಾಯ ಸ್ಥಾಪನಾಚಾರ್ಯ"ನೆಂದೂ "ಮಾಂಡಳಿಕಗಣ ಗಂಡುಗಲಿ" ಎಂದೂ "ಕಾದಂಬರಾಯ ದಿಶಾಪಟ್ಟ"ನೆಂದೂ "ಸಿಂಧುಕುಲ ನಿರ್ಮೂಲ"ನೆಂದೂ "ಸಾಂತಳಿಗೆ ಸಾಸಿರ ನಾಡಿನ ಒಡೆಯ"ನೆಂದೂ ಹೇಳಿದೆ.

ಕ್ರಿ.ಶ. ೧೧೫೦ ಶಾಸನದಲ್ಲಿ ಬೊಮ್ಮರಸನ ತಂದೆ ಚೇರಭೂಪನೆಂದೂ, ತಾಯಿ ಹೊನ್ನಲದೇವಿ ಎಂದು ಹೇಳಿದೆ. ಇವನ ಹೆಂಡತಿ ಲಚ್ಚಿಯಬ್ಬೆ. ಇವರಿಗೆ ಇಬ್ಬರು ಗಂಡು ಮಕ್ಕಳು. ಒಬ್ಬನ ಹೆಸರು ಕಾಳರಸ ಮತ್ತೊಬ್ಬನ ಹೆಸರು ಬಾಳೆಯಮ್ಮವೆಗ್ಗಡೆ (ಇವನಿಗೆ ತಮ್ಮರಸನೆಂಬ ಹೆಸರೂ ಇತ್ತು). ಬೊಮ್ಮರಸನ ಮಗಳ ಹೆಸರು ಕೆಳೆಯಬ್ಬರಸಿ ಇವಳ ಮಗಳ ಹೆಸರು ಬೀಯಬ್ಬ-ರಸಿ. ಬೀಯಬ್ಬರಸಿಯ ಗಂಡ ಪಡವಳಗೊಂಗಣ. ಬೊಮ್ಮರಸ ಹೊಸಗುಂದದ ನಾಡಿನೊಂದಿಗೆ ಕುಂದ ನಾಡಿಗೂ, ಕೊಡ ನಾಡಿಗೂ ಅರಸನಾಗಿದ್ದನೆಂದು ಇದೇ ಶಾಸನ ಹೇಳುತ್ತದೆ. ಕ್ರಿ.ಶ. ೧೧೦೩ರ ಶಾಸನ ಬೊಮ್ಮರಸನ ಮಂತ್ರಿ, ಕೋಟಿ ನಾಯಕ ಎಂಬುದನ್ನು ತಿಳಿಸುತ್ತದೆ.[2] ಕೋಡೂರು ದುರ್ಗದ ಮಂಡಲೇಶ್ವರನಾದ ಅಣ್ಣಮದೇವ ಹೆಗ್ಗಡೆ ಬೊಮ್ಮರಸನ ಶತ್ರು. ಬೊಮ್ಮರಸನು ಇವನ ಮೇಲೆ ಯುದ್ಧ ಮಾಡಿ ಕೋಡೂರು ದುರ್ಗವನ್ನು ವಶಮಾಡಿಕೊಂಡನೆಂದು ಕ್ರಿ.ಶ. ೧೨೯೯ರ ಶಾಸನ ಹೇಳುತ್ತದೆ.[3] ಕೆಲವು ಕಾಲ ಬೊಮ್ಮರಸನು ಪೊಂಬುರ್ಚ ನಾಡಿಗೂ ಅರಸನಾಗಿದ್ದನೆಂದು ಕ್ರಿ.ಶ. ೧೨೪೮ರ ಶಾಸನ ಹೇಳುತ್ತದೆ. ಇದೇ ಸಮಯದಲ್ಲಿ ಕಲಿಸೆ ನಾಡನ್ನು ಬೀರದೇವರಸ ಎಂಬುವವನು ಆಳುತ್ತಿದ್ದನು. ಇವನು ಬೊಮ್ಮರಸನ ಮೇಲೆ ದಂಡೆತ್ತಿ ಬಂದು, ಪೊಂಬುರ್ಚವನ್ನು ಕೊಳ್ಳೆ ಹೊಡೆದನೆಂದು ಇದೇ ಶಾಸನ ವರ್ಣಿಸುತ್ತದೆ.[4] ಇದಾದ ಮೇಲೆ ಬೊಮ್ಮರಸ ಮತ್ತೆ ಹೊಸಗುಂದಕ್ಕೆ ಬಂದು ಆಡಳಿತವನ್ನು ಮುಂದುವರಿಸಿರಬಹುದು. ದೋರಸಮುದ್ರದ ಮುಮ್ಮಡಿ ನರಸಿಂಹ, ಬೊಮ್ಮರಸನ ಮತ್ತೊಬ್ಬ ಶತ್ರು. ಮುಮ್ಮಡಿ ನರಸಿಂಹನ ಕಡೆಯವರು ಹೊಸಗುಂದದ ಗಡಿ ಪ್ರದೇಶದವರನ್ನು ಹಿಂಸಿಸುತ್ತಿದ್ದುದನ್ನು ಕ್ರಿ.ಶ. ೧೨೬೩ರ ಶಾಸನ ವಿವರಿಸುತ್ತದೆ.[5] ಬೊಮ್ಮರಸ ಈ ಮುಮ್ಮಡಿ ನರಸಿಂಹನ ಮೇಲೆ ಯುದ್ಧ ಮಾಡಿ, ಅವನನ್ನು ಸೋಲಿಸಿದ ವಿಷಯವು ಕ್ರಿ.ಶ. ೧೨೬೭ರ ಶಾಸನದಿಂದ ತಿಳಿದು ಬರುತ್ತದೆ.[6] ಈಗಿನ ಲಿಂಗನಮಕ್ಕಿ ಪ್ರದೇಶದಲ್ಲಿ, ಒಂದು ಚಿಕ್ಕ ನಾಡು ಇತ್ತು. ಅದನ್ನು ಬಿದನೂರು ನಾಡು ಎನ್ನುತ್ತಿದ್ದರು. ಬಿದನೂರು ಅದರ ರಾಜಧಾನಿ. ಸೇಗಣಿ ಬೊಮ್ಮನಾಯಕ ಅರಸನಾಗಿದ್ದಾಗ, ಬೊಮ್ಮರಸ ಅವನ ಮೇಲೆ ದಂಡೆತ್ತಿ ಹೋಗಿ 'ಮಳಲಿ' ಎಂಬ ಗ್ರಾಮವನ್ನು ಸುಟ್ಟು ಹಾಕುತ್ತಾನೆ. ಸೇಗಣಿ ಬೊಮ್ಮನಾಯಕನಿಗೂ, ಬೊಮ್ಮರಸನಿಗೂ ಯುದ್ಧವಾಗಿ, ಸೇಗಣಿ ಬೊಮ್ಮನಾಯಕ ಸತ್ತು ಹೋಗುತ್ತಾನೆ. ಈ ವಿವರ ನಮಗೆ ಕ್ರಿ.ಶ. ೧೨೬೫ರ ಶಾಸನದಿಂದ ದೊರೆಯುತ್ತದೆ.[7] ಪಟಗುಪ್ಪೆಯ ಮಾಂಡಲಿಕನಾದ ಚೋಕರಸನು, ಬೊಮ್ಮರಸನಿಗೆ ಸೇರಿದ್ದ ಹನಿಯ ಎಂಬ ಕೋಟೆಯನ್ನು ಮುತ್ತುತ್ತಾನೆ. ಬೊಮ್ಮರಸನಿಗೂ, ಚೋಕರಸನಿಗೂ ಭಯಂಕರ ಯುದ್ಧ ನಡೆದು ಬೊಮ್ಮರಸ ಸತ್ತು ಹೋಗುತ್ತಾನೆ.

---

2 ಅದೇ : ಸಾಗರ ೬೭

3 ಅದೇ : ಸಾಗರ ೩೮

4 ಅದೇ : ಸಾಗರ ೧೨೭

5 ಅದೇ : ಸಾಗರ ೧೪೦

6 ಅದೇ : ಸಾಗರ ೧೩೪

7 ಅದೇ : ಸಾಗರ ೭೮

ಇದನ್ನು ಕ್ರಿ.ಶ. ೧೨೭೭ರ ಶಾಸನ ನಮಗೆ ತಿಳಿಸುತ್ತದೆ.[8]

**೨. ಬೀರರಸ :** ಬೀರರಸ ಬೊಮ್ಮರಸನ ಮೊದಲ ಮಗ. ಇವನಿಗೆ ಕಾಳರಸ ಎಂಬ ಹೆಸರೂ ಇತ್ತು. ಇವನು ಹೊಸಗುಂದದ ಅರಸನಾಗಿದ್ದನೆಂಬುದನ್ನು ಕ್ರಿ.ಶ. ೧೧೬೫ರ ಶಾಸನ ತಿಳಿಸುತ್ತದೆ.[9] ಕ್ರಿ.ಶ. ೧೨೨೮ರ ಶಾಸನ,[10] ಕ್ರಿ.ಶ. ೧೨೪೦ರ ಶಾಸನ.[11] ಕ್ರಿ.ಶ. ೧೨೩೮ರ ಶಾಸನ[12]—ಇವು ಬೊಮ್ಮರಸನನಂತರ ಬೀರರಸನು ಹೊಸಗುಂದದ ನಾಡನ್ನು ಆಳುತ್ತಿದ್ದನೆಂಬುದನ್ನು ವರ್ಣಿಸುತ್ತವೆ. ಬೀರರಸನು ಕೆಲವು ಕಾಲ ಹೊಂಬುಚ ನಾಡನ್ನು ಆಳುತ್ತಿದ್ದನೆಂದೂ, ಆಗ ಇವನ ತಮ್ಮನಾದ ತಮ್ಮರಸನು ಹೊಸಗುಂದದ ನಾಡನ್ನು ಆಳುತ್ತಿದ್ದನೆಂದೂ ಕ್ರಿ.ಶ. ೧೨೨೦ರ ಶಾಸನ ಹೇಳುತ್ತದೆ.[13] ಪ್ರಾಯಶಃ ಅಣ್ಣ ತಮ್ಮಂದಿರಲ್ಲಿ ವಿರಸ ಬಂದಿರಬಹುದು. ಇದರ ಪರಿಣಾಮವಾಗಿ, ಬೀರರಸ, ತಾನು ಹೊಂಬುಚ ನಾಡಿನ ಅಧಿಕಾರವನ್ನು ವಹಿಸಿಕೊಂಡ ಆರನೆಯ ವರ್ಷ, ಹೊಸಗುಂದದ ಮೇಲೆ ದಂಡೆತ್ತಿ ಹೋಗಿದ್ದನೆಂದು ಕ್ರಿ.ಶ. ೧೨೨೧ರ ಶಾಸನ ವರ್ಣಿಸುತ್ತದೆ.[14] ಬೀರರಸನು ತನ್ನ ಪಟ್ಟಾಭಿಷೇಕವಾದ ನಲವತ್ತೇಳನೆಯ ವರ್ಷದಲ್ಲಿ ಬಿದನೂರು ರಾಜ್ಯದ ಮೇಲೆ ದಂಡೆತ್ತಿ ಹೋದನೆಂದು, ಕ್ರಿ.ಶ. ೧೨೫೪ರ ಶಾಸನ ವಿವರಿಸುತ್ತದೆ.[15] ಇವನು ಮರಣ ಹೊಂದಿದ ವಿಷಯವನ್ನು ಕ್ರಿ.ಶ. ೧೨೫೭ರ ಶಾಸನ ತಿಳಿಸುತ್ತದೆ.[16]

**೩. ತಮ್ಮರಸ :** ತಮ್ಮರಸ ಬೊಮ್ಮರಸನ ಎರಡನೆಯ ಮಗ; ಬೀರರಸನ ತಮ್ಮ. ಇವನಿಗೆ ಬಾಳೆಯಮ್ಮ ಹೆಗ್ಗಡೆ ಎಂಬ ಹೆಸರೂ ಇತ್ತು. ಕ್ರಿ.ಶ. ೧೨೨೦ರ ಶಾಸನ, ತಮ್ಮರಸ ಹೊಸಗುಂದ ನಾಡಿನ ಅರಸನಾಗಿದ್ದನೆಂದು ಹೇಳುತ್ತದೆ.[17]

ಬೀರರಸನ ಕಾಲದಲ್ಲಿ, ಇವನ ಅಧೀನದಲ್ಲಿದ್ದ ಐವತ್ತು ನಾಡುಗಳು ಕೈತಪ್ಪಿ ಪಟುಗುಪ್ಪೆಯ ಬೆಲ್ಲರಸನ ವಶದಲ್ಲಿದ್ದುವು. ತಮ್ಮರಸನು ಅವನ್ನು ವಶಮಾಡಿಕೊಳ್ಳುವ ಉದ್ದೇಶದಿಂದ, ಪಟುಗುಪ್ಪೆಯನ್ನು ಮುತ್ತಿದನು. ಈ ಯುದ್ಧದಲ್ಲಿ ಬೆಲ್ಲರಸನ ಮಗ ಶೈಲರಸನು ಸಾಯುತ್ತಾನೆ. ಬೆಲ್ಲರಸನು ವೀರಾವೇಶದಿಂದ ಹೋರಾಡಿ, ತಮ್ಮರಸನನ್ನು ಹಿಂದಕ್ಕೆ ಅಟ್ಟುತ್ತಾನೆ. ಅಷ್ಟೇ ಅಲ್ಲ ರಾಜಧಾನಿಯಾದ ಹೊಸಗುಂದದವರೆಗೂ ಬಂದು, ಅದನ್ನು ಲೂಟಿ ಮಾಡಿ, ತಮ್ಮರಸನ ಮಕ್ಕಳನ್ನೆಲ್ಲಾ ಕೊಂದು ಹಾಕುತ್ತಾನೆ. ಪ್ರಾಯಶಃ ತಮ್ಮರಸನೂ ಈ ಯುದ್ಧದಲ್ಲಿ ಕೊಲ್ಲಲ್ಪಟ್ಟಿದ್ದಾನೆ. ಅನಂತರ ಮಂತ್ರಿಗಳು ಉಳಿದ ಪರಿವಾರದೊಂದಿಗೆ ಹೊಂಬುಚಕ್ಕೆ ಬಂದು ನೆಲೆಸುತ್ತಾರೆ. ಈ ವಿವರವನ್ನು ಕ್ರಿ.ಶ. ೧೨೭೭ರ ಶಾಸನ ತಿಳಿಸುತ್ತದೆ.[18]

**೪. ಕೋಟಿ ನಾಯಕ :** ಕೋಟಿ ನಾಯಕ ಬೊಮ್ಮರಸನ ಕಾಲದಿಂದಲೂ ಹೊಸಗುಂದದ ಮಂತ್ರಿ

---

8 ಅದೇ : ನಗರ ೨೦

9 ಅದೇ : ಸಾಗರ ೧೧೨

10 ಅದೇ : ಸಾಗರ ೧೪೬

11 ಅದೇ : ಸಾಗರ ೧೬೦

12 ಅದೇ : ನಗರ ೧೦

13 ಅದೇ : ನಗರ ೩೧

14 ಅದೇ : ನಗರ ೮

15 ಅದೇ : ಸಾಗರ ೧೫೦

16 ಅದೇ : ನಗರ ೬

17 ಅದೇ : ನಗರ ೩೧

18 ಅದೇ : ನಗರ ೨೦

ಯಾಗಿದ್ದನು. ಇವನು ಹೊಂಬಚ ನಾಡನ್ನು ಆಳಿದನೆಂದೂ, ಆಗ ಬಂಕ ನಾಯಕ ಎಂಬುವನ ಮೇಲೆ ಧಾಳಿ ಮಾಡಿದನೆಂದೂ, ಕ್ರಿ.ಶ. ೧೨೯೦ರ ಶಾಸನ ತಿಳಿಸುತ್ತದೆ.[19]

ಇವನ ನಂತರ ಹೊಸಗುಂದ ನಾಡಿನ ಬಗ್ಗೆ ಅದರ ಅರಸರ ಬಗ್ಗೆ ಏನೂ ತಿಳಿದು ಬರುವುದಿಲ್ಲ.

ಹೊಸಗುಂದ ನಾಡಿನ ಅರಸರ ಕಾಲದ ಸಾಹಿತ್ಯ, ಕಲೆ–ಮುಂತಾದುವುಗಳ ಬಗ್ಗೆ ಸಂಶೋಧನೆ ನಡೆಯಬೇಕಾಗಿದೆ. ○

---

13 ಅದೇ : ನಗರ ೪೪೧

# ಕಾಗಿನೆಲೆ – ಇನ್ನೊಂದು ಮುಖ

ಡಾ॥ಸರೋಜಿನಿ ಚವಲಾರ್

ಕಾಗಿನೆಲ್ಲಿ ಅಥವಾ ಕಾಗಿನೆಲೆಯೆಂದ ಕೂಡಲೇ ಕನ್ನಡಿಗರಿಗೆ ಮನೆ ಮಾತಾಗಿರುವ ಕನಕದಾಸರ ನೆನಪಾಗುತ್ತದೆ. ಇದು ಒಂದು ಮುಖ. ಕನಕದಾಸರಿಗೆ ಹಿರಿಯನೆನಿಸಿದ ಸಂಗಮನಾಥನೆಂಬ ಮಹಾಪುರುಷನೊಬ್ಬನು ಕಾಗಿನೆಲೆಯ ಹೆಸರನ್ನು ಕನಕದಾಸರಿಗಿಂತ ಮೊದಲು ಬೆಳಗಿಸಿದ್ದನು. ಇದು ಇನ್ನೊಂದು ಮುಖ.

ಕಾಗಿನೆಲೆಯಲ್ಲಿ ಒಂದು ಸಾವಿರ ವರುಷದ ಹಿಂದೆ ಕಾಳಶೆಟ್ಟಿ ಎಂಬ ಪಾಳೆಯಗಾರನು ಕಟ್ಟಿಸಿದ್ದ ಕಾಳಹತ್ತೇಶ್ವರ !, ಬೆಟ್ಟೇಶ್ವರ ದೇವಾಲಯಗಳು ಇದ್ದವೆಂದು ಊರಿನಲ್ಲಿ ಕೋಟೆ ಅರಮನೆಗಳಿದ್ದವೆಂದು ತಿಳಿಯುತ್ತದೆ. ಬುಕ್ಕರಾಯನ ಸೊಸೆ ದೇವಸ್ಥಾನಕ್ಕೆ ದತ್ತಿ ಕೊಟ್ಟಿದ್ದಳೆಂದು ಕಟ್ಟಿ ಶೇಷಾಚಾರ್ಯರು ಕವಿ ಕನಕದಾಸರನ್ನು ಕುರಿತು ಬರೆದ ಕನಕ ಮಹಿಮಾ ದರ್ಶನದಲ್ಲಿ ಹೇಳಿದ್ದಾರೆ.

ಕಾಗಿನೆಲೆ ಸಂಗಮನಾಥನಂತ ಭಕ್ತ ಶರಣನನ್ನು ಕನಕದಾಸರಂಥ ಶರಣರನ್ನು ಆಕರ್ಷಿಸಿರುತ್ತದೆ. ಕನಕದಾಸರಿಗೆ ಸಂಗಮನಾಥನು ಗುರು ಆಗಿರಬೇಕು. ಕದರ ಮಂಡಲಗಿಯ ಹನುಮಂತ ದೇವರ ಸೇವೆ ಮಾಡಿಕೊಂಡಿದ್ದ ಕನಕರು ಕಾಗಿನೆಲೆಗೆ ಬರಲು ಸಂಗಮನಾಥರೇ ಕಾರಣರಾಗಿರಬೇಕು. ಕದರ ಮಂಡಲಗಿಯಲ್ಲಿ ಎದುರು ಮುಖದ ಹನುಮಂತ ದೇವರ ಗುಡಿ ಇದ್ದು ಅದೇ ಗುಡಿಯಲ್ಲಿ ಪೌಳಿಯಲ್ಲಿ ಒಂದು ಕಡೆಗೆ ಕನಕದಾಸರಿದ್ದರೆಂದು ಈಗಲೂ ಜನರು ತೋರಿಸುತ್ತಾರೆ.

ಸಂಗಮನಾಥರು ಕೊಡೆಕಲ್ ಬಸವಣ್ಣನ ಮಗ. ಕೊಡೆಕಲ್ ಗ್ರಾಮವು ಕಲಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕಿಗೆ ಸೇರಿರುತ್ತದೆ. ಕೊಡೆಕಲ್ಲ ಬಸವಣ್ಣನವರ ಮೂವರು ಮಕ್ಕಳಲ್ಲಿ ವೀರಪ್ಪಯ್ಯ ಕೊಡೆಕಲ್‌ದ ಶೂನ್ಯಪೀಠಕ್ಕೆ ಅಧಿಪತಿಯಾಗಿದ್ದರು. ರಾಚಪ್ಪಯ್ಯ ಕಾವೇರಿ ನದಿಯ ದಂಡೆಯ ಮೇಲೆ ಮೈಸೂರ ಹತ್ತಿರದ ಊರಲ್ಲಿ ಐಕ್ಯರಾಗಿದ್ದಾರೆ. ಸಂಗಮನಾಥರು (ಸಂಗನ ಬಸವ ಸಂಗಮೇಶ್ವರ) ಹಾವೇರಿಯ ಹತ್ತಿರದ ಕಾಗಿನೆಲೆಗೆ ಬಂದು ವಾಸವಾಗಿದ್ದರು. ಕಾಗಿನೆಲೆಯಲ್ಲಿ ಸಂಗಮನಾಥ ಮುತ್ತ್ಯಾ(ಅಜ್ಜ) ಎಂದುಕರೆಯುತ್ತಾರೆ.

ಕೊಡೆಕಲ್‌ದಿಂದ ಎಲ್ಲ ಜಾತಿಯ ಭಕ್ತರು ಶಿವರಾತ್ರಿಯಲ್ಲಿ ನಡೆಯುವ ಸಂಗಮನಾಥನ ಜಾತ್ರೆಗೆ ಬರುತ್ತಾರೆ. ಸಿಗ್ಲಿ ಯಲವಗಿಯ ಕುರುಬರು ವಿಶೇಷವಾಗಿ ಈ ಶರಣರಿಗೆ ನಡೆದುಕೊಳ್ಳುತ್ತಾರೆ. ಕೊಡೆಕಲ್‌ದಲ್ಲಿ ಬಸವಣ್ಣನ ಗದ್ದುಗೆ ಇದ್ದಂತೆ ಕಾಗಿನೆಲೆಯಲ್ಲಿ ಸಂಗಮನಾಥರ ಗದ್ದುಗೆ ಇದೆ. ಕೊಡೆಕಲ್‌ದಲ್ಲಿ ವರ್ಷಕ್ಕೆರಡು ಸಲ ಜಾತ್ರೆಯಾಗುತ್ತದೆ–ದಮನದ ಹುಣ್ಣಿಮೆ, ಗೌರಿ ಹುಣ್ಣಿಮೆ.

**ಜಾತ್ರೆ** : ಶಿವರಾತ್ರಿಗೆ ಕಾಗಿನೆಲೆಯಲ್ಲಿ ಸಂಗಮನಾಥರ ಜಾತ್ರೆಯಾಗುತ್ತದೆ. ತೇರು ಎಳೆಯುವ ಜಾತ್ರೆಯಲ್ಲಿ ಅಮಾವಾಸ್ಯೆಯ ದಿನ ಬೆಳಿಗ್ಗೆ ರುದ್ರಾಭಿಷೇಕ ಮಾಡಿ ಗದ್ದಿಗೆಗೆ ಗಂಧದ ಲೇಪನ ಮಾಡುತ್ತಾರೆ. ಇದಕ್ಕೆ ಗಂಧದ ಹೊದಿಕೆ ಹಾಕುವದು ಎನ್ನುತ್ತಾರೆ. ನಂತರ ಲೋಬಾನ ಹಾಕಿ ಬಾಗಿಲು ಮುಚ್ಚಿ ಹೊರಗೆ ಬಂದು ಬಿಡುತ್ತಾರೆ. ೨ ತಾಸು ಬಿಟ್ಟು ಗದ್ದಿಗೆಯೊಳಗೆ

ಹೋಗಿ ಗಂಧ ಆರಿದ ಮೇಲೆ ಗಲ್ಲೀಪ (ಹೊಸ ಬಟ್ಟೆ) ತೊಡಿಸುತ್ತಾರೆ. ನಂತರ ನಿತ್ಯದಂತೆ ಗದ್ದಿಗೆಯನ್ನು ಪೂಜಿಸಿ ಅಲಂಕರಿಸುತ್ತಾರೆ. ಕೊನೆಗೆ ಮಂಗಳಾರತಿ ಮಾಡಿ ಪ್ರಸಾದ (ಹಣ್ಣು–ಕಾಯಿ) ಹಂಚುತ್ತಾರೆ.

ಅಂದುರಾತ್ರಿ ವಹಿವಾಟುದಾರರ ಮನೆಯಿಂದ ಉತ್ಸವದ ಸಾಮಾನುಗಳಾದ ಕಳಸ, ಬೆಳ್ಳಿಪಾದುಕೆ, ಚೌರಿ, ಪಲ್ಲಕ್ಕಿಯ ಅಲಂಕಾರದ ಸಾಮಾನುಗಳಾದ ಎರಡು ಬೆಳ್ಳಿಯ ಸಿಂಹದ ಮುಖ (ಇವುಗಳನ್ನು ಪಲ್ಲಕ್ಕಿಯ ಹಿಂದೊಂದು ಮುಂದೊಂದುಹಾಕುತ್ತಾರೆ.) ಹೊಸಬಟ್ಟೆ–ಇವುಗಳನ್ನು ಊದಿಸುತ್ತ ಬಾರಿಸುತ್ತ ಗದ್ದಿಗೆಗೆ ತರುತ್ತಾರೆ. ಇವರ ಮನೆ ಕನಕದಾಸರ ಗುಡಿಯ ಹತ್ತಿರವೇ ಇದೆ. ಗದ್ದುಗೆ ಊರ ಹೊರಗೆ ಇದೆ. ಹಾಗೆ ತಂದ ಸಾಮಾನುಗಳನ್ನು ಒಯ್ದು ಪಲ್ಲಕ್ಕಿಯನ್ನು ಅಲಂಕರಿಸುತ್ತಾರೆ. ಪಲ್ಲಕ್ಕಿಯನ್ನು ಗುಡಿಯ ಕಟ್ಟೆಯ ಮೇಲೆ ಇಟ್ಟು ರಾತ್ರಿ ಇಡೀ ಭಜನೆ ಮಾಡುತ್ತಾರೆ. ಮರುದಿನ ಮುಂಜಾನೆ ಪಲ್ಲಕ್ಕಿಯನ್ನು ಗುಡಿಯ ಸುತ್ತ ಎರಡು ಸಲ ಸುತ್ತಿಸಿ, ಊರಲ್ಲೆಲ್ಲ ಮೆರವಣಿಗೆ ಬರುತ್ತಾರೆ. ಮತ್ತೆ ಅದೇ ಸ್ಥಳಕ್ಕೆ ಹಿಂದಿರುಗಿ ಹೋಗಿ ಗುಡಿಯ ಸುತ್ತ ಒಂದು ಪ್ರದಕ್ಷಿಣೆ ಹಾಕಿ ಗುಡಿಯನ್ನು ಪ್ರವೇಶಿಸುತ್ತಾರೆ. ಪಲ್ಲಕ್ಕಿಯ ಮೇಲೆ ತುಂಬ ಹೊದಿಸಿ ಮೇಲೆ ಮಾಲೆಯನ್ನು ಹಾಕಿ ಸಿಂಗರಿಸಿರುತ್ತಾರೆ.

ಪಲ್ಲಕ್ಕಿಯ ಮೆರವಣಿಗೆಯಾಗುವಾಗ ಅದರ ಹಿಂದೆ ಕೊಡೆಕಲ್‌ದಿಂದ ಬಂದವರು ಒಂದು ಪುಸ್ತಕ ಹಿಡಿದು ಓದುತ್ತಾರೆ. ಬಯಲು, ಶೂನ್ಯ ವಿಷಯ ಕುರಿತ ವಚನಗಳು ಇದ್ದಂತೆ ಕೇಳಿಸುತ್ತದೆ. ಅವು ಸಂಗಮನಾಥನೆ ಬರೆದ ವಚನಗಳಾಗಿರಬಹುದು. ಆ ವಚನಗಳ ಕೊನೆಗೆ "ಬಸವ ಕೇಳೆಂದ...." ಎಂಬ ವಾಕ್ಯ ಬರುತ್ತದೆ. ಇದು ಅಲ್ಲಮನು ಬಸವನಿಗೆ ಶೂನ್ಯತತ್ವವನ್ನು ಬೋಧಿಸಿದಂತೆ ಕಾಣುತ್ತದೆ.

ಕಾಗಿನೆಲೆಯ ಜಾತ್ರೆ ಮುಗಿಸಿದ ಭಕ್ತರು ಬಳ್ಳೀಗಾವಿ, ಸಮೀಪದ ಪ್ರಭುಲಿಂಗೇಶ್ವರ ದೇವಸ್ಥಾನಕ್ಕೆ ಹೋಗುತ್ತಾರೆ. ಅಲ್ಲಿ ತ್ರಿಪುರಾಂತಕ ಕೆರೆಯ ಹತ್ತಿರ ಮೂರು ಗುಡಿಗಳಿವೆ. ಅದಾದಮೇಲೆ ಅನಿಮಿಷಯ್ಯನ ದೇವಸ್ಥಾನ, ಅಕ್ಕನ ಜನ್ಮಸ್ಥಳವಾದ ಉಡುತಡಿಗೆ ಹೋಗುತ್ತಾರೆ.

**ಹರಕೆ :** ಕೊಡೆಕಲ್‌ದಿಂದ ರಾಜ ಪುರೋಹಿತರು ಬಂದು ಗೌಡರ ಮನೆತನದವರಿಗೆ ಧೋತರ ಶೀರಿ ಕೊಡುತ್ತಿದ್ದ ಸಂಪ್ರದಾಯವಿತ್ತು. (೩೦ ವರ್ಷದ ಹಿಂದಿನವರೆಗೆ ಈ ಪದ್ಧತಿ ನಡೆದಿತ್ತು). ರಾಜ ಪುರೋಹಿತರ ಪ್ರಕಾರ ಇಲ್ಲಿಯ ಸಂಗಮನಾಥನೇ ಬಸವಣ್ಣ. ಈ ಬಸವಣ್ಣನು ರಾಜನ ಅಧಿಕಾರಿಯಿದ್ದ ಕಾರಣ ಛತ್ರ, ಚಾಮರ, ಕುದುರೆ ಕಾಣಿಕೆ ಕೊಡುವ ಪದ್ಧತಿ ಬಂದಿದೆಯೆನ್ನುತ್ತಾರೆ.

ಜನರು ಈಗಲೂ ಸಂಗಮನಾಥರಿಗೆ ಬೇಡಿಕೊಳ್ಳುತ್ತಾರೆ. ಅವನ ಹೆಸರಿಡುತ್ತಾರೆ. ಕೊಡೆಕಲ್, ಸಿಗ್ಲಿ, ಯಲವಗಿಯ ಜನರು, ಹೆಚ್ಚಾಗಿ ಕುರುಬರು ಸಂಗಮನಾಥರ ಹೆಸರಿಗೆ ಹರಕೆ ಹೊತ್ತರೆ, ಮುಟ್ಟಿಸಲು ಅವರು ಕಾಗಿನೆಲೆಗೆ ಬಂದೇ ತೀರಬೇಕೆಂದು ಗಟ್ಟಿಯಾಗಿ ನಂಬಿದ್ದಾರೆ.

ಕಾಗಿನೆಲೆಯ ಊರ ಹೊರಗೆ ಜೋಡ ಬಸವಣ್ಣನ ಗುಡಿಯೆದುರು ಒಂದು ಸಮಾಧಿ, ಅದರ ಮೇಲೆ ಲಿಂಗ, ಲಿಂಗದೆದುರು ಬಸವಣ್ಣನ ಗುಡಿ ಇವು ನಿಶ್ಶಬ್ದವಾಗಿ ನಿಂತಿವೆ. ದೂರದಲ್ಲಿ ಹಾಳು ಬಿದ್ದ ದೇವಾಲಯದ ಅಳಿದುಳಿದ ಅವಶೇಷಗಳು ಹರಡಿ ಬಿದ್ದಿವೆ.

ನಾಲ್ಕಾರು ವರ್ಷದ ಹಿಂದೆ ಕೆರೆ ಬತ್ತಿದಾಗ ಕೋಡಿಯ ದಬಾಸ ಕಲ್ಲಿನ ಮೇಲೆ ಶಾಸನಗಳಿವೆ ನೋಡಿರೆಂದು ಜನ ಹೇಳಿದ್ದರು. ಆ ಶಾಸನಗಳನ್ನು ಓದಿದ ಮೇಲೆ ಈ ವಿಷಯದ ಮೇಲೆ ಹೆಚ್ಚಿನ ಬೆಳಕು ಬೀಳಬಹುದು. ○

# ಗೇರುಸೊಪ್ಪೆ-ಒಂದು ಅಧ್ಯಯನ

ಶ್ರೀ ಎಂ.ಎಸ್. ಹೆಗಡೆ ಕಣಿ

ಐತಿಹಾಸಿಕ ದೃಷ್ಟಿಯಿಂದ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನ 'ಗೇರುಸೊಪ್ಪೆ'ಯ ಕುರಿತು ಸಾಕಷ್ಟು ಅಧ್ಯಯನ ನಡೆದಿದ್ದರೂ ಕಲಾ-ವಾಸ್ತುಶಿಲ್ಪದ ದೃಷ್ಟಿಯಿಂದ ಇನ್ನೂ ಸಂಶೋಧನೆಗೆ ಯೋಗ್ಯವಾದ ಹಲವಾರು ವಿಷಯಗಳಿವೆ. ಗೇರುಸೊಪ್ಪೆಯನ್ನು ಶಾಸನಗಳಲ್ಲಿ ನಗಿರಾರಾಜ್ಯ, ನಗರಿರಾಜ್ಯ, ಕ್ಷೇಮಪುರ ಮತ್ತು ಭಲ್ಲಿತಕೀಪುರ ಎಂದೆಲ್ಲ ಹೆಸರಿಸಲಾಗಿದೆ.[1] ಹದಿನಾರನೇ ಶತಮಾನದಲ್ಲ ಈ ಪ್ರದೇಶಕ್ಕೆ ಬೆಟ್ಟಿಕೊಟ್ಟ ಇಟಲಿಯ ಪ್ರವಾಸಿ 'ಪಿಯತ್ರೊ ಡೆಲ್ಲಾ ವಲ್ಲೆ' ಎಂಬವನು ಗೇರುಸೊಪ್ಪೆಯನ್ನು 'ಗೆರ್ಸೊಪ್ಪೆ' ಎಂದು ಕರೆದಿದ್ದಾನೆ.[2] ಈತನ ಬರಹದಿಂದ ನಮಗೆ ಈ ಪ್ರದೇಶದ 'ಕಲೆ-ವಾಸ್ತುಶಿಲ್ಪ'ದ ಬಗೆಗೂ ಅಲ್ಪಮಟ್ಟಿಗೆ ವಿಷಯಗಳು ಲಭ್ಯವಾಗುತ್ತವೆ. ದೇವಾಲಯಗಳನ್ನು ಕಲ್ಲು ಹಾಗೂ ಮಣ್ಣಿನಿಂದ ನಿರ್ಮಿಸುತ್ತಿದ್ದರೆಂದೂ ಮತ್ತು ಆಕಳ ಸಗಣಿಯಿಂದ ಅವುಗಳನ್ನು ಶುಭ್ರಗೊಳಿಸುತ್ತಿದ್ದರೆಂದೂ ತಿಳಿದುಬರುತ್ತದೆ. ಈತ ಗೇರುಸೊಪ್ಪೆಗೆ ಬೆಟ್ಟಿಕೊಟ್ಟ ವೇಳೆಗಾಗಲೇ ಗೇರುಸೊಪ್ಪೆಯ ಸೌಂದರ್ಯ ಕಾಡುಪಾಲಾಗಿತ್ತು.

**ಗೇರುಸೊಪ್ಪೆಯ ಗೋವರ್ದನಗಿರಿ ಕೋಟೆ** : ಗೇರುಸೊಪ್ಪೆಯಲ್ಲಿನ ಉತ್ತರ ಪ್ರದೇಶದಲ್ಲಿರುವ ಕೋಟೆಯ ಬಗ್ಗೆ ಡೆಲ್ಲಾವಲ್ಲೆ ಬರೆದಿದ್ದಾನೆ. ಈ ವೇಳೆಗೆ ಈ ಕೋಟೆ ಕೆಳದಿಯ ವೆಂಕಟಪ್ಪನಾಯಕನ ಅಧೀನದಲ್ಲಿತ್ತೆಂದು ಆತನ ವಿವರಣೆಯಿಂದ ತಿಳಿದುಬರುತ್ತದೆ. 'ಗೋವರ್ಧನಗಿರಿ' ಎಂಬ ಪ್ರದೇಶವನ್ನು ಗೇರುಸೊಪ್ಪೆಯ ರಾಣಿ ಚೆನ್ನಭೈರಾದೇವಿಯಿಂದ ವೆಂಕಟಪ್ಪನಾಯಕನು ಕಸಿದುಕೊಂಡ ಬಗ್ಗೆ ಲಿಂಗಣ್ಣಕವಿ ಬರೆದ 'ಕೆಳದಿ ನೃಪ ವಿಜಯಂ' ಕೃತಿಯಲ್ಲಿ ಉಲ್ಲೇಖಿಸಲಾಗಿದೆ.[3] ಗೋವರ್ಧನ ಗಿರಿ ಪ್ರದೇಶದಲ್ಲಿ ಬರುವ ಈ ಕೋಟೆಯನ್ನು ವೆಂಕಟಪ್ಪ ನಾಯಕನು ಈ ಪ್ರದೇಶವನ್ನು ಕಸಿದುಕೊಳ್ಳುವದಕ್ಕಿಂತ ಮುಂಚೆಯೇ ನಿರ್ಮಿಸಲಾಗಿತ್ತೋ ಅಥವಾ ನಂತರದಲ್ಲಿ ನಿರ್ಮಿಸಲಾಯಿತೋ ಎನ್ನುವದನ್ನು ಸಂಶೋಧಿಸಬೇಕಾಗಿದೆ.

ಗೇರುಸೊಪ್ಪೆಯಲ್ಲಿ ಈ ಕೋಟೆಯಿರುವ ಪ್ರದೇಶವನ್ನು ಸುತ್ತಾಡಿದರೆ ಇದು ಸುಮಾರು ೩ ಕಿ.ಮೀ.ಗಳಗಿಂತಲೂ ವಿಸ್ತಾರವಾಗಿಬಹುದೇನೊ ಎನಿಸುತ್ತದೆ. ಸುಭದ್ರವಾಗಿ ಬಿಳಿಪು ಮಿಶ್ರಿತ ಕಪ್ಪು ಶಿಲೆಯಿಂದ ಹೊರ ಆರವಣವನ್ನು ಕಟ್ಟಲಾಗಿದೆ. ಹಲವಾರು ಸುತ್ತುಗಳಿಂದ ಕೂಡಿದ ಈ ಕೋಟೆಯಲ್ಲಿ ಸಣ್ಣ ಸಣ್ಣ ಶಿಲಾಚಪ್ಪಡಿಗಳನ್ನು ಮಾತ್ರವಲ್ಲದೇ ಮಣ್ಣನ್ನು ಕೂಡ ಬಳಸಲಾಗಿದೆ. ಪ್ರವೇಶದ್ವಾರದ ಲಲಾಟಬಿಂಬದಲ್ಲಿ ಸುಖಲಲಿತಾಸನದಲ್ಲಿರುವ ಚತುರ್ಭುಜ ಗಣೇಶನನ್ನು ಕೆತ್ತಲಾಗಿದೆ.

**ಕೋಟೆಗಿಂತ ತಗ್ಗುಪ್ರದೇಶದಲ್ಲಿರುವ ಕೆರೆ** : ಕೋಟೆಯ ಸ್ವಲ್ಪ ಕೆಳಗೆ ತಗ್ಗಾದ ಪ್ರದೇಶದಲ್ಲಿ ವಿಸ್ತಾರ

1 ಸೌ.ಇಂ.ಇನ್ಸ್. ಸಂ. VII ೨೦೨, ೨೦೭

2 ದಿ ಟ್ರೆವಲ್ಸ್ ಆಫ್ ಪಿಯತ್ರೋಡೆಲ್ಲಾವಲ್ಲೆ ಇನ್ ಇಂಡಿಯಾ (ಲಂಡನ್) ೧೮೯೨

3 'ಕೆಳದಿ ನೃಪ ವಿಜಯಂ' : ಲಿಂಗಣ್ಣಕವಿ

ವಾದ ಕೆರೆಯೊಂದಿದೆ. ಇದರ ಮೂಲಸ್ವರೂಪ ನಿರ್ದಿಷ್ಟ ವಾಗಿ ಗಮನಕ್ಕೆ ಬರದಿದ್ದರೂ ನೀರಿನ ದೃಷ್ಟಿಯಿಂದ ಇದು ಆಗ ಪ್ರಮುಖ ಪಾತ್ರ ವಹಿಸಿರಬೇಕು. ಕೋಟೆಗೆ ಸಮೀಪಿಸಿಯೇ ಈ ಕೆರೆ ಇರುವದರಿಂದ ಇದು ಅತ್ಯಂತ ಪ್ರಸಿದ್ಧಿ ಪಡೆದ ಕೆರೆಯಾಗಿದ್ದಿರಬಹುದು.

**ಹನುಮಂತನ ಗುಡಿಯ ಕುರುಹು** : ಕೆರೆಯ ಮೇಲ್ಗಡೆ ಕೋಟೆಗೆ ಹೋಗುವ ಮಾರ್ಗದಲ್ಲಿಯೇ ಹುಗಿದುಹೋದ ಹನುಮಂತನ ಗುಡಿಯೊಂದಿದೆ. ಹನುಮಂತನ ವಿಗ್ರಹ ಮೇಲ್ಗಡೆಯೇ ಪ್ರತ್ಯೇಕವಾಗಿದೆ. ಈಗ ಅಲ್ಲಿ ವಾಸಿಸುವ ಜನ ವಿಗ್ರಹವನ್ನು ಮೇಲ್ಗಡೆ ತೆಗೆದಿರಿಸಿದ್ದಾರೆ. ವಿಗ್ರಹ ಚೆನ್ನಾಗಿದ್ದು ವಿಜಯನಗರ ಶೈಲಿಯಲ್ಲಿದೆ. ದೇವಸ್ಥಾನಕ್ಕೆ ಬಳಸಿದ ದ್ವಾರಬಂಧ ಗಳೆರಡು ಮುಕ್ಕಾಲು ಪಾಲು ಕುಸಿದಿದೆ. ಇದೇ ದೇವ ಸ್ಥಾನಕ್ಕೆ ಸಂಬಂಧಿಸಿದ ಶಿಲಾಶಾಸನವೊಂದು ಮುಕ್ಕಾಲು ಪಾಲು ಹುಗಿದಿದೆ. ಈ ಶಾಸನದ ತಲೆಯಲ್ಲಿ ಹನುಮಂತನ ಕೆತ್ತನೆಯಿದೆ. ಬಲ ಹಾಗೂ ಎಡಕ್ಕೆ ಚಕ್ರ-ಶಂಖದ ಕೆತ್ತನೆಯಿದೆ. ಶಾಸನದ ಎರಡು ಸಾಲುಗಳು ಮಾತ್ರ ಕಂಡುಬರುತ್ತವೆ. ಮಧ್ಯಯುಗೀನ ಹಳಗನ್ನಡ ಲಿಪಿ ಯಲ್ಲಿರುವ ಈ ಶಾಸನ ಮಹತ್ವದ್ದಾಗಿರಬೇಕು. ಕಾರಣ ಶಾಸನವನ್ನೊಳಗೊಂಡ ದೇವಸ್ಥಾನಗಳು ಐತಿಹಾಸಿಕ ವಾಗಿ ಪ್ರಮುಖ ಪಾತ್ರವಹಿಸುವ ಸಂಗತಿ ಸಂಶೋಧನೆ ಗಳಿಂದ ತಿಳಿದುಬರುವ ವಿಚಾರ. ಈ ಪ್ರದೇಶದಲ್ಲಿ ಭೂ- ಉತ್ಖನನ ನಡೆದರೆ ಹುಗಿದ ಈ ದೇವಸ್ಥಾನದ ವಾಸ್ತು ಶೈಲಿಯ ಚಿತ್ರ ದೊರೆಯಬಹುದು.

ಈ ಮೇಲಿನ ಹನುಮಂತನ ವಿಗ್ರಹದ ಲಕ್ಷಣ ಗಳನ್ನೇ ಒಳಗೊಂಡ ಇನ್ನೊಂದು ವಿಗ್ರಹ ಗೇರಸೊಪ್ಪೆಯ ಕೆಳಪ್ರದೇಶದಲ್ಲಿ ಈಗ ಆಧುನಿಕ ಕಟ್ಟಡವೊಂದರಲ್ಲಿ ಪೂಜೆಗೊಳ್ಳುತ್ತಿದೆ[4] ಈ ದೃಷ್ಟಿಯಿಂದ ಐತಿಹಾಸಿಕ ಗೇರುಸೊಪ್ಪೆ ಹನುಮಂತನ ಆರಾಧನೆಯಲ್ಲಿ ಪ್ರಮುಖ ಪಾತ್ರ ಪಡೆದಿತ್ತೆನ್ನಬಹುದು. ಪ್ರವಾಸಿ ಪಿಯತ್ರೋ ಡೆಲ್ಲಾವಲ್ಲೆ ಕೂಡ ಆತ ಈ ಪ್ರದೇಶಗಳಿಗೆ ಬೇಟಿ ಕೊಟ್ಟ ವೇಳೆಯಲ್ಲಿ ಹನುಮಪ್ಪನ ಆರಾಧನೆಯನ್ನು ಕಣ್ಣಾರೆ ಕಂಡದನ್ನು ಬರೆದಿದ್ದಾನೆ. ಆದ್ದರಿಂದ ಆತ ಬರೆದ ವಿಷಯ ಕೋಟೆಯ ಸಮೀಪದ ಹನುಮಪ್ಪನ ಕುರಿತೇ ಆಗಿರಬೇಕು. ಇಲ್ಲಿಯ ಶಾಸನದ ಪಡಿಯಚ್ಚು ತೆಗೆದು, ಕೋಟೆಯ ಬಗೆಗೆ ವಿಷಯವೇನಾದರೂ ದೊರೆಯುವದೋ ಎಂಬುದನ್ನು ಪರಿಶೀಲಿಸಬೇಕಾಗಿದೆ.

**ಕಾಳಿಗುಡಿ** : ಈ ಮೇಲೆ ವಿವರಿಸಿದ ಹನು ಮಂತನ ಗುಡಿಗೆ ಸಮೀಪಿಸಿಯೇ ಸಣ್ಣ ಸಣ್ಣ ಶಿಲಾ ಚಪ್ಪಡಿಗಳಿಂದ ನಿರ್ಮಿಸಿದ ಕಾಳಿಗುಡಿಯಿದೆ. ಈ ಗುಡಿ ಯಲ್ಲಿ ಕಾಳಿಯ ತಲೆಯ ಭಾಗವೊಂದನ್ನು ಕೆತ್ತಿ ಇರಿಸಿ ದ್ದಾರೆ. ಇದೇ ರೀತಿಯ ಇನ್ನೆರಡು ರುಂಡಗಳು ಗೇರು ಸೊಪ್ಪೆಯ ಕೆಳಪ್ರದೇಶದಲ್ಲಿವೆ. ಈ ಪ್ರದೇಶವನ್ನು 'ಮಾರಿ ಗುಡಿ' ಎಂದೇ ಕರಿಯಲಾಗಿದೆ. ಈ ಸ್ಥಳದಲ್ಲಿ ಕೂಡ ಹನುಮಂತನ ಗುಡಿಯಿತ್ತೆಂದೂ, ಇಲ್ಲಿಯ ವಿಗ್ರಹವನ್ನೇ ಆಧುನಿಕ ಕಟ್ಟಡದಲ್ಲಿ ಇರಿಸಲಾಗಿದೆಯೆಂದೂ ಜನ ಹೇಳುತ್ತಾರೆ. ಆದ್ದರಿಂದ ಕಾಳಿ ಆರಾಧನೆ ಹಾಗೂ ಹನುಮಂತನ ಆರಾಧನೆ ಸಮೀಪದಲ್ಲಿಯೇ ನಡೆಯು ತ್ತಿದ್ದವೆಂಬುದಕ್ಕೆ ಎರಡು ಸಾಕ್ಷ್ಯಗಳು ದೊರೆತಂತಾ ಯಿತು.

**ನಗರ ಬಸ್ತಿಕೇರಿ** : ಗೇರುಸೊಪ್ಪೆಯಲ್ಲಿ 'ನಗರ ಬಸ್ತಿಕೇರಿ' ಎಂಬ ವಿಸ್ತಾರವಾದ ಪ್ರದೇಶದಲ್ಲಿ ಜೈನ ವಾಸ್ತುಶಿಲ್ಪಗಳ ಸಂಖ್ಯೆಯೇ ಅಧಿಕವಾಗಿತ್ತೆಂದು ತಿಳಿದು ಬರುತ್ತದೆ. ಶಾಸನಗಳಲ್ಲಿ ಕೂಡ 'ನಗರ ಬಸದಿ ಕೇರಿ' ಎಂದೇ ಈ ಪ್ರದೇಶವನ್ನು ಕರೆಯಲಾಗಿದೆ.[5] ಬಸದಿಗಳೇ ಅಧಿಕವಾಗಿರುವದರಿಂದ ಈ ಹೆಸರು ರೂಢಿಯಾಗಿರ ಬಹುದು. ಸುಮಾರು ೫ ಕಿ.ಮೀ. ವಿಸ್ತಾರವುಳ್ಳ ಈ ಪ್ರದೇಶದಲ್ಲಿ ಎಲ್ಲಿ ನೋಡಿದರೂ ಪಾಳುಬಿದ್ದ ಬಸದಿಗಳು, ಶಿಲಾ ಭಾವಣಿಗಳು, ಸ್ತಂಭಗಳು, ಚಿತ್ರಗಳುಳ್ಳ ಪಟ್ಟಿಕೆ ಗಳು ಮತ್ತು, ದ್ವಾರಬಂಧಗಳು ಮತ್ತು ಬಸದಿ ಗಳ ಅಧಿಷ್ಠಾನದ ಭಾಗಗಳು ಕಂಡುಬರುತ್ತವೆ. ಬಹುತೇಕ ಬಸದಿಗಳು ಕಡಗಲ್ಲು (ಲ್ಯಾಟರೈಟ್)ಗಳಿಂದಲೇ ನಿರ್ಮಿಸಿದವುಗಳಾಗಿವೆ.[6] ಜನ ವಾಸ್ತವ್ಯದ ನೆಲೆಗಳು ನೀರಿಗಾಗಿ ಉಪಯೋಗಿಸಿದ ನೂರಾರು

4 ಉತ್ತರ ಕನ್ನಡ ಗೆಜೇಟೀರ್ ಸಂ. ಕಾಮತ್ ಸೂರ್ಯನಾಥ್

5 ಎಮ್.ಎ.ಆರ್. ೧೯೨೮

6 ಚಾಲುಕ್ಯನ್ ಆರ್ಕಿಟೆಕ್ಚರ್ :ಕಝಿನ್ಸ್ ಹೆನ್ರಿ

ಕೆರೆ–ಬಾವಿಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ಬಾವಿಗಳ ರಚನೆಯಲ್ಲಿ ಸಾಮ್ಯತೆಯಿದೆ. ನಗರಬಸ್ತಿಕೇರಿಯಲ್ಲಿ ಶೈವ–ವೈಷ್ಣವ ವಾಸ್ತುಶಿಲ್ಪ ಕುರುಹುಗಳೂ ಇಲ್ಲದಿಲ್ಲ. ಮೂರ್ತಿಶಿಲ್ಪಗಳೂ ಅಧಿಕ ಸಂಖ್ಯೆಯಲ್ಲಿ ಲಭ್ಯವಾಗುತ್ತವೆ.

**ಚತುರ್ಮುಖ ಬಸದಿ :** ಈಗಾಗಲೇ ಅಧ್ಯಯನಕ್ಕೆ ಒಳಗಾದ ಚತುರ್ಮುಖ ಬಸದಿಯಲ್ಲಿ ಅಧ್ಯಯನಕ್ಕೆ ಯೋಗ್ಯವಾದ ಹಲವಾರು ವಿಷಯುಗಳಿವೆ. ಅಧ್ಯಯನದ ದೃಷ್ಟಿಯಿಂದ ಅಧಿಷ್ಠಾನದಲ್ಲಿನ ಚಿತ್ರಪಟ್ಟಿಕೆಗಳೂ, ಭಿತ್ತಿಭಾಗದಲ್ಲಿ ತುಂಬಿರತಕ್ಕ ವಿಭಿನ್ನ ಶೈಲಿಯ ದೇವಕೋಷ್ಟಗಳೂ, ನವರಂಗ ಹಾಗೂ ಗರ್ಭಗೃಹದಲ್ಲಿನ ಛತ್ತುಗಳೂ, ಸ್ತಂಭಗಳೂ ಮತ್ತು ಪ್ರವೇಶದ್ವಾರಗಳಲ್ಲಿ ಕೊರೆದ ದ್ವಿಭಂಗಿಯ ದ್ವಾರಪಾಲಕರ ಶಿಲ್ಪಗಳು ಪ್ರಾಮುಖ್ಯವೆನಿಸುತ್ತವೆ. ಮಾತ್ರವಲ್ಲ, ಬಸದಿಯ ಹೊರಗಡೆ ಮುಖ್ಯ ಅಧಿಷ್ಠಾನದ ಎಲ್ಲ ದಿಕ್ಕುಗಳ ಮೂಲೆಗಳಲ್ಲಿಯೂ ನಿಲ್ಲಿಸಿದ ಸರಳ ಅಲಂಕರಣೆಯ ಸ್ತಂಭಗಳೂ ಕೂಡ ಅಧ್ಯಯನದ ದೃಷ್ಟಿಯಿಂದ ಉಪಯುಕ್ತವಾದವುಗಳಾಗಿವೆ. ಈ ಸ್ತಂಭಗಳನ್ನು ಬಸದಿಯ ತಲೆಯ ಭಾಗದಿಂದ ಇಳಿಜಾರು ಛಾವಣಿಗಳನ್ನು ಜೋಡಿಸುವದಕ್ಕಾಗಿ ನಿಲ್ಲಿಸಿದ್ದರೆಂದು ತೋರುತ್ತದೆ. ಆದರೆ ಈ ಕೆಲಸವನ್ನು ಪೂರ್ತಿಗೊಳಿಸಿಲ್ಲ.

ಚತುರ್ಮುಖ ಬಸದಿಯನ್ನು ಮಾತ್ರ ಬಿಳಿಪು ಮಿಶ್ರಿತ ಕಪ್ಪುಶಿಲೆಯಿಂದ ನಿರ್ಮಿಸಲಾಗಿದೆ. ಉಳಿದ ಬಸದಿಗಳೆಲ್ಲವೂ ಕೇವಲ ಮುಖ್ಯ ಭಾಗಗಳನ್ನಷ್ಟೇ ಶಿಲೆಯಿಂದ ಪಡೆದಿವೆ. ಕಡಗಲ್ಲಿನಿಂದ ನಿರ್ಮಿತವಾದ ಇಂತಹ ಬಸದಿಗಳು ಬಹುಬೇಗ ನಶಿಸಿದವು. ಗರ್ಭಗೃಹದ ಮೂಲ ವಿಗ್ರಹಗಳು ಮಾತ್ರ ಶಿಲೆಯಿಂದಾಗಿದ್ದು ಸೂಕ್ಷ್ಮ ಕೆತ್ತನೆಗೆ ಒಳಗಾಗಿವೆ. ಇವುಗಳ ದಿವ್ಯ ತೇಜಸ್ಸಿಗೆ ಸರಿ ಸಮಾನವಾದವುಗಳು ಹೊರ ಆವರಣದ ಕಡಗಲ್ಲಿನ ಕಟ್ಟಡಗಳು ; ಇದಕ್ಕೆ ಕಾರಣ ಈ ಪ್ರದೇಶದಲ್ಲಿ ವಿರಳವಾಗಿರುವ ಶಿಲೆಯದ್ದೇ ಇರಬೇಕು. ಮಧ್ಯಯುಗೀನ ಕಾಲದಲ್ಲಿ ಜೈನರಲ್ಲಿ ಚತುರ್ಮುಖಬಸದಿ ಪ್ರಮುಖ ಪಾತ್ರವಹಿಸುತ್ತಾದ್ದರಿಂದ ಇದನ್ನು ಮಾತ್ರ ಪೂರ್ತಿಯಾಗಿ ಶಿಲೆಯಿಂದಲೇ ನಿರ್ಮಿಸಿರಬೇಕು.

ಒಟ್ಟಾರೆ ಗೇರುಸೊಪ್ಪೆಯಲ್ಲಿ ವಾಸ್ತುಶಿಲ್ಪ, ಮೂರ್ತಿಶಿಲ್ಪ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ದೃಷ್ಟಿಯಿಂದ ಇನ್ನೂ ಹೆಚ್ಚಿನ ವ್ಯಾಸಂಗವನ್ನು ಕೈಗೊಳ್ಳಬಹುದು. ಇದಕ್ಕೆ ಈಗಾಗಲೇ ಪ್ರಕಟವಾದ ಮತ್ತು ಸಂಶೋಧಿಸಬಹುದಾದ ಶಾಸನಗಳನ್ನು ಮೂಲಾಧಾರಗಳಾಗಿ ಪಡೆಯಬಹುದು. ○

## ಕೃತಜ್ಞತೆಗಳು

ಈ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸುವಲ್ಲಿ ನನಗೆ ಸಲಹೆ ನೀಡಿದ ವಿಭಾಗದ ಮುಖ್ಯಸ್ಥರಾದ ಡಾ॥ ಅ. ಸುಂದರ ಅವರಿಗೆ ಮತ್ತು ನನ್ನ ಸಂಶೋಧನೆಗೆ ಮಾರ್ಗದರ್ಶಕರಾದ ಡಾ॥ ಎಚ್.ಆರ್. ರಘುನಾಥಭಟ್ ಇವರಿಗೆ ನನ್ನ ಕೃತಜ್ಞತೆಗಳು.ಅರಣ್ಯ ಭಾಗದಲ್ಲಿ ಹುದುಗಿದ ಕೋಟೆಗೆ ಬಂದು ನನ್ನೊಡನೆ ಸಹಕರಿಸಿದ ಗೇರುಸೊಪ್ಪೆಯ ಮಂಜುನಾಥನಾಯ್ಕ ಇವರನ್ನು ಸ್ಮರಿಸುತ್ತೇನೆ.

# ಕಿತ್ತೂರಿನ ಉದಯ ಹಾಗೂ ಸಂಸ್ಥಾನದ ಜೊತೆಗೆ ಕಲ್ಮಠದ ರಾಜಗುರುಗಳ ಸಂಬಂಧ

ಸಿ.ವ್ಹಿ. ಮಠದ

ಸ್ವಾತಂತ್ರ್ಯ ಹೋರಾಟದ ಪ್ರಥಮ ಬೆಳ್ಳಿಚುಕ್ಕಿ ಎಂದು ಹೆಸರಾದ ಕಿತ್ತೂರ ರಾಣಿ ಚೆನ್ನಮ್ಮನ ಗುರು ಪರಂಪರೆ ವ್ಯವಸ್ಥಿತವಾಗಿ ಇತಿಹಾಸದ ಪುಟಗಳಲ್ಲಿ ಮುಚ್ಚಿಹೋಗಿವೆ. ಕಿತ್ತೂರ ರಾಜಮನೆತನದ ನಿರ್ಮಾಣದಲ್ಲಿ ಈ ಗುರುವರ್ಗದವರು ಪ್ರಮುಖ ಪಾತ್ರ ವಹಿಸಿದ್ದರು. ಪ್ರಸ್ತುತ ಲೇಖನ ಈ ಗುರುವರ್ಗದ ಬಗೆಗೆ ಬೆಳಕು ಚೆಲ್ಲುವ ಒಂದು ಪ್ರಾಮಾಣಿಕ ಪ್ರಯತ್ನ.

ದಾಖಲೆಗಳಿಂದ ತಿಳಿದು ಬರುವಂತೆ ಕಿತ್ತೂರ ಸಂಸ್ಥಾನ ಉದಯವಾದುದು ಕ್ರಿ.ಶ. ೧೫೧೫ರಲ್ಲಿ. ಆದರೆ ಅಲ್ಲಿ ರಾಜ್ಯಭಾರ ನಡೆದುದು ಕ್ರಿ.ಶ. ೧೬೬೦ರಲ್ಲಿ. ಕಿತ್ತೂರಿನಲ್ಲಿಯೇ ಕೋಟೆ ನಿರ್ಮಿಸಿ ಆಡಳಿತ ಪ್ರಾರಂಭಿಸಿದವರು ಐದನೆಯವರಾದ ಅಲ್ಲಪ್ಪಗೌಡ ಸರದೇಸಾಯರು. ಆಕರಗಳಿಂದ ತಿಳಿಯುವಂತೆ ಮೊದಲು ಇವರು ತಮ್ಮ ಆಳ್ವಿಕೆಯನ್ನು ಸಂಪಗಾವಿಯಲ್ಲಿ ಪ್ರಾರಂಭಿಸಿದರು. ಆದರೆ ಸಂಪಗಾವಿಯಿಂದ ಕಿತ್ತೂರಿಗೆ ಬಂದುದು ಹೇಗೆ ? ಎನ್ನುವ ವಿಚಾರದಲ್ಲಿ ಕಿತ್ತೂರಿನ ಬಗೆಗೆ ಮಾಹಿತಿ ನೀಡುವ ಯಾವ ಗ್ರಂಥದಲ್ಲಿಯೂ ಸ್ಪಷ್ಟವಾದ ಉಲ್ಲೇಖವಿಲ್ಲ. ಈ ವಿಷಯವಾಗಿ ಕಿತ್ತೂರ ಸಂಸ್ಥಾನದ ಕಲ್ಮಠದ ಕೊನೆಯ ಅಧಿಕಾರಿಗಳಾದ ಶ್ರೀ.ನಿ.ಪ್ರ. ಚೆನ್ನಬಸವ ಸ್ವಾಮಿಗಳನ್ನು ಪ್ರತ್ಯಕ್ಷ ಕಂಡು ವಿಚಾರಿಸಿದಾಗ ಅನೇಕ ಹೊಸ ವಿಚಾರಗಳು ಬೆಳಕಿಗೆ ಬಂದವು. ಆಧಾರಸಹಿತ ಈ ವಿಷಯದ ಬಗೆಗೆ ಚರ್ಚೆ ಮಾಡಿ ಅವರಿಂದ ಪಡೆದ ಕಿತ್ತೂರಿನ ಇತಿಹಾಸ ಕುರಿತಾದ ಕೆಲವು ಹೊಸ ವಿಷಯಗಳನ್ನು ವಿವೇಚಿಸಲು ಇಲ್ಲಿ ಯತ್ನಿಸಲಾಗಿದೆ.

ಕಿತ್ತೂರಿಗೆ ಮೊದಲು 'ಗೀಜಗನ ಹಳ್ಳಿ' ಎಂದು ಕರೆಯಲಾಗುತ್ತಿತ್ತು. ಹದಿನಾರನೆಯ ಶತಮಾನದ ಆದಿಯಲ್ಲಿ ಈ ಪ್ರದೇಶವೆಲ್ಲ ದಟ್ಟವಾದ ಅರಣ್ಯದಿಂದ ಕೂಡಿದ್ದು, ನೋಡಿದಲ್ಲೆಲ್ಲ ವಿಶಾಲ ಮರಗಳು, ಬಿದಿರಿನ ಪೊದೆಗಳು ಬೆಳೆದುದರಿಂದ ಸೂರ್ಯಕಿರಣಗಳೂ ಸಹ ಭೂಮಿಯನ್ನು ಸ್ಪರ್ಶಿಸುತ್ತಿರಲಿಲ್ಲ. ಅಂತೆಯೇ ಕಾಡುಪ್ರಾಣಿಗಳು, ವಿವಿಧ ರೀತಿಯ ಪಕ್ಷಿಗಳು ಇಲ್ಲಿ ಆಶ್ರಯ ಪಡೆದಿದ್ದವು. ವಿಶೇಷವಾಗಿ ಇಲ್ಲಿ ಗೀಜಗನ ಹಕ್ಕಿಗಳು ಗುಂಪುಗಟ್ಟಲೆ ಬಹುಸಂಖ್ಯೆಯಲ್ಲಿ ವಾಸವಾಗಿದ್ದವು. ಅಂತೆಯೇ ಈ ಪ್ರದೇಶಕ್ಕೆ 'ಗೀಜಗನ ಹಳ್ಳಿ ಎಂದು ಕರೆದಿರಬಹುದು.

ನಿರ್ಜನ ಪ್ರದೇಶವಾದ ಈ ದಟ್ಟಡವಿಯಲ್ಲಿ ಬಿದಿರು ಪೊದೆಯೊಳಗೇ ಯೋಗಾಶ್ರಮವನ್ನು ನಿರ್ಮಿಸಿಕೊಂಡು ಬಿಟ್ಟು ಶಿವಯೋಗ ಸಿದ್ಧರು ಅನುಷ್ಠಾನ ನಿಷ್ಠರಾಗಿದ್ದರು. ಸಂಪಗಾವಿಯಲ್ಲಿ ಆಡಳಿತ ನಡೆಸಿದ ಐದನೆಯವರಾದ ಅಲ್ಲಪ್ಪಗೌಡ ಸರದೇಸಾಯರಿಗೆ ಸ್ವಪ್ನದಲ್ಲಿ ದಟ್ಟಡವಿಯಲ್ಲಿಯ ಆಶ್ರಮವಾಸಿಗಳಾದ ಮುನಿಗಳ ದರ್ಶನವಾಯಿತು. ಹಾಗೆಯೇ ತಮ್ಮ ದರ್ಶನ ಪಡೆಯಬೇಕೆಂದು ಮುನಿಗಳು ಆಜ್ಞಾಪಿಸಿದರು. ನಿದ್ರೆಯಿಂದ ಎಚ್ಚೆತ್ತ ನಂತರ ಸ್ವಪ್ನಗಳ ಬಗ್ಗೆ ನಂಬಿಕೆ ಇಟ್ಟುಕೊಂಡ ದೇಸಾಯರು ವಿಚಾರ ಪರವಶರಾದರು. ಕೆಲವು

ಸೇವಕರನ್ನೊಳಗೊಂಡು ಆ ಪ್ರದೇಶದತ್ತ ಪಯಣ ಬೆಳೆಸಿದರು. ದಟ್ಟಡವಿಯನ್ನು ಕ್ರಮಿಸುತ್ತಿದ್ದಂತೆ ಆಶ್ರಮ ಕಣ್ಣಿಗೆ ಬಿದ್ದಿತು. ಸಾವಕಾಶವಾಗಿ ಕುದುರೆಯಿಂದ ಇಳಿದು ಆಶ್ರಮ ಪ್ರವೇಶ ಮಾಡಿದ ದೇಸಾಯರಿಗೆ ತಾವು ಸ್ವಪ್ನದಲ್ಲಿ ಕಂಡ ಮುನಿಗಳೇ ಎದುರಿಗೆ ಧ್ಯಾನಾಸಕ್ತರಾಗಿ ಕುಳಿತದ್ದು ಕಣ್ಣಿಗೆ ಬಿದ್ದಿತು. ಆನಂದಭರಿತರಾದ ದೇಸಾಯರು ಅವರ ಪಾದಕಮಲಗಳಿಗೆ ನಮಸ್ಕರಿಸಿದರು. ಕಣ್ಣೆದುರು ನೋಡಿದ ಸ್ವಾಮಿಗಳು ದೇಸಾಯರನ್ನು ಆಶೀರ್ವದಿಸಿ ಪ್ರಸಾದವಿತ್ತರು. ಹಾಗೆಯೇ ದೇಸಾಯರನ್ನು ಸಂಬೊಧಿಸಿ "ಅಯ್ಯಾ ನಿನ್ನಿಂದ ಕರ್ನಾಟಕಕ್ಕೆ ಹಾಗೂ ಈ ನಾಡಿಗೆ ಮಹತ್ ಕಾರ್ಯವಾಗಬೇಕಾಗಿದೆ. ಇನ್ನುಮುಂದೆ ನೀನು ಇದೇ ಸ್ಥಳದಲ್ಲಿ ವಾಸಮಾಡಿ ಆಡಳಿತ ನಡೆಸಬೇಕು" ಎಂದು ಅಪ್ಪಣೆ ಕೊಟ್ಟರು. ಭಕ್ತಿನಿಷ್ಠ ಶರಣರಾದ ಅಲ್ಲಪ್ಪ ದೇಸಾಯರು ಯೋಗಿಗಳ ಮಾತಿಗೆ ಒಪ್ಪಿಗೆ ಸೂಚಿಸಿ ಅವರ ಆಶೀರ್ವಾದ ಪಡೆದು ಸಂಪಗಾವಿಗೆ ಮರಳಿದರು. ಕೆಲವು ದಿನಗಳಲ್ಲಿಯೇ ತಮ್ಮ ಎಲ್ಲ ಸರಂಜಾಮುದೊಂದಿಗೆ ಬಂದು ಈ ಸ್ಥಳದಲ್ಲಿ ವಾಸಿಸಹತ್ತಿದರು. ಅಲ್ಲದೆ ಅರಣ್ಯವನ್ನು ಹಸನಾಗಿಸಿ ಸುಂದರವಾದ ಕೋಟೆಯನ್ನು ಹಾಗೆಯೇ ಗುರುಗಳ ವಾಸಕ್ಕಾಗಿ ಮಠವನ್ನು ಕಟ್ಟಿಸಿದರು. ಈ ರೀತಿ ಸಂಪಗಾವಿಯಿಂದ ಕಿತ್ತುಕೊಂಡು ಬಂದು ಇಲ್ಲಿ ವಾಸಿಸಿ ಹೊಸ ಪಟ್ಟಣವನ್ನೇ ನಿರ್ಮಿಸಿದುದರಿಂದ ಇದಕ್ಕೆ "ಕಿತ್ತೂರು" ಎಂಬ ನಾಮದೇಯ ಬಂದಿರಬಹುದು ಎಂಬ ತರ್ಕಬದ್ಧ ವಿಚಾರವನ್ನು ಶ್ರೀ.ನಿ.ಪ್ರ. ಚೆನ್ನಬಸವ ಸ್ವಾಮಿಗಳು ವಿವರಿಸಿದರು.

ಇನ್ನೊಂದು ವಿಶೇಷವೆಂದರೆ ಕಿತ್ತೂರಿನಲ್ಲಿ ಇಂದಿಗೂ ಕೂಡ ಗುರುವಾರ ಪೇಟೆ ಹಾಗೂ ಸೋಮವಾರ ಪೇಟೆ ಎಂಬ ಎರಡು ಬಡಾವಣೆಗಳಿವೆ. ಅಲ್ಲಪ್ಪಗೌಡ ಸರದೇಸಾಯರು ಪ್ರಥಮತಃ ಯೋಗಿಗಳ ದರುಶನ ಪಡೆದುದು ಗುರುವಾರ ನಂತರ ಸರಂಜಾಮುದೊಂದಿಗೆ ಈ ಪ್ರದೇಶದಲ್ಲಿ ವಾಸಿಸಲು ಬಂದುದು ಸೋಮವಾರ. ಅಂತೆಯೇ ಕಿತ್ತೂರಿನ ಈ ಎರಡು ಪೇಟೆಗಳಿಗೆ ಅನ್ವರ್ಥಕವಾಗಿ ಹೀಗೆ ಇಂದಿಗೂ ಕರೆಯುವದುಂಟು ಎಂಬ ವಿಚಾರವನ್ನೂ ಶ್ರೀನಿ.ಪ. ಚೆನ್ನಬಸವ ಸ್ವಾಮಿಗಳು ತಿಳಿಸಿದರು.

ಅಂದಿನಿಂದ ಸಿದ್ಧಪುರುಷರ ಆಶೀರ್ವಾದ ಪಡೆದ ದೇಸಾಯರ ಆಳ್ವಿಕೆ ಕಿತ್ತೂರಿನಲ್ಲಿ ಸುವ್ಯವಸ್ಥಿತವಾಗಿ ಮುಂದುವರೆದುಕೊಂಡು ಹೋಯಿತು. ಹಾಗೆಯೇ ಕಲ್ಮಠದಲ್ಲಿ ರಾಜಗುರುಗಳ ವಾಸ್ತವ್ಯವೂ ಮುಂದುವರೆಯಿತು. ಇಂದಿಗೂ ಈ ರಾಜಗುರುಗಳ ಹಾಗೂ ರಾಜರುಗಳ ಮಧುರ ಸಂಬಂಧಗಳ ದ್ಯೋತಕವಾಗಿ ಕಲ್ಮಠದ ಸಮೀಪದಲ್ಲಿ ದೇಸಾಯರ ಗದ್ದುಗೆಗಳು ಹಾಗೂ ಹೊರವಲಯದಲ್ಲಿ ಇರುವ ಚೌಕಿಮಠದ ಸುತ್ತಲೂ ರಾಜಗುರುಗಳ ಗದ್ದುಗೆಗಳೂ ನಮಗೆ ನೋಡಲು ದೊರೆಯುತ್ತವೆ. ಇಲ್ಲಿ ಇನ್ನೊಂದು ವಿಶೇಷ ವಿಷಯವೆಂದರೆ ರಾಜಗುರುಗಳ ಜೀವಿತದ ನಿರ್ದಿಷ್ಟ ಕಾಲಮಾನ ನಮಗೆ ದೊರೆಯುತ್ತದೆ. ಅವರು ಎಷ್ಟು ವರ್ಷಗಳ ಕಾಲ ಹಾಗೂ ಯಾವ ದೇಸಾಯರ ಕಾಲದಲ್ಲಿ ವಾಸಿಸಿದ್ದರು ಎಂದು ತಿಳಿಯುವುದು. ಇದರಿಂದ ದೇಸಾಯರ ಆಳ್ವಿಕೆಯ ಕಾಲವನ್ನು ಗುರುತಿಸಬಹುದಾಗಿದೆ.

ಕಲ್ಮಠದ ಅಧಿಕಾರ ಹೊಂದಿದ ಮೊದಲ ಸ್ವಾಮಿಗಳು ಉಳವಿಯವರಾದ ಗುರುಸಿದ್ಧ ಮಹಾಸ್ವಾಮಿಗಳು. ಕ್ರಿ.ಶ. ೧೬೬೦ ರಿಂದ ೧೬೯೬ರವರೆಗೆ, ೩೬ ವರ್ಷ ಸಂಸ್ಥಾನ ಮಠದ ಅಧಿಕಾರ ವಹಿಸಿಕೊಂಡು ಮುಂದಿ ಮಲ್ಲಪ್ಪ ದೇಸಾಯರಿಗೆ ಹಾಗೂ ಚಿಕ್ಕಮಲ್ಲಪ್ಪ ದೇಸಾಯರಿಗೆ ಮಾರ್ಗದರ್ಶನ ಮಾಡಿದರು. ಈ ಸ್ವಾಮಿಗಳ ಗದ್ದುಗೆಯನ್ನು ಏಳನೆಯವರಾದ ಚಿಕ್ಕಮಲ್ಲಪ್ಪ ದೇಸಾಯರು ಕಟ್ಟಿಸಿದರು. ಈ ಗದ್ದುಗೆ ಇಂದಿಗೂ ಚೌಕಿಮಠದ ಹತ್ತಿರ ಉಪಲಬ್ಧವಿದೆ. ಉಳವಿಯಿಂದ ಈ ಸ್ವಾಮಿಗಳು ಬಂದುವರಾದುದರಿಂದ ಇಂದಿಗೂ ಉಳವಿಯಲ್ಲಿ "ಕಲ್ಮಠ ಕಟ್ಟಿ" ಎಂಬ ಹೆಸರಿನ ಶಾಖಾಮಠವಿದೆ. ಕಾಲಾನಂತರ ಚಿತ್ರದುರ್ಗ ಸ್ವಾಮಿಗಳು ಆ ಕಟ್ಟಿಯನ್ನು ತಮ್ಮ ಅಧಿಕಾರ ವ್ಯಾಪ್ತಿಗೆ ತೆಗೆದುಕೊಂಡರು ಎಂಬ ಸಂಗತಿಯನ್ನು ಶ್ರೀ ಚೆನ್ನಬಸವ ಶ್ರೀಗಳು ವಿವರಿಸಿದರು.

ಎರಡನೆಯವರಾಗಿ ತೋಲಗಿಯ ಪಾದಶ್ರೀಗಳು ೧೬೯೬ ರಿಂದ ೧೭೩೨ರ ವರೆಗೆ ೨೭ ವರ್ಷ ಚಿಕ್ಕಮಲ್ಲಪ್ಪ ದೇಸಾಯರಿಗೆ ಹಾಗೂ ಶಿವನಗೌಡ ದೇಸಾಯರಿಗೆ ಮಾರ್ಗದರ್ಶನ ಮಾಡಿದರು. ಇವರ ಗದ್ದುಗೆಯನ್ನು

೮ನೆಯುವರಾದ ಶಿವನಗೌಡ ದೇಸಾಯುರು ಕಟ್ಟಿಸಿದರು. ಈ ಗದ್ದುಗೆ ಕೂಡ ಇಂದು ಚೇಕಿಮಠದ ಬಳಿ ಸಿಗುವುದು.

ಮೂರನೆಯುವರಾಗಿ ಉಪ್ಪಿನ ಬೆಟಗೇರಿಯುವರಾದ ಗುರುಲಿಂಗ ಶ್ರೀಗಳು ೧೭೨೩ ರಿಂದ ೧೭೫೭ರ ವರೆಗೆ ೩೪ ವರ್ಷ ಮಲವರುದ್ರಗೌಡ ಹಾಗೂ ವೀರಪ್ಪ ದೇಸಾಯರಿಗೆ ಮಾರ್ಗದರ್ಶನ ಮಾಡಿದರು. ಇವರ ಗದ್ದುಗೆಯನ್ನು ವೀರಪ್ಪದೇಸಾಯರು ಕಟ್ಟಿಸಿದರು.

ನಾಲ್ಕನೆಯುವರಾಗಿ ದೇಶನೂರಿನ ಮಡಿವಾಳ ಶ್ರೀಗಳು ೧೭೫೭ ರಿಂದ ೧೮೦೧ ರವರೆಗೆ ೪೪ ವರ್ಷಗಳ ಕಾಲ ಇದ್ದು ವೀರಪ್ಪದೇಸಾಯರಿಗೆ ಹಾಗೂ ಮಲ್ಲಸರ್ಜ ದೊರೆಗಳಿಗೆ ಮಾರ್ಗದರ್ಶನ ಮಾಡಿದರು. ಇವರ ಗದ್ದುಗೆಯನ್ನು ಮಲ್ಲಸರ್ಜ ದೊರೆ ಕಟ್ಟಿಸಿದರು. ಇದೂ ಕೂಡ ಇಂದು ನೋಡಲು ಸಿಗುತ್ತದೆ.

ಐದನೆಯುವರಾಗಿ ಶಹಾಪೂರಿನ ಪ್ರಭು ಶ್ರೀಗಳು ಕ್ರಿ.ಶ. ೧೮೦೧ ರಿಂದ ೧೮೦೬ರ ವರೆಗೆ ೧೫ ವರ್ಷಗಳ ಕಾಲ ಇದ್ದು ಮಾರ್ಗದರ್ಶನ ಮಾಡಿದರು. ಇವರ ಗದ್ದುಗೆಯನ್ನು ೧೨ನೆಯುವರಾದ ಶಿವಲಿಂಗರುದ್ರ ಸರ್ಜ ದೇಸಾಯರು ಕಟ್ಟಿಸಿದರು.

ಆರನೆಯುದಾಗಿ ಗಂದಿಗೆವಾಡದ ಗುರುಸಿದ್ಧ ಶ್ರೀಗಳು ೧೮೧೬ ರಿಂದ ೧೮೩೮ರ ವರೆಗೆ ೨೨ ವರ್ಷ ರಾಜಗುರುಗಳಾಗಿ ಮಾನ್ಯತೆ ಪಡೆದರು. ಇವರ ಕಾಲಕ್ಕೆ ಕಿತ್ತೂರನಾಡಿನ ಚರಿತ್ರೆಯಲ್ಲಿ ಮಹತ್ವದ ಘಟನೆಗಳೂ ಸಂಭವಿಸಿದವು. ಹಾಗೆಯೇ ಕಿತ್ತೂರ ಸಂಸ್ಥಾನದ ಅಂತ್ಯವೂ ಕೂಡ ಇದೇ ಕಾಲಕ್ಕೆ ಆಯಿತು. ರಾಜಮನೆತನ ಕೊನೆಗೊಂಡರೂ ಗುರು ಪರಂಪರೆ ಮುಂದುವರೆದುಕೊಂಡು ಹೋಯಿತು. ಬ್ರಿಟೀಷ್‌ಸರ್ಕಾರ ಈ ಸಂಸ್ಥಾನವನ್ನು ತಮ್ಮ ವಶಕ್ಕೆ ತೆಗೆದುಕೊಂಡರೂ ಮಠದ ಪರಂಪರೆಗೆ ಯಾವ ಧಕ್ಕೆ ಆಗದಂತೆ ನೋಡಿ ಕೊಂಡರು. ಇವರ ಅಧಿಕಾರ ರಾಜಕೀಯಕ್ಕೆ ಮಾತ್ರ ಸೀಮಿತವಾಗಿತ್ತು. ಧರ್ಮದಲ್ಲಿ ಕೈ ಹಾಕಿ ಸಾಮಾನ್ಯ ಜನರ ಭಾವನೆಗಳನ್ನು ಕೆರಳಿಸುವುದು ಬ್ರಿಟೀಷರಿಗೆ ಬೇಡವಾಗಿತ್ತು.

ನಂತರ ಏಳನೆಯುವರಾಗಿ ತೋಲಗಿಯ ಮಡಿವಾಳ ಶ್ರೀಗಳು ೧೮೩೮ ರಿಂದ ೧೮೫೨ರ ವರೆಗೆ ೧೪ ವರ್ಷ ಇದ್ದು ಜನತೆಯಲ್ಲಿ ಧಾರ್ಮಿಕ ಪ್ರಜ್ಞೆ ಹೆಚ್ಚಿಸುವಂತೆ ಶ್ರಮಿಸಿದರು.

ಎಂಟನೆಯುವರಾಗಿ ನಂದಗಡದ ರಾಚೋಟಿ ಸ್ವಾಮಿಗಳು ೧೮೫೨ ರಿಂದ ೧೮೭೯ರ ವರೆಗೆ ೨೭ ವರ್ಷ ಸಮಾಜದ ಜನತೆಗೆ ಮಾರ್ಗದರ್ಶನ ಮಾಡಿದರು.

ಒಂಭತ್ತನೆಯುವರಾಗಿ ಗಂದಿಗೆವಾಡದ ಗುರುಸಿದ್ಧ ಶ್ರೀಗಳು ೧೮೭೯ ರಿಂದ ೧೯೩೪ರ ವರೆಗೆ ೫೫ ಅತಿ ದೀರ್ಘ ಕಾಲ ಬದುಕಿ–ಬಾಳಿ ಧರ್ಮ ರಕ್ಷಣೆಗೆ ಹೆಣಗಿದರು.

ಹತ್ತನೆಯುವರಾಗಿ ಬೆಳವಡಿಯ ಶ್ರೀ ಚೆನ್ನಬಸವಶ್ರೀಗಳು ೧೯೩೪ರಲ್ಲಿ ಅಧಿಕಾರ ವಹಿಸಿ ಕೊಂಡರು. ಆದರೆ ಕೆಲ ವರುಷಗಳ ನಂತರ ಮಠವನ್ನು ತ್ಯಜಿಸಿ ಬೆಳಗಾವಿಯಲ್ಲಿಯೇ ವಾಸಿಸುತ್ತಿದ್ದರು. ಇವರು ಇತ್ತೀಚೆಗೆ ಎರಡು ವರ್ಷಗಳ ಹಿಂದೆಯಷ್ಟೇ ಶಿವಾಧೀನ ರಾದರು. ಇವರು ಕೂಡ ೬೫ ವರ್ಷಗಳ ಕಾಲ ಬದುಕಿದ್ದರು. ಇವರಲ್ಲಿ ಕಿತ್ತೂರಿಗೆ ಸಂಬಂಧಿಸಿದ ಹಾಗೂ ಬೆಳವಡಿಗೆ ಸಂಬಂಧಿಸಿದ ಅನೇಕ ಕಾಗದ ಪತ್ರಗಳನ್ನು ನಾವು ಕಾಣಬಹುದಾಗಿದೆ. ಸುದೈವದಿಂದ ಅವರ ಜೀವಿತಕಾಲದಲ್ಲಿ ಅವರನ್ನು ಕಂಡು ಅವರ ಜೊತೆ ಚರ್ಚಿಸಿದುದರ ಪರಿಣಾಮವಾಗಿ ಮೇಲಿನ ಮಾಹಿತಿ ಯನ್ನು ತಮ್ಮೆದುರು ಮಂಡಿಸಲು ಶಕ್ತನಾಗಿದ್ದೇನೆ.

ಪ್ರತಿಯೊಬ್ಬ ಸ್ವಾಮಿಗಳ ಮೂಲ ಊರುಗಳಲ್ಲಿ ಇಂದಿಗೂ ಕಲ್ಮಠದ ಶಾಖಾಮಠಗಳನ್ನು ನಾವು ಕಾಣುತ್ತೇವೆ. ಹೀಗೆ ಈ ಕಲ್ಮಠದ ಪರಂಪರೆ ಕಿತ್ತೂರ ಸಂಸ್ಥಾನಿಕರು ಕಿತ್ತೂರಿನಲ್ಲಿ ನೆಲೆಸಿದಾಗಿನಿಂದಲೇ ಪ್ರಾರಂಭವಾಯಿತು. ಇಂದಿಗೂ ಕೂಡ ಕಿತ್ತೂರಿನಲ್ಲಿರುವ ಕಲ್ಮಠ ತನ್ನ ಪರಂಪರೆಯನ್ನು ಮುಂದುವರೆಸಿಕೊಂಡು ನಡೆದಿದೆ. ೦

# ಬಂಕಾಪುರದಲ್ಲಿ ಹಂಡೆ ಪಾಳೆಯಗಾರರು

—ಡಾ॥ ಚೆನ್ನಕ್ಕ ಎಲಿಗಾರ

ಐತಿಹಾಸಿಕ ಮಹತ್ವವುಳ್ಳ ಗ್ರಾಮಗಳ ಚಾರಿತ್ರಿಕ ಅಧ್ಯಯನವೆಂದರೆ ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನವೇ. ಅಲ್ಲಿ ಬಾಳಿ ಬದುಕಿದ ರಾಜಮನೆತನಗಳು ಆ ಗ್ರಾಮದ ಇತಿಹಾಸ ಬರೆದಿರುತ್ತವೆ. ಬಂಕಾಪುರ ವನ್ನಾಳಿದ ಸುಪ್ರಸಿದ್ಧ ಮನೆತನಗಳಲ್ಲಿ ಹಂಡೆ ಪಾಳೆಯ ಗಾರರ ಮನೆತನವೂ ಒಂದು. ಈಗಾಗಲೆ ಇತಿಹಾಸದ ಪುಟಗಳಿಂದ ಮರೆತುಹೋದ ಈ ಮನೆತನದ ಬಗೆಗೆ ಡಾ. ಎಮ್. ಎಮ್. ಕಲಬುರ್ಗಿಯವರ ಹತ್ತಿರ ಇರುವ ಅಪರೂಪದ ದಾಖಲೆಗಳಾದ ಬಳ್ಳಾರಿ ಕೈಫಿಯತ್ತು ಮತ್ತು ಕುರುಗೋಡ ಕೈಫಿಯತ್ತುಗಳನ್ನೂ, ಬಂಕಾಪುರ ದಲ್ಲಿರುವ ಒಂದು ಭಾವಿಯು ವಿಷಯವನ್ನು ಬಳಸಿ ಕೊಂಡು ಈ ಮನೆತನದ ಬಗ್ಗೆ ಕೆಲವು ವಿಚಾರಗಳನ್ನು ನಿರೂಪಿಸಬಹುದು.

ವಿಜಯನಗರದ ಅಚ್ಯುತರಾಯನ ಕಾಲದಲ್ಲಿ ವಿಜಾಪುರ ಜಿಲ್ಲೆಯ ಮುತ್ತಗಿ ಎಂಬ ಗ್ರಾಮದಲ್ಲಿ ಗೌಡಿಕೆ ಮಾಡಿಕೊಂಡು ಬಾಳುತ್ತಿದ್ದ ಒಂದು ಪಾಳೆಯಗಾರ ಮನೆತನ ಹಂಡೆಯವರದು. ಈ ಮನೆತನದ ಕಾಲ ಕ್ರಿ.ಶ. ೧೫೩೦ರಿಂದ ಕ್ರಿ.ಶ. ೧೮೮೯. ಅಚ್ಯುತರಾಯ ಕೃಷ್ಣದೇವರಾಯರ ತರುವಾಯ ಆದಿಲಶಹನ ಕಾಲದಲ್ಲಿ ಬಿಜಾಪುರದ ಕೃಷ್ಣಾನದಿಗೆ ಉತ್ತರ ಭಾಗದಲ್ಲಿರುವ ಬಾಗೇವಾಡಿ ತಾಲೂಕಿನ ಮುತ್ತಗಿ ಎಂಬ ಗ್ರಾಮದಲ್ಲಿ ಹಂಡೆಕುರುಬ ಜಾತಿಯವರಾದ ಇವರು ಗೌಡರಾಗಿದ್ದಾರೆ.

ಹಂಡೆ ಮನೆತನದ ಮೂಲಪುರುಷ ಬಾಲದ ಹನುಮಪ್ಪನಾಯಕ. ಈತ ದೈವಾನುಗ್ರಹ, ಮುಂದಾಲೋಚನೆ, ಮುತ್ಸದ್ದಿತನಗಳಿಂದ ಬಿಜಾಪುರದ ಸುಲ್ತಾನರ ವಿಶ್ವಾಸ ಸಂಪಾದಿಸಿಕೊಂಡು ಅವರಿಂದ ಫೌಜದಾರಿ ನೋಕರೂರು ಪಡೆದಿದ್ದನು. ಅವನ ನಿಷ್ಠಾಪೂರ್ಣ ಸೇವೆ ಹೆಚ್ಚಿನ ಗೌರವಕ್ಕೆ ಅವಕಾಶ ಮಾಡಿಕೊಟ್ಟಿತ್ತು. ಅವನ ಸೇವೆಗೆ ಮೆಚ್ಚಿದ ಸುಲ್ತಾನ ಆತನಿಗೆ 'ವಜೀರಪ್ಪ' ಎಂಬ ಬಿರುದನ್ನಿತ್ತು ಗೌರವಿಸಿದ್ದ. ಕುರುಗೋಡ ಕೈಫಿಯತ್ತಿನ ಪ್ರಕಾರ ಈತ ಬಂಕಾಪುರ ಸೀಮೆ ಗೆದ್ದಿದ್ದ. ಅಲ್ಲಿಂದ ಬಳ್ಳಾರಿಗೆ ಬಂದು ಅಲ್ಲಿ ಕೋಟೆ ಕಟ್ಟಿಸಿದ್ದಲ್ಲದೆ ಕುರುಗೋಡ ಪರಗಣೆ ೧, ಶಿರಗುಪ್ಪಿ ಪರಗಣೆ, ತೆಕ್ಕಲ ಕೋಟೆ ಪರಗಣೆ, ಸಿಂದನೂರ, ದರೋಜಿ ಸಮ್ಮತ್ತು, ವಡ್ಡು ಸಮ್ಮತ್ತು, ಕಣೆಕಲ್ಲು ಸಮ್ಮತ್ತು ೧, ಅನಂತಪುರ, ಧರ್ಮವುರ ಪರಗಣೆ, ನಂದ್ಯಾಲ, ಸಿರಿವಾಳ ಪರಗಣೆ ಗಳನ್ನು ಸಂಪಾದಿಸಿಕೊಂಡಿದ್ದ.

ಕೆಲಕಾಲದಲ್ಲಿ ದಕ್ಷಿಣಪ್ರಾಂತ ಅರಾಜಕತೆಗೆ ಒಳಗಾಗಲು ಸುಲ್ತಾನನು ಈ ಬಾಲದ ಹನುಮಪ್ಪ ನಾಯಕನನ್ನು ಅದರ ಮೇಲ್ವಿಚಾರಣೆಗೆ ಕಳಿಸಿದನು. ತನ್ನ ಸಮಸ್ತ ಬಲದೊಂದಿಗೆ ಬಾಲದ ಹನುಮಪ್ಪ ನಾಯಕ ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ ಮೂಲಕ ಬಂಕಾಪುರಕ್ಕೆ ಬಂದು ಕಿಲ್ಲೆ ಕಟ್ಟಿಸಿ ಶಾಂತಿಯ ವ್ಯವಸ್ಥೆ ಮಾಡಿದ. ಅವನ ಸೇವಾಪರ ಮನೋಭಾವಕ್ಕೆ ಮೆಚ್ಚಿದ ಸುಲ್ತಾನ ಅವನನ್ನು ತನ್ನ ವಿಶ್ವಾಸದ ವ್ಯಕ್ತಿಯನ್ನಾಗಿ ಸ್ವೀಕರಿಸಿ ಬಹುಮಾನವನ್ನಿತ್ತು ಸತ್ಕರಿಸಿದ್ದ. ಈ ಹನುಮಪ್ಪನಾಯನಿಗೆ ಐದು ಜನ ಗಂಡುಮಕ್ಕಳು, ಇವರನ್ನು ಕುರುಗೋಡ ಕೈಫಿಯತ್ತು

ಧರಿಗೆ ಧರ್ಮಜನಂಕುಶ
ಪರಬಲದೊಳ್ ಭೀಮ ದೇವ ಅರ್ಜುನರಾಮ
ಧುರಧೀರನು ನಕುಲಮಲ್ಲನು
ನೆರೆಗೆಲೆ ಸಹದೇವ ಚಿಕ್ಕಮಲ್ಲನಜೀರಾ ||

ಎಂದು ಹೊಗಳಿದೆ. ಇವರೇ ಕ್ರಮವಾಗಿ ಅಂಕುಶ ರಾಯ, ದೇವಪ್ಪನಾಯಕ, ನಿಚ್ಚಮದುವಣಿಗ ಲಿಂಗ ರಾಮಪ್ಪನಾಯಕ, ಹಿರೇಮಲ್ಲಪ್ಪನಾಯಕ, ಚಿಕ್ಕ ಮಲ್ಲಪ್ಪನಾಯಕರೆಂಬವರು.

ಈ ಐವರ ಗುಣಗಾನ ಮಾಡಿದ ಬಳ್ಳಾರಿ ಕೈಫಿಯತ್ತು ಅಂಕುಶರಾಯನನ್ನು ಬಹುಧರ್ಮನಿಷ್ಠ ನೆಂತಲೂ, ದೇವಪ್ಪನಾಯಕನನ್ನು ಬಹು ಪರಾಕ್ರಮಿ ಎಂದೂ, ನಿಚ್ಚಮದುವಣಿಗ ಲಿಂಗರಾಮಪ್ಪನಾಯಕ ನನ್ನು ಬಹುಭೋಗಿ ಎಂದೂ, ಹಿರೇಮಲ್ಲಪ್ಪನಾಯಕ ಹಾಗೂ ಚಿಕ್ಕಮಲ್ಲಪ್ಪನಾಯಕರನ್ನು ಪ್ರಸಿದ್ಧ ಪುರುಷ ರೆಂದು ಕರೆದಿದೆ.

ಹಂಡೆಬಾಲದ ಹನುಮಪ್ಪನಾಯಕ ಈ ಮಕ್ಕಳು ಚಿಕ್ಕವರಾಗಿದ್ದಾಗ ಒಮ್ಮೆ ಐವರನ್ನೂ ಕರೆದುಕೊಂಡು ಸುಲ್ತಾನರ ಭೇಟಿಗೆ ಹೋದ. ಸುಲ್ತಾನ ಸುಂದರವಾದ ಈ ಮಕ್ಕಳನ್ನು ನೋಡಿ ಇವರೊಳಗೆ ಒಬ್ಬ ಮಗನನ್ನು ಇಸ್ಲಾಂಧರ್ಮಕ್ಕೆ ಮತಾಂತರಿಸಿಕೊಂಡರೆ ಸ್ಫುರದ್ರೂಪಿ ಸಂತಾನ ಇಸ್ಲಾಂದಲ್ಲಿ ಬೆಳೆಯುವದೆಂದು ಭಾವಿಸಿ ಹನುಮಪ್ಪನಾಯಕನ ಮುಂದೆ ಈ ವಿಚಾರವನ್ನಿಟ್ಟನು. 'ನಿನ್ನ ಮಕ್ಕಳೊಳಗೆ ಒಬ್ಬ ಮಗನನ್ನು ನಮಗೆ ಕೊಡು' ಎಂದು ಬಾಯಿಬಿಟ್ಟು ಕೇಳಿದಾಗ ಹನುಮಪ್ಪನಾಯಕನಿಗೆ ಸಿಟ್ಟು ತಡೆಯದಾಯಿತು. ತುಂಬ ಕೋಪಾವಿಷ್ಟನಾಗಿ ಸುಲ್ತಾನನಿಗೆ 'ನಿಮ್ಮ ಜನಾನಾದೊಳಗಿರುವ ಒಬ್ಬ ಬೀಬಿ ಯನ್ನು ಕೊಟ್ಟರೆ ಇಂತಹ ಮಗನನ್ನು ಹುಟ್ಟಿಸಿಕೊಡು ತ್ತೇನೆ' ಎಂದು ಹೇಳಿ ಅಲ್ಲಿಂದ ಹೊರಬಿದ್ದ. ಸುಲ್ತಾನ ತನ್ನ ಸೈನ್ಯದೊಂದಿಗೆ ಹನುಮಪ್ಪನಾಯಕನ ಬೆನ್ನು ಹತ್ತಿದ. ಈ ವೇಳೆಗೆ ಕೃಷ್ಣಾನದಿ ತುಂಬಿ ಬಂದಿದ್ದರಿಂದ ಸುಲ್ತಾನನ ಸೈನ್ಯಕ್ಕೆ ಮಾರ್ಗ ಸಿಗದೆ ಅದು ಮರಳಿ ಹೋಗಬೇಕಾಯಿತು. ಇತ್ತ ಹನುಮಪ್ಪನಾಯಕ ತನ್ನ ಐವರು ಮಕ್ಕಳೊಂದಿಗೆ ಬಳ್ಳಾರಿಗೆ ಬಂದು ಕೆಲಕಾಲ ರಾಜ್ಯವಾಳಿದ! ಬಳಿಕ ತನ್ನ ರಾಜ್ಯದಲ್ಲಿ ಹಿರಿಯ ಮಗ ಅಂಕುಶರಾಯನಿಗೆ ಬಂಕಾಪುರ ಸೀಮೆ, ದೇವಪ್ಪನಾಯಕ ನಿಗೆ ಕುಂದರ್ಪಿಸೀಮೆ, ನಿಚ್ಚಮದುವಣಿಗ ಲಿಂಗರಾಮಪ್ಪ ನಾಯಕನಿಗೆ ಅನಂತಪುರ, ಧರ್ಮಪುರ, ಹಿರಿಯ ಮಲ್ಲಪ್ಪನಾಯಕನಿಗೆ ಬಳ್ಳಾರಿ ಕುರುಗೋಡುಗಳನ್ನು ಹಂಚಿಕೊಟ್ಟು ರಾಜ್ಯಭಾರದ ವ್ಯವಸ್ಥೆ ಮಾಡಿದ.

ಅಂಕುರಾಯನ ವಂಶಸ್ಥರಾದ ಸಿದ್ದಪ್ಪನಾಯಕ ಮತ್ತು ಪ್ರಸನ್ನನಾಯಕರೆಂಬ ಅಣ್ಣತಮ್ಮಂದಿರು ಕೆಲ ಕಾಲ ಬಂಕಾಪುರದ ಸೀಮೆಯಲ್ಲಿ ಅಧಿಕಾರ ಮುಂದು ವರೆಸಿಕೊಂಡು ಹೋದರು. ಇದಲ್ಲದೆ ಇತ್ತೀಚೆಗೆ ಹಸ್ತ ಪ್ರತಿ ಪ್ರಶಸ್ತಿ (Colophons) ಗಳಲ್ಲಿ ಐತಿಹಾಸಿಕ ಸಂಗತಿಗಳು ಎಂಬ ಲೇಖನದಲ್ಲಿ ಡಾ. ಬಿ. ಆರ್. ಹಿರೇಮಠರು ಇದೇ ಮನೆತನದ ಹಂಡೆ ರಾಮಪ್ಪನಾಯಕ (ಕ್ರಿ. ಶ. ೧೬೮೯) ನನ್ನು ಪರಿಚಯಿಸುತ್ತ ಈತನ ಗುರು ತೋಂಟದ ಸಿದ್ಧಲಿಂಗೇಶ್ವರ ಸಂಪ್ರದಾಯದ ವಿರಕ್ತ ಮಠದ ನೀಲಕಂಠಸ್ವಾಮಿಗಳು ಎಂದು ಗುರುತಿಸಿದ್ದಾರೆ. ಹೀಗೆ ಹಂಡೆ ಮನೆತನ ಬಂಕಾಪುರ ಸೀಮೆಯನ್ನು ಕ್ರಿ.ಶ. ೧೫೭೦ರಿಂದ ಕ್ರಿ. ಶ. ೧೬೮೯ರವರೆಗೆ ಆಳಿದ ಬಗೆಗೆ ಕೈಫಿಯತ್ತುಗಳು ತಿಳಿಸಿವೆ. ಒಟ್ಟಾರೆ ಈ ಮನೆತನ ದವರ ವಂಶಾವಳಿಯನ್ನು ಈ ರೀತಿಯಾಗಿ,ಗುರುತಿಸಬಹು ದಾಗಿದೆ.

## ಹಂಡೆ ಪಾಳೆಯಗಾರರು (ಕುರಗೋಡ ಕೈಫಿಯತ್ತು)

ಹಂಡೆ ಬಾಲದ ಹನುಮಪ್ಪನಾಯಕ ಕ್ರಿ.ಶ. ೧೫೬೭

- ಅಂಕುಶರಾಯ
  - ಸಿದ್ಧಪ್ಪ ನಾಯಕ
    - ರಾಮಪ್ಪ ನಾಯಕ
    - ಹನುಮಪ್ಪ ನಾಯಕ
      - ದೊಡ್ಡಪ್ಪನಾಯಕ ಈತ ಬಳ್ಳಾರಿ ಆಳಿದ
        - ರಾಮಪ್ಪನಾಯಕ ? ೧೮೧೯.
  - ಪ್ರಸನ್ನ ನಾಯಕ
    - ಪ್ರಸನ್ನರಾಮಪ್ಪ ನಾಯಕ ಈತ ಕುರುಗೋಡು ಆಳಿದ
- ದೇವಪ್ಪನಾಯಕ
  - ಏನಾರದ ರಾಮಪ್ಪ ನಾಯಕ
- ನಿಚ್ಚಮದುವಣಿಗ ರಾಮಲಿಂಗಪ್ಪನಾಯಕ
  - ಸಂತಾನರಹಿತ
- ಹಿರೇಮಲ್ಲಪ್ಪ ನಾಯಕ
  - ಸಂತಾನರಹಿತ
- ಚಿಕ್ಕಮಲ್ಲಪ್ಪ ನಾಯಕ
  - ಚಿಕ್ಕನಾಯಕ
    - ದೇವಪ್ಪನಾಯಕ ಹಿರೇ ಹೆಂಡತಿ ಸಂತತಿ
      - ಹನುಮಪ್ಪನಾಯಕ
        - ಹಿರೇರಾಮಪ್ಪನಾಯಕ

ಬಂಕಾಪುರದ ಅಂಕದಖಣ ಹೆಸರಿನ ಓಣಿಗೆ ಹೊಂದಿ ಪಶ್ಚಿಮ ದಿಕ್ಕಿನಲ್ಲಿ 'ಪಂಚಮಲಕಪ್ಪನ ಬಾವಿ' ಎಂದು ಪ್ರಸಿದ್ಧಿ ಪಡೆದಿರುವ ಸೋಪಾನದ ಬಾವಿಯಿದೆ. ಇದು ಒಂದು ಐತಿಹಾಸಿಕ ಮಹತ್ವ ಪಡೆದ ಕಟ್ಟಡ. ಶಹಬರುಖಾರದಲ್ಲಿಯ ಬಸವಣ್ಣ ದೇವಸ್ಥಾನದ ಮುಂದಿರುವ ಒಂದು ಶಾಸನ (ಕ್ರಿ.ಶ. ೧೪೭೬) ಮಹಾನಾಯಕಾಚಾರ್ಯ ಸಿಂಗೆನಾಯಕರ ಪತ್ನಿ ಬಾಬಲಿನಾಯಕಿತ್ತಿಯರು ತಮ್ಮ ಮಗಳು ದೇಮರಸಿ ದುರ್ಮರಣ ಹೊಂದಿದುದಕ್ಕೆ ಆಕೆಗೆ ಪುಣ್ಯಲೋಕವಾಗಲೆಂದು ಗೋದಾನ, ಭೂದಾನ, ಹಿರಣ್ಯದಾನ ಮೊದಲಾದ ದಾನಗಳ ಜೊತೆಗೆ ಉದಕದಾನದ ಮಹತ್ವವನ್ನು ತಿಳಿದು ಅಂಕದಖಣದ ಪಡುವಲಲ್ಲಿ ಸೋಪಾನದ ಭಾವಿಯನ್ನು ನಿರ್ಮಿಸಿ ಉದಕ ದಾನ ಮಾಡಿದರೆಂದು ತಿಳಿಸಿದೆ. ಈ ರೀತಿ ಶಕವರುಷ ೧೩೯೮ನೆಯ ದುರ್ಮುಖಿ ಸಂವತ್ಸರ ಕಾರ್ತಿಕ ಬಹುಳ ೫ (ಅಂದರೆ ೬ ನವಂಬರ ೧೪೭೬) ರಂದು ಭಾವಿ ಕಟ್ಟೆ ಪೂರ್ಣಗೊಳಿಸಲಾಯಿತು. ಈ ನಗರದ ಅಂಕದಖಣದ ಪಶ್ಚಿಮ ದಿಕ್ಕಿಗಿರುವ ಪಂಚಮಲಕಪ್ಪನ ಭಾವಿಯೆ ಈ ಶಾಸನೋಕ್ತ ಭಾವಿ. ಈ ಶಾಸನದಲ್ಲಿ ಈ ಭಾವಿಯ ಉಪಯುಕ್ತತೆಯು ಬಗೆಗೆ

೨೦ ....ಜಲಂ ಭುವನವಿತ್ಯಾ

೨೧ ಹುಜ್ಜಲಂ ಜೀವನಮುಚ್ಯತೇ ತಸ್ಮಾಜ್ಜಲ ಪ್ರದಾತಾ ಧರ್ಮದಾಯಕಃ ದೀನಾ

೨೨ ಬಹುಜೀವಂತಿ ನಾನ್ಯೇನರಹಿತಂ....ಕ್ಷಣ ಮೇಕಂ ನ ಜೀ

೨೩ ವತಿ....||

ಎಂದು ಹೇಳುವುದರ ಮೂಲಕ ಜೀವ ಧರಿಸುವುದಕ್ಕೆ ನೀರು ಎಷ್ಟು ಮಹತ್ವದೆಂದು ವರ್ಣಿಸಿ ಉದಕ ದಾನದ ಶ್ರೇಷ್ಠತೆಯನ್ನು ಒತ್ತಿ ಹೇಳಲಾಗಿದೆ.

ಈ ಬಾವಿಯ ವಾಸ್ತು ಮತ್ತು ಮೂರ್ತಿಶಿಲ್ಪದ ಬಗೆಗೆ ಅಧ್ಯಯನ ಮಾಡಿದ ಡಾ. ಅ. ಸುಂದರ ಅವರು

ಇದರ ಗಮನಾರ್ಹ ಅಂಶಗಳನ್ನು ಗುರುತಿಸುತ್ತ 'ಈ ಭಾವಿಯು ಮೇಲ್ಭಾಗದ ಕಟ್ಟಡವು ಆಯತಾಕಾರ ವಿನ್ಯಾಸದಲ್ಲಿದ್ದು ಪೂರ್ವ ಬದಿಯಿಂದ ಕೆಳಗೆ ನೀರಿನ ಮಟ್ಟಕ್ಕೆ ಹೋಗಲು ಮೆಟ್ಟಿಲುಗಳಿವೆ. ಮೆಟ್ಟಿಲು ಭಾಗದ ಉತ್ತರಾರ್ಧದ ಕೆಳಗೆ ಭಾವಿನೀರಿಗೆ ಪ್ರವೇಶದ್ವಾರವು ಇದರ ಮೇಲೆ ಒಂದಂತಸ್ತಿನ ಕಟ್ಟಡವಿದೆ. ಈ ಅಂತಸ್ತಿನ ಮುಂಭಾಗವು ತೆರೆದ ಅಂಕಣ ಅಂದರೆ ಮೊಗಸಾಲೆ, ಹಿಂಭಾಗವು ಮೂರು ಅಂಕಣದ ಒಂದು ಪಡಸಾಲೆ. ಮೊಗಸಾಲೆಯಿಂದ ಪಡಸಾಲೆಗೆ ಹೋಗಲು ಪ್ರವೇಶ ದ್ವಾರವಿದೆ. ಪಡಸಾಲೆಯು ಎಡಬದಿಯು ಅಂಕಣಕ್ಕೆ ಅಡ್ಡಲಾಗಿ ಗೋಡೆ ಇದ್ದು ಈ ಅಂಕಣಕ್ಕೆ ಹೋಗಲು ಪ್ರವೇಶ ದ್ವಾರವಿದೆ. ಪಡಸಾಲೆಯು ಹಿಂಬದಿಯಲ್ಲಿ ಭಾವಿ. ಇದನ್ನು ನೋಡಲು ಗೋಡೆಯ ಅಕ್ಕಪಕ್ಕದಲ್ಲಿ ಜಾಲಾಂಧ್ರವುಳ್ಳ ಕಮಾನಿನ ಕಿಟಕಿಗಳಿವೆ. ಮೊಗಸಾಲೆಯು ಎಡಬಲ ಬದಿ ಅಂಕಣಗಳಲ್ಲಿ ಒಂದೊಂದು ಶಿವಲಿಂಗಗಳಿವೆ. ಈ ಅಂತಸ್ತಿನ ನೆಲದ ಮಟ್ಟಕ್ಕೆ ಮೆಟ್ಟಿಲುಗಳ ಇಕ್ಕೆಲಗಳಲ್ಲಿ ಒಬ್ಬರು ಸುಲಭವಾಗಿ ನಡೆದು ಈ ಅಂತಸ್ತಿಗೆ ಬರಲು ಕಟ್ಟೆಗಳಿವೆ. ಈ ಕಟ್ಟೆಗಳ ಆರಂಭದಲ್ಲಿ ಎದುರುಬದುರಿನ ಗೋಡೆಯಲ್ಲಿ ಒಂದೊಂದು ದೇವಕೋಷ್ಠ, ಒಂದರಲ್ಲಿ ನಾಗಮಂಡಲ, ಮತ್ತೊಂದರಲ್ಲಿ ಆಂಜನೇಯನ ವಿಗ್ರಹಗಳಿವೆ. ಮೊಗಸಾಲೆಯು ಛತ್ತಿನಲ್ಲಿ ಅರಳಿದ ೧೬ ಎಸಳಿನ ಕಮಲಪುಷ್ಪದ ಒಂದು ಭವ್ಯ ಶಿಲ್ಪವು ನೋಡುಗರ ಮನವನ್ನು ಸೆಳೆಯುತ್ತದೆ.

ಈ ಭಾವಿಯಲ್ಲಿಯ ಎರಡು ದ್ವಾರಬಂಧಗಳು ಮತ್ತು ಪಡಸಾಲೆಯು ಮಾಡಿನಲ್ಲಿಯ ನಾಲ್ಕು ಜೋಡಿ ಉಬ್ಬುಶಿಲ್ಪಗಳು ಮತ್ತು ವಿಪುಲ ಗಂಟುಗಳ ಸುಂದರ ಸುಳುಹು ಹೊಳಹುಗಳಿಂದ ಕೂಡಿದ ನಾಗಬಂಧ ವಿಶೇಷವಾಗಿದೆ. ಪಡಸಾಲೆಗೆ ಹೋಗುವ ದ್ವಾರಬಂಧದಲ್ಲಿ ಎರಡು ರತ್ನ, ವಿಶಿಷ್ಟಸ್ತಂಭ ಮತ್ತು ಎರಡು ಲತಾಶಾಖೆಗಳಿವೆ. ಸ್ತಂಭಶಾಖೆಯು ಬುಡದಲ್ಲಿ ಒಂದೊಂದು ಶೈವ ದ್ವಾರಪಾಲಕರುಳ್ಳ ತುದಿಯಲ್ಲಿ ಅತಿ ದೊಡ್ಡ ಸ್ಪಷ್ಟ ಸಿಂಹಲಲಾಟವುಳ್ಳ ಕಮಾನಿನ ಗೂಡು, ದ್ವಾರಪಾಲಕರ ಒಂದು ಬದಿಯಲ್ಲಿ ನೃತ್ಯಗಾತಿಯರು, ದ್ವಾರಬಂಧದ ಮೇಲಿನ ಮಾಲೆಗಳಲ್ಲಿ ಎದ್ದು ತೋರುವ ಕುಳಿತ ಸಿಂಹದ ಶಿಲ್ಪ, ಇವುಗಳ ಅಂತರದಲ್ಲಿ ವಾದ್ಯಮೇಳದೊಂದಿಗೆ ನೃತ್ಯಗಾತಿಯರು, ಕಪೋತದ ಅಡ್ಡ ಪಟ್ಟಿಕೆಯು ಮೇಲೆ ಕಂಗುರಗಳ ಸಾಲು ವಿಶೇಷವೆಂದೇ ಹೇಳಬೇಕು. ಲಲಾಟಬಿಂಬದಲ್ಲಿ ಬಹುಶಃ ಸಿಂಹ (?) ವಾಹನದ ಜೊತೆಗೆ ವಾಮಲಲಿತಾಸನದಲ್ಲಿಯ ದೇವಿಯು ಬಿಂಬವಿದೆ. ಪಡಸಾಲೆಯು ಎಡಬದಿಯು ಅಂಕಣದ ದ್ವಾರಬಂಧವು ದ್ವಾರಪಾಲರಿಲ್ಲದ, ಆದರೆ ಸಾಮಾನ್ಯವಾಗಿ ಪ್ರಾಚೀನ ದೇವಾಲಯದ ಸರಳ ದ್ವಾರಬಂಧದಂತೆಯೆ ಇದೆ. ಹಾಗೆಯೆ ಛತ್ತಿನಲ್ಲಿ ಪ್ರೇಮಸಲ್ಲಾಪದಲ್ಲಿ ತೊಡಗಿರುವ ದಂಪತಿಗಳ ಎರಡು ಚಿತ್ರಗಳು, ಒಬ್ಬ ಪ್ರತಿಷ್ಠಿತ ವ್ಯಕ್ತಿಯು ಮುಂದೆ ವಾದ್ಯ ನುಡಿಸುತ್ತಿರುವ ವ್ಯಕ್ತಿ, ನಾಲ್ಕು ಕಾಲುಗಳನ್ನೇ ವಿವಿಧ ಭಂಗಿಯಲ್ಲಿ ವ್ಯಕ್ತಪಡಿಸಿದ ಇಬ್ಬರು ಪುರುಷರು ಒಬ್ಬ ಸ್ತ್ರೀಯು ಕುಣಿತ ಹಾಗೂ ಫಲಪುಷ್ಪ ಫಲಕಗಳು ವಿಜಯನಗರ ಶೈಲಿಯಲ್ಲಿವೆ. ಕರ್ನಾಟಕದ ನಾನಾ ಭಾಗಗಳ ವಿಜಯನಗರ ಶಿಲ್ಪ ಸಂಪತ್ತಿನಲ್ಲಿ ವೈವಿಧ್ಯಮಯವಾದ ಸುಲಭವಾಗಿ ಬಿಡಿಸಲಾಗದ ನಾಗಮಂಡಲ ಮತ್ತು ನಾಗ ವಿಶೇಷ. ಆದರೆ ಈ ಭಾವಿಯು ಪಡಸಾಲೆ ಛತ್ತಿನ ದೊಡ್ಡ ಪ್ರಮಾಣದ ಕಗ್ಗಂಟಷ್ಟೇ ಅಲ್ಲ : ಬಿಡಿಸಲಸಾಧ್ಯವೇನೋ ? ಎಂಬಂತಿರುವ ಬ್ರಹ್ಮಗಂಟಿನ ಅತಿ ಉದ್ದದ ಏಳು ಹೆಡೆಯು ಘಟಸರ್ಪದ ಮಂಡಲ. ಮಧ್ಯದಲ್ಲಿ ಬಿಚ್ಚಿದ ತನ್ನ ಏಳು ಹೆಡೆಯುನ್ನಿಟ್ಟು ಹೊರಬದಿಯಲ್ಲಿ ಸುರುಳಿ ಒಳಬದಿಯಲ್ಲಿ ಚೌಕೋನ ಮತ್ತು ಪವಿತ್ರ ಗಂಟುಗಳು ಬರುವಂತೆ ತನ್ನ ಉದ್ದದೇಹವನ್ನು ಒಂದು ವ್ಯೂಹವನ್ನಾಗಿ ಮಾಡಿಕೊಂಡಿದೆ.

ಇದರ ಶೈಲಿ ಕಾಲಮಾನವನ್ನು ಪರಿಚಯಿಸುತ್ತ ಪಂಚಮುಲಕಪ್ಪನ ಭಾವಿಯು ಸಾರವತ್ತಾಗಿ ವಿಜಯನಗರ ಶೈಲಿಯಲ್ಲಿದೆ. ಅಷ್ಟೇ ಅಲ್ಲ ; ಈ ಶೈಲಿಯಲ್ಲಿ ಭಾರತೀಯ-ಇಸ್ಲಾಂ ಶೈಲಿಯ ಅಲ್ಪಪ್ರಮಾಣದ ಪ್ರಭಾವವನ್ನೂ ಕಾಣಬಹುದು. ಪಡಸಾಲೆಯು ದ್ವಾರಬಂಧದ ಮೇಲಿನ ಕಂಗುರಪಟ್ಟಿಕೆ, ದ್ವಾರಪಾಲರ ಕಮಾನಿನ ಗೂಡು, ಪಡಸಾಲೆಯಲ್ಲಿನ ಕಮಾನಿನ ಕಿಟಕಿ ಹಾಗೂ ನಿರ್ಮಾಣದಲ್ಲಿ ವಜ್ರಗಾರೆಯ ಉಪಯೋಗ ಇವು ಭಾರತೀಯ ಇಸ್ಲಾಂ ವಾಸ್ತುಶಿಲ್ಪದ ಲಕ್ಷಣಗಳು, ಆದ್ದರಿಂದ ಈ ಭಾವಿಯು ಇವೆರಡು ಶೈಲಿಗಳ ಹದ ಮಿಶ್ರಣದ ಒಂದು ಉತ್ತಮ ನಿದರ್ಶನ ಎಂದಿರುವರು. 'ಈ ಶೈಲಿ ಒಂದು ಪ್ರಭೇದವಾದ' ಆದಿಲಶಾಹಿ ಶೈಲಿಯ

ದೆಂದು ತರ್ಕಿಸಬಹುದು. ಇದರಲ್ಲಿಯ ವಿಜಯನಗರ ಶೈಲಿಯು ಈ ಶೈಲಿಯ ಮಧ್ಯ ಮತ್ತು ಅಂತ್ಯ ಹಂತದ ಕಾಲದ್ದೆಂದು ಮೇಲೆ ಗುರುತಿಸಿದ ಕೆಲವು ವಿಶಿಷ್ಟ ಲಕ್ಷಣ ಗಳಿಂದ ಹೇಳಬಹುದು. ಆದ್ದರಿಂದ ಈ ಭಾವಿಯು ೧೬ನೆಯ ಶತಮಾನದ್ದೆಂದು ಅಭಿಪ್ರಾಯಪಟ್ಟಿರುವ ಡಾ. ಸುಂದರ ಅವರು ಇದಕ್ಕೆ ಒಂದು ವಿರೋಧವನ್ನು ಸೂಚಿಸುತ್ತ 'ಶಹಬಝಾರ ಬಸವಣ್ಣನ ಗುಡಿಯ ಮುಂಧಿನ ಶಾಸನ ಇದರ ನಿರ್ಮಾಣದ ಕಾಲ ಕ್ರಿ.ಶ. ೧೪೭೬ ಎಂದು, ಸೋಪಾನದ ಭಾವಿ ಇರುವ ಸ್ಥಳವನ್ನು ಅಂಕದಬಣದ ಪಡುವದಿಕ್ಕು' ಎಂದು ಸರಿಯಾಗಿ ನಿರ್ದೇಶಿಸಿದೆ. ಅಂಕದಬಣದ ಪಶ್ಚಿಮಕ್ಕೆ ಇದೊಂದೆ ಸೋಪಾನದ ಭಾವಿಯಿದೆ. ಆದರೆ ಈ ಭಾವಿಯ ಸ್ಥಳೀಯ ಹೆಸರಾದ ಪಂಚಮಲಕಪ್ಪನ ಭಾವಿ ಎಂಬುದು ಈ ಸಂದರ್ಭದಲ್ಲಿ ನಮ್ಮ ಗಮನ ಸೆಳೆಯುವುದೆಂದು ಸೂಚಿಸುತ್ತಾರೆ. ಹಂಡೆಬಾಲದ ಹನುಮಪ್ಪ ನಾಯಕನಿಗೆ ಐದು ಮಕ್ಕಳಿದ್ದು ಇಬ್ಬರಿಗೆ ಹಿರೇಮಲ್ಲಪ್ಪ, ಚಿಕ್ಕ ಮಲ್ಲಪ್ಪರೆಂದು ಹೆಸರಿತ್ತು ಈ ಭಾವಿಗೆ ಪ್ರಚಲಿತ ಹೆಸರು ಈ ಐದು ಜನ ಸಹೋದರರ ಹೆಸರನ್ನೇ ಸೂಚಿಸುತ್ತದೆ ಯೆಂದು ಊಹಿಸಬಹುದು. ಬಹುಶಃ ಹಿರೇ ಮತ್ತು ಚಿಕ್ಕಮಲ್ಲಪ್ಪನಾಯಕರು ಈ ಭಾವಿಯ ನಿರ್ಮಾಣಕ್ಕೆ ಕಾರಣರಾಗಿ ಉಳಿದ ೩ ಜನ ಅಣ್ಣತಮ್ಮಂದಿರು ಈ ಕಾರ್ಯದೊಡನೆ ಸೇರಿದ್ದರಿಂದ ಈ ಭಾವಿಗೆ ರೂಢಿಯಲ್ಲಿ 'ಪಂಚಮಲಕಪ್ಪನ ಭಾವಿ' ಎಂದು ಹೆಸರು ಬಂದಿರ ಬಹುದು. ಇದು ನಿಜವಾದಲ್ಲಿ ಹಂಡೆ ಮನೆತನದ ಹೊಸ ಬೆಳಕು ಬೀಳುತ್ತದೆ. ಶಾಸನವನ್ನು ಮತ್ತೆ ಕೂಲಂಕುಷ ಪರೀಕ್ಷೆಗೆ ಒಳಪಡಿಸಬೇಕಾಗುತ್ತದೆ. ಪಂಚಸೋದರರು ಕಟ್ಟಿಸಿದ ಈ ಭಾವಿಗೂ ದುರ್ಮರಣ ಹೊಂದಿದ ದೇವರಸಿಗೂ ಸಂಬಂಧವೇನೆಂಬುದನ್ನು ಶೋಧಿಸಬೇಕಾ ಗಿದೆ.

# ಚಿಗಟೇರಿ ಶಿವನಪ್ಪನಾಯಕನ (ಗುಣಾವಲೋಕನ)

—ಕುಂ.ಬಾ. ಸದಾಶಿವಪ್ಪ

ವಿಜಯನಗರ ಸಾಮ್ರಾಜ್ಯ ಹಾಳಾದ ಮೇಲೆ ಬಳ್ಳಾರಿ ಜಿಲ್ಲೆಯಲ್ಲಿ ಅವರ ಸಾಮಂತ ಅರಸರು ಕೆಲ ರಾಜ್ಯಗಳನ್ನು ಸ್ಥಾಪಿಸಿದರು. ಇವರಲ್ಲಿ ಪ್ರಮುಖ ರೆಂದರೆ ; ಹರಪನಹಳ್ಳಿ ನಾಯಕರು. ಇವರು ಸುಮಾರು ೩೦೦ ವರ್ಷಕ್ಕೂ ಹೆಚ್ಚು ಕಾಲ ರಾಜ್ಯವಾಳಿದರು. (ಕ್ರಿ.ಶ. ೧೫೬೬–೧೭೯೯).

ತಂಬ್ರಹಳ್ಳಿ ಓಬರನಾಯಕ ; ಕುರೇದಗುಡ್ಡೆ ಭರ್ಮಣ್ಣನಾಯಕ ; ವೀರದುರ್ಗದ ರಾಮಯ್ಯನಾಯಕ ; ಚಿಗಟೇರಿ ಶಿವನಪ್ಪನಾಯಕ ; ಬಾಗಳಿ ರಂಗಣ್ಣನಾಯಕ ಮುಂತಾದವರು ಹರಪನಹಳ್ಳಿ ನಾಯಕರಿಗೆ ಸಾಮಂತ ರಾಗಿದ್ದರು.

ಶಿವನಪ್ಪನೆಂಬ ಹೆಸರಿನ ತಳವಾರನು ಒಂದು ಬಾರಿ ಚಿಗಟೇರಿ ಗೌಡರಿಂದ ಒಂದು ಓಲೆಯನ್ನು ತೆಗೆದು ಕೊಂಡು ಬಂದು ಹರಪನಹಳ್ಳಿ ಅರಸರಿಗೆ ಮುಟ್ಟಿಸಿದನು. ಆಗ ಅರಸನಾದ ಮೊದಲ ಬಸವಂತನಾಯಕನು ತನ್ನ ರಾಣಿ ಹರಿಯಮ್ಮಾಜಿಯ ಕೂಡ ಜೂಜಾಡುತ್ತಿದ್ದನು. ಅರಸನು ಜೂಜಾಟದಲ್ಲಿ ಸೋಲುವ ಹಂತದಲ್ಲಿದ್ದನು. ಆಗ ಅಲ್ಲಿಯೇ ರಾಣಿಯ ಹಿಂದುಗಡೆ ನಿಂತಿದ್ದ ಶಿವನಪ್ಪ ತಳವಾರನು ಅರಸನಿಗೆ ಸಂಜ್ಞೆ ಮಾಡಿದನು. ಇವನ ಸಂಜ್ಞೆಯನ್ನರಿತ ಅರಸ ಆಟವನ್ನು ಮುಂದುವರೆಸಿ, ಜೂಜಾಟದಲ್ಲಿ ರಾಣಿಯ ಮೇಲೆ ಜಯ ಪಡೆದನು. ಅರಸನಿಗೆ ಶಿವನಪ್ಪನ ಮೇಲೆ ಹೆಚ್ಚಿಗೆ ಪ್ರೀತಿಯುಂಟಾ ಯಿತು. ಅವನು ತಂದ ಓಲೆಯನ್ನು ಈಗ ವಿವರವಾಗಿ ಓದಿಕೊಂಡನು. ಕೂಡಲೇ ಮರು ಓಲೆಯನ್ನು ಚಿಗಟೇರಿಯ ಗೌಡರಿಗೆ ಬರೆದು ಅಂದಿನಿಂದ ಶಿವನಪ್ಪನೇ ಚಿಗಟೇರಿ ಕೋಟೆಗೆ ಅರಸನೆಂದು ಸಾರಿ ಆಜ್ಞೆಯನ್ನು ಕಳಿಸಿದನು. (ಈ ಜೂಜಾಟದ ವಿಚಾರಕ್ಕೆ ಆಧಾರಗಳಿಲ್ಲ. ಇದೆಲ್ಲಾ ಜನರ ಬಾಯಿಮಾತುಗಳಲ್ಲಿ ಕೇಳಿ ಬರು ತ್ತದೆ.*)

ಹೀಗೆ ಅರಸನಾದ ಶಿವನಪ್ಪನು ಹರಪನಹಳ್ಳಿ ಅರಸ ರಿಗೆ ವಿಧೇಯನಾಗಿ ಚಿಗಟೇರಿ ಕೋಟೆಯನ್ನು ಕೆಲಕಾಲ ಆಳಿದನು.[1] ಚಿಗಟೇರಿಯಲ್ಲಿ ಆಗ ಚಿಕ್ಕೇರಿ ಕೆರೆ ; ಹಿರೇಕೆರೆ ಎಂಬುವ ಹೆಸರಿನ ಎರಡು ಕೆರೆಗಳು ಇದ್ದವು. ಅವು ಆಗ ಮಣ್ಣಿನಿಂದ ಹೂತು ಹೋಗಿದ್ದವು. ಶಿವನಪ್ಪ ನಾಯಕನು ಚಿಗಟೇರಿಯ ಗುಡ್ಡದ ಪಕ್ಕದಲ್ಲಿ ಒಂದು ಕೆರೆ ಯನ್ನು ಊರಲ್ಲಿ ಒಂದು ಬಾವಿಯನ್ನು ನಿರ್ಮಿಸಿದನು. ಇವುಗಳಿಗೂ ನೀರು ಹೆಚ್ಚು ಸಂಗ್ರಹವಾಗಲಿಲ್ಲ. ಆಗ ತಾನು ಕಟ್ಟಿಸಿದ ಕೆರೆಗೆ ಹರಪನಹಳ್ಳಿ ಪಟ್ಟಣದ ಪಶ್ಚಿಮ ಭಾಗದ ಕುಂಚೂರು ಹಲುವಾಗಲು ಬಳಿ ಹರಿದಿರುವ ತುಂಗಭದ್ರಾ ನದಿ ನೀರನ್ನು ನದಿಗೆ ಅಣೆಕಟ್ಟು ರಚಿಸಿ ನೀರು ಒದಗಿಸಲು ಪ್ರಯತ್ನಿಸಿದನು. ತುಂಗಭದ್ರಾ ನದಿಯ ಪ್ರದೇಶದ ಮಟ್ಟಕ್ಕಿಂತ ಹರಪನಹಳ್ಳಿ ಪುರವನ್ನು

* ಶಿವನಪ್ಪನಾಯಕರ ಸಂಬಂಧಿ (ವಂಶಸ್ಥರು) ಭಂಗಿ ಮುನಿಯಪ್ಪನ ಹೇಳಿಕೆ

1 ಚಿಗಟೇರಿ ಶಿವನಪ್ಪನಾಯಕ ಚಿಗಟೇರಿಯನ್ನಾಳಿದನು. ಅವನು ಹರಪನಹಳ್ಳಿ ಅರಸರ ಸಾಮಂತ ಮತ್ತು ಅವನ ಕಾಲ ಶಾ.ಶ. ೧೬೩೦, ಕ್ರಿ.ಶ. ೧೭೦೮

ಸೇರುವ ಚಿಗಟೇರಿಗೆ ಬರುವ ಪ್ರದೇಶ ಎತ್ತರವಾಗಿದ್ದುದರಿಂದ ಶಿವನಪ್ಪನ ಯೋಜನೆ ವಿಫಲವಾಯಿತು.

ಹರಪನಹಳ್ಳಿ ಅರಸನಾದ ಮೊದಲ ಬಸವಂತ ನಾಯಕ ಅಥವಾ ಮುಮ್ಮಡಿ ಬಸಪ್ಪ ನಾಯಕ, ಈತನ ಆಜ್ಞೆಯು ಮೇರೆಗೆ ಹರಪನಹಳ್ಳಿ ತಾಲ್ಲೂಕಿನ ಉಚ್ಚಂಗಿ ದುರ್ಗದ ಶ್ರೀ ಉಚ್ಚಂಗಮ್ಮ ದೇವತೆಗೆ ಒಂದು ಹಿತ್ತಾಳೆ ಗಂಟೆಯನ್ನು ನಿರ್ಮಿಸಿಕೊಟ್ಟಿರುವರು.

ಹರಪನಹಳ್ಳಿಗೆ ಸುಮಾರು ೮ ಕಿಲೋಮೀಟರ್ ದೂರವಿರುವ ಬಾಗಳಿ ಗ್ರಾಮದಲ್ಲಿ ಪ್ರತಿವರ್ಷವೂ ಗೋಣಿ ಬಸವಪ್ಪನ ಜಾತ್ರೆ ಜರುಗುತ್ತದೆ. ಈ ಜಾತ್ರಾ ಸಮಯದಲ್ಲಿ ವಿಶ್ವಕಲಾ ಯುವಕ ರೈತ ನಾಟ್ಯ ಸಂಘ ಬಾಗಳಿಯವರು ಒಂದು ನಾಟಕವನ್ನು ಆಡುವರು. ಆ ನಾಟಕದ ಹೆಸರು ಶ್ರೀ ಗೋಣಿಬಸವೇಶ್ವರ. ಅದರಲ್ಲಿ ಶಿವನಪ್ಪನ ಪಾತ್ರ ಕಾಣುವುದು. ಶಿವನಪ್ಪ ಸಾಧು ಗೋಣಿಬಸಪ್ಪನನ್ನು ಹಿಂಸಿಸುವುದು ; ಗೋಣಿಬಸಪ್ಪನು ಅವುಗಳಿಂದ ಪಾರಾಗುವ ಸನ್ನಿವೇಶಗಳಿವೆ. ಶಿವನಪ್ಪನ ಪಾತ್ರ ಅತ್ಯಂತ ಕ್ರೂರವಾಗಿ ಕಂಡು ಬರುವುದು.

ಗೋಣಿಬಸಪ್ಪ ಸಾಧುವನ್ನು ಶಿವನಪ್ಪನಾಯಕ ಒಂದು ವೇಳೆ ದ್ವೇಷಿಸಿರಬಹುದು ; ಆದರೆ ಅದು ಅವನ ವೈಯಕ್ತಿಕ ವಿಚಾರವಾಗುತ್ತದೆ. ಶಿವನಪ್ಪನಾಯಕ ತನ್ನ ಆಡಳಿತ ಕಾಲದಲ್ಲಿ ಅನೇಕ ಜನಹಿತ ಕಾರ್ಯಗಳನ್ನು ಮಾಡಿರುವನು. ದೇವರಲ್ಲಿ ಮತ್ತು ತನ್ನ ಒಡೆಯರಾದ ಹರಪನಹಳ್ಳಿಯ ಅರಸರಲ್ಲಿ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡಿದ್ದನೆಂದು ತಿಳಿದು ಬರುವುದು. ಅದಕ್ಕಾಗಿಯೇ ಹರಪನಹಳ್ಳಿಯ ಅರಸರು ಅವನಿಗೆ ಕುಮಾರ ಶಿವನಪ್ಪನೆಂದು ಕರೆದಿರುವನು.

ಮೇಲಿನ ಕೆಲವು ಅಂಶಗಳನ್ನು ನಾವು ಗಮನಿಸಿದರೆ ಈಗಲೂ ಕಣ್ಣಿಗೆ ಕಾಣುವ ಶಿವನಪ್ಪನ ಕೆರೆ, ಬಾವಿ, ಗಂಟೆಗಳನ್ನು ನೋಡಿದರೆ ಶಿವನಪ್ಪನು ಕೆಟ್ಟವನೆಂದು ಹೇಳಬಹುದೆ ? ○

# ಭಿತ್ತಿ ಚಿತ್ರಗಳಲ್ಲಿ ಐತಿಹಾಸಿಕ ವ್ಯಕ್ತಿಗಳು

ಡಾ|| ಜ್ಯೋತ್ಸ್ನಾ ಕಾಮತ

ಛಾಯಾಗ್ರಹಣದ ಸವಲತ್ತುಗಳು ಭಾರತದಲ್ಲಿ ಲಭ್ಯವಾಗುವ ತನಕ ರಾಜ-ಮಹಾರಾಜರು ಅನುಕೂಲವಿದ್ದ ಇತರರೆಲ್ಲ ತಮ್ಮನ್ನು ರೂಪಿಸಿಕೊಳ್ಳಲು ಚಿತ್ರಕಲೆಗೇ ಮೊರೆ ಹೋಗಬೇಕಾಗಿತ್ತು. ಗತಕಾಲದ ಪ್ರಭಾವಶಾಲಿ ವ್ಯಕ್ತಿಗಳ ಅಧ್ಯಯನಕ್ಕೆ ತೈಲಚಿತ್ರ, ಜಲವರ್ಣಚಿತ್ರಗಳನ್ನು ಬಳಸಿಕೊಂಡರೂ ಸಂಶೋಧಕರು ಭಿತ್ತಿ ಚಿತ್ರಗಳತ್ತ ಹೆಚ್ಚಾಗಿ ಲಕ್ಷ ಹರಿಸಿದಂತಿಲ್ಲ. ಬಹುಶಃ ಇದಕ್ಕೆ ಮುಖ್ಯ ಕಾರಣ ಬಹುಸಂಖ್ಯಾತ ಚಿತ್ರಗಳನ್ನು ಹೆಸರಿಸದೆ ಇದರಿಂದ, ಅವುಗಳನ್ನು ಗುರುತಿಸುವದು ಸುಲಭವಲ್ಲದಿರಬಹುದು. ಆದರೆ ಶಾಸನ, ತಾಮ್ರಪಟ, ಶಿಲ್ಪಗಳಂತಹ ಪೂರಕವಾಗಿರುವ ಮಾಹಿತಿಯನ್ನು ಅವಲಂಬಿಸಿದರೆ, ಐತಿಹಾಸಿಕ ವ್ಯಕ್ತಿಗಳನ್ನು ಗುರುತಿಸುವುದು ಅಸಾಧ್ಯವೇನಲ್ಲ. ಕರ್ನಾಟಕ ರಾಜ್ಯದ ಉದ್ದಗಲಕ್ಕೆ ಇರುವ ಭಿತ್ತಿ ಚಿತ್ರಗಳಲ್ಲಿ ಮೂಡಿಸಿರುವ ಅಂಥ ಕೆಲ ವ್ಯಕ್ತಿಗಳ ಕಿರು ಪರಿಚಯ ಇಲ್ಲಿದೆ.

ಕರ್ನಾಟಕವನ್ನಾಳಿದ ಶ್ರೇಷ್ಠ ಅರಸರಲ್ಲಿ ಒಬ್ಬನಾದ ಚಾಲುಕ್ಯ ಇಮ್ಮಡಿ ಪುಲಿಕೇಶಿ (ಕ್ರಿ.ಶ. ೬ನೇ ಶತಮಾನ)ಯ ರಾಜ್ಯ, ನರ್ಮದಾ ನದಿಯವರೆಗೆ ಹಬ್ಬಿದ್ದರಿಂದ, ಅಜಂತಾದ ಪ್ರಥಮ ಗುಹೆಯಲ್ಲಿ ಅವನನ್ನು ಚಿತ್ರಿಸಲಾಗಿದೆ, ಎಂದು ಒಂದು ಅಭಿಪ್ರಾಯವಿದೆ. ಠೀವಿಯಿಂದ ಸಿಂಹಾಸನದಲ್ಲಿ ಆಸೀನನಾದ ಅರಸನಿಗೆ ಪರ್ಷಿಯಾದ ರಾಯಭಾರಿ ಉಡುಗೊರೆ ಕೊಡುತ್ತಿದ್ದಾನೆ. ಅರಸರ ಪೋಷಾಕಿನಲ್ಲಿ ವಿಜೃಂಭಿಸುತ್ತಿಲ್ಲವಾದ್ದರಿಂದ ಆತ ಅರಸನಾಗಿರದೇ ಯಾವುದೋ ಸಾಮಂತ ವ್ಯಕ್ತಿಯಾಗಿರಬಹುದು ಎನ್ನುವವರಿದ್ದಾರೆ. ಚಿತ್ರಕಾರರೆಲ್ಲ ಬೌದ್ಧಭಿಕ್ಷುಗಳಾದ್ದರಿಂದ, ಬುದ್ಧನ ಜೀವನ ವೃತ್ತಾಂತಕ್ಕೆ ಸಂಬಂಧಿಸದೇ ಇರುವವರನ್ನೆಲ್ಲ ಆಡಂಬರ ರಹಿತವಾಗಿ ಚಿತ್ರಿಸಲು ಭಿಕ್ಕುಗಳು ಯತ್ನಿಸಿರಬಹುದು. ಇಂತಹದೇ ಸಂದೇಹ ಹಂಪೆಯ ವಿರೂಪಾಕ್ಷ ದೇವಾಲಯದ ಮೆರವಣಿಗೆಯ ಭಿತ್ತಿ ಚಿತ್ರದಲ್ಲಿದೆ. ಪಲ್ಲಕ್ಕಿಯಲ್ಲಿ ಹೊರಟಿರುವವರು, ವಿದ್ಯಾರಣ್ಯರೋ, ವ್ಯಾಸರಾಯರೋ ಎಂಬುದರ ಬಗ್ಗೆ ಭಿನ್ನಾಭಿಪ್ರಾಯವಿದೆ. ಹಿಂದೂರಾಜ ಸುರತ್ರಾಣರ ರಾಯ ದೇಗುಲದಲ್ಲಿ, ಹಿಂದೂ ಸಾಮ್ರಾಜ್ಯ ಸ್ಥಾಪನೆಗೆ ಕಾರಣೀಭೂತರಾದ ವಿದ್ಯಾರಣ್ಯರನ್ನು ಗೌರವ ಸೂಚಕವಾಗಿ ಮೆರವಣಿಗೆಯಲ್ಲಿ ಬರಮಾಡಿಕೊಳ್ಳುವ ಸನ್ನಿವೇಶ ಚಿತ್ರಿತವಾಗಿದ್ದರೆ ಸಹಜವಾದದ್ದೇ. ಲೇಪಾಕ್ಷಿಯ ಪಾಪನಾಶೇಶ್ವರ ದೇವಾಲಯದ ಹೊರಾಂಗಣದ ಮುಚ್ಚಿಗೆಯಲ್ಲಿ ಅದನ್ನು ಕಟ್ಟಿಸಿದ ವೀರಣ್ಣ ಮತ್ತು ವಿರೂಪಣ್ಣ ನಾಯಕರನ್ನು ಚಿತ್ರಿಸಲಾಗಿದೆ. ಗರ್ಭಗುಡಿಯ ಮುಚ್ಚಿಗೆಯಲ್ಲೂ ಈ ಸೋದರರನ್ನು ಭವ್ಯವಾಗಿ ಚಿತ್ರಿಸಲಾಗಿದೆ. ಅವರ ಸಮಕಾಲೀನ ವೇಷ ಭೂಷಣಗಳು ಅತ್ಯಂತ ನೈಜವಾಗಿವೆ. ಕುಸುರಿನ ಕೆಲಸ ಮಾಡಿದ ವೆಲ್ವೆಟ್ ಬಟ್ಟೆಯ ಎತ್ತರವಾದ ಕುಲಾಯಿಗಳು, ಶಿವಭಕ್ತರೆಂದು ಸಾರಲು, ವಿಭೂತಿಯ ಪಟ್ಟೆಗಳು, ಕೊರಳಿಗೆ ಮುತ್ತಿನ ಹಾರಗಳು, ಶುಭ್ರವಾದ 'ಕಬಾಯಿ' ಅಥವಾ ನಿಲುವಂಗಿ, ರೇಶ್ಮೆ ಪಂಚೆ, ನಿಲುವಂಗಿಯ ಮೇಲೆ ಬಿಗಿದುಕೊಂಡ ಚೌಕುಡಿಯ ಪಟ್ಟಿ. ಇದು ಸಾಮಾನ್ಯವಾಗಿ ಪೂಜೆಗೆ ಹೊರಟಾಗ ಅರಸಾಧಿಗಳು ಧರಿಸುವ ಉಡುಗೆಯಾಗಿತ್ತು. ಭರತೇಶ ವೈಭವದಲ್ಲಿ ಮತ್ತು ತೀರ ಇತ್ತೀಚೆಗೆ ಪ್ರಕಟವಾದ "ಕೃಷ್ಣದೇವರಾಯನ ದಿನಚರಿ"ಗಳಲ್ಲಿ ಕುಲಾಯಿ,

ಕಬಯಾಗಳ ಉಲ್ಲೇಖ ಬರುತ್ತದೆ. ಬಹುಶಃ ಮುಸ್ಲಿಂ ವೇಷಭೂಷಣದಿಂದ 'ಕಬಾಯಿ' ಪ್ರೇರಿತವಾಗಿತ್ತು.

ಲೇಪಾಕ್ಷಿ ಬಂಧುಗಳಲ್ಲಿ ಅಣ್ಣನು ಗೌರವರ್ಣದವನಾಗಿದ್ದು ವೈಕೈ ತುಂಬಿಕೊಂಡಿದ್ದರೆ, ತಮ್ಮನು ಕೃಶಾಂಗನಾಗಿ ಕೃಷ್ಣವರ್ಣದವನಾಗಿರುತ್ತಾನೆ.

ಸೀಬಿಯ ನರಸಿಂಹಸ್ವಾಮಿ ದೇವಾಲಯದ ಮಹಾದ್ವಾರದ ಮುಚ್ಚಿಗೆಯಲ್ಲಿ ಹೊಸಗನ್ನಡದಲ್ಲಿ ಶಾಸನವೊಂದನ್ನು ಬರೆಯಲಾಗಿದೆ.[1] ಇತ್ತೀಚೆಗೆ ಕಟ್ಟಿಸಿದ ಗೋಡೆ ಹಾಗೂ ಸಿಡಿಸಿದ ಸುಣ್ಣದಿಂದಾಗಿ, ಶಾಸನವನ್ನು ಸಂಪೂರ್ಣವಾಗಿ ಓದಲಾಗುತ್ತಿಲ್ಲ. ಅದರಲ್ಲಿ ಮುಖ್ಯವಾಗಿ ಹೈದರಾಲಿಯು ಕೆಳದಿ (ಬಿದನೂರು) ಮೊದಲಾದ ರಾಜ್ಯಗಳನ್ನು ಗೆದ್ದುಕೊಂಡಿದ್ದು, ಪ್ರಜೆಗಳನ್ನು ಮಕ್ಕಳಂತೆ ಪ್ರೀತಿಯಿಂದ ನೋಡಿಕೊಂಡಿದ್ದುದ ಉಲ್ಲೇಖವಿದೆ. 'ಹೈದರ್ ನಾಮಾ' ಬರೆದ ನಲ್ಲಪ್ಪನ ಪೂರ್ವಜರ ವಿವರಗಳು ಉಲ್ಲೇಖಿಸಲ್ಪಟ್ಟಿವೆ. ಅದರ ಕೆಳಗಡೆಯಲ್ಲಿ ತಲೆಗೆ ರುಮಾಲು ಸುತ್ತಿ, ನಿಲುವಂಗಿಯನ್ನು ತೊಟ್ಟು ರಾಜಠೀವಿಯಿಂದ ಆಸನವೊಂದರಲ್ಲಿ ಆರೂಢನಾದ ವ್ಯಕ್ತಿಗೆ ಸೇವಕನೊಬ್ಬನು ಚಾಮರದಿಂದ ಗಾಳಿ ಬೀಸುತ್ತಿದ್ದಾನೆ. ಅವನೊಂದಿಗೆ ಮೂವರು ಸೇವಕರು, ಪ್ರಭುವಿನ ಅಪ್ಪಣೆಯ ನಿರೀಕ್ಷೆಯಲ್ಲಿ ಕೈಕಟ್ಟಿ ನಿಂತಿದ್ದಾರೆ. ರಾಜನ ಎದುರಿಗೆ ರತ್ನಗಂಬಳಿಯ ಮೇಲೆ ಮಂಡೆಯೂರಿ ಕುಳಿತ ಹರೆಯದ ಭವ್ಯವ್ಯಕ್ತಿ ಟೀಪುಸುಲ್ತಾನನೆಂದು, ಇತರ ಚಿತ್ರಗಳ ಹೋಲಿಕೆಯಿಂದ ಗುರುತಿಸಬಹುದು. ಈ ಚಿತ್ರ ಪಟ್ಟೆಯ ಅಡಿಯಲ್ಲಿ ಸೀಬಿಯ ಭಿತ್ತಿ ಚಿತ್ರಗಳಿಗೆ ಕಾರಣೀಭೂತನಾದ ನಲ್ಲಪ್ಪನ ಭಾವಚಿತ್ರವಿದೆ. ತಲೆಗೆ ಪೇಟಾ ಸುತ್ತಿಕೊಂಡು, ಹಣೆಗೆ ಕುಂಕುಮದ ಬಟ್ಟು ಇಟ್ಟುಕೊಂಡು ನಕ್ಷೆ ಇರುವ ಕಸೆ ಬಂಡಿ ಧರಿಸಿದ್ದಾನೆ. ನಲ್ಲಪ್ಪನ ಮೂವರು ಬಂಧುಗಳು, ನೆಲಕ್ಕೆ ಹಾಸಿದ ಆಸನಗಳಲ್ಲಿ ಕುಳಿತು ಅವನೊಡನೆ ವಿಚಾರ ವಿನಿಮಯದಲ್ಲಿ ತೊಡಗಿದ್ದಾರೆ.

ಶ್ರೀರಂಗಪಟ್ಟಣದ ದರಿಯಾ ದೌಲತ್ ಅರಮನೆಯ ಭಿತ್ತಿ ಚಿತ್ರಗಳಲ್ಲಿ ಅನೇಕಾನೇಕ ಐತಿಹಾಸಿಕ ಗಣ್ಯ ವ್ಯಕ್ತಿಗಳನ್ನು ಗುರುತಿಸಬಹುದು. ದ್ವಿತೀಯ ಮೈಸೂರು ಯುದ್ಧವನ್ನು ನಿರೂಪಿಸುವ ಚಿತ್ರದಲ್ಲಿ ಹೈದರಾಲಿಯು ಗಜಾರೂಢನಾಗಿದ್ದಾನೆ. ಅಂಬಾರಿಯಲ್ಲಿದ್ದ ಸೇವಕನು ಪ್ರಭುಗಳಿಗೆ ಛತ್ರ ಹಿಡಿದಿದ್ದಾನೆ. ಅದಾಗಲೇ ರೂಢಿಯಲ್ಲಿ ಬಂದಿದ್ದ ಸೇವಕರ, ಮಾವುತ, ಅಶ್ವ ದಳದವರ ಪಾಶ್ಚಾತ್ಯ ಮಾದರಿಯ ಸಮವಸ್ತ್ರಗಳು ಗಮನಾರ್ಹವಾಗಿವೆ. ಕಾಳಗದ ಸನ್ನಾಹದಲ್ಲಿದ್ದ ಟೀಪುವು ಶ್ವೇತ ಅಶ್ವಾರೂಢನಾಗಿದ್ದರೆ ಆತನೊಡನೆ ವಿಚಾರ ವಿಮರ್ಶೆಯಲ್ಲಿ ತೊಡಗಿದ ಸೇನಾಪತಿಯು ನಾಶೀಪುಡಿ ಬಣ್ಣದ ಕುದುರೆಯನ್ನೇರಿದ್ದಾನೆ. ಕಾಂಚೀಪುರಂ ಯುದ್ಧದ ಅಂಕಣದಲ್ಲಿ ಹೈದರಾಲಿ, ಟೀಪು ಸುಲ್ತಾನರಂತೆ ಚಿಂತಾಕ್ರಾಂತನಾಗಿ ಪಲ್ಲಕ್ಕಿಯಲ್ಲಿದ್ದ ಬ್ರಿಟಿಷ್ ಸೇನಾಧಿಪತಿ ಕರ್ನಲ ಬೇಲಿಯನ್ನೂ ಗುರುತಿಸಬಹುದು. ಇನ್ನಿತರ ಅಂಕಣಗಳಲ್ಲಿ ಚಿತ್ರದುರ್ಗದ ಮದಕರಿನಾಯಕ, ಕೊಡಗಿನ ವೀರರಾಜೇಂದ್ರ, ಕಡಪಾದ ನವಾಬ, ಪೇಶ್ವೆ ಎರಡನೇ ಬಾಜಿರಾಯ ಮುಂತಾದವರನ್ನು ಗುರುತಿಸಬಹುದು.

ಮೈಸೂರು ನಗರದಲ್ಲಿದ್ದ ನರಸಿಂಹಸ್ವಾಮಿ ದೇವಾಲಯದ ಮಹಡಿಯಲ್ಲಿ ಪ್ರತ್ಯೇಕವಾಗಿ ಚಿತ್ರಶಾಲೆಯೊಂದನ್ನು ರಚಿಸಲಾಗಿದೆ. ಪ್ರತಿಯೊಂದು ಪಡಿರೂಪದ ಮೇಲ್ಗಡೆ ಕನ್ನಡದಲ್ಲಿ ಅರಸರ ಹೆಸರುಗಳನ್ನು ನಮೂದಿಸಿರುವದರಿಂದ ಅವರನ್ನು ಗುರುತಿಸಬಹುದು. ಮೊದಲ ನೋಟಕ್ಕೆ ಎಲ್ಲಾ ಅರಸರ ಮುಖಗಳೂ ಏಕ ಪ್ರಕಾರವಾಗಿ ಕಾಣುತ್ತವೆ. ಆಳವಾಗಿ ಅಭ್ಯಸಿಸಿದರೆ, ಅವರ ಶಿರೋಭೂಷಣಗಳು, ಮೀಸೆಯ ವಿನ್ಯಾಸ, ಕಿವಿ, ತುಟಿ, ದವಡೆ ಕಂಠಗಳ ಭೇದ, ಮುಖಚರ್ಯೆ, ಆಭರಣಗಳು ಸಾಕಷ್ಟು ಭಿನ್ನವಾಗಿರುವುದು ಗೋಚರಿಸುವದು. ಅದರಲ್ಲೂ ಕನ್ನಡಿಗರಿಗೆ ಪ್ರಿಯರಾದ ಕಂಠೀರವ ನರಸರಾಜ ಒಡೆಯರ್ (ಕ್ರಿ.ಶ. ೧೬೦೪-೧೬೫೩) ಹಾಗೂ ಚಿಕ್ಕದ ಚಾಮರಾಜ ಒಡೆಯರ (೧೬೬೦-೧೬೭೬) ಅವರ ರೂಪ ಚಹರೆಗಳನ್ನು ಭಿನ್ನವಾಗಿ, ಸ್ಪಷ್ಟವಾಗಿ ವಿಂಗಡಿಸಬಹುದಾಗಿದೆ. ಮೈಸೂರಿನ ಜಗನ್ಮೋಹನ ಅರಮನೆಯ ಚಿತ್ರಶಾಲೆಯಲ್ಲಿ ಅನೇಕಾನೇಕ ಒಡೆಯರು, ರಾಜ-

---

1 ಎ.ಕ. XII ಸಿರಾ ಸಂ. ೯೮

ಮಹಾರಾಜರ ಜೊತೆಗೆ ಸಮಕಾಲೀನ ಗಣ್ಯ ವ್ಯಕ್ತಿಗಳನ್ನು ಗುರುತಿಸಬಹುದು, ನಮಗೆ ಈಗ ಲಭ್ಯವಿಲ್ಲದ ಆದರೆ ಸಮಕಾಲೀನ ಕಲಾಕಾರರಿಗೆ ಪರಿಚಿತವಿದ್ದ ನೈಜವಾದ ತೈಲಚಿತ್ರಗಳಿಂದ ಈ ಪ್ರತಿ ಚಿತ್ರಗಳನ್ನು ಬರೆದಿರಬಹುದಾದ ಸಾಧ್ಯತೆಯಿದೆ.

ಕರ್ನಾಟಕ ಕರಾವಳಿಗೇ ಸೀಮಿತವಾಗಿರುವ ಕಾವಿ ಚಿತ್ರಗಳಲ್ಲಿ ಮಧ್ವಾಚಾರ್ಯರು, ಸಂತರಾಮದಾಸ, ತುಕಾರಾಮರಂಥವರನ್ನು ಪಡಿ ಚಿತ್ರಗಳಿಂದ ಚಿತ್ರಿಸಿದ್ದನ್ನು ಗುರುತಿಸಬಹುದು. ಇನ್ನಿತರ ಸಾಮಯಿಕ ವ್ಯಕ್ತಿಗಳ ಚಿತ್ರಗಳಿದ್ದರೂ ಗುರುತಿಸುವದು ಕಷ್ಟ !

ನಮ್ಮ ಚರಿತ್ರೆಯ ಪಠ್ಯ ಪುಸ್ತಕಗಳಲ್ಲಿ ಹೀಗೆ ಲಭ್ಯವಿರುವ ಕೆಲವು ಐತಿಹಾಸಿಕ ಚಿತ್ರಗಳನ್ನಾದರೂ ಸೇರಿಸುವ ಔದಾರ್ಯವನ್ನು ಸರಕಾರ ಮತ್ತು ಸಂಸ್ಥೆಗಳು ತೋರಿದಲ್ಲಿ ಕೆಲವಾದರೂ ಚಿರಸ್ಮರಣೀಯರ ಚಿತ್ರಗಳು ಎಳೆಯರ ಮನಸ್ಸಿನಲ್ಲಿ ಉಳಿದುಕೊಂಡಾವು. ನನ್ನ ವಿದ್ಯಾರ್ಥಿ ಜೀವನದ ದಿನಗಳಿಂದಲೂ ಪಠ್ಯಕ್ಕೆ ಅರ್ಥಾತ್ ಸಂಬಂಧವಿಲ್ಲದ್ದ ಚಿತ್ರಗಳನ್ನು ನೋಡುತ್ತ ಬಂದಿದ್ದೇನೆ. ನೂರಜಹಾನ್, ಹೈದರಾಲಿ, ಟಿಪ್ಪುಸುಲ್ತಾನರ ಚಿತ್ರಗಳು ಅವರ ವ್ಯಕ್ತಿತ್ವದ ಚಿತ್ರಣ ಕೊಡುತ್ತಿರುವುದಿಲ್ಲ. ಈ ದೃಷ್ಟಿಯಿಂದ ಇಲ್ಲಿ ಪ್ರಸ್ತಾಪಿಸಲಾದ ಚಿತ್ರಗಳಿಗೆ ಚಾರಿತ್ರಿಕ ಮಹತ್ವವಿದೆ. ○

## ಆಧಾರ ಗ್ರಂಥಗಳು

ಎಂ.ಎ.ಆರ್. ೧೯೩೪ ಮತ್ತು ಎಪಿಗ್ರಾಪಿಯಾ ಕರ್ನಾಟಕ, xii ಸಿರಾ. ೯೮

# ನೀತಿವಾಕ್ಯಾಮೃತಕಾರ ಸೋಮದೇವಸೂರಿಯ ದೃಷ್ಟಿಯಲ್ಲಿ ರಾಜ್ಯ-ಒಂದು ವಿಶ್ಲೇಷಣೆ

**ಜಿಂ.ಶಾ. ಶ್ಯಾಮಲಾ ರತ್ನಕುಮಾರಿ**

ಸೋಮದೇವಸೂರಿ ಕ್ರಿಸ್ತಶಕ ೯೪೦-೯೭೦ರ ಅವಧಿಯಲ್ಲಿ ಜೀವಿಸಿದ್ದ ಜೈನ ಕವಿ. ಇವನ ಬಗೆಗಿನ ಮಾಹಿತಿಗಳ ಆಧಾರಗಳೆಂದರೆ ಇವನ ಸ್ವಕೀಯ ಗ್ರಂಥ ಯಶಸ್ತಿಲಕಚಂಪೂ ಹಾಗೂ ಪರಭಣಿ ತಾಮ್ರಪಟಗಳು. ಯಶಸ್ತಿಲಕಚಂಪೂ ಗ್ರಂಥದ ಪ್ರಸ್ತಾವನೆಯಲ್ಲಿ ತಾನು ನೇಮಿಚಂದ್ರರ ಶಿಷ್ಯನೆಂದೂ, ಮಹಾನ್ ಶಾಸ್ತ್ರ ಪಂಡಿತನೂ, ಸುಕವಿಯೂ ಆಗಿದ್ದನೆಂದೂ ಕ್ರಿ.ಶ. ೯೫೯ರಲ್ಲಿ ರಾಷ್ಟ್ರಕೂಟರ ಸಾಮಂತರಾದ ಚೋದನ ಅಥವಾ ವೇಮುಲವಾಡ ಚಾಲುಕ್ಯ ರಾಜಕುಮಾರ ಇಮ್ಮಡಿ ಅರಿಕೇಸರಿಯ ಪುತ್ರ ವಾಘರಾಜನ ಪೋಷಣೆಯಲ್ಲಿ ಗಂಗಾಧರಂ ಎಂಬಲ್ಲಿ ಯಶಸ್ತಿಲಕ ಚಂಪೂ ಗ್ರಂಥವನ್ನು ಬರೆದು ಮುಗಿಸಿದನೆಂದೂ ಆಗ ರಾಷ್ಟ್ರಕೂಟ ಚಕ್ರವರ್ತಿ ಮೂರನೇ ಕೃಷ್ಣನು ಮೇಲ್ಪಾಟಿ (ಉತ್ತರ ಆರ್ಕಾಟ್ ಜಿಲ್ಲೆ) ನೆಲೆವೀಡಿನಿಂದ ಆಳುತ್ತಿದ್ದನೆಂದೂ ತಿಳಿಯುತ್ತದೆ. ಅಲ್ಲದೆ ಈತನು ಅರಿಕೇಸರಿಯ ಪುತ್ರ ಭದ್ರದೇವನ ರಾಜಗುರುವೂ ಆಗಿದ್ದನು. ಪ್ರಾಯಶಃ ಈ ಸಮಯದಲ್ಲೇ ನೀತಿವಾಕ್ಯಾಮೃತಗ್ರಂಥವನ್ನು ಬರೆದಿರಬೇಕು. ಪರಭಣಿ ತಾಮ್ರಪಟಗಳು ಜೈನ ಪಂಡಿತನೂ, ಆಚಾರ್ಯನೂ ಆದ ಈತನಿಗೆ ಬಸದಿಯ ಮೇಲ್ವಿಚಾರಣೆಗಾಗಿ ಸಬ್ಬಿಸಾವಿರ ನಾಡಿನ ರೇಪಾಕ ಹನ್ನೆರಡರಲ್ಲಿದ್ದ ಕುಟ್ಟಂ ವೃತ್ತಿ ವನಿಕಟುಪುಲು ಎಂಬ ಗ್ರಾಮವನ್ನು ಚಾಲುಕ್ಯ ದೊರೆ ಮುಮ್ಮಡಿ ಅರಿಕೇಸರಿ ದಾನವಾಗಿ ಕೊಟ್ಟ ವಿಷಯವನ್ನು ತಿಳಿಸುತ್ತದೆ.

ಪ್ರಸ್ತುತ ನೀತಿವಾಕ್ಯಾಮೃತದಲ್ಲಿ ಉಕ್ತವಾಗಿರುವ ಎರಡು ರಾಜ್ಯ ಪರಿಭಾಷಾಸೂತ್ರಗಳ ವಿಶ್ಲೇಷಣೆಯನ್ನು ನೀಡಲಿಚ್ಛಿಸುತ್ತೇನೆ.

ನೀತಿವಾಕ್ಯಾಮೃತ ಗ್ರಂಥವು ರಾಜ್ಯಶಾಸ್ತ್ರದ ಕೈಪಿಡಿಯಂತಿದ್ದು ಕೌಟಿಲ್ಯನ ಅರ್ಥಶಾಸ್ತ್ರದ ಪ್ರಾಥಮಿಕ ಪರ್ವವೆಂದು ಪರಿಗಣಿಸಲ್ಪಟ್ಟಿದೆ. ಇದೊಂದು ಸೂತ್ರ ಗ್ರಂಥವಾಗಿದ್ದು ೧೬೬೦ ಸೂತ್ರಗಳನ್ನೂ ೩೨ ಸಮುದ್ದೇಶಗಳೆಂಬ ಅಧ್ಯಾಯಗಳನ್ನೊಳಗೊಂಡಿದೆ. ಇದು ರಾಜ್ಯ, ಸ್ವರೂಪ ರಾಜನ ಹಾಗೂ ರಾಜ್ಯಾಂಗಗಳ ಕಾರ್ಯಚರಣೆಗಳ ಬಗ್ಗೆ ವಿವರ ನೀಡುವ ಗ್ರಂಥವಾಗಿದೆ.

ಗ್ರಂಥದ ಮೊದಲ ಸೂತ್ರದಲ್ಲೆ ರಾಜ್ಯದ ಪರಿಭಾಷೆಯನ್ನು ಹೇಳುವ ಮೂಲಕ ಗ್ರಂಥದ ವಸ್ತು ನಿರ್ದೇಶವನ್ನೂ ಮಾಡಿದ್ದಾನೆ. ಫಲರೂಪವಾದ ಮಂಗಳಾಚರಣೆಯನ್ನೂ ಮಾಡಿದ್ದಾನೆ ಸೂತ್ರಕಾರ ಸೋಮದೇವ. ಈ ಪರಿಭಾಷಾ ಸೂತ್ರ ಇಂತಿದೆ : "ಧರ್ಮಾರ್ಥಕಾಮಮೋಕ್ಷರೂಪಸರ್ವಪುರುಷಾರ್ಥ ಫಲ ಮಿದಂ ರಾಜ್ಯಂ". ಧರ್ಮಾರ್ಥಕಾಮ ಮೋಕ್ಷಗಳು ಮಾನವ ಜೀವನದ ಪರಮೋಧ್ಯೇಯಗಳಾಗಿವೆ. ಇವುಗಳ ಸಿದ್ಧಿಯಿಂದಲೇ ಮಾನವನ ಸಫಲತೆ ಹಾಗೂ ಸಾರ್ಥಕತೆ. ಇವುಗಳಲ್ಲಿ ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳನ್ನು ಮಾನವನು ತನ್ನ ಹಾಗೂ ಸಮಾಜದ ಹಿತಕ್ಕಾಗಿ ಸಾಧಿಸತಕ್ಕದ್ದು. ಕೊನೆಯದಾದ ಮೋಕ್ಷಮಾತ್ರ ವ್ಯಕ್ತಿಕವಾದದ್ದು. ಮಾನವನ ಇನ್ನಿತರ ಸಕಲ ಆಕಾಂಕ್ಷೆ

ಗಳನ್ನೂ ಈ ಚತುರ್ವಿಧ ಪುರುಷಾರ್ಥದಲ್ಲಿ ಸಮಾವೇಶ ಗೊಳಿಸಿ ಅವುಗಳ ಸಮಷ್ಟಿ ಫಲಸಿದ್ಧಿಯೇ ರಾಜ್ಯವೆಂದು ಹೇಳಿದ್ದಾನೆ.

ತ್ರಿವರ್ಗಸಾಧನೆ ಮಾನವನಿಗೆ ರಾಜ್ಯದಿಂದಲೇ ಸಾಧ್ಯವಾಗುತ್ತದೆ. ಆದ್ದರಿಂದ ಧರ್ಮಾರ್ಥಕಾಮಗಳ ಸ್ವರೂಪವನ್ನೂ ವಿವರಿಸಲಾಗಿದೆ. ಧರ್ಮದ ಸ್ವರೂಪವು 'ಯತೋಽಭ್ಯುದಯನಿಃಶ್ರೇಯಸಸಿದ್ಧಿಃ ಸ ಧರ್ಮಃ' ಎಂದು ಹೇಳಲ್ಪಟ್ಟಿದೆ. ಇಹದಲ್ಲಿ ಅಭ್ಯುದಯವನ್ನೂ ಪರದಲ್ಲಿ ಶ್ರೇಯಸ್ಸನ್ನೂ ನೀಡುವಂತಹುದೇ ಧರ್ಮ ಎಂದು ಇದರ ಅರ್ಥ. ಆ ಧರ್ಮದ ಫಲ ಗಳಿಸಲು ಸರ್ವಹಿತ ಚಿಂತನೆ, ಯಥಾಶಕ್ತಿದಾನ (ತ್ಯಾಗ) ಹಾಗೂ ತಪಸ್ಸುಗಳೆಂಬ ಧರ್ಮಸಾಧನಗಳನ್ನು ನಿರ್ದೇಶಿಸಿದ್ದಾನೆ. ಅರ್ಥದ ಸ್ವರೂಪವನ್ನು 'ಯತಃ ಸರ್ವಪ್ರಯೋಜನ ಸಿದ್ಧಿಃ ಸೋಽರ್ಥಃ' ಎಂಬುದಾಗಿ ಹೇಳಿದೆ. ಮಾನವನ ಸಕಲ ಆವಶ್ಯಕತೆಗಳನ್ನೂ ಪೂರೈಸುವಂತಹುದೇ ಅರ್ಥ ಎಂದರೆ ಸಂಪತ್ತು. ಅರ್ಥ ಲಾಭಕ್ಕಾಗಿ ಪ್ರಯತ್ನಪೂರ್ವಕ ಗಳಿಕೆ, ಸಂರಕ್ಷಣೆ, ವೃದ್ಧಿ ಮತ್ತು ಸತ್ಪಾತ್ರದಾನ ದಂತಹ ಮಾರ್ಗೋಪಾಯಗಳನ್ನೂ ಸೂಚಿಸಿದ್ದಾನೆ. 'ಸರ್ವೇಂದ್ರಿಯ ಸಂಪ್ರೀತಿ. ಕಾಮಃ' ಎಂದು ಕಾಮದ ಸ್ವರೂಪವನ್ನು ಹೇಳಿದೆ ಕಾಮವನ್ನು ಧರ್ಮಾರ್ಥಗಳಿಗೆ ವಿರೋಧವಿರದಂತೆ ಸೇವಿಸಬೇಕೆಂದೂ ಹಾಗೆ ಸೇವಿಸಿದಾಗ ಮಾತ್ರ ನಿಜವಾದ ಸುಖ ಪ್ರಾಪ್ತಿಯಾಗುವುದೆಂದೂ ಇದಕ್ಕೆ ವ್ಯತಿರಿಕ್ತವಾಗಿ ಕಾಮವೊಂದನ್ನೇ ಅತಿಯಾಗಿ ಸೇವಿಸಿದರೆ ಅದು ಮಾನವನ ಆತ್ಮನಾಶಕ್ಕೆ ಕಾರಣ ವಾಗುವುದೆಂದೂ ಎಚ್ಚರಿಕೆ ನೀಡಿದ್ದಾನೆ. ಇಂದ್ರಿಯ ಸಂಪ್ರೀತಿಯು ಧರ್ಮಾರ್ಥಗಳ ಸಾಮರಸ್ಯದೊಡನೆ ಉಂಟಾದಲ್ಲಿ ಮಾನವನಲ್ಲಿ ಮಾನಸಿಕ ಸಂತೃಪ್ತಿ ಸಮಾಧಾನಗಳನ್ನು ನೆಲೆಗೊಳಿಸಿ ಅವನನ್ನು ಆಧ್ಯಾತ್ಮಿಕ ಸಾಧನೆಯೆಡೆಗೊಯ್ದು ಚರಮ ಪುರುಷಾರ್ಥವಾದ ಮೋಕ್ಷಸಿದ್ಧಿಗೆ ಕಾರಣವಾಗುತ್ತದೆ. ಇಂತಹ ಪುರುಷಾರ್ಥ ಫಲವಾದ ರಾಜ್ಯವು ಹೇಗೆ ವ್ಯವಸ್ಥೆಗೊಳ್ಳಬೇಕೆಂದೂ ಸಪ್ತಾಂಗಗಳೊಡನೆ ಹೇಗೆ ಸಮರ್ಪಕ ಕಾರ್ಯಾಚರಣೆ ನಡೆಸಬೇಕೆಂದೂ ವಿವರಗಳನ್ನೂ ತನ್ನ ಮುಂದಿನ ಸಮುದ್ದೇಶಗಳಲ್ಲಿ ಸೂತ್ರಿಸಿದ್ದಾನೆ. ಹೀಗೆ ಈ ರಾಜ್ಯ ಪರಿಭಾಷಾ ಸೂತ್ರದ ವಿವರಣೆಯೇ ಆಗಿದೆ ಸೋಮದೇವಸೂರಿಯ ಈ ಇಡೀ ಗ್ರಂಥ ನೀತಿ ವಾಕ್ಯಾಮೃತ.

ಪುರುಷಾರ್ಥ ಸಿದ್ಧಿಯನ್ನು ಮಾನವನಿಗೆ ರಾಜ್ಯವು ಹೇಗೆ ಉಂಟು ಮಾಡುವುದೆಂಬುದನ್ನು ಗ್ರಂಥದ ಐದನೆ ಅಧ್ಯಾಯ ವಿದ್ಯಾವೃದ್ಧ ಸಮುದ್ದೇಶದಲ್ಲಿ ಇನ್ನೊಂದು ರಾಜ್ಯ ಪರಿಭಾಷಾ ಸೂತ್ರದಲ್ಲಿ ಹೇಳಿದೆ. ಈ ಸೂತ್ರ ಹೀಗಿದೆ : "ರಾಜ್ಞಃ ಪೃಥ್ವೀಪರಿಪಾಲನೋಚಿತಂ ಕರ್ಮ ರಾಜ್ಯಂ" ಇದರ ಅರ್ಥ ರಾಜನ ಯಥಾಯೋಗ್ಯ ಪೃಥ್ವೀಪರಿಪಾಲನಾ ಕಾರ್ಯ (ರಾಜ್ಯಭಾರ)ವೇ ರಾಜ್ಯ ಎಂದು. ರಾಜನ್ ಶಬ್ದವು ಮೂಲತಃ 'ಆಳು' ಎಂಬರ್ಥ ಕೊಡುವ 'ರಾಟ್' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ ಪ್ರಜೆಗಳನ್ನು ಭೂಮಿಯನ್ನೂ ಪರಿಪಾಲಿಸು ವವನೇ, ಆಳುವವನೇ ರಾಜ. ಪೃಥ್ವಿಯನ್ನು ವರ್ಣಾ ಶ್ರಮವತೀ ಪಶುಹಿರಣ್ಯಧಾನ್ಯಫಲದಾ' ಎಂದು ಹೇಳಲಾಗಿದೆ. ಈ ಉಕ್ತಿಯಿಂದ ಪೃಥ್ವಿ ಅಥವಾ ಭೂಮಿಯು ಪ್ರಜೆಗಳ ವರ್ಣಾಶ್ರಮರೂಪ ಸಾಮಾಜಿಕ ವ್ಯವಸ್ಥೆಯಿಂದ ಕೂಡಿದೆ ಹಾಗೂ ಪ್ರಜೆಗಳ ಜೀವನ ಸಮೃದ್ಧಿಯನ್ನುಂಟು ಮಾಡುತ್ತದೆ ಎಂದು ಸಿದ್ಧ ವಾಗುತ್ತದೆ. ಇಂತಹ ಭೂಮಿಯ ಪರಿಪಾಲನೆಯನ್ನು ರಾಜ ನಡೆಸಬೇಕು. ಇಲ್ಲಿ ಪರಿಪಾಲನೆಯೆಂದರೆ ಶಿಷ್ಟರಕ್ಷಣೆ ಮತ್ತು ದುಷ್ಟಶಿಕ್ಷಣೆ. ರಾಜನ ಶಿಷ್ಟ ರಕ್ಷಣಾ ಕಾರ್ಯ ಪ್ರಜೆಗಳನ್ನು ಆಂತರಿಕ ಹಾಗೂ ಬಾಹ್ಯ ಶತ್ರುಗಳಿಂದ ರಕ್ಷಿಸುವುದು, ದುರ್ಬಲರಿಗೂ ಆಶ್ರಯ ಹೀನರಿಗೂ ಆಶ್ರಯ ಕೊಡುವುದು, ಎಲ್ಲ ಧರ್ಮಗಳಿಗೂ ಧರ್ಮೀಯರಿಗೂ ಸಮಾನವಾಗಿ ಪ್ರೋತ್ಸಾಹ ಮತ್ತು ಸ್ವಾತಂತ್ರ್ಯ ನೀಡಿ ಮತೀಯ ಸೌಹಾರ್ದವನ್ನುಂಟು ಮಾಡುವುದು, ಸಾಧು ಸಜ್ಜನರಿಗೂ, ಗಾಯಕ, ಕವಿ, ಪಂಡಿತ, ನೃತ್ಯಂಗಾರ, ವಾದಕ, ಚಿತ್ರಕಾರ, ಶಿಲ್ಪಿ ಮುಂತಾದ ಕಲಾಕಾರರಿಗೆ ಪೋಷಣೆ ನೀಡುವುದು. ಸ್ವಧರ್ಮ ಎಂದರೆ ರಾಜಧರ್ಮ ಮತ್ತು ಸಾಮಾನ್ಯ ಧರ್ಮ ಎಂದರೆ ಮಾನವಧರ್ಮವನ್ನು ಅನುಸರಿಸಿ ತನ್ಮೂಲಕ ಸ್ನೇಹಯುತ ಬಂಧುರ ಸಾಮಾಜಿಕ ಪರಿಸರವನ್ನು ಏರ್ಪಡಿಸುವುದೂ, ಕೃಷಿ, ಕೈಗಾರಿಕೆ, ವಾಣಿಜ್ಯ, ವ್ಯಾಪಾರಗಳಿಗೆ ಉತ್ತೇಜನ, ನೆರವುಗಳನ್ನು ನೀಡಿ ಆರ್ಥಿಕ ಸಮೃದ್ಧಿಯನ್ನುಂಟುಮಾಡುವುದು

ಮುಂತಾದ ಕರ್ತವ್ಯಗಳನ್ನು ಯೋಗ್ಯರೀತಿಯಲ್ಲಿ ನಿರ್ವಹಿಸುವುದರಿಂದ ಸಾಧಿತವಾಗುತ್ತದೆ. ಪರಿಪಾಲನೆಯ ಇನ್ನೊಂದು ಮುಖವಾದ ದುಷ್ಟಶಿಕ್ಷಣೆಯು ಕಾರ್ಯವು ರಾಜನು ದುಷ್ಟರಾದ ರಾಜದ್ರೋಹಿಗಳು, ನಯವಂಚಕರು, ದರೋಡೆಕಾರರು, ಲಂಚಕೋರರು, ಪ್ರಜಾಪೀಡಕ ಅಧಿಕಾರಿಗಳು ಮುಂತಾದ ಸಮಾಜ ವಿರೋಧೀ ಜನರ ಅಪರಾಧಗಳನ್ನು ಪತ್ತೆಹಚ್ಚಿ, ಅಪರಾಧಿಗಳನ್ನು ಹಿಡಿತರಿಸಿ ಅವರ ಅಪರಾಧಗಳು ಸಾಕ್ಷ್ಯಾಧಾರಗಳಿಂದ ಸಾಬೀತಾದರೆ ಅಪರಾಧಗಳ ತೀವ್ರತೆಗೆ ಅನುಗುಣವಾಗಿ, ಧರ್ಮಶಾಸ್ತ್ರನಿಯಮಗಳಿಗನುಸಾರವಾಗಿ, ತನ್ನ ದಂಡಾಧಿಕಾರವನ್ನು ಶಿಕ್ಷೆ, ದಂಡ ವಿಧಿಸುವುದರ ಮೂಲಕ ಪ್ರಯೋಗಿಸಿ ಪ್ರಜೆಗಳಿಗೆ ನ್ಯಾಯ ದೊರಕಿಸಿ ರಕ್ಷಣೆಕೊಡುವುದರಿಂದ ಸಾಧಿತವಾಗುತ್ತದೆ. ದುಷ್ಟ ಶಿಕ್ಷಣೆಯ ಜೊತೆಗೆ ನ್ಯಾಯ ತೀರ್ಮಾನ ಹಾಗೂ ಶಿಕ್ಷೆ ವಿಧಿಸುವಿಕೆಯಲ್ಲಿ ರಾಜನು ತನ್ನ ನಿಷ್ಪಕ್ಷಪಾತದಿಂದ, ಧರ್ಮದೃಷ್ಟಿಯಿಂದ, ಸದ್ವರ್ತನೆಯಿಂದ ಅಪರಾಧಿಗಳ ಮನಃ ಪರಿವರ್ತನೆಗೊಳಿಸಿ ದುಷ್ಟರ ದುಷ್ಟತನವನ್ನು ನಿವಾರಿಸಿ ಅವರನ್ನು ಸನ್ಮಾರ್ಗಕ್ಕೆ ತರುವ ಕ್ರಮಗಳನ್ನೂ ಅಗತ್ಯವಾಗಿ ಕೈಗೊಳ್ಳಬೇಕು.

ಈ ಮೇಲೆ ಹೇಳಿದ ಭೂ ಪರಿಪಾಲನಾ ಕಾರ್ಯವನ್ನು ಉಚಿತ ರೀತಿಯಲ್ಲಿ ನಿರ್ವಹಿಸಲು ಸಾಧ್ಯವಾಗುವಂತೆ ಮಾಡಲು ರಾಜಕುಮಾರರಿಗೆ ತಾವು ಸಿಂಹಾಸನಸ್ಥರಾಗುವ ಪೂರ್ವದಲ್ಲಿ ಯೋಗ್ಯ ಶಿಕ್ಷಣ ನೀಡುವುದರ ಪ್ರಾಮುಖ್ಯತೆಯ ಬಗ್ಗೆ ಒತ್ತಿ ಹೇಳಿದ್ದಾನೆ ಕೃತಿಕಾರ ಸೋಮದೇವಸೂರಿ. ಅವನ ಅಭಿಪ್ರಾಯದಲ್ಲಿ ವಿದ್ಯಾಸಂಸ್ಕಾರನು ಪಡೆಯದ ರಾಜವನ್ನು ಸಂಸ್ಕರಣಕ್ಕೊಳಗಾಗದ ಕೇವಲ ಕಲ್ಲು ತುಂಡಿನಂತಿರುವ ರತ್ನದಂತೆ ನಿಷ್ಪ್ರಯೋಜಕ ಹಾಗೂ ಮೂರ್ಖರಾಜನಿರುವ ರಾಜ್ಯಕ್ಕಿಂತ ಅರಾಜಕ ರಾಜ್ಯವೇ ಶ್ರೇಷ್ಠವೆನಿಸುತ್ತದೆ. ಆದ್ದರಿಂದ ಪ್ರತಿಯೊಬ್ಬ ರಾಜಕುಮಾರನಿಗೂ ಬಾಲ್ಯಾವಸ್ಥೆಯಲ್ಲಿಯೇ ಸಮರ್ಥ ಗುರುಗಳಿಂದ ಕಡ್ಡಾಯವಾಗಿ ಮತ್ತು ಯಥೋಚಿವಾಗಿ ಚತುರ್ವಿಧ ರಾಜವಿದ್ಯೆಗಳಾದ ತ್ರಯೀ, ಅನ್ವೀಕ್ಷಕೀ, ವಾರ್ತಾ ಹಾಗೂ ದಂಡನೀತಿಗಳಲ್ಲಿ ಶಿಕ್ಷಣ ಕೊಡಿಸ ತಕ್ಕದ್ದು. ಈ ಚತುರ್ವಿಧ ರಾಜವಿದ್ಯೆಗಳಲ್ಲಿ ಶಿಕ್ಷಣ ನೀಡುವುದರಿಂದ ರಾಜನಿಗೆ ಉಂಟಾಗುವ ಪ್ರಯೋಜನಗಳನ್ನೂ ವಿವರಿಸಿದ್ದಾನೆ. ತ್ರಯಿಯ ಶಿಕ್ಷಣದಿಂದ ಧರ್ಮದ ಸ್ವರೂಪ, ಚಾತುರ್ವರ್ಣ, ಚಾತುರಾಶ್ರಮಗಳ ಆಚಾರ ನಿಯಮಗಳ ಜ್ಞಾನ ಮತ್ತು ಧರ್ಮಸಿದ್ಧಿ ಸಾಧನ ಕ್ರಮ ತಿಳಿದುಬರುತ್ತದೆ. ಅನ್ವೀಕ್ಷಕೀ ಶಿಕ್ಷಣದಿಂದ ಮಾನವ ಸಹಜ ಶಾರೀರಿಕ ಮಾನಸಿಕ ದೋಷಗಳ ನಿವಾರಣೆ ಮತ್ತು ಆಧ್ಯಾತ್ಮಿಕ ಪ್ರಗತಿಗಳು ಸಾಧ್ಯವಾಗುತ್ತವೆ. ವಾರ್ತಾ ಶಿಕ್ಷಣದಿಂದ ಮಾನವ ಜೀವನದ ಆರ್ಥಿಕ ಸಂಪನ್ನತೆಗೆ ಸಾಧನಗಳಾದ ಕೃಷಿ, ಕುಶಲಕರ್ಮ, ವ್ಯಾಪಾರ ಮುಂತಾದುವುಗಳ ವೃದ್ಧಿಗಾಗಿ ಮಾರ್ಗೋಪಾಯಗಳ ನಿದರ್ಶನದಿಂದ ವ್ಯವಹಾರ ಜ್ಞಾನ ಕುಶಲತೆಯು ಪ್ರಾಪ್ತವಾಗುತ್ತವೆ. ದಂಡನೀತಿ ಶಿಕ್ಷಣದಿಂದ ದಂಡಾಧಿಕಾರದ ಸಮುಚಿತ ಪ್ರಯೋಗ, ದುಷ್ಟ ನಿಗ್ರಹ ಪರಿಜ್ಞಾನ, ನ್ಯಾಯಾನ್ಯಾಯಗಳ ವಿವೇಚನೆ ಪ್ರಾಪ್ತವಾಗುತ್ತದೆ. ಈ ರೀತಿಯಾಗಿ ವಿದ್ಯಾವಿನಯ ಸಂಪನ್ನನಾದ ರಾಜ ಮಾತ್ರ ವಿವೇಕಿಯಾಗಿ ಉಚಿತಾನುಚಿತವನ್ನು ತಿಳಿದು ಭೂಪ್ರಜಾ ಪರಿಪಾಲನಾ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತಾನೆ.

ರಾಜ್ಯಾಧಿಕಾರ ಪಡೆದ ರಾಜನಿಗೆ ಅವನ ಎಲ್ಲ ಕಾರ್ಯಗಳ ಸಮಯೋಚಿತ ಹಾಗೂ ಸಮುಚಿತ ನಿರ್ವಹಣೆಗಾಗಿ ಕಾರ್ಯಧುರಂಧರರಾದ ಮಂತ್ರಿ, ಅಮಾತ್ಯ ಮುಂತಾದ ಅಧಿಕಾರಿವರ್ಗವನ್ನೂ ರಕ್ಷಣಾ ಕಾರ್ಯಕ್ಕಾಗಿ, ಯುದ್ಧ ನಡೆಸಲು ಸೇನೆಯನ್ನೂ, ರಕ್ಷಣೆ ನೀಡುವ ದುರ್ಗವನ್ನೂ, ತುಂಬಿ ತುಳುಕುವ ಬೊಕ್ಕಸವನ್ನೂ ಆ ಸಮುದ್ರ ಪರ್ಯಂತ ಭೂ ಒಡೆತನದ ಹಕ್ಕನ್ನೂ ನೀಡಲಾಗಿದೆ. ಆದ್ದರಿಂದಲೇ ಇವುಗಳಿಗೆ ರಾಜ್ಯಾಂಗಗಳೆಂದು ಹೆಸರಿದೆ. ರಾಜ್ಯಾಂಗಗಳ ಜೊತೆಗೆ ರಾಜನಿಗೆ ಸಾಮಂತರಿಂದ ಕಪ್ಪ ಕಾಣಿಕೆ ಪಡೆಯುವ, ಪ್ರಜೆಗಳಿಂದ ಕರವಸೂಲಿ ಮಾಡುವ, ಅರಮನೆ, ಪರಿವಾರ, ಸಿಂಹಾಸನ, ರಾಜದಂಡ, ಧವಳಛತ್ರ, ಪತಾಕೆ, ರಾಜಮುದ್ರೆಗಳಂತಹ ರಾಜ ಚಿಹ್ನೆಗಳನ್ನು ಹೊಂದುವ ವೈಭವ ಜೀವನ ನಡೆಸಲು ವಿಶೇಷ ಅನುಕೂಲತೆಗಳು, ಸವಲತ್ತುಗಳೂ ನೀಡಲ್ಪಟ್ಟಿವೆ. ಈ ಅಧಿಕಾರ, ಸವಲತ್ತುಗಳನ್ನು ಬಳಸಿಕೊಂಡು ರಾಜ ರಾಜ್ಯಾಂಗಗಳ ಮೇಲೆ ಸ್ವಾಮಿತ್ವವನ್ನು ಹೊಂದಿ, ಅವುಗಳ ಸೂಕ್ತವ್ಯವಸ್ಥೆ, ಕ್ರೋಢೀಕರಣ, ಸಹಯೋಗಗಳನ್ನೇರ್ಪಡಿಸಿ ಪ್ರಜೆಗಳ

ತ್ರಿವರ್ಗಸಾಧನೆಯನ್ನೂ ಮತ್ತು ಶಿಷ್ಟರಕ್ಷಣ ದುಷ್ಟ ಶಿಕ್ಷಣಗಳನ್ನೊಳಗೊಂಡ ಭೂಪರಿಪಾಲನಾ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತಾನೆ. ಇಂತಹ ಯಶಸ್ವೀ ರಾಜನನ್ನೇ ಪರಮದೈವತವೆಂದೂ, ಲೋಕಪಾಲಕರಿಗಿಂತ ಉತ್ತಮ ಲೋಕಪಾಲಕನೆಂದೂ ಅನುಕೂಲವರ್ತನೆಯುಳ್ಳ ಶಿಷ್ಟ ಸಜ್ಜನರಿಗೆ ಸರ್ವಾಭೀಷ್ಟಗಳ ಮಳೆಗರೆಯುವ ಇಂದ್ರನಂತೆಯು ಪ್ರತಿಕೂಲ ವರ್ತನೆಯುಳ್ಳ ದುಷ್ಟದುರ್ಜನರಿಗೆ ಮರಣ ದಂಡನೆ ಮುಂತಾದ ಶಿಕ್ಷೆಗಳನ್ನು ವಿಧಿಸುವ ಮೂಲಕ ಭಯವನ್ನುಂಟು ಮಾಡುವ ಯಮನಂತೆಯೂ ಭಾವಿಸಲಾಗಿದೆ. ಈ ಬಗೆಯಾಗಿ ರಾಜನು ಸಮುಚಿತವಾಗಿ ನೆರವೇರಿಸುವ ತ್ರಿವರ್ಗಸಾಧನೆ ಮತ್ತು ಭೂಪರಿಪಾಲನಾ ಕರ್ತವ್ಯಗಳನ್ನು ಮತ್ತು ರಾಜ್ಯಭಾರವನ್ನೇ ರಾಜ್ಯವೆಂದು ಸಮೀಕರಿಸಿರುವುದು ಸಮೀಚೀನವೇ ಆಗಿದೆ. ○

# ಲೋಕೋಪಕಾರದಲ್ಲಿ ವರ್ಣಿತವಾಗಿರುವ ಸುಗಂಧಯುಕ್ತಿ ಕ್ರಮ

ಡಾ|| ಎಂ. ವಿ. ಕೃಷ್ಣಪ್ಪ

ಇಮ್ಮಡಿ ಚಾವುಂಡರಾಯನಿಂದ ರಚಿತವಾದ ಲೋಕೋಪಕಾರ[1] ಎನ್ನುವ ಗ್ರಂಥ ಕರ್ನಾಟಕ ಇತಿಹಾಸದ ಸಾಂಸ್ಕೃತಿಕ ಅಂಶಗಳನ್ನು ತಿಳಿಯುವಲ್ಲಿ ಉಪಯುಕ್ತವಾದ ಗ್ರಂಥವಾಗಿದೆ ಎನ್ನುವ ವಿಷಯ ಇತ್ತೀಚೆಗೆ ಇತಿಹಾಸಕಾರರ ಗಮನಕ್ಕೆ ಬಂದಿದೆ. ಕ್ರಿ.ಶ. ೧೦೨೫ರಲ್ಲಿ ರಚಿತವಾದ ಈ ಗ್ರಂಥದಲ್ಲಿ ವ್ಯವಸಾಯ, ಆಹಾರ, ವಾಸ್ತುಶಿಲ್ಪ ಮುಂತಾದ ವಿಷಯಗಳು ಹೇಳಲ್ಪಟ್ಟಿವೆ.[2] ಇಲ್ಲಿನ ಏಳನೆಯ ಪ್ರಕರಣದಲ್ಲಿ ಗಂಧಯುಕ್ತಿ ಕ್ರಮ ಅಂದರೆ ಸುಗಂಧ ದ್ರವ್ಯಗಳನ್ನು ಮಾಡುವ ವಿಧಾನಗಳನ್ನು ವಿವರವಾಗಿ ಹೇಳಿದೆ, ಅವುಗಳನ್ನು ತಿಳಿಯುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ಮೊದಲನೆಯದಾಗಿ ಚಾಮುಂಡರಾಯನು ವಿವಿಧ ರೀತಿಯ ಸುಗಂಧದ ಎಣ್ಣೆಗಳನ್ನು ಮಾಡುವ ವಿಷಯವನ್ನು ಪ್ರಸ್ತಾಪಿಸಿದ್ದಾನೆ. ಕರ್ಪೂರ, ಕುಂಕುಮ, ಕಸ್ತೂರಿ, ಶ್ರೀಗಂಧ ಮತ್ತು ನೆಲ್ಲಿಕಾಯಿಗಳನ್ನು ಮಿಶ್ರ ಮಾಡಿ, ಗಾಣದಲ್ಲಿ ಹಾಕಿ ಅರೆದು ಏಳು ದಿನಗಳವರೆಗೆ ಬಿಸಿಲಿನಲ್ಲಿ ಇಡಬೇಕು. ಈ ಸುವಾಸಿತ ಎಣ್ಣೆಯೇ ಮೃಗಮದ ತೈಲ. ಬೇಲದಹಣ್ಣಿನ ಬೀಜಗಳನ್ನು ತೆಗೆದು ಕುಟ್ಟಿ ಪುಡಿಮಾಡಿ, ಅದನ್ನು ಎಣ್ಣೆಯೊಳಗೆ ಹಾಕಿ ಕಲಸಿ, ಚಿಕ್ಕ ಚಿಕ್ಕ ಗುಳಿಗೆಗಳನ್ನು ತಯಾರಿಸಿ ಒಣಗಿಸಬೇಕು. ಅದಕ್ಕೆ ಕರ್ಪೂರವನ್ನು ಮಿಶ್ರ ಮಾಡಿ ಎಣ್ಣೆಗೆ ಹಾಕಿದರೆ ಕರ್ಪೂರ ತೈಲವಾಗುತ್ತದೆ. ನಸುಗುನ್ನಿಕಾಯಿ, ಕೋಷ್ಠ, ಲವಂಗ, ಮತ್ತು ಏಲಕ್ಕಿಗಳನ್ನು ಎಣ್ಣೆಯಲ್ಲಿ ಮಿಶ್ರ ಮಾಡಿ, ಕುದಿಸಿ, ಆರಿಸಬೇಕು. ಅದಕ್ಕೆ ಮಲ್ಲಿಗೆಯ ಹೂವುಗಳನ್ನು ಹಾಕಿ ಸ್ವಲ್ಪ ದಿನ ಇಡಬೇಕು. ಆಗ ಅದು ಮಲ್ಲಿಕಾ ತೈಲವಾಗುತ್ತದೆ. ಮಲ್ಲಿಗೆಯ ಬದಲು ಅದಕ್ಕೆ ಜಾಜಿ ಹೂವುಗಳನ್ನು ಹಾಕಿದರೆ, ಆಗ ಅದು ಜಾಜಿ ತೈಲವಾಗುತ್ತದೆ. ಸುಗಂಧಾಮಲಕ ತೈಲವನ್ನು ಮಾಡಲು ಮರುಗ, ಪಚ್ಚೆ, ದವನ, ಕಲ್ನಾರು ಮತ್ತು ಏಲಕ್ಕಿಯನ್ನು ಸಮಪ್ರಮಾಣದಲ್ಲಿ ಸೇರಿಸಬೇಕು. ಚಂಪಕ ತೈಲವನ್ನು ಮಾಡಲು, ಮುಡಿವಳಿ, ಕೋಷ್ಠ ಮತ್ತು ಲವಂಗದ ಎಲೆಗಳನ್ನು ಸೇರಿಸಿ ಎಳ್ಳಿನ ಎಣ್ಣೆಯಲ್ಲಿ ಹಾಕಿ ಒಂದುವಾರ ಇಡಬೇಕು. ಅನಂತರ ಹೊಸದಾದ ಸಂಪಿಗೆ ಹೂವುಗಳನ್ನು ಈ ಎಣ್ಣೆಗೆ ಹಾಕಿ ಒಂದು ವಾರ ಇಡಬೇಕು. ಅದೇ ಚಂಪಕತೈಲ.

ನಂತರ ಚಾಮುಂಡರಾಯನು ವಿವಿಧ ರೀತಿಯ ಅಗರಬತ್ತಿಗಳನ್ನು ತಯಾರುಮಾಡುವ ವಿಧಾನಗಳನ್ನು ವಿವರಿಸಿದ್ದಾನೆ. ಬಟ್ಟೆಗಳು ಸುವಾಸನೆಯಿಂದ ಕೂಡಿರಲು

1. ಲೋಕೋಪಕಾರಂ—ಸಂ.ಹೆಚ್. ಶೇಷಯ್ಯಂಗಾರ್, ಮದರಾಸು-೧೯೫೦
2. ಮೇದಿನಿಯುಪಕಾರಂ ಕಲಿ |
ಮೋದುಗಳೆನಿತೊಳವಿಲ್ಲಿ ನೆಲಸಿರ್ದು ಬುಧೋ ||
ಪಾದೇಯಮಾದ ದೂಸರಿ |
ನಾದುದೊ ಲೋಕೋಪಕಾರಮೇನನ್ವರ್ಥಂ ||

ವಸ್ತ್ರಧೂಪವನ್ನು ವಿವರಿಸಿದ್ದಾನೆ. ಶ್ರೀಗಂಧ, ಅಗಿಲು, ಬೆಲ್ಲ, ಹುಲಿಗಿಲಿ, ಕೋಷ್ಠ ಇವುಗಳನ್ನು ಸಮ ಪ್ರಮಾಣ ದಲ್ಲಿ ತೆಗೆದುಕೊಂಡು ಪುಡಿಮಾಡಿ, ಧೂಪವನ್ನು ಹಾಕಿದರೆ ಬಟ್ಟೆಗಳು ಬಹಳ ದಿನಗಳವರೆಗೆ ಸುವಾಸನೆಯಿಂದ ಕೂಡಿರುತ್ತವೆ.[3] ಇದೇ ರೀತಿಯಲ್ಲಿ ಶರೀರವನ್ನು ಸುಗಂಧ ಮಯವಾಗಿ ಇಡಲು ಬೇಕಾದ ಸುಗಂಧವನ್ನು ವರ್ಣಿಸಿ ದ್ದಾನೆ. ನಖ, ಕಂದುರು, ಬಜೆಗಳನ್ನು ಸೇರಿಸಿ ನೀರಿನಲ್ಲಿ ನೆನೆಹಾಕಿ ಅರೆದು ಅದನ್ನು ಶರೀರಕ್ಕೆ ಹಚ್ಚಿಕೊಂಡರೆ, ಶರೀರವು ಸುಗಂಧಯುಕ್ತವಾಗಿರುತ್ತದೆ.[4] ಸುಗಂಧ ಬತ್ತಿಯನ್ನು ಮಾಡಲು ಕಸ್ತೂರಿ, ಕರ್ಪೂರ, ಶ್ರೀಗಂಧ ಇವುಗಳನ್ನು ಮಿಶ್ರಮಾಡಿ, ಕಡ್ಡಿಗಳಿಗೆ ಅಂಟಿಸಿ ಬಿಸಿಲಿನಲ್ಲಿ ಒಣಗಿಸಬೇಕು. ಧೂಪಬತ್ತಿಯನ್ನು ಮಾಡಲು ಶ್ರೀಗಂಧ, ಬಧ್ರಮುಷ್ಟೆ, ನಾಕ, ನೇರಳೆಬೀಜ, ಮುಡಿವಾಳ ಮತ್ತು ಲವಂಗಗಳನ್ನು ಮಿಶ್ರ ಮಾಡಬೇಕು. ಸುಗಂಧ ಧೂಪ ಬತ್ತಿಯನ್ನು ಮಾಡಲು ದೇವಧರ, ಹುಲಿಗಲಿ ಬೀಜ, ಮುರೆ, ಸಜ್ಜರಸಗಳನ್ನು ಮಿಶ್ರ ಮಾಡಬೇಕು. ಇದೇ ರೀತಿಯಲ್ಲಿ ಹತ್ತಿಯಿಂದ ಬತ್ತಿಗಳನ್ನು ಮಾಡಿ ಅವನ್ನು ಈ ದ್ರವ್ಯಗಳಲ್ಲಿ ನೆನೆಸಿ, ಸುಟ್ಟರೆ ಸುಗಂಧವಾಸನೆ ಬರು ವುದು. ದಶಾಂಗಧೂಪವನ್ನು ಮಾಡಲು ಭದ್ರಮುಷ್ಟೆ, ಅಗಿಲು, ಕಲ್ನಾರು, ನಾಕ, ನಸುಗುನ್ನಿ, ಶ್ರೀಗಂಧ ಮುಂತಾದವುಗಳನ್ನು ಮಿಶ್ರ ಮಾಡಬೇಕು. ಪಂಚಾಂಗ ಧೂಪವನ್ನು ಮಾಡಲು ನಾಕ, ಕರ್ಪೂರ, ಅಗಿಲು, ಶ್ರೀಗಂಧ, ಬೇಲದ ಬೀಜಗಳನ್ನು ಉಪಯೋಗಿಸಬೇಕು. ತಿಗಣೆ, ಸೊಳ್ಳೆ, ಮುಂತಾದ ಕ್ರಿಮಿ ಕೀಟಗಳನ್ನು ನಾಶ ಮಾಡಲು ಬೇಕಾದ ಧೂಪಗಳನ್ನೂ ಇಲ್ಲಿ ಹೇಳಲಾಗಿದೆ. ಬೆಲ್ಲ, ಜೇನು, ಶ್ರೀಗಂಧ, ಪುಷ್ಪಕಾಶಿಶ, ವಿಳಂಗ ಮತ್ತು ಮತ್ತಿ ಹೂವುಗಳಿಂದ ಮಾಡಿದ ಧೂಪದಿಂದ ತಿಗಣೆ ಮತ್ತು ಸೊಳ್ಳೆಗಳನ್ನು ನಾಶಪಡಿಸಬಹುದು.

ಬಾಯಿಯನ್ನು ಸ್ವಚ್ಛವಾಗಿಡಲು ಬೇಕಾದ ಬಾಯಿ ಮುಕ್ಕಳಿಸುವ ದ್ರವ್ಯಗಳನ್ನು ಅನಂತರ ತಿಳಿಸಿದ್ದಾನೆ. ಶುಂಠಿ, ಮೆಣಸು, ಹಿಪ್ಪಲಿ, ಬದ್ರಮುಷ್ಟೆ, ಜೇನು, ಲವಂಗ, ಏಲಕ್ಕಿ ಮತ್ತು ಧನಿಯಗಳನ್ನು ಮಿಶ್ರಮಾಡಿ ನೀರಿನಲ್ಲಿ ಕುದಿಸಿ, ಆ ನೀರಿನಿಂದ ಮುಕ್ಕಳಿಸಿದರೆ, ಶ್ವಾಸವು ಸುಗಂಧಯುಕ್ತವಾಗಿರುವುದು.[5]

ಸ್ತ್ರೀಯರು ಉಪಯೋಗಿಸುವ ವಿವಿಧ ರೀತಿಯ ತಿಲಕಗಳನ್ನೂ ಇಲ್ಲಿ ಹೆಸರಿಸಲಾಗಿದೆ. ಉದಯಭಾಸ್ಕರ ತಿಲಕ, ಮಹಿಷಿದಳ ತಿಲಕ ಮುಂತಾದ ತಿಲಕಗಳನ್ನು ವಿವಿಧ ಬಣ್ಣಗಳಲ್ಲಿ ಮತ್ತು ವಿವಿಧ ಸುಗಂಧಗಳಲ್ಲಿ ಮಾಡುವ ಪದ್ಧತಿಯನ್ನು ವಿವರಿಸಿದ್ದಾನೆ. ಇದರಿಂದ ಸ್ತ್ರೀಯರು ಸೌಂದರ್ಯ ಸಾಧನವನ್ನು ಯಾವ ರೀತಿ ಬಳಸುತ್ತಿದ್ದರು ಎಂಬುದು ಗೊತ್ತಾಗುತ್ತದೆ.

---

3. ಸಿರಿ ಖಂಡಮಗರು ಶರ್ಕರೆ |
ಕರಜಂ ಪೂತಿಫಳ ಕೋಷ್ಠಮೆಂಬಿವರಿಂದೊಂ ||
ದಿರೆ ಧೂಪಮಕ್ಕು ವಸ್ತ್ರಂ
ಕರಮುಚ್ಚರಿಯಾಗಿ ಸುರಭಿ ಗಂಧಮನಾಳ್ಗುಂ ||

4. ಕರಜಂ ಕುಂದುರು ಜಟಿಮಾಂ |
ಸಿ ರುಚಿ ಯಿವಂ ಸವನೆಗೊಂಡು ದೇಹಮನಿಂಬಾ ||
ಗಿರೆ ಧೂಪಿಸಿದಂದು ಮನೋ |
ಹರಗಂಧಂ ತಾನದಕ್ಕುಮಚಳಿತವಚನಾ ||

5. ತ್ರಿಕಟುಕಮುಂಬುಧರಂ ಮಾ |
ಕ್ಷಿಕಂ ಸುಗಂಧತ್ರಯಂ ರುಜಾಚೂರ್ಣಂಧಾ ||
ನ್ಯಕಮೆಂಬಿವಿನಿತುಮುಂ ಸಮ ||
ನೆ ಕೊಂಡು ಮುಕ್ಕುಳಿಸಿ ವದನಶುದ್ಧಿಯನೀಗುಂ ||

6. ಗುಡಸುರದಾರುಗಳಿಂ ನಾ |
ಲ್ವಡಿ ನುಗ್ಗೀಯಬೇರ ರಸಮ ನೂಪ್ಮದೊಳಿಟ್ಟಾ ||
ಗಡೆ ಗಂಧತ್ರಯಮುಂ ತಳಿ |
ದೊಡೆ ಸೊಗಯಿಪಸಾದಿನಾ ಸವಂ ತಾನಕ್ಕುಂ ||

ಕುಂಕುಮ ಕಸ್ತೂರಿಯನ್ನು ಮಾಡುವ ವಿಧಾನವೂ ಹೇಳಲ್ಪಟ್ಟಿದೆ. ಎರಡು ಭಾಗ ಪುಷ್ಪರಸ, ಒಂದು ಭಾಗ ಮತ್ತಿಹೂವು ಮತ್ತು ಒಂದು ಭಾಗ ಮಡಿವಾಳವನ್ನು ಒಣಗಿಸಿದರೆ ಕುಂಕುಮವಾಗುತ್ತದೆ. ಪುಷ್ಪರಸ ದ್ರಾಮಣ ಮತ್ತು ಕಾಡುನುಗ್ಗೆ ರಸ ಸೇರಿಸಿದರೆ ಕೇದುಗ ವಾಸನೆ ಬರುತ್ತದೆ.[7] ಪಚ್ಚಕರ್ಪೂರವನ್ನು ಮಾಡುವ ವಿಧಾನಗಳೂ ಇಲ್ಲಿ ಹೇಳಲ್ಪಟ್ಟಿವೆ. ಇಂಗು ಅಡಿಗೆಯಲ್ಲಿ ಬಳಸಲಾಗುವ ಅತಿ ಮುಖ್ಯವಾದ ವಸ್ತು. ಅದನ್ನು ತಯಾರುಮಾಡುವ ವಿಷಯವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಈ ಮೇಲಿನ ಅನೇಕ ವಿಧಗಳಲ್ಲಿ ಸಸ್ಯಶಾಸ್ತ್ರ ಮತ್ತು ರಸಾಯನಿಕ ಶಾಸ್ತ್ರದ ತಾಂತ್ರಿಕತೆ ಎದ್ದು ಕಾಣುತ್ತದೆ. ಬಹುಶಃ ಇವೆಲ್ಲವೂ ಗೃಹಕೈಗಾರಿಕೆಯ ರೀತಿಯಲ್ಲಿ ಮನೆಯಲ್ಲಿ ಮಾಡುತ್ತಿದ್ದರೆಂದು ಸುಲಭವಾಗಿ ಹೇಳಬಹುದು. ಇದರಿಂದ ಆ ಕಾಲದಲ್ಲಿ ಇದ್ದ ವೈಜ್ಞಾನಿಕ ರೀತಿ ನೀತಿಗಳೂ ಗೊತ್ತಾಗುತ್ತವೆ. ಇವುಗಳು ಎಷ್ಟರಮಟ್ಟಿಗೆ ಉಪಯೋಗವಾಗುತ್ತವೆ ಎಂಬುದನ್ನು ಇಂದಿನ ವಿಜ್ಞಾನಿಗಳು ಪ್ರಯೋಗಗಳ ಮೂಲಕ ತೋರಿಸಿಕೊಟ್ಟರೆ, ಪ್ರಾಚೀನ ಕರ್ನಾಟಕದ ನಿಜವಾದ ಕೊಡುಗೆ ಏನೆಂಬುದು ತಿಳಿಯಬರುತ್ತದೆ. ಒಟ್ಟಿನಲ್ಲಿ ಚಾವುಂಡರಾಯನ ಗಂಧಯುಕ್ತಿ ಕ್ರಮ ಬಹಳ ಉಪಯುಕ್ತವಾದ ಅಂಶ ಎನ್ನುವುದರಲ್ಲಿ ಸಂದೇಹವಿಲ್ಲ.

---

7. ಕುಸುಮರಸಂ ಕಾಳ್ನುಗ್ಗೆಯ ।
ರಸಮುಜಮೂತ್ರಂಗಳೆಂಬಿವಂಕುದಿಯಿಸಿ ಭಾ ॥
ವಿಸಿ ಕೇದಗೆಯೆಸಳೊಳ್ ವಾ ।
ಸಿಸೆ ಧಾನ್ಯಸ್ಥಾಯಿಮಾಡಿ ಕತ್ತುಂಯಕ್ಕುಂ ॥

8. ಎರಡುಳ್ಳಿ ಹಿಂಗು ನಿಂಬದ ।
ತಿರುಳಾಡಿನ ಬೆಣ್ಣೆ ಬೇವಿನೆಣ್ಣೆಯಂ ಬಿ ॥
ತ್ತರದಿಂ ನೆಯ್ ನಿಲೆ ಕುದಿಯಿಸು ।
ಗೆ ರಾಮುರಕ್ಕೆಲ್ಲ ಮಿಂತಿದುಂ ಸಮನಕ್ಕುಂ ॥

# ಕೆಳದಿ ಆಸ್ಥಾನಕವಿ ಭಟ್ಟೋಜಿ ದೀಕ್ಷಿತನ ಅಪ್ರಕಟಿತ ತಾಳೆಯೋಲೆ ಹಸ್ತಪ್ರತಿ

**ಜಿ.ವಿ. ಕಲ್ಲಾಪುರ**

**ಪೀಠಿಕೆ :** ಐತಿಹಾಸಿಕವಾಗಿ ಕೆಳದಿ ಆಸ್ಥಾನಕ್ಕೆ ವಿಶಿಷ್ಟವಾದ ಸ್ಥಾನವಿದೆ. ಕೆಳದಿ ಆಸ್ಥಾನದಲ್ಲಿ ಸುಮಾರು ಇಪ್ಪತ್ತಕ್ಕೂ ಹೆಚ್ಚು ವಿದ್ವಾಂಸರು ಆಶ್ರಯ ಪಡೆದು ಸಂಸ್ಕೃತ ಹಾಗೂ ಕನ್ನಡ ಭಾಷೆಗಳಲ್ಲಿ ಕೀರ್ತಿ ಪ್ರದವಾದ ಗ್ರಂಥಗಳನ್ನು ರಚಿಸಿ ಸಾಹಿತ್ಯ ಸೇವೆ ಮಾಡಿದ್ದಾರೆ. ಕೆಳದಿಯ ಸಂಸ್ಥಾನಾಧಿಪತಿಗಳಲ್ಲಿ ಕೆಲವರು ಸ್ವತಃ ಕವಿಗಳಾಗಿ ವಿಶ್ವಕೋಶ[1]ದಂತಹ ಉದ್ಗ್ರಂಥಗಳನ್ನು ರಚಿಸಿ ಸಾಹಿತ್ಯ ಸೇವೆಗೈದಿರುವುದು ಕೆಳದಿ ಆಸ್ಥಾನದ ವೈಶಿಷ್ಟ್ಯವಾಗಿದೆ. ಕ್ರಿ.ಶ. ೧೪೯೯ ರಿಂದ ಕ್ರಿ.ಶ. ೧೭೬೩ರವರೆಗೆ ರಾಜ್ಯಭಾರ ಮಾಡಿದ ಕೆಳದಿಯ ಅರಸರ ಕಾಲದಲ್ಲಿ ಸುಮಾರು ಐವತ್ತು ಸಾಹಿತ್ಯ ಕೃತಿಗಳು ಕಂಡಿವೆ.[2] ಕೆಳದಿಯನ್ನಾಳಿದ ಎಲ್ಲ ಅರಸರು ಒಂದಿಲ್ಲೊಂದು ರೀತಿಯಲ್ಲಿ ಸಾಹಿತ್ಯ ಸೇವೆ ಮಾಡಿದ್ದರೂ, ಸಾಹಿತ್ಯ ಕೃತಿಗಳ ರಚನೆಯಾದುದು ಕೆಲವು ಅರಸರ ಕಾಲದಲ್ಲಿ ಎನ್ನಬಹುದು.[3] ಅಂತಹ ಅರಸರಲ್ಲಿ ದಕ್ಷ ಆಡಳಿತಗಾರನೂ ಸ್ವಯಂಕವಿಯೂ[4] ಆದ ಹಿರಿಯ ವೆಂಕಟಪ್ಪ ನಾಯಕನ ಆಸ್ಥಾನದಲ್ಲಿದ್ದುಕೊಂಡು "ಸಿದ್ಧಾಂತ ಕೌಮುದಿ"ಯಂತಹ ಪ್ರಖ್ಯಾತ ಸಂಸ್ಕೃತ ವ್ಯಾಕರಣ ಗ್ರಂಥವನ್ನು ರಚಿಸಿದ ಕವಿಯೆ "ಭಟ್ಟೋಜಿ ದೀಕ್ಷಿತ" ಅವನ ಕಾಲ, ಕೃತಿಗಳು ಮತ್ತು ವಿಶೇಷವಾಗಿ ಈಗ ಲಭಿಸಿರುವ ಅವನ ಅಪ್ರಕಟಿತ ತಾಳೆಯೋಲೆ ಹಸ್ತ ಪ್ರತಿಯನ್ನು ಕುರಿತು ಇಲ್ಲಿ ಸಂಕ್ಷಿಪ್ತವಾಗಿ ಪರಿಚಯಿಸ ಲಾಗುವುದು.

**ಭಟ್ಟೋಜಿ ದೀಕ್ಷಿತನ ಕಾಲ, ಕೃತಿಗಳ ವಿಚಾರ:** ಭಟ್ಟೋಜಿ ದೀಕ್ಷಿತನು ಮಹಾರಾಷ್ಟ್ರದ ಬ್ರಾಹ್ಮಣ ನೆಂಬುದು ಅವನ ಹೆಸರಿನಿಂದ ತಿಳಿಯಬಹುದಾಗಿದೆ. ವಿದ್ಯಾರ್ಜನೆಗಾಗಿ ತನ್ನ ಸ್ವಂತ ಊರನ್ನು ಬಿಟ್ಟು ಕಾಶಿಗೆ ಬಂದನೆಂದು ತಿಳಿದುಬರುತ್ತದೆ.[5] ಇವನ ಕಾಲದ ಬಗ್ಗೆ ಪ್ರೊ. ಮ್ಯಾಕ್ಡೊನಲ್ಲರು ಕ್ರಿ.ಶ. ೧೭ನೇ ಶತಮಾನವೆಂದು ಹೇಳಿದ್ದಾರೆ.[6] ಆದರೆ ಅವರು ಆ ಮಾತನ್ನು ಧೃಡ ಪಡಿಸಿಲ್ಲ. ಭಟ್ಟೋಜಿ ದೀಕ್ಷಿತನು ಕಾಶಿಯಿಂದ

---

1 ಶಿವತತ್ತ್ವ ರತ್ನಾಕರ-ವಿಶ್ವಕೋಶ-ಕವಿ ಹಿರಿಯ ಬಸವಪ್ಪನಾಯಕ (ಕಾಲ ಕ್ರಿ.ಶ. ೧೬೯೮-೧೭೧೪)

2 ಅನುಬಂಧ-೧ ನೋಡಿ

3 ಅನುಬಂಧ-೨ ನೋಡಿ

4 ಹಿರಿಯ ವೆಂಕಟಪ್ಪನಾಯಕ (ಕಾಲ ಕ್ರಿ.ಶ. ೧೫೮೬.೧೬೨೦)
ಸ್ವಯಂ ಕವಿ—೧) ಶಿವಗೀತಾವ್ಯಾಖ್ಯಾ, ೨) ವೀರಮಾಹೇಶ್ವರಾಚಾರ ಸುಧಾವಾರಿ
೩) ತತ್ತ್ವಾದಿಕಾರ ನಿರ್ಣಯಂ—ಇವು ಅವರಿಂದ ರಚಿತವಾದ ಕೃತಿಗಳು

5 ಭಟ್ಟೋಜಿ ದೀಕ್ಷಿತ-ಸಂಸ್ಕೃತ ಕವಿಚರಿತೆ, ಪುಟ ೨೨೮-೨೩೨

6 History of Sanskrit Literature, P. 432

(ವಾರಣಾಸಿ) ಬಂದು ಕೆಳದಿಯ ಆಸ್ಥಾನ ಕವಿಯಾಗಿದ್ದನೆಂದು ತಿಳಿದು ಬರುತ್ತದೆ.[7] ಭಟ್ಟೋಜಿ ದೀಕ್ಷಿತನು ತನ್ನ ಕೃತಿಯಾದ "ಶಬ್ದ ಕೌಸ್ತುಭ"ದಲ್ಲಿ–

೧ "ವಿಶ್ವೇಶಂ ಸಚ್ಚಿದಾನಂದಂ ವಂದೇಹಂ ಯೋ
ಖಿಲಂ ಜಗತ್
ಚರೀಕರ್ತಿ ಭರೀಭರ್ತಿ ಸಂದರೀಹರ್ತಿ ಲೀಲಯಾ
ಕೆಲದೀ ವೇಂಕಟೇಂದ್ರಸ್ಯ ನಿದೇಶಾದ್ದಿದುಷಾಂ
ಮುದೇ
ದ್ವಾಂತೋಚ್ಚಿತ್ತ್ಯೈ ಪಟುತರಸ್ತನ್ಯತೇ
ತತ್ತ್ವಕೌಸ್ತುಭ"[8]

೨ "ಕೆಲದೀ ವೆಂಕಟೇನ್ದ್ರೋಸೌ ಅಘೋರೇಶ
ಪರಾಯಣ
ಅಚೀಕರದಿಮಂಗ್ರಸ್ಥ ತತ್ತ್ವಕೌಸ್ತುಭ
ಸಂಜ್ಞಿತವೌ"[9]

ಎಂದು ತನ್ನ ಆಶ್ರಯದಾತನನ್ನು ಸ್ಮರಿಸಿರುವುದು ಗಮನಾರ್ಹವಾಗಿದೆ. ಹಿರಿಯ ವೆಂಕಟಪ್ಪನಾಯಕನು ಕ್ರಿ.ಶ. ೧೫೮೩ ರಿಂದ ಕ್ರಿ.ಶ. ೧೬೩೦ರವರೆಗೆ ರಾಜ್ಯಭಾರ ಮಾಡಿರುವುದು ಐತಿಹಾಸಿಕವಾಗಿ ನಿರ್ಧಾರವಾಗಿದೆ. ಈ ಮೇಲಿನ ಆಧಾರಗಳಿಂದ ಭಟ್ಟೋಜಿ ದೀಕ್ಷಿತನ ತಂದೆಯ ಹೆಸರು ಲಕ್ಷ್ಮೀಧರನೆಂದು ಅವನ ಕೃತಿಯಿಂದಲೇ ತಿಳಿದು ಬರುತ್ತದೆ.[10] ಲಭ್ಯವಿರುವ ಕೆಲವು ಆಧಾರಗಳಿಂದ[11] ಭಟ್ಟೋಜಿ ದೀಕ್ಷಿತನ ವಂಶಾವಳಿಯನ್ನು ಹೀಗೆ ಗುರುತಿಸಬಹುದಾಗಿದೆ.




ಭಟ್ಟೋಜಿ ದೀಕ್ಷಿತನಿಂದ ರಚಿತವಾಗಿರುವ ಕೃತಿಗಳನ್ನು ಹೀಗೆ ಗುರುತಿಸಬಹುದಾಗಿದೆ.[12]

೧ ತತ್ತ್ವಕೌಸ್ತುಭ–ಸಿದ್ಧಾಂತ
೨ ಸಿದ್ಧಾಂತ ಕೌಮುದಿ–ವ್ಯಾಕರಣ
೩ ಪ್ರೌಢ ಮನೋರಮಾ–ಸಿದ್ಧಾಂತ ಕೌಮುದಿಗೆ ಬರೆದ ವ್ಯಾಖ್ಯಾನ

---

7 Dr. P.K. Gode–Studies in Indian Literary of History, Vol. I, 1953, Pp. 75-78

8 M.S. No. 1243, Page 122, G.M.L. Madras

9 Mss. No. 319, 1899, 1915, B.O.R.I., Poona

10 ಪದ್ಯವಾಕ್ಯ ಪ್ರಮಾಣಜ್ಞ, "ಶ್ರೀ ಲಕ್ಷ್ಮೀಧರಸೂನುನಾ ಭಟ್ಟೋಜಿ ದೀಕ್ಷಿತೇನ ವಿರಚಿತಾಯಾಂ ಚತುರ್ವಿಂಶತಿ ಸ್ಮೃತಿ ವ್ಯಾಖ್ಯಾಯಾಂ ಪ್ರಾಯಶ್ಚಿತ್ತ ಕಾಂಡಂ ಸಮಾಪ್ತಂ", ಪುಟ ೨೦೮, (ಅನುಬಂಧ ೭ ನೋಡಿ)

11 Dr. P. K. Gode–The contact at Bhattojidiksita and some members of his family with Keladi rulers of Ikkeri Between A.D. 1592-1645 –Journal of O.R.I. M.S. Universitp of Baroda, Vol. IV, Sept. 1954

12 ಡಾ. ಸಾ.ಶಿ. ಮರುಳಯ್ಯ–ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಪುಟ ೭೦, ಪ್ರಸಾರಾಂಗ, ಬೆಂಗಳೂರು, ೧೯೮೦
ಗೌ. ಸಂಚಾಲಕ ಶ್ರೀ ಗುಂಡಾಜೋಯಿಸರು ಸಮೀಕ್ಷೆ ಕೈಗೊಂಡಾಗ ಲಭಿಸಿದ ಹಸ್ತಪ್ರತಿ. ಇದನ್ನು ವಸ್ತು ಸಂಗ್ರಹಾಲಯಕ್ಕೆ ಉದಾರವಾಗಿ ನೀಡಿರುವ ಶ್ರೀ ಚಂದ್ರಶೇಖರ ಭಟ್ಟರಿಗೆ ಸಂಗ್ರಹಾಲಯದ ಪರವಾಗಿ ಕೃತಜ್ಞತೆಗಳು.

೪ ತಂತ್ರಾಧಿಕಾರ ನಿರ್ಣಯ–ವ್ಯಾಕರಣ ವ್ಯಾಖ್ಯಾನ
೫ ಶಬ್ದ ಕೌಸ್ತುಭ–ವ್ಯಾಖ್ಯಾನ
೬ ವೇದಭಾಷ್ಯಸಾರ–ಭಾಷ್ಯ
೭ ಧಾತಿ ವಿವೇಕ–ಧರ್ಮಗ್ರಂಥ

ಈ ಮೇಲಿನ ಕೃತಿಗಳೆಲ್ಲವೂ ಸಂಸ್ಕೃತ ಭಾಷೆಯಲ್ಲಿವೆ. ಅವುಗಳ ಸಾಲಿಗೆ ಸೇರಲಿರುವ ಮತ್ತೊಂದು ಕೃತಿ "ಸ್ಮೃತಿ ದರ್ಪಣ"

**ಸ್ಮೃತಿ ದರ್ಪಣದ ಸಂಕ್ಷಿಪ್ತ ಪರಿಚಯ :** ಸ್ಮೃತಿ ದರ್ಪಣವು ಅಪೂರ್ವವೂ ಅಪ್ರಕಟಿತವೂ ಆದ ತಾಳೆಯೋಲೆ ಹಸ್ತಪ್ರತಿಯಾಗಿದೆ. ಇದು ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾಲಯದಲ್ಲಿ ಪತ್ತೆಯಾಗಿದ್ದು ಉತ್ತಮವಾಗಿ ಸಂರಕ್ಷಿಸಲ್ಪಟ್ಟಿದೆ. ಇದರಲ್ಲಿ ಒಟ್ಟು ೨೫೮ ಗರಿಗಳಿದ್ದು ಎರಡು ವಿಭಾಗವನ್ನು ಹೊಂದಿದೆ. ಮೊದಲನೆಯ ಭಾಗವು ೪೯ ಗರಿಗಳನ್ನು ಹೊಂದಿದ್ದು "ಸ್ಮೃತಿದರ್ಪಣ" ಗ್ರಂಥವು ಸಂಪೂರ್ಣವಾಗಿ ಕಾರಿಕಾರೂಪದಲ್ಲಿ ಬರೆಯಲಾಗಿದೆ. ಪ್ರತಿಯೊಂದು ಓಲೆಗೂ ಪುಟ ಸಂಖ್ಯೆಯಿದ್ದು ೧ ರಿಂದ ೪೯ ಪುಟಗಳಲ್ಲಿ ೫೪೫ ಕಾರಿಕಗಳಿವೆ. ಎರಡನೆಯ ಭಾಗವು ೧ ರಿಂದ ೨೦೯ ಗರಿಗಳನ್ನು ಹೊಂದಿದ್ದು ಗದ್ಯರೂಪದಲ್ಲಿ ಬರೆಯಲ್ಪಟ್ಟಿದೆ. ಗರಿಯ ಉದ್ದ ೨೫ ಸೆಂ.ಮೀ., ಅಗಲ ೪ ಸೆಂ.ಮೀ., ಪ್ರತಿಯೊಂದು ಗರಿಯಲ್ಲಿಯೂ ೭ ರಿಂದ ೮ ಸಾಲುಗಳು ಬರೆಯಲಾಗಿದೆ. ಪ್ರತಿಯೊಂದು ಸಾಲಿನಲ್ಲಿಯೂ ೪೦ ರಿಂದ ೪೫ ಅಕ್ಷರಗಳು ಬರೆಯಲ್ಪಟ್ಟಿದೆ. ಇದೊಂದು ಸಂಸ್ಕೃತಗಂಥವಾಗಿದ್ದು ನಾಗರಿ ಲಿಪಿಯಲ್ಲಿ ಬರೆಯಲಾಗಿದೆ.

ಹೆಸರೆ ಸೂಚಿಸುವಂತೆ ಸ್ಮೃತಿಗಳಲ್ಲಿ ಹೇಳಿರುವ ಸಂಸ್ಕಾರ, ಆಚಾರ-ವಿಚಾರಗಳನ್ನು ಪ್ರತಿಬಿಂಬಿಸುವ ಗ್ರಂಥವೇ "ಸ್ಮೃತಿ ದರ್ಪಣ" ಗ್ರಂಥಾರಂಭದ ಕಾರಿಕೆಗಳಲ್ಲಿ ಕೃತಿಕಾರನು ಅನೇಕ ಸ್ಮೃತಿಕಾರರನ್ನು[13] ಸ್ಮರಿಸಿದ್ದಾನೆ. ಗ್ರಂಥದ ಪ್ರಾರಂಭ ಹೀಗೆ ಮಾಡಲಾಗಿದೆ–

"ಶ್ರೀ ಗಣಾಧಿಪತಯೇ ನಮಃ । ಶುಭಮಸ್ತು
ನಿರ್ವಿಘ್ನಮಸ್ತು ।
ಮನ್ವಂತ್ರಿಹಾರೀತ ಪರಾಶರಾಪಸ್ತಂಭಾಂಗಿರವ್ಯಾಸ
ವಶಿಷ್ಟಸಂಸ್ಥಾಃ ।
ಸಂವರ್ತ ಸಾತಾತಪವಿಷ್ಣುಗಾರ್ಗ್ಯಂ
ಸುಮಂತುಕಾತ್ಯಾಯನಕಶ್ಯಪಾಂಶ್ಚ ॥"

ಮಂಗಳಾಚರಣೆಯ ನಂತರ ಗ್ರಂಥಾರಂಭದಲ್ಲಿ ಪ್ರಾತಃ ವಿಧಿಗಳನ್ನು ಹೇಳುತ್ತಾ-

"ಬ್ರಾಹ್ಮೀ ಮುಹೂರ್ತೆ ಸ್ವಗುರುಂ ಪ್ರಬುಧ್ಯ
ಧ್ಯಾತ್ವಾಚ ಸಂಚಿಂತ್ಯ
ಗ್ರಹಸ್ಯಕೃತ್ಯಂ ಬ್ರಹ್ಮಾಮುರಾರಿಸ್ತ್ರಿ
ಪುರಾಂತಕಾನೀ ಬಾನುಃ
ಶಶಿ ಭೂಮಿಸುತೋಬುಧಶ್ಚ ಗುರುಶ್ಚಶುಕ್ರಃ
ಶನಿರಾಹುಕೇತುಃ
ಕುರ್ವಂತು ಸರ್ವೇ ಮಮ ಸುಪ್ರಭಾತಂ"

ಎಂದು ಗ್ರಂಥಾರಂಭ ಮಾಡಿದ್ದಾನೆ.

ಈ ಭಾಗದಲ್ಲಿ ಕವಿಯು–ಪ್ರಾಥರಭಿವಾದನ ಕ್ರಮ (ಪುಟ ೧೩), ಸ್ನಾನವಿಧಿ, ಭೋಜನವಿಧಿ (ಪುಟ ೧೪) ಭೋಜನ ನಿಯಮ (ಪುಟ ೧೫), ನಾಂದಿ ವಿಚಾರ (ಪುಟ ೧೭), ಚೌಲ (ಪುಟ ೧೯), ಉಪನಯನ (ಪುಟ ೧೯ ಹಿಂ), ಉಪವಿಷಿತ ಲಕ್ಷಣ (ಪುಟ ೨೦), ವೇದಾಧ್ಯಯನ (ಪುಟ ೨೦ ಹಿಂ), ಅನಧ್ಯಯನ (ಪುಟ ೨೧), ಉಪಾಕರ್ಮ (ಪುಟ ೨೨) ತಿಲ ತರ್ಪಣವಿಧಿ (ಪುಟ ೨೩), ವಿವಾಹ (ಪುಟ ೨೪), ಪ್ರಾಯಶ್ಚಿತ್ತ (ಪುಟ ೨೬), ಅಹಿತಾಗ್ನಿ ಸಂಸ್ಕಾರ (ಪುಟ ೨೭), ಮಲಮಾಸ (ಪುಟ ೩೦), ಅಶೌಚ ವಿಚಾರ (ಪುಟ ೩೨), ತಿಥಿ ನಿರ್ಣಯ (ಪುಟ ೪೩), ಜನ್ಮಾಷ್ಟಮಿ (ಪುಟ ೪೪), ಏಕಾದಶಿನಿರ್ಣಯ (ಪುಟ ೪೫), ಗ್ರಹಣ (ಪುಟ ೪೬) ಇತ್ಯಾದಿ ಹಲವಾರು ವಿಚಾರಗಳನ್ನು ಕಾರಿಕಾರೂಪದಲ್ಲಿ ಪ್ರಸ್ತಾಪಿಸಿ ಗ್ರಂಥ ಮುಕ್ತಾಯ ಮಾಡಿದ್ದಾನೆ.[14]

13 ಅದೇ : ಅನುಬಂಧ – ೩, ನೋಡಿ

14 ಅದೇ : ಅನುಬಂಧ – ೪, ನೋಡಿ

ಎರಡನೆ ಭಾಗವು ಗದ್ಯರೂಪದಲ್ಲಿದ್ದು ಕಾರಿಕೆಗಳಿಗೆ ಬರೆದ ವ್ಯಾಖ್ಯಾನವಾಗಿದೆ. ಇದರಲ್ಲಿ ಒಟ್ಟು ೨೦೯ ಗರಿಗಳಿದ್ದು ಪ್ರತಿಯೊಂದಕ್ಕೂ ಸಂಖ್ಯೆಯನ್ನು ಕೊಡಲಾಗಿದೆ. "ಶುಭಮಸ್ತು ಅಥ ಪ್ರಾಯಶ್ಚಿತ್ತಾಚರಣ ಪ್ರಕಾರಃ ಕಥ್ಯತೆ"[15] ಎಂದು ಗ್ರಂಥಾರಂಭ ಮಾಡಿದ್ದಾನೆ. ಈ ಭಾಗದಲ್ಲಿ ಪ್ರಸ್ತಾಪಿಸಿರುವ ಪ್ರಮುಖ ವಿಚಾರಗಳೆಂದರೆ—

ತ್ರಿಪುಂಡ್ರವಿಧಿ (ಪುಟ ೧೬), ಭಸ್ಮಧಾರಣ ವಿಧಿ (ಪುಟ ೧೭), ಸಂಧ್ಯಾಕಾಲ (ಪುಟ ೧೮), ಕಾಲ ಲೋಪ ಪ್ರಾಯಶ್ಚಿತ(ಪುಟ ೧೮), ಸಂಧ್ಯಾವಿಧಿ(ಪುಟ ೧೮ ಹಿಂ), ಗಾಯತ್ರಿನ್ಯಾಸಃ(ಪುಟ ೨೦), ಗಾಯತ್ರಿಧ್ಯಾನ (ಪುಟ ೨೧), ಜಪವಿಧಿ(ಪುಟ ೨೧ ಹಿಂ), ಅಕ್ಷಮಾಲೇ (ಪುಟ ೨೨), ಗಾಯತ್ರಿ ತರ್ಪಣ (ಪುಟ ೨೨), ತ್ರಿಸಂಧ್ಯಾ (ಪುಟ ೨೨ಹಿಂ), ಸೂತಕ ಸಂಧ್ಯಾ ಪ್ರಕರಣ(ಪುಟ ೨೪), ಪ್ರಾಣಾಯಾಮ ಲಕ್ಷಣ (ಪುಟ ೨೫ ಹಿಂ), ಆಸನ ಲಕ್ಷಣ (ಪುಟ ೨೬), ಜಪಸ್ಥಾನ (ಪುಟ ೨೭), ಜಪನಿಷೇಧ(ಪುಟ ೨೭), ಜಪಮಾಲ ವಿಧಿ (ಪುಟ ೨೭ ಹಿಂ), ಮಾಧ್ಯಾಹ್ನಿಕ ಸಂಧ್ಯಾಕಾಲ ಅಭಿವಾದನ (ಪುಟ ೨೮), ಉಪಾಸನ ಕಾಲ (ಪುಟ ೨೮ ಹಿಂ), ನಿತ್ಯ ಹೋಮದ್ರವ್ಯಕಾಲ (ಪುಟ ೨೯), ವೈಶ್ವದೇವ ಪ್ರಕರಣ (ಪುಟ ೩೧), ಬ್ರಹ್ಮಯಜ್ಞ (ಪುಟ ೩೩), ತಿಲ ತರ್ಪಣ ವಿಧಿ (ಪುಟ ೩೪), ಯಮ ತರ್ಪಣ (ಪುಟ ೩೬), ಭೀಷ್ಮ ತರ್ಪಣ (ಪುಟ ೩೬ ಹಿಂ), ದೇವತಾರ್ಚನೆ (ಪುಟ ೩೭ ಹಿಂ), ಅತಿಥಿ ಪ್ರಕರಣ (ಪುಟ ೪೩), ಭೋಜನ ವಿಧಿ (ಪುಟ ೪೪), ವಮನವಿಧಿ(ಪುಟ ೫೦), ತಾಂಬೂಲ ವಿಧಿ (ಪುಟ ೫೦), ದೀಪವಿಧಿ (ಪುಟ ೫೦ ಹಿಂ), ಗೃಹಿಣಿ ವಿಧಿ (ಪುಟ ೫೨), ಪ್ರದೋಷ ವಿಚಾರ (ಪುಟ ೫೪ ಹಿಂ), ತಿಲ ತರ್ಪಣ ನಿಷೇಧ ಕಾಲ (ಪುಟ ೫೫), ಗರ್ಭಾದಾನ ಪುಂಸವನ (ಪುಟ ೫೯ ಹಿಂ), ಗರ್ಭಿಣಿ ಧರ್ಮ ಪತಿ ನಿಯಮ (ಪುಟ ೬೦), ಜಾತಕರ್ಮ ನಾಮಕರಣ (ಪುಟ ೬೦ ಹಿಂ),[16] ಅನ್ನಪ್ರಾಶನ ಚೌಲ (ಪುಟ ೬೧ ಹಿಂ), ಉಪಾಕರ್ಮ (ಪುಟ ೬೪), ಯಾಗಾದಿ, ಮನ್ವಾದಿ (ಪುಟ ೬೫), ಪ್ರದೋಷ ಗೋದಾನ (ಪುಟ ೬೫ ಹಿಂ), ಸಮಾವರ್ತನೆ, ಕನ್ಯಾವಿಚಾರ (ಪುಟ ೬೫ ಹಿಂ), ಪಿತ್ರಾ ಆಶೌಚವಿಧಿ (ಪುಟ ೬೭), ನಾಂದಿ ಕರ್ತೃ ಧರ್ಮ (ಪುಟ ೬೮), ರಜಸ್ವಲ ವಿಚಾರ (ಪುಟ ೭೦), ಅಗ್ನಿ ಸಂಯೋಗ (ಪುಟ ೭೧), ಷೋಡಶ ಕರ್ಮ (ಪುಟ ೭೩), ಸವೇದ ವಿಚಾರ (ಪುಟ ೭೪ ಹಿಂ), ಶ್ರಾದ್ಧವಿಧಿ (ಪುಟ ೭೫), ವಪನಾಧಿಕಾರ ವಿಧಿ (ಪುಟ ೭೬), ದಹನಾದಿ ಕರ್ಮ ಕರ್ತೃ ನಿರ್ಣಯ (ಪುಟ ೭೬ ಹಿಂ), ಅಸ್ಥಿ ಸಂಚಯನ (ಪುಟ ೭೭), ಅನುಗಮನ (ಪುಟ ೭೮), ಮಾಸಿಕಾ ವಿಷಯ (ಪುಟ ೭೯), ನಿಷೇಧ ನಿಯಮ (ಪುಟ ೮೨ ಹಿಂ), ದೇಶಾಂತರಗತಂ ಅವಲೋಕನ ವಿಧಿ (ಪುಟ ೯೧), ಗರ್ಭಿಣಿ ಸಂಸ್ಕಾರ (ಪುಟ ೯೩ಹಿಂ), ಏಕಾದಶಿ ಶ್ರಾದ್ಧ ಭೋಜನ (ಪುಟ ೧೦೦), ದಾನ ಪ್ರಕರಣ (ಪುಟ೧೦೦ ಹಿಂ), ತಿಥಿ ನಿರ್ಣಯ(ಪುಟ ೧೨೧), ವಿಶೇಷ ತಿಥಿ (ಪುಟ ೧೨೨), ನೃಸಿಂಹ ಜಯಂತಿ (ಪುಟ ೧೨೪), ನಾಗಪಂಚಮಿ (ಪುಟ ೧೨೪), ಜನ್ಮಾಷ್ಟಮಿ (ಪುಟ ೧೨೫), ಪಾರಣ ವಿಧಿ (ಪುಟ ೧೨೫ಹಿಂ), ಗಣೇಶ ಚತುರ್ಥಿ (ಪುಟ ೧೨೬), ಶ್ರವಣ ದ್ವಾದಶಿ (ಪುಟ ೧೨೮ ಹಿಂ), ಅನಂತ ಚತುರ್ದಶಿ (ಪುಟ ೧೨೯), ನವ ರಾತ್ರಿ ವಿಷಯ (ಪುಟ ೧೨೯ ಹಿಂ), ಮಹಾನವಮಿ (ಪುಟ ೧೩೧), ದೀಪಾವಲಿ (ಪುಟ ೧೩೩ ಹಿಂ), ಶಿವ ರಾತ್ರಿ (ಪುಟ ೧೩೫), ಏಕಾದಶಿ ನಿರ್ಣಯ (ಪುಟ ೧೩೮), ಪುಣ್ಯತಿಥಿ (ಪುಟ ೧೪೨), ಸಂಕ್ರಾಂತಿ ವಿಷಯ (ಪುಟ ೧೪೨), ಮಲಮಾಸವಿಚಾರ (ಪುಟ ೧೪೪), ಗ್ರಹಣ ವಿಷಯ (ಪುಟ ೧೪೮), ಅಭ್ಯಂಗ ಸ್ನಾನ ಪ್ರಕಾರ (ಪುಟ ೧೫೧), ಶಿವಪಾರಣೆ (ಪುಟ ೧೫೩), ಈ ಎಲ್ಲ ವಿಚಾರಗಳನ್ನು ಪ್ರಸ್ತಾಪಿಸಿ ನಂತರ ಪುಟ ೧೫೪ ರಿಂದ ೧೮ ಪ್ರಾಯಶ್ಚಿತ್ತ ಪ್ರಕರಣವನ್ನು ಪುಟ ೨೦೯ರ ವರೆಗೆ ಹೇಳಿ ಕೊನೆಯಲ್ಲಿ–

---

15 ಅದೇ : ಅನುಬಂಧ—೫ ನೋಡಿ

16 ಅದೇ : ಅನುಬಂಧ—೬ ನೋಡಿ

"ಇತಿ ಪದವಾಕ್ಯ ಪ್ರಮಾಣಜ್ಞ ಶ್ರೀ ಲಕ್ಷ್ಮೀಧರ
ಸೂನುನಾಭಟ್ಟೋಜಿ
ದೀಕ್ಷಿತೇನ ವಿರಚಿತಾಯಾಂ ಚತುರ್ವಿಂಶತಿ
ಸ್ಮೃತಿ ವ್ಯಾಖ್ಯಾಯಾಂ
ಪ್ರಾಯಶ್ಚಿತ್ತಕಾಂಡಂ ಸಮಾಪ್ತಂ"[17]

ಎಂದು ಸಮಾಪ್ತಿ ಮಾಡಿದ್ದಾನೆ.

ಇದೊಂದು ಅಪೂರ್ಣ ಗ್ರಂಥವೆನ್ನಬಹುದು. ಏಕೆಂದರೆ ಇಲ್ಲಿ ಉಪಲಬ್ಧವಿರುವುದು ಪ್ರಾಯಶ್ಚಿತ್ತ ಕಾಂಡ ಮಾತ್ರ. ಈ ಕೃತಿಯು ಭಟ್ಟೋಜಿ ದೀಕ್ಷಿತ ನಿಂದಲೇ ರಚಿತವಾಗಿದೆಯೆಂಬುದಕ್ಕೆ ಈ ಕೆಳಗಿನ ವಾಕ್ಯ ಗಳೇ ಸಾಕ್ಷಿಯಾಗಿವೆ.

"ಇತಿ ಶ್ರೀ ವಾಜಪೇಯಿ ಭಟ್ಟೋಜಿ
ದೀಕ್ಷಿತಾಭ್ಯಾಂ ವಿರಚಿತೇ
ಧರ್ಮ ಸಂಗ್ರಹೇ ಧರ್ಮ ಪ್ರವೃತ್ಯಾಥವ
ಲೋಕ್ಯಸಾರಾಂ
ಸಮುದ್ಧೃತ್ಯಾಹ್ನಿಕ ಪ್ರಯೋಗಃ ಸಮಾಪ್ತಃ"[18]

"ಇತಿ ಪದವಾಕ್ಯ ಪ್ರಮಾಣಜ್ಞ ಶ್ರೀ ಲಕ್ಷ್ಮೀಧರ
ಸೂನುನಾಭಟ್ಟೋಜಿ
ದೀಕ್ಷಿತೇನ ವಿರಚಿತಾಯಾಂ ಚತುರ್ವಿಂಶತಿ
ಸ್ಮೃತಿ ವ್ಯಾಖ್ಯಾಯಾಂ
ಪ್ರಾಯಶ್ಚಿತ್ತ ಕಾಂಡಂ ಸಮಾಪ್ತಂ"
॥ಶುಭಮಸ್ತು॥[19]

ಪ್ರಬಂಧ ವಿಸ್ತಾರಭಯದಿಂದ ಇಲ್ಲಿ ಸಂಕ್ಷಿಪ್ತಗೊಳಿಸ ಲಾಗಿದೆ.

**ಉಪಸಂಹಾರ :** ಕೆಳದಿಯ ಅರಸ ಹಿರಿಯ ವೆಂಕಟಪ್ಪನಾಯಕನ ಆಸ್ಥಾನ ಕವಿಯಾದ ಭಟ್ಟೋಜಿ ದೀಕ್ಷಿತನು ಸಂಸ್ಕೃತ ಭಾಷೆಯಲ್ಲಿ ಅನೇಕ ಉದ್ಗ್ರಂಥ ಗಳನ್ನು ರಚಿಸಿ ಅಮರನಾಗಿದ್ದಾನೆ. ಸಂಸ್ಕೃತವನ್ನು ಕಲಿಯಲು ಇಚ್ಛಿಸುವ ಪ್ರತಿಯೊಬ್ಬನು ಮೊದಲು ಅಭ್ಯಾಸ ಮಾಡಬೇಕಾದ ಗ್ರಂಥ ಭಟ್ಟೋಜಿ ದೀಕ್ಷಿತನಿಂದ ರಚಿತವಾಗಿರುವ ವ್ಯಾಕರಣ ಗ್ರಂಥ "ಸಿದ್ಧಾಂತ ಕೌಮುದಿ" ಅದೇ ರೀತಿಯಲ್ಲಿ ಪ್ರಸ್ತುತ ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರದಲ್ಲಿ ದೊರೆತಿ ರುವ ಅವನ ಮತ್ತೊಂದು ಅಪೂರ್ವವೂ ಮತ್ತು ಅಪ್ರಕಟಿತವೂ ಆದ ತಾಳೆಯೋಲೆ ಹಸ್ತಪ್ರತಿ "ಸ್ಮೃತಿ ದರ್ಪಣ". ಇದರಲ್ಲಿ ಅವನು ಅನೇಕ ಸ್ಮೃತಿಕಾರರ ಪಂಕ್ತಿಗಳನ್ನು ಸಂದರ್ಭೋಚಿತವಾಗಿ ಉದಾಹರಿಸಿ ವ್ಯಾಖ್ಯಾನವನ್ನು ಮಾಡಿದ್ದಾನೆ. ಈ ಕೃತಿಯಲ್ಲಿ ಪ್ರಾತಃ ವಿಧಿಯಿಂದ ಪ್ರಾರಂಭಿಸಿ, ಷೋಡಶ ಕರ್ಮ ಗಳು, ಪ್ರಾಯಶ್ಚಿತ್ತ, ಹಬ್ಬಹರಿದಿನಗಳ ವಿಚಾರ ಇತ್ಯಾದಿ ಎಲ್ಲವನ್ನು ಸ್ಮೃತಿ ವಾಕ್ಯಗಳೊಂದಿಗೆ ಚರ್ಚಿಸಿ ದ್ದಾನೆ. ಒಟ್ಟಿನಲ್ಲಿ ಹೇಳುವುದಾದರೆ ಇದೊಂದು ಅಪೂರ್ವವಾದ ಕೃತಿ. ಸಂಸ್ಕೃತ ಸಾಹಿತ್ಯಕ್ಕೆ ವಿಶೇಷ ವಾದ ಸೇವೆ ಸಲ್ಲಿಸಿರುವ ಈ ಕವಿಯ ದೇಶ, ಕಾಲ, ಕೃತಿ ಗಳ ವಿಚಾರದಲ್ಲಿ ಅನೇಕ ಭಿನ್ನಾಭಿಪ್ರಾಯಗಳಿದ್ದು ಅವು ಗಳ ಒಂದು ಸಮಗ್ರ ಅಧ್ಯಯನ ನಡೆಯಬೇಕಾಗಿದೆ. ಕೆಳದಿ ಇತಿಹಾಸ ಸಂಶೋಧನಾಲಯವು ಈ ನಿಟ್ಟಿನಲ್ಲಿ ಕಾರ್ಯ ಮಾಡುವುದೆಂದು ನಾನು ಆಶಿಸುತ್ತೇನೆ.

ಈ ಪ್ರಬಂಧಕ್ಕೆ ಹಸ್ತಪ್ರತಿಯನ್ನು ತೋರಿಸಿ ಮಾರ್ಗದರ್ಶನ ನೀಡಿದ ಕೆಳದಿ ವಸ್ತು ಸಂಗ್ರಹಾಲಯದ ಗೌ॥ ಸಂಚಾಲಕ ಶ್ರೀ ಗುಂಡಾಜೋಯಿಸರಿಗೆ ಹಾಗೂ ಹಸ್ತಪ್ರತಿಯನ್ನು ಅವಲೋಕಿಸಲು ಅನುಮತಿ ನೀಡಿದ ವಿಶ್ವಸ್ಥ ಸಮಿತಿಗೂ ಕೃತಜ್ಞತೆಯನ್ನು ಅರ್ಪಿಸುವೆನು.

○

---

17 ಅದೇ : ಅನುಬಂಧ – ೭ ನೋಡಿ
18 ಅದೇ : ಅನುಬಂಧ – ೬ ನೋಡಿ
19 ಅದೇ : ಅನುಬಂಧ – ೭ ನೋಡಿ

# ಧರ್ಮಸ್ಥಳದ ಪುರಾತನ ಪತ್ರಾಗಾರ

ಕೆಳದಿ ಗುಂಡಾಜೋಯಿಸ್

ಧರ್ಮಸ್ಥಳ ಭಾರತದ ಪ್ರಮುಖ ಧಾರ್ಮಿಕ ಕ್ಷೇತ್ರ. ಸಾಂಸ್ಕೃತಿಕವಾಗಿ ಉನ್ನತ ಪರಂಪರೆಯುಳ್ಳ ಧರ್ಮಸ್ಥಳದಲ್ಲಿ ಧಾರ್ಮಿಕ ಹಿನ್ನಲೆಯ ಪರಾಕಾಷ್ಟತೆಯನ್ನು ಈಗಲೂ ಕಾಣಬಹುದು. ಶ್ರೀ ಮಂಜುನಾಥೇಶ್ವರ ಹಾಗೂ ಶ್ರೀ ಅಣ್ಣಪ್ಪ ದೇವರುಗಳಿಂದ ಕ್ಷೇತ್ರದ ಹಿರಿಮೆ ಹೆಚ್ಚಿದೆ. ಇಲ್ಲಿಗೆ ಸಂದರ್ಶಿಸುವ ಯಾತ್ರಾರ್ಥಿಗಳಿಗೆ ಉಚಿತ ಭೋಜನ ಹಾಗೂ ವಸತಿ ಸೌಲಭ್ಯಗಳು ಈಗಲೂ ಉಂಟು. ಕ್ರಿ.ಶ. ೧೫೦೩ರಲ್ಲಿ ಕ್ಷೇತ್ರದ ಧರ್ಮಾಧಿಕಾರಿಗಳಾಗಿದ್ದ ದೇವರಾಜ ಹೆಗ್ಗಡೆಯವರ ಕಾಲದಲ್ಲಿ ಶ್ರೀವಾದಿ ರಾಜ ಯತಿಗಳಿಂದ ಆಗಮೋಕ್ತವಾಗಿ ಲಿಂಗಪ್ರತಿಷ್ಠೆಯಾಯಿತು. ಕ್ರಿ.ಶ. ೧೭೮೦ ರಲ್ಲಿ ಚಂದಯ್ಯ ಹೆಗ್ಗಡೆಯವರಿಂದ ಲಿಂಗದಲ್ಲಿರುವ ಚಿನ್ನದ ನಾಗಾಭರಣ ಸಲ್ಲಿಸಿರುವುದು ಶಾಸನದಿಂದ ವ್ಯಕ್ತಪಡುತ್ತದೆ[1] ಧರ್ಮಸ್ಥಳ ಕ್ಷೇತ್ರದ ಪ್ರಧಾನ ದೇವರು ಈಶ್ವರ (ಅದ್ವೈತ), ಅರ್ಚಕರು ವೈಷ್ಣವರು (ದ್ವೈತ), ಧರ್ಮಾಧಿಕಾರಿ ಜೈನರು. ಇಂತಹ ಧರ್ಮ ಸಮನ್ವಯತೆಯಿಂದ ಕೂಡಿದ ಕ್ಷೇತ್ರದ ಧಾರ್ಮಿಕ ಕಾರ್ಯಗಳು ವೈಶಿಷ್ಟ್ಯಪೂರ್ಣವಾದುದು. ಕ್ಷೇತ್ರದ ಧಾರ್ಮಿಕ ನ್ಯಾಯ ತೀರ್ಮಾನ (ಹ್ಯೊಲು) ಕ್ರಮ ಪದ್ಧತಿಯು ತನ್ನದೇ ಆದ ವಿಶಿಷ್ಟ ಪರಂಪರೆಯನ್ನು ಕಾಯ್ದುಕೊಂಡಿದೆ. ಪ್ರಾಚೀನ ಕಾಲದಿಂದಲೂ ಕ್ಷೇತ್ರದ ಧರ್ಮ, ದೈವ, ಉತ್ಸವ ಮತ್ತು ಮಹಾ ನಡಾವಳಿಗಳನ್ನು ಆಚರಿಸಿಕೊಂಡು ಬರುತ್ತಿರುವ ಹೆಗ್ಗಡೆ ಮನೆತನ ಐತಿಹಾಸಿಕವಾಗಿ ಗಮನಾರ್ಹವಾಗಿದೆ.

ಧರ್ಮಸ್ಥಳದಲ್ಲಿರುವ ಪ್ರಾಚೀನ ದೇವಾಲಯಗಳು, ಪುರಾತತ್ವ ಸಂಗ್ರಹಗಳು, ವಸ್ತು ಸಂಗ್ರಹಾಲಯ, ಓಲೆಗರಿಗಳು ಹಾಗೂ ಚಾರಿತ್ರಿಕ ದಾಖಲೆಗಳು ಅಪಾರವಾಗಿದ್ದು ಅಧ್ಯಯನ ಪಿಪಾಸುಗಳಿಗೆ ಐತಿಹಾಸಿಕ ಮೂಲ ಸಾಮಗ್ರಿಗಳನ್ನು ಒದಗಿಸುತ್ತವೆ. ಮೋಡೀ ಲಿಪಿಗಳಲ್ಲಿರುವ ಇಂತಹ ಸಾಮಗ್ರಿಗಳು ಸ್ವಾತಂತ್ರ್ಯ ಪೂರ್ವದ ಇತಿಹಾಸಕ್ಕೆ ಅಮೂಲ್ಯ ಆಕರಗಳಾಗಿವೆ. ಇವುಗಳನ್ನು ರಕ್ಷಿಸಿಕೊಂಡು ಬಂದಿರುವ ಹೆಗ್ಗಡೆ ಮನೆತನವು ವಿದ್ವಾಂಸರ ಕೃತಜ್ಞತೆಗೆ ಪಾತ್ರವಾಗಿದೆ. ಶ್ರೀ ವೀರೇಂದ್ರ ಹೆಗ್ಗಡೆ ರವರ ಪ್ರೋತ್ಸಾಹದಿಂದ ಧರ್ಮಸ್ಥಳದ ಪ್ರಾಚೀನ ಪತ್ರಾಗಾರ ಪರಿವೀಕ್ಷಣೆ ಹಾಗೂ ಸೂಚೀ (Catalogue) ಸಿದ್ಧಪಡಿಸಲು ನನಗೆ ಅವಕಾಶ ಲಭಿಸಿದ್ದು ಭಾಗ್ಯವೇ ಸರಿ. ಶ್ರೀ ವೀರೇಂದ್ರ ಹೆಗ್ಗಡೆರವರಿಗೆ ಕೃತಜ್ಞತೆ ಸಲ್ಲಿಸುತ್ತಾ ದಿ. ೬-೮-೧೯೮೨ ರಿಂದ ೭೫-೧-೧೯೮೩ರವರೆಗೆ ಕೈಗೊಂಡ ನನ್ನ ಅಧ್ಯಯನದಲ್ಲಿ ಕಂಡು ಬಂದ ಹಲವಾರು ಮಹತ್ವ ಪೂರ್ಣ ಅಂಶಗಳನ್ನು ಇಲ್ಲಿ ನಿರೂಪಿಸಲಾಗಿದೆ.

**ಧರ್ಮಸ್ಥಳದ ದಪ್ತರಖಾನೆ :** ಕ್ರಿ.ಶ. ೧೫೦೩ ರಿಂದ ಕ್ಷೇತ್ರದ ಧರ್ಮಾಧಿಕಾರಿಗಳಾಗಿ ದೇವರಾಜ ಹೆಗ್ಗಡೆಯವರಿಂದ ೨೩-೧೦-೧೯೬೮ ರತ್ನವರ್ಮ ಹೆಗ್ಗಡೆಯವರವರೆಗೆ ಹದಿನೇಳು ಧರ್ಮಾಧಿಕಾರಿಗಳು ಆಡಳಿತ ನಡೆಸಿರುವುದು ಕಂಡು ಬರುತ್ತದೆ. ಕರ್ನಾಟಕ ಧಾರ್ಮಿಕ ದತ್ತಿ ಇಲಾಖೆಯಿಂದ ಪ್ರತ್ಯೇಕವಾಗಿಯೇ

1 South Kanara Gezetteer, ವಾದಿರಾಜಯತಿಗಳ ಕಾಲ : ಕ್ರಿ.ಶ. ೧೪೮೦-೧೬೦೦ (ಕ.ಇ.ದ)

ಉಳಿದ "ಯಿಲಾಖಾ ಶ್ರೀ ಧರ್ಮಸ್ಥಳ" ಯಿಲಾಖಾ ಶ್ರೀ ಮಂಜುನಾಥ ದೇವರು" ಎಂಬ ಸ್ವತಂತ್ರ ವಿಭಾಗವನ್ನೇ ಕ್ಷೇತ್ರವು ಹೊಂದಿದೆ. ಕ್ಷೇತ್ರದ ಪತ್ರಾಗಾರ ದಫ್ತರಖಾನೆ ವಿಜಯನಗರೋತ್ತರ ಇತಿಹಾಸದಲ್ಲಿ ವಿಶಿಷ್ಟ ಸ್ಥಾನ ಪಡೆದಿದೆ. ಮೋಡೀ ಲಿಪಿಯಲ್ಲಿರುವ ಇವುಗಳನ್ನು ಕೆಳಕಂಡಂತೆ ವಿಭಾಗಿಸ ಬಹುದು.

೧. ವಿಜಯನಗರೋತ್ತರ ಐತಿಹಾಸಿಕ ಆಕರ ಗಳು. ೨. ಸಿಪಾಯಿ ದಂಗೆಯ ಮುಂಚಿನ ದಾಖಲೆ ಗಳು (೧೮೦೦-೧೮೫೭) ೩. ಸ್ವಾತಂತ್ರ್ಯ ಪೂರ್ವದ ಮೂಲ ಸಾಮಗ್ರಿಗಳು (೧೮೫೭-೧೯೪೭) ೪. ಸ್ವಾತಂತ್ರ್ಯೋತ್ತರ ದಾಖಲೆಗಳು.

ವಿಜಯನಗರೋತ್ತರ ದಾಖಲೆಗಳಲ್ಲಿ ಕ್ರಿ.ಶ. ೧೮೦೦ರ ತಾಮ್ರ ಶಾಸನವೊಂದು ಗ್ರಾಮೀಣ ನ್ಯಾಯ ಪದ್ಧತಿಯಲ್ಲಿ ವಿನೂತನ ಬೆಳಕು ಚೆಲ್ಲುತ್ತದೆ[2] ಪ್ರಕೃತ ಈ ಲೇಖನದಲ್ಲಿ ೧೮೦೦ ರಿಂದ ೧೯೪೭ರವರೆಗೆ ಉಪಲಬ್ಧ ಅಭಿಲೇಖಾ ದಾಖಲೆಗಳನ್ನು ಮಾತ್ರ ವಿಶ್ಲೇಷಿಸಲಾಗಿದೆ.

**ಪ್ರಾದೇಶಿಕ ಇತಿಹಾಸ ಕುರಿತು ಆಕರಗಳು :** ಕರ್ನಾಟಕ ಚರಿತ್ರೆಗೆ ಪ್ರಾದೇಶಿಕ ಇತಿಹಾಸವನ್ನು ರೂಪಿಸಲು ಧರ್ಮಸ್ಥಳ ಪತ್ರಾಗಾರವು ವಿಪುಲ ಸಹಕಾರ ನೀಡುತ್ತವೆ. ಮೋಡೀಲಿಪಿಯಲ್ಲಿರುವ "ಸುಮಾರು ೪೦೦೦ ದಾಖಲೆಗಳ ನನ್ನ ಪರಿವೀಕ್ಷಣೆಯಲ್ಲಿ ಗೋಚರಿಸಿವೆ. ಸಿಪಾಯಿ ದಂಗೆಗೆ ಮುಂಚೆಯೇ ಬ್ರಿಟಿಷರ ವಿರುದ್ಧ ಬಂಡಾಯವೆದ್ದು ಸ್ವಾತಂತ್ರ್ಯಕ್ಕಾಗಿ ಆಂದೋಳನ ನಡೆಸಿದ ಸಂಗತಿಗಳು ವಿಪುಲವಾಗಿವೆ. ರಾಜಾ ವೀರ ವಸಂತ ಪ್ರತಾಪ (ಅಪರಂಪಾರ ಸ್ವಾಮಿ- ೧೮೩೩), ಲಕ್ಷ್ಮಣ ಬಂಗ, ಕೂಜಗೋಡೆ ಅಪ್ಪಯ್ಯ: ಮಲ್ಲಪ್ಪಗೌಡ, ಗೂಡೆ ತಮ್ಮಯ್ಯ,[3] ಕರಣಿಕ ಸುಬ್ಬಯ್ಯ,[4] ಕಲ್ಯಾಣಪ್ಪನ ಕಾಟಕಾಯಿ[5] (೧೮೩೭), ಕೊಯಮುತ್ತೂರಿನ ಶಿರಸ್ತೇದಾರ್ ಸುಬ್ಬರಾವ್[6] (೧೮೦೦), ಕೆಳದಿ ರಾಜಧಾನಿ ಬಿದನೂರಿನಲ್ಲಿದ್ದ ಇಂಗ್ಲೀಷ್ ಕಂಪೆನಿಯ ಕನ್ನಡ ಭಾಷಾಜ್ಞಾನಿ ಅಂತೊನಿಯೊ ಪಿಯರ್ಸ್, ಬೊಂಬಾಯಿಯಲ್ಲಿರುವ ೨೦-೯-೧೭೭೦ರ ನವಾಬ್ ಹೈದರಾಲಿಯ ದಸ್ಕತ್,[7] ಬೂದಿ ಬಸಪ್ಪನಾಯಕ, ಕೌಲೇದುರ್ಗದ ಮಾಮಲೇದಾರ ರಾಘವೇಂದ್ರರಾಯ[8] (೧೮೪೧), ಬಲ್ಲಾಳರಾಯನ ದುರ್ಗದ ಕಿಲ್ಲೇದಾರ ಸೈಯದ್ ಯೂಸೂಫ್ ಸಾಹೇಬ (೧೮೪೨),[9] ಧೋಂಡಿಯಾ ವಾಗ್ ಮುಂತಾದವರ ಸಂಗತಿಗಳು, ಅಮರ ಸೂಳ್ಯ, ಮಂಗಳೂರು, ಪುತ್ತೂರು ಬಂಡಾಯ ಕ್ಷೇತ್ರ ಸಂಗತಿ ಗಳು, ರೈತರ ಆಂದೋಳನ ಮತ್ತು ಬ್ಲೇರ್ಸ್ ವರದಿ ಗಳು, (೨೦-೯-೧೮೪೮), ಬೊಂಬಾಯಿ ಹೈಕೋರ್ಟ್

2 ಬಿ.ಎಂ. ಶ್ರೀ ಪ್ರತಿಷ್ಠಾನದ "ಕರ್ನಾಟಕ ಲೋಚನ" ಜೂನ್ ೧೯೮೮ರಲ್ಲಿ ಈ ಬಗೆಗಿನ ಲೇಖನ ಪ್ರಕಟವಾಗಿದೆ.

3 ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ : ತಿ.ತಾ. ಶರ್ಮ ೧೯೩೭ ; ಪು. ೩೮-೩೯.

4 ಅದೇ ಪು. ೪೧.

5 ಡಾ. ಸೂರ್ಯನಾಥ ಕಾಮತ್ : ಕರ್ನಾಟಕ ಸಂಕ್ಷಿಪ್ತ ಇತಿಹಾಸ : ಧರ್ಮಸ್ಥಳದ ಹೆಗ್ಗಡೆ ಕಾಟಕಾಯಿಗೆ ನೆರವಾಗಿದ್ದರೆಂದು ಕಾಮತ್‌ರವರು ಅಭಿಪ್ರಾಯ ಪಟ್ಟಿದ್ದಾರೆ. ಸುದರ್ಶನ : ಟಿ.ಎಂ.ಎ. ಪೈ ಅಭಿನಂದನ ಗ್ರಂಥ, ಪು. ೧೩೦, ಧರ್ಮಸ್ಥಳದ ಶ್ರೀ ಮಂಜುನಾಥೇಶ್ವರ ಕಾಲೇಜಿನ ಶ್ರೀ ಉಮಾನಾಥ ಶೆಣೈ ಈ ಕುರಿತು ಲೇಖನ ಪ್ರಕಟಿಸಿದ್ದಾರೆ.

6 ಬಂಡಾಯವೆದ್ದಿದ್ದ ಸುಬ್ರಾಯ ಮತ್ತು ವಿಠ್ಠಲ ಹೆಗ್ಗಡೆರವರನ್ನು ಸೋಲಿಸಲು ಕ್ಯಾಪ್ಟನ್ ಮನ್ರೋ ೨೦೦ ಜನ ಸೈನಿಕರನ್ನು ಧರ್ಮಸ್ಥಳದ ಕುಮಾರ ಹೆಗ್ಗಡೆಗೆ ಕಳಿಸಿದ್ದನು. (History of the Dakshinatya Saraswaths, by V.N. Kudva, I.C.S.–P. 114), ಕ್ಷೇತ್ರದ ಪತ್ರಾಗಾರದಲ್ಲಿ ಕುಮಾರ ಹೆಗ್ಗಡೆರವರ ಕಾಲದ (೯-೮-೧೮೨೮) ಹಲವಾರು ಪತ್ರಗಳಿವೆ. ಹೋರಾಟವೊಂದರಲ್ಲಿ ಶ್ರೀ ಹೆಗ್ಗಡೆರವರಿಗೆ ಪುತ್ತೂರಿನಲ್ಲಿ ಗಾಯವಾಗಿತ್ತೆಂದು ಬುಕನನ್ ಸಾಹೇಬನು ನಿರೂಪಿಸಿದ್ದಾನೆ. Vol iii P. ೭೦

7 ಕೆಳದಿ ಸಂಶೋಧನಾಲಯದಲ್ಲಿಯೂ ಹೈದರಾಲಿಯ ಪತ್ರವೊಂದಿದೆ.

8 ನಾನು ಸಿದ್ಧಪಡಿಸಿದ ಚಾರಿತ್ರಿಕ ದಾಖಲೆಗಳ ಸೂಚಿ-ನಂ ೧೧೭೯.

9 ಅದೇ–೧೧೬೬ ; ಇವುಗಳನ್ನು ಸಂರಕ್ಷಿಸಲು ಪ್ಲಾಸ್ಟಿಕ್ ಹೊದಿಕೆಯಲ್ಲಿಂಸಿದೆ.

ವರದಿಗಳು, ಕಾಟನ್ ವರದಿಗಳು,[10] ಶೃಂಗೇರಿ, ಉಡುಪಿ, ಶ್ರವಣಬೆಳುಗೊಳ, ಮೂಡಬಿದರೆ, ಹುಂಚ ಮಠಗಳು, ಮೈಸೂರು ಒಡೆಯರು, ಚೌಟರು, ಅಜಿಲರು, ಕಳಿಯ, ಚಿಟ್ಟಿಪಾಡಿ, ಇರ್ವತ್ತೂರು ಪಾಡ್ಯಾರು, ಬಳ್ಳಮಂಜ, ವಳಲು, ಮಲವಂತಿಗೆ, ಪಡುಬಿದರೆ ಬಲ್ಲಾಳರು, ಬಾಸೆಲ್ ಮಿಷನ್ ಪತ್ರಗಳು, ಬಂಗಾಡಿ ಅರಮನೆಯಲ್ಲಿರುವ ಕೆಳದಿ ವೀರಭದ್ರನಾಯಕನಿಗೂ ವೀರ ನರಸಿಂಹ ಶಂಕರದೇವಿ ಬಂಗರಾಜರಿಗೂ ಆದ ಕರಾರಿನ ಸಂಗತಿಗಳು,[11] ಅರಾಪುರ ಬಸಪ್ಪಾಜಿ (ಪುಟ್ಟಬಸಪ್ಪನ ಕ್ರಾಂತಿ), ಬೋಪಣ್ಣ[12] ಮುಂತಾದ ಸಂಗತಿಯ ಆಕರಗಳು ಪ್ರಾದೇಶಿಕ ಇತಿಹಾಸ ರಚನೆಗೆ ವಿಪುಲ ಸಹಕಾರ ನೀಡುತ್ತವೆ.

೪-೫-೧೭೯೯ ರಂದು ವೆಲ್ಲಸ್ಲಿಯಿಂದ ವಿಭಾಗವಾದ ಕರ್ನಾಟಕದ ಕನ್ನಡ ಜಿಲ್ಲೆ, ಕೊಯಮುತ್ತೂರು, ವೈನಾಡು ಪ್ರಾಂತಗಳು ಈಸ್ಟ್ ಇಂಡಿಯಾ ಕಂಪೆನಿಗೆ ಸೇರಿತು. ೧೮೬೦ರಲ್ಲಿ ಮದರಾಸಿನ ಅಧೀನಕೊಳ್ಳಪಟ್ಟ ಕನ್ನಡ ಜಿಲ್ಲೆ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಎಂಬುದಾಗಿ ವಿಭಜಿಸಲ್ಪಟ್ಟಿತು. ೧೮೬೨ ರಲ್ಲಿ ಉತ್ತರ ಕನ್ನಡ ಜಿಲ್ಲೆ ಮುಂಬೈಗೆ ಸೇರಿತು. ೧೮೦೦ರಲ್ಲಿ ರೇವನ್‌ಶಾ ದಕ್ಷಿಣ ಕನ್ನಡ ಜಿಲ್ಲೆಯ ಕಲೆಕ್ಟರ್ ಆಗಿದ್ದನು. ಈತನ ಕಾಲದಲ್ಲಿಯೇ ಬಂಟವಾಳ ತಹಶೀಲದಾರ ಕೊನೆರಾಯನ ಸಮ್ಮುಖದಲ್ಲಿ ನಂದಾವರದಲ್ಲಿ ಲಕ್ಷ್ಮಪ್ಪರಸನಿಗೆ ಪಟ್ಟವಾಯಿತು. ೧೮೩೭ರಲ್ಲಿ ಕಲ್ಯಾಣಪ್ಪ ಕಾಟಕಾಯಿಯೊಂದಿಗೆ ಈತನು ಸೇರಿದ್ದರಿಂದ ೧೮೩೮ರಲ್ಲಿ ಮಂಗಳೂರಿನ ಬಿಕ್ರನಕಟ್ಟೆಯಲ್ಲಿ ನೇಣು ಹಾಕಿಸಲಾಯಿತು; ಇಂತಹ ಸಮಕಾಲೀನ ಸಂಗತಿಗಳನ್ನೊಳಗೊಂಡ ಉಲ್ಲೇಖನಗಳು, ನಗರ ಡಿವಿಜನ್ ಪತ್ರವ್ಯವಹಾರಗಳು,[13] ಯುದ್ಧನಿಧಿ ರಶೀದಿಗಳು, ಜಯಕರ್ನಾಟಕ ಪತ್ರಿಕೆಗಳು,[14] ಬ್ರಿಟಿಷ್ ಸೇನಾನಿ ಹೆನ್ರಿ ಅಡ್ರಿಯವಾನ್ ವಾನ್ ರ್ಹೀಡ್ (Henrie Adriavan Van Rheede),[15] ಮೆಕಂಜೀ ಸಂಗ್ರಹಗಳು, ತಲಚೇರಿ, ಕಾರವಾರ, ಮದರಾಸು, ಮಂಗಳೂರು, ಬೊಂಬಾಯಿ, ಕೆಳದಿ, ಲಂಡನ್, ಮೂಡಬಿದರೆ ಮುಂತಾದ ಪ್ರಾಚೀನ ಗ್ರಂಥ ಭಂಡಾರಗಳಲ್ಲಿರುವ ಸಾಮಗ್ರಿಗಳನ್ನು ಕ್ರೋಢೀಕರಿಸಿ ಪ್ರಾದೇಶಿಕ ಇತಿಹಾಸವನ್ನು ರೂಪಿಸಲು ತೌಲನಿಕ ಅಧ್ಯಯನ ಕೈಗೊಳ್ಳಬಹುದಾಗಿದೆ.

**ಪತ್ರಾಗಾರದಲ್ಲಿರುವ ದಾಖಲೆಗಳ ಸ್ವರೂಪ :** ಧರ್ಮಸ್ಥಳದ ದಫ್ತರಖಾನೆಯಲ್ಲಿ ವೈವಿಧ್ಯಮಯವಾದ ದಾಖಲೆಗಳು ವಿಪುಲವಾಗಿದ್ದು ಉಪಲಬ್ಧ ಮಾಹಿತಿಗಳಿಂದ ಕೇವಲ ಮುಖ್ಯಾಂಶಗಳನ್ನು ಮಾತ್ರ ಆಯಾ ಭಾಷೆಯಲ್ಲಿಯೇ ನಿರೂಪಿಸಲಾಗಿದೆ.

ಸರ್ಕಾರತ್ತೀರ್ವೆ, ಉಗ್ರಾಣದ ಜೀನ್ಸು, ಭೂಮಿ ಸಾಗ್ವಳಿ ಗೇಣಿ, ನಿಜ ಊಳಿಗದ ಲೆಖ್ಖ, ಹಾತಖರ್ದ,

---

10 Coltons Reports on the insurrection in Canara, and Coorg—Mysore state Aruhives.

11 ಇದು ಬಂಗಾಡಿ ಅರಮನೆಯಲ್ಲಿದೆ. ಕ.ಜಿ. ಇತಿಹಾಸ ಪು. ೪೩೮.

12 ಈತನು ಮುಮ್ಮಡಿ ಕೃಷ್ಣರಾಜ ಒಡೆಯರ ನಿಕಟ ಬಂಧುವಾಗಿದ್ದು ಬ್ರಿಟಿಷ್ ಅಧಿಕಾರಿಯ ಸಹಾಯಕನಾಗಿದ್ದನು. (ಕ.ಇ.ದ. ಪು. ೬೧೮) ಈತನ ವಂಶೀಕರು ಈಗಲೂ ಲಲಿತ ಮಹಲಿನ ಜಾಕೀಕ್ವಾರ್ಟರ್ಸ್‌ನಲ್ಲಿರುವುದನ್ನು ಶ್ರೀ ನಿರಂಜನರಾಜ ಅರಸರು ನನಗೆ ತಿಳಿಸಿದ್ದಾರೆ. ದಿ ೫-೭-೯೦ ರಂದು ಜಾಕೀಕ್ವಾರ್ಟರ್ಸ್‌ನಲ್ಲಿ ಶ್ರೀ ಅರಸರೊಂದಿಗೆ ನಾನು ಭೇಟಿಯಿತ್ತು ಅಲ್ಲಿರುವ ಮೋಡೀಲಿಪಿಯ ಪತ್ರಗಳನ್ನು ಪರಿಶೀಲಿಸಿದಾಗ ಅಪೂರ್ವ ಸಂಗ್ರಹಗಳು ಕಂಡುಬಂದಿವೆ. ಈತನ ಕಾಲದ ಅಶ್ವಶಾಸ್ತ್ರದ ಹಸ್ತಪ್ರತಿಯೊಂದು ಮೈಸೂರು ವಿಶ್ವವಿದ್ಯಾನಿಲಯದಲ್ಲಿದೆ.

13 ಕೆಳದಿ ಸಂಶೋಧನಾಲಯದಲ್ಲಿರುವ ಇಂತಹ ಪತ್ರಗಳನ್ನು ಅವಲೋಕಿಸಬಹುದು. Also refer Letters and Dispatches of the Duke of Wellington.

14 ಅದೇ-ಸಂಚಿಕೆಯೊಂದರಲ್ಲಿ ಪು. ೫೧೩ ರಿಂದ ೨೮ರವರೆಗೆ ಆ ಕಾಲದ ಕನ್ನಡ ಪತ್ರಿಕೆಗಳ ಸೂಚಿಯನ್ನೊಳಗೊಂಡ ಲೇಖನ ಗಮನಾರ್ಹವಾಗಿದೆ. (೨೨-೬-೧೯೨೯-ಜಯ ಕರ್ನಾಟಕ) ಇದು ಕೆಳದಿ ಸಂಶೋಧನಾಲಯದಲ್ಲಿದೆ.

15 Archives in India : by Sailen Ghose P. 313.

ಸಾಲೇಸಾಲ್ ಅವರ್ಜಿ, ದಿನಚರಿ ನಗದಿ ಜಮಾ ಖರ್ಚು, ಕಾಗದ ಪತ್ರದ ಶಾಹಾ, ತಾಕೀದಿ ಶಾಹಾ, ಜಮಾ ಅವರ್ಜಿ, ಮಹೋತ್ಸವ ಪತ್ರಿಕೆ, ಕುಳವಾರು ಅವರ್ಜಿ, ಚತ್ರದ ಕಾಗದ, ತಃಖ್ತೆ, ಗುಜಸ್ತ ಅವರ್ಜಿ, ತಸ್ದೀಕು, ಠಪಾಲು ದಸ್ತುರ್ರಿ, ಲೇವಾದೇವಿ, ಬೈಲಂಗಡಿ, ಹೊಸಂಗಡಿ ಅರಮನೆ ಲೆಕ್ಕ, ಪಾಳೇಬೀಡಿನ ಕಾಮಗಾರ್ರಿ, ದರವೈನೆ ತಲಬು, ಹರಾಜು, ಅಮೃತ ಪಡಿ, ಗೇಣಿ ವಸೂಲಿ ಶಿರಾಯಿತಿ (ತಾಕೀದಿ ಹಾತ್ಕರ್ಡೆ), ವಲ್ಲ ರಶೀದಿ ಹಾತ್ಕರ್ಡೆ, ಬರಾವರ್ದು ಶಾಹಾ ಹಾತ್ಕರ್ಡೆ, ಹೊಯಿಲು, ಕುಳವಾರು ತಪಶೀಲ್ಲ, ಕಾಮಗಾರಿ ತಾಕೀದಿ, ಮೈಸೂರು ಅಡಳ್ತೆದಾರರ ಶ್ಯಾಹಾ, ತಬ್ಲಾಕು, ಅರ್ಜಿ ಶ್ಯಾಹಾ, ದೇಲಂಪಾಡಿ ದೇವಕಾರ್ಯ ನಡಿಸುವವ ವಿವಾದ, ಪ್ರವಿನಶಾಲಿ ಕೊರ್ಟು ಪೈಲ, ಪಾಲ್ಪಡಿ ಬೀಡಿನ ವರ್ಗ, ಹೊಲೆಯರ ಗೈರಾಜ್ರಬ್ಕು, ವಾಗ್ಮೂಲ ಶಾಹಾ, ಪ್ರಮಾಣದ ಶ್ಯಾಹಾ, ಕನಸರವೆಟರ ಹೆನರ್ರಿಯು, ಫಲಿನಸರ ಸಾಹೆಬರ, ದಕ್ಷಿಣ ಕನ್ನಡ ಜಿಲ್ಲಾ ಸಾಹುಕಾರರ ಶ್ಯಾಹಾ ನಗರ ಡಿವಿಜನ್ ಮುಖಂಡ ಸದರ ಮುನಸಿಪ್ ಶ್ಯಾಹಾ,[16] ದಯಾ ಬಲಾಳ ಭದ್ರ ಇಳಾ, ವಾಗ್ಮೂಲ ಶಾಹಾ, ಕುಂಪಣಿ ಸರಕಾರ ಶ್ಯಾಹಾ, ಕನ್ನಡ ಸುವಾರ್ತೆ, ನಿರೂಪ, ಫೌಜುದಾರ, ಬೀಡಿನ ಪಾರುಪತ್ಯೆಗಾರ ಪಡಿಚಾ ತಬ್ಲಕು, ಅಂಚೆ ಪಾರ್ಮ್ಮ ಬೆರ್ರಿಜು, ಕುಂಪಣಿ ಸರಕಾರದ ಮುತರ್ಪ ಪಟ್ಟಿ, ವಾರ್ಡ್, ಲೆವ್ವಿ, ಹೆನರ್ರಿ, ಪಾರಕರ, ರೊಬಿನ್‌ಸನ್, ವೈವ ಸಾಹೆಬರ ಬನಾಮೆ ಬೆರಿಜುಗಳು, ಪೆರಿಸ್ತಪಟ್ಟಿ, ಬೈಕುಲ್ಲಿ ಚಿಟ್ಟಿ (೪೬೧), ಮುಚ್ಚಳಿಕೆ, ದುಕಾನದಾರ ವಿಚಾರಣೆ, ಅನಸ್ರು, ಸವಾಲು–ಜವಾಬು, ಅದಾಲತ್ ಇಲಾಖೆ ಯಸ್ತೆಹಾರ್, ಭಂಡಸಾಲೆ ನಕ್ಷೆ, ನೇತ್ರಾವತಿ ಹೊಳೆ ಕಾಂಗಾರಿ ಹ್ಯೊಂಗೆ ಹೊತ್ತ ಅಳು, ವಿದ್ಯಾ ಇಲಾಖೆ ನೂರೆಂಚರ ಪತ್ರ ಫೈಸಲ್‌ನಾಮಾ, ಜಿಂದಿ ತಪ್ಸಿಲು, ಜಾತ್ರೆ ತಲುಬು, ಕುಮರಿ-ಕುಮ್ಕಿ[17] ಲೆಕ್ಕ, ಭೂಮಾಪನ, ಪಾತ್ರೆ ತಪ್ಸೀಲು, ತಲುಬು ಪಾವ್ತಿ ಪೇರೀಸ್ತು ಲಿಪಾಪೆ ಬಟ್ವಾಡೆ ಬ್ಯೂ, ರಶೀದಿ ತಬ್ಲಾಕು, ಫಡಚಾಕ ಬುಕ್, ಮಣೆಗಾರ ಪಡಿಚೆ ಕಾಗದ ತಬ್ಲಾಕು, ಪಡಿಚೆ ಹ್ಯೊಲು, ಪಡಿಚೆ ಜಮ ಉಗ್ರಾಣ ಮುತ್ಸದ್ದಿ ಬರಕೊಂಡ ಕಾಗದ ತಬ್ಲಕು, ಬಡ್ಯಾಜನ ದಸ್ತಾವೇಜು, ಛತ್ರ ಪಾರುಪತ್ಯೆಗಾರ ಪಡಿಚೆ ಕಟ್ಟು, ಶೀರ್ವೆ ಅವರ್ಜಿ, ಮೇಳದ ಲೆಖ್ಖ, ಧಾನಮಾಡಿ, Canara Almanac (ಪಂಚಾಂಗ)[18] ಶ್ರವಣಬೆಳ್ಗೊಳದಲ್ಲಿ ಶಿಖರ ಮಾಡ್ಸಿದ ಲೆಖ್ಖ. ದೇವಳ ವ್ಯವಹಾರ, ಅಗ್ರಸಾಲೆ ಪಾರುಪತ್ಯೆ, ಲವಾಜಮಾ, ವರ್ಗದ ಪಾನ್‌ಪಟ್ಟಿ, ಮಹಾ ನಡಾವಳಿ, ಗೊಮ್ಮಟೇಶ್ವರ ಮಹಾ ಮಸ್ತಕಾಭಿಷೇಕ, ಖಥಾವಣಿ ತಃಖ್ತೆಗಳು, ಬಿಡಾರ ಖರ್ಚು, ದೇವಳಾ ಕಾಮಗಾರಿ, ಮೊಕರಬಾರು ಶ್ಯಾಹಾ, ಮೊಕ್ರೂರ ಬುಕ್, ಧರ್ಮಪಡಿ, ಪಡಿ ಅಕ್ಕಿ, ಪುದಬೆಟ್ಟು, ಶಿವನಿ, ಅವಕ-ಜಾವಕ, ಕೈಪೆತ್ತು, ಮುಲ್ಕಿ ಪತ್ರ ಇತ್ಯಾದಿ–

ಹೈದರ್ ಮತ್ತು ಟಿಪ್ಪು ಜೀವನ ಚರಿತ್ರೆಗೆ ಸಂಬಂಧಿಸಿದ ಲಾವಣಿಗಳು, ಜಾನಪದ ಸಂಗ್ರಹಗಳು, ಓಲೆಗರಿಗಳು, ಕಡತಗಳು, ಮಂಜಯ್ಯ ಹೆಗ್ಗಡೆರವರ ಕಲಾಕೃತಿಗಳು, ಡಿ. ವರದಾಚಾರ್ಯರ ಕೃತಿಗಳು, ಛಾಯಾಚಿತ್ರಗಳು, ನಿರೂಪಗಳು, ಚಿತ್ರದುರ್ಗ ಮೆಗ್ ಸಾಹೇಬರ ವ್ಯವಹಾರಗಳು (೧೬-೯-೧೮೬೭), ಮೈಸೂರು ಒಡೆಯರ ಕಾರಿಗೆ ಸಂಬಂಧಪಟ್ಟ ವ್ಯವಹಾರ ಗಳು, ಗ್ರಂಥ ಭಂಡಾರಗಳು ಗಮನಾರ್ಹವಾದುದು.

**ದೇವಳ ಮತ್ತು ಧಾರ್ಮಿಕ ದಾಖಲೆಗಳು :** ಶ್ರೀ ಮಂಜುನಾಥೇಶ್ವರ, ಶ್ರೀ ಅಣ್ಣಪ್ಪ, ಚಂದ್ರನಾಥ ಬಸ್ತಿ, ಅದಿಯಾಗಿ ಕ್ಷೇತ್ರದ ಎಲ್ಲ ದೇವಾಲಯಗಳ ನಿತ್ಯ ಕಟ್ಟಲೆ, ಹೆಚ್ಚು ಕಟ್ಟಲೆ, ಅಗ್ರಸಾಲೆ, ಜಿಂದಿಗೆ, ಆನೆ, ಕುದುರೆ, ನೇತ್ರಾವತಿ ನದಿಗೆ ದೋಣಿ, ಬೈಲಂಗಡಿ, ಹೊಸಂಗಡಿ ಅರಮನೆ ಅರಸರು, ಅರ್ಚಕರು, ನೌಕರರು,

---

16 ಬೂದಿ ಬಸಪ್ಪನಾಯಕ ? ; ಕುಂಬ್ಳ, ವಿಠ್ಠಲ ಮತ್ತು ನೀಲೇಶ್ವರದ ಹಲವಾರು ಪ್ರಮುಖರು ಕೆಳದಿ ಸರಕಾರದ ಬಿದನೂರು ರಾಜಧಾನಿಯಲ್ಲಿ ವಂಶಪಾರಂಪರ್ಯ ಕಾರ್ಯನಿರ್ವಾಹಕರಾಗಿದ್ದರು. (Sir Thomas Munros' Letter 16-6-1800)

17 Canara Alhanac ನಲ್ಲಿ ಆ ಕಾಲದ ಬ್ರಿಟಿಷ್ ಹಾಗೂ ರೆವಿನ್ಯೂ ಅಧಿಕಾರಿಗಳ ಹೆಸರುಗಳು ಗಮನಾರ್ಹವಾಗಿವೆ. ಅನುಬಂಧ ನೋಡಿರಿ.

ಅಗ್ರೋದಕ ತರುವವರು, ನಡಾವಳಿ, ಲಕ್ಷದೀಪೋತ್ಸವ, ಭಂಡಸಾಲೆ, ವಿಶೇಷೋತ್ಸವಗಳು, ದರವ್ಯೈನೆ ತಲುಬು ಆದಿಯಾಗಿ ಬಾಗ್ಲಚಾರ್ರಿ, ರಾತ್ರಿ ಕಾವಲುಗಳವರೆಗೆ ೧೮೮೮ರಿಂದಲೂ ವ್ಯವಸ್ಥಿತ ಲೆಖ್ಖಪತ್ರಗಳು ಉಲ್ಲೇಖಿಸಲ್ಪಟ್ಟವೆ. ಗೃಹಕೈಗಾರಿಕೆ ಮುಖಾಂತರ ಗಾಣದ ಎಣ್ಣೆ ತಯಾರಿಸುವ ಲೆಖ್ಖವೂ ಆಸಕ್ತಿಯುಂಟು ಮಾಡುತ್ತದೆ. ದೇವರ ಹಾಗೂ ಧಾರ್ಮಿಕ ಕಟ್ಟಳೆಯ ಮಾದರಿಯನ್ನು ಇಲ್ಲಿ ನೀಡಲಾಗಿದೆ.

ಶ್ರೀ ಮಂಜುನಾಥೇಶ್ವರಗೆ ನಿತ್ಯ ಕಟ್ಲೆ, ವಿಶೇಷ ಕಟ್ಟಳೆ, ಯಜಮಾನರು, ಉಪಾಧಿವಂತರು, ಜೋಯಿಸರು, ನೇತ್ರಾವತಿಯಿಂದ ಅಗ್ರೋದಕ ತರುವವರು, ಪವಮಾನ ಪಠನ, ದೇವಳದ ನೌಕರರ ತಲುಬು, ಶ್ರೀ ಚಂದ್ರನಾಥ ಸ್ವಾಮಿ ದರವ್ಯೈನೆ ಜಾತ್ರೆ, ಬೈಪಾಡಿ ಸಾಂತೇಶ್ವರಸ್ವಾಮಿ, ಅಜಬೆಟ್ಟು ಆದೀಶ್ವರ ಸ್ವಾಮಿ, ಬಂಟ್ವಾಳ ಆದೀಶ್ವರ ಸ್ವಾಮಿಗಳಿಗೆ ದರವ್ಯೈನೆ ರಥೋತ್ಸವ ಖರ್ಚು, ಭೂಕಂದಾಯ, ಬೋರ್ಡ್ ಹುಕುಂ ಮೇರೆ ದೇವಳ, ಬಸ್ತಿ, ಭೂತಾಲಯಗಳಿಗೆ ಸಲ್ಲುವ ತಸ್ತಿಕು, ಮೂಡಬಿದ್ರೆ ಪ್ರಾಂತ್ಯಗ್ರಾಮದ ಬೈಕಣತ್ತಿಕಾರ್ರಿ ಬಸ್ತಿಗೆ, ಗ್ರಾಮದ ಶೆಟ್ಟೇರ್ ಬಸ್ತಿಗೆ, ಕಲ್ಲುಬಸ್ತಿ, ಕಾಂತ್ರವರ ಗ್ರಾಮದ ಕಾಂತ್ರೆಶ್ವರ ದೇವಂಗೆ ಯಿರ್ವತೂರು ಮಾಗಣೆ ಪಡುಕೊಡಿಗ್ರಾಮದ ಕುತ್ತಿಲ ಕೊಡ ಮಣತಾಯ್ಯದೆವ್ವ, ಪಿಲಕಬೆಟ್ಟು ಕ್ಷೇತ್ರಪಾಲ ದೆವ್ವ, ಮಧಿಕಾಳ ಮಂಟಪ್ಪದ ವೇದ ಉಪ್ಯಾದೇವರು, ಮುಂತಾದುವುಗಳಿಗೆ ವರ್ಗದ ಶಿರ್ವೆ ಅವೈಜು, ದೆವಳ ಕಾಮಗಾರಿ, ಆವರ್ಜಿಯ ನರಬರ್‌ವಾರು ಕುಳಗಳ ಶಿಲ್ಕು ತೋರಿಸುವ ಜಂತ್ರಿ, ಶ್ರೀಮಂಜುನಾಥ ದೇವರಲ್ಲಿ ಪೂಜೆ ಮೇಲ್ ಶಾಂತ್ತಿ ವೆಂಕಟರಮಣಗೆ ದರವ್ಯೈನೆ ೧೫ ತಲಬು ರೂಪಾಯಿ ೩೯೦೯೦ರ ಪ್ರಕಾರ್ರ ೧೧೪ ಮಾಧವಾಚಾರ್ಯನ ಮಗ ರಾಮಯ್ಯಾಚಾರ್ಯಗೆ ಅದೇ ಪೂಜೆ ಬಗ್ಗೆ ದರವ್ಯೈನೆ ೧೮ ತಲಬು ರೂಪಾಯಿ ೩೯೦ ರಲ್ಲೂ ೧೧೫ ಸುಬ್ರಾಯಗೆ ಅದೇ ೧೧೬ ಶ್ರೀಗಣಪತಿ ದೇವರಲ್ಲಿ ಪೂಜ್ಯೆಗೆ ಕ್ರುಷ್ಣಾಗೆ ದರವ್ಯೈನೆ ೧೮ ತ್ತಲಬು ರೂ. ೨೯೦, ಅಣ್ಣದೇವರಲ್ಲಿ ಪೂಜ್ಯೆ ನಾರಾಯಣನ ಮಗ ಸುಬ್ರಾಯಗೆ ದರವ್ಯೈನೆ ೧೮ ತ್ತಲುಬು ರೂ. ೧೯೦ಲ್ಲೂ ಇತ್ಯಾದಿ-

**ರಾಜಸ್ವ ಮತ್ತು ಭೂದಾಖಲೆ ಪತ್ರಗಳು**

೧ (೧೮೭೮), ೩೦ (೧೮೫೬), ೪೨ (೧೮೫೫), ೪೩ (೧೨೬೫ ಫ), ೪೭ (೧೨೬೫ ಫ), ೫೩, ೫೫ ೩೦೩, ೩೨೦, ೩೩೧, ೩೩೨ (೧೮೮೬) ೩೮೭ (೧೮೪೩), ೪೨೨ (೧೨೫೮ ಫ), ೪೨೩ (೧೨೬೧ ಫ), ೪೨೪, ರಿಂದ ೪೩೦ (೧೨೪೨ ರಿಂದ ೧೨೬೧ ಫ), ೪೩೧ ರಿಂದ ೪೩೫ (೧೨೩-೧೨೫೫), ೪೪೧, ೪೪೨ ಮತ್ತು ೪೮೦ (೧೮೪೮), ೪೯೩ (೭-೧೦-೧೮೨೫), ೫೨೨ (೧೮೫೨), ೫೮೩ (೧೨೬೮), ೬೮೯ (೧೮೭೮), ೬೮೦, ೬೯೩ (೧೮೬೩), ೭೦೮ (೧೨೫೭), ೮೧೩ (೧೯೦೫-೬), ೮೫೧ (ಅದೇ), ೮೬೭ ರಿಂದ ೮೬೯, ೮೯೧, ೯೯೧.

**ಕುಂಪಣಿ ಸರಕಾರದ ಪತ್ರವ್ಯವಹಾರಗಳು**

| ನಂ | ವಿವರ | ಕಾಲ | ವಿಶೇಷ ವಿಷಯ |
|---|---|---|---|
| ೪೨೨ | ಕುಮಾರ ಹೆಗ್ಗಡೆ ಮತ್ತು ಕುಂಪಣಿ ಸರಕಾರದ ಪತ್ರಗಳು | ಫಸ್ಲಿ ೧೨೫೮ | ಮೊಹರು ಇದೆ. |
| ೪೨೩ | ಅದೇ | ೨೮-೪-೧೨೬೧ | ಅದೇ- |
| ೪೨೪ | ಸಬ್ ಕಲೆಕ್ಟರು ಮಾಲ್ಟ್ಬಿ ಸಾಹೇಬರು | ೨೭-೩-೧೨೪೭ | F.N. Maltby 26-2-1838<br>23-3-1839, 29-7-1850,<br>28-5-1852, 21-4-1854<br>Madras Ditrict Manuals, |
| ೪೨೫ | ಸಬ್‌ಕಲೆಕ್ಟರು ಮಾಲ್ಟ್ ಬಿ ಸಾಹೇಬರು ಮತ್ತು ಕುಮಾರ ಹೆಗ್ಗಡೆ | ೧೨೬೧ | South Kanara<br>Ibid |

| ನಂ | ವಿವರ | ಕಾಲ | ವಿಶೇಷ ವಿಷಯ |
|---|---|---|---|
| ೪೨೬ | ಬಿ. ಫಿಶರ್. | ೨೦-೩-೧೨೫೯ | W. Fisher-20-6-1850, 13-6-1855, 20-10-1857 Ibid |
| ೪೨೮ | ಕುಮಾರ ಹೆಗ್ಗಡೆರಿಗೆ ಕುಂಪಣಿ ಸರಕಾರದಿಂದ ಬಂದ ಬೇರೀಚು | ೧೩-೩-೧೨೬೧ | |
| ೪೨೯ | ಕನ್ನಡ ಜಿಲ್ಲ ಆಡಿಷನಲ್ ಸಬ್ ಕಲೆಕ್ಟರ್ ವಾರ್ಡ್ ಸಾಹೇಬರ ಪತ್ರ | ೧೫-೨-೧೨೫೪ | |
| ೪೩೦ | ಕನ್ನಡ ಜಿಲ್ಲ ಸಬ್ ಕಲೆಕ್ಟರ್ ಲೆವ್ವಿ ಸಾಹೇಬಳ ಬೇರೀಜು | ೧೨೪೨ | W. Lauie : 3-5-1833 Ibid-ಪರ್ಷಿಯನ್ ಲಿಪಿಯ ಮೊಹರು ಹಾಗೂ ಸಹಿ. |
| ೪೩೧ | ಕುಂಪಣಿ ಸರಕಾರದ ಬನಾವೆ. | ೧೨೬೪ | |
| ೪೩೨ | ಪ್ರಿನ್ಸಿಪಲ್ ಕಲೆಕ್ಟರ್ ಹೆನ್ರಿ ಸಾಹೇಬರ ಬೆರ್‍ರೀಜು ಪಟ್ಟಿ. | ೧೨೪೮ | |
| ೪೩೩ | ಸಬ್ ಕಲೆಕ್ಟರ್ ಪಾರ್ಕರ್ ಸಾಹೇಬರ ಬೆರ್‍ರಿಜು ಪಟ್ಟಿ. | ೩೦-೧-೧೨೫೫ | R.D. Parker 19-3-1845, 13-12-1845. Ibid |
| ೩೯೩ | ಕುಂಪಣಿ ಸರಕಾರ ಹಾಗೂ ಮಂಜಯ್ಯ ಹೆಗ್ಗಡೆಯುವರ ಪತ್ರವ್ಯವಹಾರಗಳು. | ೨೭-೮-೧೮೫೬ | |
| ೪೩೪ | ಕಲೆಕ್ಟರ್ ರೋಬಿನ್ ಸನ್ ಬೆರ್‍ರಿಜು ಪಟ್ಟಿ. | ೧೩-೩-೧೨೫೭ | D. Robinson 30-4-1857 Ibid |
| ೪೩೫ | ಪ್ರಿನ್ಸಿಪಲ್ ಕಲೆಕ್ಟರ್ ವೈವಸಾಹೆಬರ ಬೆರ್‍ರಿಜು ಪಟ್ಟಿ | ೧೨೪೩ | |
| 4೩೬ | ಕುಂಪಿಣಿ ಸರಕಾರದ ಬನಾವೆ. | ೨೫-೪-೧೨೬೪ | |
| ೪೭೫ | ಅಸಿಸ್ಟೆಂಟ್ ಕಲೆಕ್ಟರ್ ರೊಬಿನ್ ಸನ್ ಹಾಗೂ ಚಂದಯ್ಯ ಹೆಗ್ಗಡೆರವರ ಪತ್ರಗಳು | ೬-೨-೧೮೪೭ | |
| ೪೮೦ಆದೇ | | ೧೮೪೮ | |
| ೪೯೩, ೪೯೪, ೪೯೫ | ಪ್ರಿನ್ಸಿಪಲ್ ಕಲೆಕ್ಟರ್ ಹೆನ್ರಿಬ್ಲೇರ್ ಮತ್ತು ಚಂದಯ್ಯ ಹೆಗ್ಗಡೆರವರ ಪತ್ರಗಳು | ೧೮೨೫ ರಿಂದ ೧೮೪೦ | H.N. Blair 26-6-1838, 12-2-1840 11-1-1843, 11-6-1845. Ibid |

| ನಂ | ವಿವರ | ಕಾಲ | ವಿಶೇಷ ವಿಷಯ |
|---|---|---|---|
| ೩೮೭ | ನಗರ ಡಿವಿಜನ್ ಮುಖಂಡ ಸದರ ಮುನ್ಸೀಫ್ ಕೋರ್ಟಿಗೆ ಚಂದಯ್ಯ ಹೆಗ್ಗಡೇರ ರಶೀದಿ | ೧-೧೧-೧೮೪೩ | |
| ೩೯೧ | ದಯಾಬಲ್ಲಾಳನ ಸಂಗತಿಯ ಪತ್ರ | ೩೧-೩-೧೮೪೩ | |
| ೫೦೬ | ಯಿಕ್ಕೇರಿ ಸಾಗರ ತಾಲ್ಲೂಕು ಕೊಯಾನ್‌ಸನ್‌ಪತ್ರ | ೧೮೫೨ | |
| ೧೦೦೨ | ಸವಣೂರು ವೆಂಕಟರಮಣಯ್ಯ ಪತ್ರ | ೮-೨-೧೮೫೦ | ವರ್ಷದಿಂದ ನಡೆದು ಬರುವ ವಸವಂತದ ಬಗ್ಗೆಗ ೨೯೦ ವರಹಾಂನ್ನು ವಸವಂತ ಮಾಡ್ಸಿ ಲೆಖಕೆ ಬರಕೊಳ್ಳುವಂತೆ |
| ೧೦೧೮ | ಮಂಜಯ್ಯ ಹೆಗಡೆ ಕೂಸಪಾಚಾರಿ ಕೈಪೆತ್ತು | ೨೪-೩-೧೮೫೧ | |
| ೧೦೧೯ | ಫುತ್ತೂರ ಪೆಶ್ಕಾರ ಮಹಮ್ಮಜಿಯಾ ಉದೀನರ ಪತ್ರ | ೧-೪-೧೨೨೦ (೧೮೧೦) | |

ಮೈಸೂರು ಒಡೆಯರೊಂದಿಗೆ ಪತ್ರ ವ್ಯವಹಾರಗಳು,[18] ದಶಾವತಾರ ಮೇಳ ವ್ಯವಹಾರಗಳು, ೧೮೯೩ರ ಸುವಾರ್ತಾ ಪತ್ರಿಕೆ, ಕನ್ನಡ ಗೆಜೆಟ್, ೧೨೭೮ರಲ್ಲಿ ಉಪ್ರೆ ತಾಲ್ಲೂಕಿಗೆ ಸೇರಿದ ಮಾಗಣೆ ವಿವರ, ದಿನಚರಿ ಜಮಾ ಖರ್ಚು[19] ಮಹಾ ಮಸ್ತಕಾಭಿಷೇಕದ ಮಹೋತ್ಸವ ಪತ್ರಿಕೆ (ನಂ. ೭೮೮-೧೮೭೧), ಬೈಕೂಲಿಯವರ ಗೆರೆ ಮಾರ್ಕು ರುಜುಗಳುಳ್ಳ ಪತ್ರಗಳು, ಅಗ್ರಸಾಲೆ ಪಾರುಪತ್ಯೆಗಾರರು ಭೋಜನ ನಿರ್ವಹಣೆ ಕುರಿತು ಬರಕೊಂಡ ಹೇಳಿಕೆ[20] ಮುಂತಾದ ಉಲ್ಲೇಖಗಳು ಕ್ಷೇತ್ರದ ಪತ್ರಗಾರದ ಮಹತ್ವವನ್ನು ಹೆಚ್ಚಿಸಿವೆ

18 ಶ್ರೀ ಜಯಚಾಮರಾಜ ಒಡೆಯರೊಂದಿಗೆ ನಡೆಸಿದ ಪತ್ರ ವ್ಯವಹಾರದ ಸಂಗತಿಗಳನ್ನು ಶ್ರೀ ವೀರೇಂದ್ರ ಹೆಗ್ಗಡೆಯವರು ನನಗೆ ತಿಳಿಸಿದ್ದಾರೆ. ಮೈಸೂರು ಅರಮನೆಯ ಗತಕಾಲದ ಕಾರೊಂದು ಕ್ಷೇತ್ರದ ವಸ್ತು ಸಂಗ್ರಾಹಾಲಯದಲ್ಲಿದೆ.

19 ಮೈಸೂರು ಸಂಸ್ಥಾನದ ರೈಲ್ವೆ ಯೋಜನೆಗೆ ಕಾಸರವಳ್ಳಿ ಸಾಹುಕಾರರು ಸಲ್ಲಿಸಿದ ಬೃಹತ್ ಮೊತ್ತದ ವಿವರಣೆಯು ದಿನಚರಿ ಜಮಾ ಖರ್ಚುನಲ್ಲಿ ಉಲ್ಲೇಖವಿದ್ದುದು ಗಮನಾರ್ಹವಾದುದು. ಈ ಕುರಿತು ಪ್ರಕಟವಾದ ನನ್ನ ಲೇಖನವನ್ನು ಜೂನ್ ೧೯೮೮ ರಂದು ಧರ್ಮಸ್ಥಳದಿಂದ ಪ್ರಕಟವಾದ ಮಂಜುವಾಣಿಯಲ್ಲಿ ಅವಲೋಕಿಸಬಹುದಾಗಿದೆ.

20 ಕ್ಷೇತ್ರದಲ್ಲಿ ಅನೂಚಾನವಾಗಿಯೂ ಯಾತ್ರಾರ್ಥಿಗಳಿಗೆ ನೀಡುವ ಉಚಿತ ಭೋಜನ ವ್ಯವಸ್ಥೆ ಅಚ್ಚುಕಟ್ಟಾಗಿದ್ದು ಹಿಂದಿನಿಂದಲೂ ಪರಿಪಾಲಿಸಿಕೊಂಡು ಬರುತ್ತಿರುವುದನ್ನು ನಿರೂಪಿಸುವ ಈ ದಾಖಲೆ ಗಮನಾರ್ಹವಾಗಿದೆ.

**ನ್ಯಾಯಾಂಗ ವ್ಯವಹಾರ ಪತ್ರಗಳು :** ಕ್ಷೇತ್ರದಲ್ಲಿ "ಹೊಯಿಲು" ಎಂಬ ಧಾರ್ಮಿಕ ಪದ್ಧತಿಯಿಂದ ನಡೆದುಕೊಂಡು ಬರುತ್ತಿರುವ ನ್ಯಾಯ ತೀರ್ಮಾನವು ವೈಶಿಷ್ಟ್ಯ ಪೂರ್ಣವಾದುದು. ಒಂದು ಗ್ರಂಥವನ್ನೇ ರಚಿಸುವಷ್ಟು ಮಾಹಿತಿಗಳು ಉಪಲಬ್ಧವಿವೆ, ಸ್ವಾತಂತ್ರ್ಯ ಪೂರ್ವದಲ್ಲಿ ಈ ಪ್ರಾಂತವು ಬ್ರಿಟಿಷರ ಆಡಳಿತದಲ್ಲಿದ್ದಾಗ ನ್ಯಾಯಾಂಗ ವ್ಯವಹಾರಗಳು ಕನ್ನಡದಲ್ಲಿಯೇ ಜರುಗುತ್ತಿತ್ತು. ಈ ಕುರಿತು ವೈವಿಧ್ಯಪೂರ್ಣ ದಾಖಲೆಗಳೂ ಕ್ಷೇತ್ರದ ಪತ್ರಾಗಾರದಲ್ಲಿ ಲಭಿಸಿವೆ. "ಗ್ರಾಮದ ಮೊಕ್ತೇಸರರಾದವರು ನಡೆಯಿಸತಕ್ಕ ಕೆಲಸಗಳ ಸಂಗ್ರಹ" ಕೃತಿಯೊಂದು ಎಚ್.ವಿ. ಕನೊಲ್ಲಿ ಎಂಬ ಇಂಗ್ಲೀಷ್ ಅಧಿಕಾರಿಯು ಕನ್ನಡದಲ್ಲಿ ಭಾಷಾಂತರಿಸಿದ ನ್ಯಾಯಾಂಗ ವ್ಯವಹಾರಗಳ ಉಲ್ಲೇಖನಗಳು ಅಪೂರ್ವ ಸಂಗ್ರಹಗಳು, ಇದರಲ್ಲಿ ಅಡಕವಾದ ಆ ಕಾಲದ ಸಂಗತಿಗಳೂ ಗಮನಾರ್ಹವಾಗಿವೆ. ಇದಕ್ಕೆ ಪೂರಕವಾಗಿರುವಂತೆ ೨೭-೧೦-೧೮೩೪ ರಲ್ಲಿ ಇಂಡಿಯಾ ಸರಕಾರದ ಗೌರ್ನರ್ ಜನರಲ್‌ನು ಪ್ರಾಂತೀಯ ಭಾಷಾನೀತಿಯನ್ನು ಕುರಿತು ಹೊರಡಿಸಿದ ಸುತ್ತೋಲೆ ಹೀಗೆ ಹೇಳುತ್ತದೆ.

Language of the Courts-81

The language of all judicial proceedings and decisions in this Country is Canarese, but should the Vernacular Language of the officer who is head of a court be other than Canarese, he is found to write his decision, or any Particuler points regarding which he has to call for proof, in his own language and these papers having been translated into Canarese, a copy of the both the original and the Translation or placed on record.

82. Should any head of a court however be sufficiently conversant with Canarese to use it instead of his own language, he is at liberty to do so.

**ಉಪಸಂಹಾರ :** ಭಾರತದಲ್ಲಿ ಉನ್ನತ ಕ್ಷೇತ್ರವಾಗಿರುವ ಧರ್ಮಸ್ಥಳವು ತಿರುಪತಿಯಂತೆಯೇ ಶ್ರೀ ವೀರೇಂದ್ರ ಹೆಗ್ಗಡೆಯವರ ಮಾರ್ಗದರ್ಶನದಲ್ಲಿ ಅಭಿವೃದ್ಧಿ ಪಥದತ್ತ ಸಾಗುತ್ತಿದೆ. ಕ್ಷೇತ್ರದ ಪುರಾತನ ವಸ್ತುಗಳು, ನಾಣ್ಯಗಳು, ವಿಗ್ರಹಗಳು, ಓಲೆಗರಿಗಳು, ಚಾರಿತ್ರಕ ದಾಖಲೆಗಳು ಮಹಾ ಪ್ರಬಂಧವನ್ನು ಸಿದ್ಧಪಡಿಸುವಲ್ಲಿ ವಿಪುಲ ಆಕರಗಳನ್ನು ನೀಡುತ್ತವೆ. ಧರ್ಮಭೀರು ಹಾಗೂ ಐತಿಹಾಸಿಕ ಪ್ರಜ್ಞಾಶೀಲ ಸಮರ್ಥನಾದ ವಿದ್ವಾಂಸನು ಅಪಾರ ಶ್ರದ್ಧೆಯಿಂದ ಅಧ್ಯಯನ ಕೈಗೊಂಡಲ್ಲಿ ಮಾತ್ರ ಇದನ್ನು ಸಾಧಿಸಲು ಸಾಧ್ಯ. ಇದಕ್ಕೆ ಪೂರ್ವಭಾವಿಯಾಗಿ ನಾನು ಸಿದ್ಧಪಡಿಸಿದ ಚಾರಿತ್ರಕ ದಾಖಲೆಗಳ ಸೂಚಿ ಪ್ರಕಟವಾಗುವುದು ಅಗತ್ಯ. ಈ ಸೂಚಿಯೊಂದಿಗೆ ಬುಕನನ್ ಪ್ರವಾಸಿ ಕಥನ, ಥಾಮಸ್ ಮನ್ರೋ, ಸ್ಟೋಕ್ಸ್, Canara Liuro da Correspondencia do; Cartazes; Moraes-Mangalore; Sturrock-South Canara District Mannual ಮದರಾಸಿನ ಪತ್ರಾಗಾರ, ಡಾ. ವಸಂತ ಮಾಧವರ ಸೂಚನೆಯಂತೆ ಮಂಗಳೂರು ಜಿಲ್ಲಾ ಕಛೇರಿ, ಬ್ರಿಟಿಷ್ ಮ್ಯೂಜಿಯಂ ಮುಂತಾದೆಡೆಗಳಲ್ಲಿರುವ ಅಮೂಲ್ಯ ಗ್ರಂಥಗಳನ್ನು ಪರಿಶೋಧಿಸುವ ಮುಖಾಂತರ ಸಹಕಾರ ಪಡೆದುಕೊಳ್ಳಬಹುದು.

ಆಯಾ ಕಾಲದಲ್ಲಿ ಬರೆದಿಟ್ಟ ದಫ್ತರಗಳು, ದಿನಚರಿಗಳು, ಇನಾಂ ರಿಜಿಷ್ಟರುಗಳು, ಧಾರ್ಮಿಕ ಸಂಸ್ಥೆ ಹಾಗೂ ಖಾಸಗೀ ಸಂಗ್ರಹಗಳಲ್ಲಿರುವ ಪತ್ರಗಳನ್ನು ಜತನದಿಂದ ಸಂಗ್ರಹಿಸಿ, ರಕ್ಷಿಸಿ, ಶೋಧಿಸಿ, ಪರಿಷ್ಕರಿಸಿ, ವಿಷಯಾನುಗುಣವಾಗಿ ವಿಂಗಡಿಸಿ, ವಿಷಯಸೂಚಿ, ಪಾರಿಭಾಷಿಕ ಪದಸೂಚಿಗಳನ್ನು ಮುಂದಿನ ಪೀಳಿಗೆಗೆ ಸಿದ್ಧಪಡಿಸುವುದು ಆದ್ಯ ಕರ್ತವ್ಯ, ನಶಿಸಿ ಹೋಗುವ ಮುನ್ನವೇ ಅಳಿದುಳಿದವುಗಳನ್ನು ವಿನಾಕಾರಣ ತಡ ಮಾಡದೇ ಪ್ರಜ್ಞಾವಂತರು ಹಾಗೂ ಇತಿಹಾಸ ವಿದ್ವಾಂಸರು ಇದಕ್ಕೆ ಗಮನವೀಯುವರೇ ಕಾದು ನೋಡಬೇಕಾಗಿದೆ.

ಕೆಳದಿ ಸಂಶೋಧನಾಲಯದ ಹಲವು ಸಾಮಗ್ರಿಗಳನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಿದ ವಿಶ್ವಸ್ಥ ಸಮಿತಿಗೆ ನನ್ನ ಕೃತಜ್ಞತೆಗಳು.

# ಹತ್ತೊಂಬತ್ತನೆಯ ಶತಮಾನದ ಎರಡು ದಾಖಲೆಗಳು

ಡಾ. ಬಿ.ಆರ್. ಹಿರೇಮಠ

ನಾಡಿನ ಇತಿಹಾಸ ರಚನೆಯಲ್ಲಿ ಶಾಸನ, ಕಾವ್ಯ, ಕೈಫಿಯತ್ತು ಪ್ರಾಚ್ಯವಸ್ತು ಮೊದಲಾದವುಗಳಂತೆ ದಾಖಲೆಗಳೂ ಉಪಯುಕ್ತ ಆಕರ ಸಾಮಗ್ರಿಗಳಾಗಿವೆ. ಹೀಗಾಗಿ ದಾಖಲೆಗಳ ಸಂಗ್ರಹ, ಸಂರಕ್ಷಣೆ ಅತ್ಯಂತ ಅಗತ್ಯಕಾರ್ಯವೆನಿಸುತ್ತವೆ. ಕರ್ನಾಟಕದ ಅರಮನೆ, ಗುರುಮನೆ, ಅಧಿಕಾರಿ, ವಿದ್ವಾಂಸ ಹಾಗೂ ಸರಕಾರಿ ಸಂಸ್ಥೆಗಳಲ್ಲಿ ದೊರೆಯುವ ಪ್ರಾಚೀನ, ದಾಖಲೆಗಳು ವೈವಿಧ್ಯಪೂರ್ಣವಾಗಿದ್ದು, ವಿಪುಲ ಸಂಖ್ಯೆಯಲ್ಲಿರುತ್ತವೆ. ಇಂಥ ಚಾರಿತ್ರಿಕ ಮಹತ್ವವನ್ನು ಪಡೆದಿರುವ ದಾಖಲೆಗಳು ನಾಡಿನ ಒಳಗೂ ಹೊರಗೂ ವಿವಿಧ ಭಾಷೆಗಳಲ್ಲಿರುವುದು ಗೊತ್ತಾಗುತ್ತದೆ. ಕೆಲವು ಜನ ವಿದ್ವಾಂಸರು ಹಾಗೂ ಸಂಸ್ಥೆಗಳು ಇವುಗಳ ಸಂಗ್ರಹ ಕಾರ್ಯವನ್ನು ಕೈಕೊಂಡಿದ್ದರೂ ವ್ಯವಸ್ಥಿತವಾದ, ತಲಸ್ಪರ್ಶಿಯಾದ ಸಂಗ್ರಹಕಾರ್ಯ ಇನ್ನೂ ನಡೆದಿಲ್ಲವೆಂದೇ ಹೇಳಬೇಕಾಗುತ್ತದೆ. ಇದಲ್ಲದೆ ಸಂಗ್ರಹಿಸಿದ ದಾಖಲೆಗಳನ್ನು ವೈಜ್ಞಾನಿಕವಾಗಿ ವರ್ಗೀಕರಿಸುವ, ವಿವರವಾಗಿ ಅಭ್ಯಸಿಸುವ ಕಾರ್ಯವೂ ನಮ್ಮಲ್ಲಿ ಇನ್ನೂ ಅಷ್ಟಾಗಿ ನಡೆದಂತೆ ಕಾಣುವುದಿಲ್ಲ.

ಆಂಗ್ಲರು ಭಾರತದಲ್ಲಿ ಆಯಾ ಪ್ರಾಂತ ಭಾಷೆಯಲ್ಲಿಯೇ ತಮ್ಮ ಆಡಳಿತವನ್ನು ನಿರ್ವಹಿಸಿದರು. ಹೀಗಾಗಿ ಆಂಗ್ಲರು ಕರ್ನಾಟಕದಲ್ಲಿ ಕನ್ನಡವನ್ನೇ ತಮ್ಮ ಆಡಳಿತ ಭಾಷೆಯನ್ನಾಗಿ ಮಾಡಿಕೊಂಡಿದ್ದರು. ಆದುದರಿಂದ ಕರ್ನಾಟಕದಲ್ಲಿ ಬ್ರಿಟಿಷರ ಆಡಳಿತದ ದಾಖಲೆಗಳು ಹೆಚ್ಚಾಗಿ ಕನ್ನಡ ಭಾಷೆಯಲ್ಲಿಯೇ ಲಭಿಸುತ್ತವೆ. ಇದರಿಂದ ಬ್ರಿಟೀಷರ ಕಾಲದಲ್ಲಿಯೇ ಕನ್ನಡ ಪ್ರಾಂತ ಭಾಷೆಯಾಗಿ, ಆಡಳಿತ ಭಾಷೆಯಾಗಿ ಮಹತ್ವ ಪಡೆದಿರುವುದು ತಿಳಿದು ಬರುತ್ತದೆ. ೧೯ನೆಯ ಶತಮಾನದ ಆಂಗ್ಲರ ಆಡಳಿತದಲ್ಲಿ ಹೊರಡಿಸಿದ ಎರಡು ಅಪೂರ್ವ ಕನ್ನಡ ದಾಖಲೆಗಳನ್ನು ಪರಿಚಯಿಸುವುದು ಈ ಲೇಖನದ ಉದ್ದೇಶವಾಗಿದೆ.

**ದಾಖಲೆ ಒಂದು:** ಇದು, ಧಾರವಾಡ ಜಿಲ್ಲೆಯ ಮ್ಯಾಜಿಸ್ಟ್ರೇಟರಾದ ಜೆ.ಎಸ್. ಆಂಡ್ ಸಾಹೇಬರವರು ೧೮೫೨ನೆಯ ಇಸ್ವಿಯಲ್ಲಿ ಪೋಲಿಸ್ ಸಿಬ್ಬಂದಿಯವರಿಗೆ ಫೌಜದಾರಿ ಅದಾಲತಿನ ಸರ್ಕ್ಯುಲರ್ ನಂ. ೫೩೬/೧೭-೨-೧೮೫೨ರ ಪ್ರಕಾರ ಹೊರಡಿಸಿದ ಜಾಹಿರ ನಾಮೆಯಾಗಿದೆ. ೧೬ ಸಾಲಿನ ಈ ಜಾಹಿರ ನಾಮೆಯನ್ನು ಕಾಗದದಲ್ಲಿ ಮಸಿಯಿಂದ ಬರೆಯಲಾಗಿದೆ. ಈ ದಾಖಲೆಯ ಮೇಲ್ಭಾಗದಲ್ಲಿರುವ "ಧಾರವಾಡ ಮ್ಯಾಜಿಸ್ಟ್ರೇಟ್" ಅವರ ಅಧಿಕೃತ ಮುದ್ರೆ, ಕನ್ನಡ ಹಾಗೂ ಇಂಗ್ಲೀಷ್ ಭಾಷೆಯಲ್ಲಿರುತ್ತದೆ. ಜಾಹಿರ ನಾಮೆಯ ಅಂತ್ಯದಲ್ಲಿ ಇದನ್ನು ಹೊರಡಿಸಿದ ದಿನಾಂಕ, ತಿಂಗಳು ಹಾಗೂ ಇಸ್ವಿಯನ್ನು ಸೂಚಿಸಲಾಗಿದೆ. ಇದರ ತರುವಾಯ ಮ್ಯಾಜಿಸ್ಟ್ರೇಟ್‌ರವರ ಸ್ವಹಸ್ತಾಕ್ಷರದ ಸಹಿ ಇದೆ. ಎಲ್ಲಕ್ಕೂ ಕೊನೆಗೆ ಈ ದಾಖಲೆ ಮುದ್ರಿತವಾದ ಸ್ಥಳವನ್ನು "ಧಾರವಾಡದಲ್ಲಿ ಸುಪರಿಂಟೆಂಡೆಂಟ್ ರಿವಿಸಿಯೂ, ಸರವೆ ಕಚೇರಿಯಲ್ಲಿ ಛ್ಯಾಪಿಸಿದ್ದು" ಎಂದು ನಮೂದಿಸಲಾಗಿದೆ.

ಗ್ರಾಮದಲ್ಲಿ ನಡೆದ ಅಪರಾಧಗಳನ್ನು ಗುರುತಿಸುವುದು. ಅಪರಾಧಿಗಳನ್ನು ಸರಕಾರದ ವಶಕ್ಕೆ

ಒಪ್ಪಿಸುವುದು—ಇವು ಆಂಗ್ಲರ ಕಾಲದ ಪೋಲಿಸ್ ಪಾಟೀಲರ ಕರ್ತವ್ಯಗಳಾಗಿದ್ದವು. ಹೀಗೆ ಪೋಲಿಸ್ ಪಾಟೀಲರು ಗ್ರಾಮಾಡಳಿತದಲ್ಲಿ ವಹಿಸುತ್ತಿದ್ದ ಪ್ರಮುಖ ಪಾತ್ರದ ಪರಿಚಯವಾಗುತ್ತದೆ.

ಕೆಲವು ಜನ ಪೋಲಿಸ್ ಪಾಟೀಲರು ತಮ್ಮ ಅಧಿಕಾರದ ಬಲದಿಂದ ಗ್ರಾಮೀಣ ಅಪರಾಧಿಗಳಿಗೆ ಹಲವು ರೀತಿಯಲ್ಲಿ ಆಸೆ ಆಮಿಷೆಗಳನ್ನು ತೋರಿಸಿ, ಮಾಡಿದ ತಪ್ಪನ್ನು ಒಪ್ಪಿಕೊಳ್ಳುವಂತೆ ಒತ್ತಾಯಿಸುತ್ತಿದ್ದರು. ಅಪರಾಧಿಗಳು ಒಂದು ವೇಳೆ ತಪ್ಪನ್ನು ಒಪ್ಪಿಕೊಂಡರೆ, ಸರಕಾರದಿಂದ ಇನಾಮು ದೊರೆಯುವುದೆಂದೂ ಕಡಿಮೆ ಶಿಕ್ಷೆ ಲಭಿಸುವುದೆಂದೂ ನಂಬಿಸಿ, ಅವರಿಂದ ತಪ್ಪೊಪ್ಪಿಗೆ ಪಡೆಯುತ್ತಿದ್ದರು. ಇಂತಹ ಹಲವಾರು ಪ್ರಕರಣಗಳು ಬ್ರಿಟಿಷ್ ಸರಕಾರದ ಗಮನಕ್ಕೆ ಬಂದವು. ಆದುದರಿಂದ ಪೋಲಿಸ್ ಪಾಟೀಲರೂ ಒತ್ತಾಯ ಪೂರ್ವಕವಾಗಿ ಆಸೆ–ಆಮಿಷಗಳಿಂದ ಕೈದಿಗಳನ್ನು ವಂಚಿಸಿ, ತಪ್ಪೊಪ್ಪಿಗೆ ಪಡೆಯಬಾರದು ಇದು ಕಾಯಿದೆಗೆ ವಿರುದ್ಧವಾದುದೆಂದು ಹೇಳಿ, ಇಂಥ ಪ್ರಕರಣಗಳು ನಡೆಯದಂತೆ ಕಟ್ಟುನಿಟ್ಟಾಗಿ ಆಜ್ಞೆ ಹೊರಡಿಸಿದರು. ಈ ಆಜ್ಞೆಯನ್ನೇ ಜಾಹಿರನಾಮೆಯ ಮೂಲಕ ಪ್ರಕಟ ಪಡಿಸಿದರು. ಇಲ್ಲಿ ಅಧಿಕಾರದ ದುರುಪಯೋಗ ಹಾಗೂ ಅಪರಾಧಿಗಳ ಕೈದಿಗಳ ರಕ್ಷಣೆಯ ಬಗೆಗೆ ಆಂಗ್ಲರು ಹೊಂದಿದ್ದ ಎಚ್ಚರ, ಕಾಳಜಿಗಳನ್ನು ನಾವು ಸ್ಪಷ್ಟವಾಗಿ ಗುರುತಿಸುತ್ತೇವೆ. ಇದರಿಂದ ೧೯ನೆಯ ಶತಮಾನದ ಗ್ರಾಮಾಡಳಿತ ಪದ್ಧತಿ, ಪೋಲಿಸ್ ಪಾಟೀಲರ ಅಧಿಕಾರ ಹಾಗೂ ಕರ್ತವ್ಯ, ಅಧಿಕಾರ ದುರುಪಯೋಗ, ಸರಕಾರದ ಮೇಲ್ವಿಚಾರಣೆ, ಅಪರಾಧಿ ಕೈದಿಗಳ ರಕ್ಷಣೆ, ಧಾರವಾಡ ಜಿಲ್ಲೆಯ ಮ್ಯಾಜಿಸ್ಟ್ರೇಟರ ಹೆಸರು, ಪ್ರಕಟನೆ ಹೊರಡಿಸಿದ ಮಿತಿ, ಮುದ್ರಣ ಸ್ಥಳ ಮೊದಲಾದ ಮಹತ್ವದ ಸಂಗತಿಗಳು ತಿಳಿದುಬರುತ್ತವೆ.

ಜಾಹಿರನಾಮಾ, ಕಾಮದಾರ, ಸದರ, ಫೌಜದಾರಿ ಅದಾಲತ್, ಇನಾಮು, ಅಮಲಿನಲ್ಲಿ ಮುಂತಾದ ಆಡಳಿತ ಪಾರಿಭಾಷಿಕ ಪದಗಳೂ, ಗುನ್ಹೆ, ಕಬುಲು, ದಶಿಂದ, ಜಬರಿಂದ, ಕೈದಿ ಜನರು, ಕಡಿಂದ ಮೊದಲಾದ ಪ್ರಾದೇಶಿಕ ಭಾಷಾಪದಗಳೂ ಈ ದಾಖಲೆ ಯಲ್ಲಿರುವುದನ್ನು ಗಮನಿಸಬೇಕು. ಹೀಗೆ ಹಲವಾರು ಉಪಯುಕ್ತ ಮಾಹಿತಿಗಳನ್ನು ಒದಗಿಸುವ ಈ ದಾಖಲೆ, ಅತ್ಯಂತ ಮಹತ್ವಪೂರ್ಣವಾದುದಾಗಿದೆ.

**ದಾಖಲೆ ಎರಡು :** ಅಲಿಜಾ ಗವ್ಹರ್ನರ್ ಸಾಹೇಬ ಬಹಾದ್ದೂರ ಇನ್‌ಕೌನ್ಸಿಲ್ ಇವರ ಹುಕುಮಿನ ಮೇರೆಗೆ ಆ್ಯಕ್ಟಿಂಗ್ ಸೆಕ್ರೆಟರಿ ಜೆ. ನ್ಯುಜಂಟ್ ಅವರು ಮುಂಬಯಿಂದ ೨೪ ಫೆಬ್ರುವರಿ ೧೮೭೦ ರಂದು ಹೊರಡಿಸಿದ 'ಇಸ್ತಿಹಾರ'(ಪ್ರಕಟಣೆ) ಇದಾಗಿದೆ.

ಇದರಲ್ಲಿ ಒಟ್ಟು ಇಪ್ಪತ್ತು ಸಾಲುಗಳಿದ್ದು, ಆರಂಭದಲ್ಲಿ "ಇಸ್ತಿಯಾರು" (ಇಸ್ತಿಹಾರ=ಪ್ರಕಟನೆ) ಎಂದು ದೊಡ್ಡ ಅಕ್ಷರದಲ್ಲಿ ಬರೆಯಲಾಗಿದೆ. ಈ ದಾಖಲೆಯನ್ನೂ ಮಸಿಯಿಂದ ಕಾಗದದಲ್ಲಿ ಬರೆಯ ಲಾಗಿದ್ದು, ಅಕ್ಷರಗಳು ಗಾತ್ರದಲ್ಲಿ ದೊಡ್ಡವಾಗಿರುತ್ತವೆ. ದಾಖಲೆಯ ಕೊನೆಗೆ ಒಂದು ಕಡೆ (ಬಲಭಾಗದಲ್ಲಿ) "ಅಲಿಜಾ ಗವರನರ ಸಾಹೇಬ ಬಹದ್ದೂರ ಇನ್ ಕೌನ್‌ಸಲ್ಲ ಇವರ ಹುಕುಮಿನ ಮೇಲಿಂದ (ಸಹಿ) ಜೆ. ನ್ಯುಜಂಟ, ಆಕ್ಟಿಂಗ ಸೆಕ್ರೆಟರಿ ನಿಸಬತ ಸರಕಾರ" ಎಂದೂ ಇನ್ನೊಂದು ಕಡೆ (ಎಡ ಭಾಗದಲ್ಲಿ) "ಮುಕ್ಕಾಮು ಜಂಜಿರೆ ಮುಂಬಯಿ, ತಾರೀಖು ೨೪ ಫೆಬ್ರುವರಿ ಸನ್ ೧೮೭೦" ಎಂದೂ ನಮೂದಿಸಲಾಗಿದೆ. ಈ ದಾಖಲೆಯ ನಂಬರು ೯೮೩ ಎಂದೂ ಎಸ್. ಪಿ. ಪಂಡಿತ ಸರಕಾರದ ಭಾಷಾಂತರ ಕಾರರೆಂಬುದನ್ನು ಇದರಲ್ಲಿ ದಾಖಲಿಸಲಾಗಿದೆ.

ಯಾವುದೋ ಕಾರಣದಿಂದ ಇಲ್ಲವೆ ವಿನಾ ಕಾರಣ ದಿಂದ ಜನರು ನಾಣ್ಯಗಳನ್ನು ಅನೇಕ ರೀತಿಯಿಂದ ಕೆಡಿಸುತ್ತಿದ್ದರು. ನಾಣ್ಯಗಳನ್ನು ಕುರಿತ ಜನರ ಈ ವರ್ತನೆಯನ್ನು ಗಮನಿಸಿದ ಬ್ರಿಟಿಷ್ ಸರಕಾರ ಕಟ್ಟು ಮಾಡಿದ ಅಥವಾ ಗುರುತು ಮಾಡಿದ ಇಲ್ಲವೆ ಬೇರೆ ರೀತಿಯಿಂದ ಕೆಡಿಸಿದ ನಾಣ್ಯಗಳನ್ನು ಸರಕಾರಿ ಖಜಾನೆಯಲ್ಲಿ ಸ್ವೀಕರಿಸದಂತೆ ಆಜ್ಞೆ ಹೊರಡಿಸಿತು. ಈ ಆಜ್ಞೆಯೇ 'ಇಸ್ತಿಹಾರ' ರೂಪದಲ್ಲಿ ಪ್ರಕಟ ವಾಯಿತು. ೧೮೭೦ ಜುಲೈ ೩೧ರ ವರೆಗೆ ಕೆಡಿಸಿದ ಪೂರ್ಣ ತೂಕದ ನಾಣ್ಯಗಳನ್ನು ಮಾತ್ರ ಸರಕಾರದ ಯಾವುದೇ ಖಜಾನೆಯಲ್ಲಿ ಸ್ವೀಕರಿಸಿ, ಇವುಗಳಿಗೆ

ಪ್ರತಿಯಾಗಿ ಸರಕಾರದ ಅಧಿಕೃತ ನಾಣ್ಯಗಳನ್ನು ಪಡೆಯಲು ಅವಕಾಶವಿದ್ದಿತು. ಇದು ಬ್ರಿಟಿಷ್ ಸರಕಾರ ಜನರಿಗೆ ನೀಡಿದ ವಿನಾಯತಿಯಾಗಿದೆ. ಕಚ್ಚಾದ ನಾಣ್ಯಗಳು ಒಂದುವೇಳೆ ಸವಕಳಿ ಹೊಂದಿದ್ದರೆ, ಪ್ರತಿ ತೊಲಿಗೆ ಒಂದು ರೂಪಾಯಿ ಮಾತ್ರ ಆಕರಿಸುತ್ತಿದ್ದರು. ಆದರೆ ೧ ಆಗಸ್ಟ್ ೧೮೮೦ ರಿಂದ ಹಾಗೂ ನಂತರ ಇಂಥ ಕುಲಗೆಟ್ಟ ನಾಣ್ಯಗಳನ್ನು ಜನರು ಖಜಾನೆಗೆ ಸಂದಾಯ ಮಾಡಲು ಸರಕಾರ ಅನುಮತಿಯನ್ನು ನಿರಾಕರಿಸಿದ್ದಿತು. ಇಷ್ಟೇ ಅಲ್ಲ, ಇಂಥ ನಾಣ್ಯಗಳನ್ನು ಜನರು ಖಜಾನೆಗೆ ತುಂಬಲು ಬಂದರೆ ಅಧಿಕಾರಿಗಳು ಅವುಗಳನ್ನು ಸ್ವೀಕರಿಸದೆ, ಕಡಿದು ತಿರುಗಿ ಕೊಡಬೇಕೆಂಬ ಆದೇಶವನ್ನೂ ಸರಕಾರ ನೀಡಿದ್ದಿತು. ಹೀಗೆ ನಾಣ್ಯಗಳನ್ನು ಕೆಡಿಸುವ ಜನರ ವಿರುದ್ಧ ಸರಕಾರ ನಿರ್ದಾಕ್ಷಿಣ್ಯವಾಗಿ ಕಠೋರ ಕ್ರಮಗಳನ್ನು ಕೈಕೊಳ್ಳುತ್ತಿದ್ದುದು. ಇದರಿಂದ ಗೊತ್ತಾಗುತ್ತದೆ. ಈ ದಾಖಲೆಯಲ್ಲಿ ಬರುವ ಜಾಹಿರ, ಭರಣಾ, ಲಾಗಾಯಿತ, ಇರಾದೆ, ಹುಕುಮ, ಕಾಯದೆಸಿರ, ಪರಂತು, ಮೊದಲಾದ ಆಡಳಿತದ ಪಾರಿಭಾಷಿಕ ಪದಗಳನ್ನೂ, ಎರಡ್ನೆ, ನಡತಿ, ಬಂದೀತು, ಸಂವಿಯದಲೆ, ಕಮ್ಮಿ, ಬಂದಾವು, ತಿರಿಗಿ, ತೆಗಿದುಕೊಂಬುವದು ಮುಂತಾದ ಪ್ರಾದೇಶಿಕ ಆಡುನುಡಿಗಳನ್ನು ಲಕ್ಷಿಸಬೇಕು. ಹೀಗೆ ಈ ಎರಡನೆಯ ದಾಖಲೆ ಬ್ರಿಟೀಷರ ಕಾಲದ ಚಲಾವಣಾ ನಾಣ್ಯವನ್ನು ಕುರಿತು ಮಹತ್ವದ ವಿಷಯವನ್ನು ತಿಳಿಸಿ ಕೊಡುತ್ತವೆ.

ಹೀಗೆ ಇವೆರಡೂ ಪ್ರಾದೇಶಿಕ ಕನ್ನಡ ಭಾಷೆ ಹಾಗೂ ಕನ್ನಡ ಲಿಪಿಯಲ್ಲಿದ್ದು ಹತ್ತೊಂಬತ್ತನೆಯ ಶತಮಾನದ ಆಂಗ್ಲರ ಪ್ರಾದೇಶಿಕ ಆಡಳಿತ ಭಾಷೆ ಕನ್ನಡವಾಗಿದ್ದಿತೆಂಬುದನ್ನು ಸಮಕಾಲೀನ ಮಹತ್ವದ ಸಂಗತಿಗಳನ್ನೂ ತಿಳಿಸುವ ಅಪೂರ್ವ ದಾಖಲೆಗಳಾಗಿರುತ್ತವೆ. ಇತಿಹಾಸತಜ್ಞರು ಇಂಥ ದಾಖಲೆಗಳ ಸಂಗ್ರಹ, ಸಂರಕ್ಷಣೆಯ ಕಡೆಗೆ ವಿಶೇಷ ಗಮನ ಹರಿಸುವರೆಂದು ಭಾವಿಸಿದ್ದೇನೆ.

## ಅನುಬಂಧ

### ದಾಖಲೆಗಳ ಪೂರ್ಣಪಠ್ಯ

**ದಾಖಲೆ : ಒಂದು**

ಧಾರವಾಡ ಜಿಲ್ಲಾ ಮ್ಯಾಜಿಸ್ಟ್ರೇಟ್ ಅಜಂ ಜ್ಯಾ
ನ ಸದರ ಲಂಡಲಾ ಸಾಹೇಬರವರು
ಜಾಹಿರನಾಮಾ ಯಾವತ್ತು ಪೋಲ್ಸಿ ಕಾಮದಾರ ಜಿನರಿಗೆ ತಿಳಿ
ಯತಕ್ಕ ಬಗ್ಗೆ ಪ್ರಕಟ ಮಾಡುವದೇನಂದರೆ—ಸದರ ಫವುಜದಾ
ರಿ ಅದಾಲತಿನ ಸರಕೀಲರ ನಂಬರು ೫೩೬ ತಾರೀಖು ೧೭ ಫೆಬರ
ವರಿ ಸಂನ ೧೮೫೨ ಯಿಸವೀದು ಪರಾಂಮ್ಮರಿಶಿ ತಿಳಿಯಪ
ಡಸುವದೇನಂದರೆ ಪೋಲ್ಸಿಪಾಟೇಲ ಜನರು ಕೈದೇರಿಗೆ ಗುನ
ಹೆದ ಕಬುಲು ಆಗುವದರ ದಶಿಯಿಂದಾ ಅವರಿಗೆ ಯೇನಾದರೂ
ಆಶಾ ತೋರಸತಾರೆ ಮತ್ತು ಕಬುಲು ಮಾಡಿದರೆ ನಿಂಮ್ಮಗೆ ಕಡಿ
ಮಿ ಶಿಕ್ಷಾ ದೊರದೀತು ಅಥವಾ ಸರಕಾರದಿಂದಾಯಿನಾಮು
ಶಿಕ್ಕೀತು ಅಂತಾ ಹಾಂಗೂ ಕೆಲವ ಜನರು ಜಬರಿಯಿಂದಾ ಕಬು
ಲು ಮಾಡಸತಾರೆ ಅಂತಾ ಜಾಹಿರನಲ್ಲಿ ಬರತದೆ. ಆದರೆ ಯಿಂ
ಥಾ ತರಹೆದಿಂದಾ ಕೈದಿ ಜನರ ಕಡಿಂದಾ ಕಬುಲು ಮಾಡಸ ಬಾ
ರದು ಯಿದು ಕಾಯಿದೇಕ್ಕೆ ಬಾಹಾಳ ವಿರುಧವದೆ ಛಂದಾಗಿ
ತಿಳಕೊಂಡು ಯಿದರಂತೆ ಅಮಲಿನಲ್ಲಿ ತರಬೇಕು ತಾರೀಖು ೨೫
ಮಾಹೆ ಮಾರ್ಚಿ ಸಂನ ೧೮೫೨ ಯಿಸವಿ.

J.S. Land
Magistrate

ದಾಖಲೆ : ಎರಡು

ಇದರ ಮೂಲವಾಗಿ ಜಾಹಿರು ಮಾಡುವದೇನಂದರೆ, ಕಚ್ಚು ಹಾಕುವ ಅಥವಾ ಗುರ್ತ ಮಾಡುವ ಅಥವಾ ಯರಡ್ನೆ ರೀತಿಯಿಂದ ನಾಣ್ಯವನ್ನು ಕೆಡಿಸುವ ನಡತಿ ಇರುವದ್ದರಿಂದ ಅಂಥಾ ನಾಣ್ಯವು ಹಣದ ಭರಣಾ ಮಾಡುವದರಲ್ಲಿ ತಂದರೆ ಅದನ್ನು ತಗೆದು ಕೊಂಬುವದಿಲ್ಲೆಂದು ಹೇಳುವದಕ್ಕೆ ಬಂದೀತು. ಮತ್ತು ಸನ್ ೧೮೮೦ನೇ ಇಸವಿಯ ಅಗಸ್ಟ್ ತಿಂಗಳ ವೊಂದನೇ ತಾರೀಖಿನ ಲಾಗಾಯಿತು ಮತ್ತು ಆ ತಾರೀಖಿನ ನಂತರಾ ಸರಕಾರದ ಬೇಡುವಿಕೆಗಳನ್ನು ಕೊಡುವದರಲ್ಲಿ ಇಂಥಾ ನಾಣ್ಯವನ್ನು ತೆಗಿದುಕೊಂಬುವದಕ್ಕೆ ಇಲ್ಲೆನಬೇಕು. ಹೀಂಗೆ ಸರಕಾರದ ಇರಾದೆ ಅದೆ. ಬರುವ ಜುಲೈತಿಂಗಳ ೧ನೇ ತಾರೀಖಿನ ವರೆಗೆ ಇಂಥಾ ಕೆಡಿಸಿದ ಪೂರಾತೂಕದ ಯಲ್ಲಾ ನಾಣ್ಯವು ಯಾವದಾದರೂ ಸರಕಾರದ ಟ್ರೆಝುರಿಯಲ್ಲಿ ತೆಗೆದುಕೊಂಡು ಅದರ ಬದಲು ಕಾಯಿದೆ ಸಿರವಾದ ನಾಣ್ಯವು ಅಡ್ಡಿ ಹೇಳದಲೆ ಕೊಡುವದರಲ್ಲಿ ಬಂದೀತು. ಯಾವ ಕೆಡಿಸಿದ ನಾಣ್ಯವು ಯೋಗ್ಯವಾಗಿ ಸಂವಿಯದಲೆ ಯರಡ್ನೆ ರೀತಿಯಿಂದ ನೂರಕ್ಕೆ ಯರಡು ರೂಪಾಯಿದಕಿಂತಾ ಕಡಿಮೆ ತೂಕದಲ್ಲಿ ಕಮ್ಮಿ ಬಂದರೆ ೨ ನಾಣ್ಯವು ದರ ತೊಲಿಗೆ ವೊಂದು ರೂಪಾಯಿಯಂತೆ ತೆಗೆದುಕೊಂಬುವದರಲ್ಲಿ ಬಂದೀತು, ಪರಂತು ಬರುವ ಅಗಸ್ಟ್ ತಿಂಗಳ ವೊಂದನೇ ತಾರೀಖು ನಿಂದ ಇಂಥಾ ನಾಣ್ಯಗಳು ಕೊಡಲಿಕ್ಕೆ ಬಂದವರಿಗೆ ಅವುಗಳನ್ನು ಕಡಿದು ತಿರಿಗಿಕೊಡುವದರಲ್ಲಿ ಬಂದಾವು.

ಮುಕ್ಕಾಮು : ಜಂಜಿರೆ ಮುಂಬಯಿ
ತಾರೀಖು ೨೪ ಫೆಬ್ರುವರಿ
ಸನ್ ೧೮೮೦

ಆಲಿಜಾ ಗವರನರ ಸಾಹೇಬ ಬಹದ್ದೂರಕೌನಸಲ್ಲ
ಇವರ ಹುಕುಮಿನ ಮೇಲಿಂದ

(ಸಹಿ) ಜೆ. ನ್ಯುಜಂಟ
ಆ್ಯಕ್ಟಿಂಗ್ ಸೆಕ್ರಟರಿ ನಿಸಬತ ಸರಕಾರ
S.P. PANDIT
Oriental Translator to Government

# ಕರ್ನಾಟಕದಲ್ಲಿ ಆಧುನಿಕ ಬ್ಯಾಂಕಿಂಗ್ ಉದ್ಯಮದ ಪ್ರಾರಂಭದ ಹಂತ (೧೮೦೬ ರಿಂದ ೧೯೪೯)

ಎಂ.ಬಿ. ಪಾಟೀಲ್

ಒಂದು ದೇಶದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಗೆ ಬ್ಯಾಂಕಿಂಗ್ ಉದ್ಯಮ ತನ್ನದೇ ಆದ ಮಹತ್ವ ಪೂರ್ಣ ಕೊಡುಗೆಯನ್ನು ಸದಾಕಾಲ ನೀಡುತ್ತ ಬಂದಿರುವದು. ಭಾರತದಲ್ಲಿ ವ್ಯವಸ್ಥಿತ ಆಧುನಿಕ ಬ್ಯಾಂಕಿಂಗ್ ಉದ್ಯಮಕ್ಕೆ ತನ್ನದೇ ಆದ ಸುಮಾರು ಒಂದೂವರೆ ಶತಮಾನದ ಚಾರಿತ್ರಿಕ ಹಿನ್ನೆಲೆ ಉಂಟು.

ಕರ್ನಾಟಕದಲ್ಲಿ ಆಧುನಿಕ ಬ್ಯಾಂಕಿಂಗ್ ಉದ್ಯಮಕ್ಕೆ ತನ್ನದೇ ಆದ ಸುಮಾರು ೧೭೫ ವರ್ಷಗಳ ಸುದೀರ್ಘ ಮತ್ತು ರಮ್ಯವಾದ ಐತಿಹಾಸಿಕ ಪರಂಪರೆ ಉಂಟು. ಭಾರತದ ಸಮಗ್ರ ಬ್ಯಾಂಕಿಂಗ್ ಇತಿಹಾಸದಲ್ಲಿ ಕರ್ನಾಟಕವು ತನ್ನದೆ ಆದ ವಿಶೇಷ ಸ್ಥಾನಮಾನಗಳನ್ನು ಆಯಾಮುಗಳನ್ನು ಹೊಂದಿದೆ.

ಆಧುನಿಕ ಭಾರತದಲ್ಲಿ ಬ್ರಿಟೀಷ ಮಾದರಿಯಲ್ಲಿ (English Banking System) ಅಂದರೆ ಒಂದು ಕಾನೂನು ಬದ್ಧವಾದ, ಸಾಂಸ್ಥಿಕ ಹಣಕಾಸು ಸಂಸ್ಥೆಗಳಾಗಿ, ಪ್ರಾರಂಭವಾದದ್ದು ಸುಮಾರು ಎರಡು ಶತಮಾನಗಳ ಮೊದಲು. ಅಂದರೆ ೧೮೦೬-೧೮೪೩ರ ಅವಧಿಯಲ್ಲಿ ಅಂದಿನ ಪ್ರೆಸಿಡೆನ್ಸಿ ನಗರಗಳಾದ ಕಲಕತ್ತ ಬೊಂಬಾಯಿ ಮತ್ತು ಮದ್ರಾಸ ನಗರಗಳೂ ಅನುಕ್ರಮವಾಗಿ ೧೮೦೬, ೧೮೪೦ ಮತ್ತು ೧೮೪೩ರಲ್ಲಿ ಪ್ರಾರಂಭಿಸಲಾದ 'ಬ್ಯಾಂಕ್ ಆಫ್ ಬೆಂಗಾಲ'(ಕಲಕತ್ತ) 'ಬ್ಯಾಂಕ್ ಆಫ್ ಬಾಂಬೆ' ಮತ್ತು ಬ್ಯಾಂಕ್ ಆಫ್ ಮದ್ರಾಸ ಇವು ಭಾರತದಲ್ಲಿ ಮೊದಲಿಗೆ ಪ್ರಾರಂಭವಾದ ಕೂಡು ಬಂಡವಾಳ ಸಂಸ್ಥೆಗಳು (Joint Stock Bonks). ಇದಕ್ಕೂ ಪೂರ್ವದಲ್ಲಿ ಹಿಂದುಸ್ತಾನ ಬ್ಯಾಂಕ್ ೧೭೭೦ರಲ್ಲಿ ಪ್ರಾರಂಭವಾಗಿ ೧೮೩೨ರಲ್ಲಿ ಮುಚ್ಚಲ್ಪಟ್ಟಿತು. ೧೮೬೦ರಲ್ಲಿ ಜಾರಿಯಲ್ಲಿ ಬಂದ 'ಪರಿಮಿತ ಹೊಣೆಗಾರಿಕೆ' (ಲಿಮಿಟೆಡ್ ಲಾಯಬಲಿಟಿ) ನಿಯಮಾವಳಿಗಳು ಅನೇಕ ಸಾರ್ವಜನಿಕ ಕಂಪನಿಗಳು ಬ್ಯಾಂಕಿಂಗ್ ಉದ್ಯಮವನ್ನು ಆರಂಭಿಸಲು ಒಂದು ರೀತಿಯಲ್ಲಿ ಉತ್ತೇಜನಕಾರಿಯಾಯಿತೆಂದು ಹೇಳ ಬಹುದು. ಅಂದು ಬ್ಯಾಂಕಿಂಗ್ ಉದ್ಯಮ ಇಂದಿನಂತೆ ಪ್ರತ್ಯೇಕವಾಗಿರದೇ ವ್ಯಾಪಾರ, ಕೈಗಾರಿಕೆಗಳ ಒಂದು ಉಪಾಂಗವಾಗಿತ್ತು. ಭಾರತದಲ್ಲಿ ವಿಶೇಷವಾಗಿ ಉತ್ತರ ಭಾರತದಲ್ಲಿ ೧೮೬೫ರ ಸುಮಾರಿಗೆ ಅನೇಕ ಖಾಸಗಿ ವಲಯದ ಬ್ಯಾಂಕುಗಳು ಪ್ರಾರಂಭವಾದವು. ಉದಾ : ಅಲಹಾಬಾದ್ ಬ್ಯಾಂಕ್ ಕಲಕತ್ತ (೧೮೬೫) ಭಾರತದ ಅತ್ಯಂತ ಹಳೆಯ ಮತ್ತು ಇಂದಿಗೂ ಮುಂದುವರೆದು ಕೊಂಡು ಬರುತ್ತಿರುವ ಪ್ರಮುಖ ಬ್ಯಾಂಕುಗಳಲ್ಲಿ ಒಂದೆಂದು ಹೇಳಬಹುದು. ಮುಂದೆ ೧೯೦೫ರಲ್ಲಿ ಪ್ರಾರಂಭವಾದ ಸ್ವದೇಶಿ ಚಳುವಳಿಯು ಅನೇಕ ದೇಶಿಯ ಬ್ಯಾಂಕಿಂಗ್ ಸಂಸ್ಥೆಗಳ ವ್ಯಾಪಕ ಪ್ರವರ್ತನೆಗೆ ಚಾಲನೆ ಒದಗಿಸಿಕೊಟ್ಟಿತು ಎಂದು ಹೇಳಬಹುದು.

## ಮೈಸೂರು ಪ್ರಾಂತ್ಯದಲ್ಲಿ

೧೮೩೧ರಲ್ಲಿ ಕಮಿಶನರ್ ಆಳ್ವಿಕೆಯಲ್ಲಿ ಅಂದಿನ ಮೈಸೂರು ಪ್ರಾಂತೀಯ ರಾಜಧಾನಿಯನ್ನು ಭಾಗಶಃ

ಮೈಸೂರಿನಿಂದ ಬೆಂಗಳೂರಿಗೆ ವರ್ಗಾಯಿಸುವ ಮೂಲಕ ಇದಕ್ಕೂ ಮೊದಲೇ ೧೮೦೯ರಲ್ಲಿ ಬೆಂಗಳೂರಿನಲ್ಲಿ ಪ್ರಥಮಬಾರಿಗೆ ದಂಡು ಪ್ರದೇಶ ('ಕಂಟೋನ್‌ಮೆಂಟ್)' ಪ್ರಾರಂಭಿಸುವ ಮೂಲಕ ಬೆಂಗಳೂರು ನಗರದಲ್ಲಿ ವಾಣಿಜ್ಯ, ವ್ಯಾಪಾರ, ಉದ್ದಿಮೆಗಳು ವೃದ್ಧಿಸಿದವು. ಬೆಳೆಯುತ್ತಿರುವ ವಾಣಿಜ್ಯ ವ್ಯವಹಾರಗಳಿಗೆ ಹಣಕಾಸಿನ ನೆರವು ಒದಗಿಸಲು ಸಹಾಯಕವಾಗುವಂತೆ ನಗರದಲ್ಲಿ ಅನೇಕ ಖಾಸಗಿ ಮತ್ತು ಸರ್ಕಾರಿ ವಲಯದ ಬ್ಯಾಂಕುಗಳು ಮೂಡಿ ಬಂದವು. ಕರ್ನಾಟಕದಲ್ಲಿ ಖಾಸಗಿ ವಲಯದ ಮೊದಲನೆಯ ಬ್ಯಾಂಕುಗಳು ೧೮೬೮ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭವಾದವು. ಅವುಗಳೆಂದರೆ :– 'ಬೆಂಗಳೂರು ಬ್ಯಾಂಕ್ (ಲಿ)' ಮತ್ತು 'ಮೈಸೂರು ಬ್ಯಾಂಕ್ ಕಾರ್ಪೊರೇಷನ್ (ಲಿ)' ಅಂದು ಅವುಗಳು ಹೊಂದಿದ್ದ ಷೇರುಭಂಡವಾಳ ಅನುಕ್ರಮವಾಗಿ ರೂ. ಏಳು ಮತ್ತು ಎರಡು ಲಕ್ಷ ಆಗಿತ್ತು. ಹಳೇ ಮೈಸೂರು ರಾಜ್ಯದಲ್ಲಿ ೧೮೬೮-೭೬ರ ಅವಧಿಯಲ್ಲಿ ಸುಮಾರು ೬೨ ಬ್ಯಾಂಕಿಂಗ್ ಕಂಪನಿಗಳು ಅಸ್ತಿತ್ವದಲ್ಲಿದ್ದವು. ಅವುಗಳ ಪೈಕಿ ಸುಮಾರು ೨೫ ಕಂಪನಿಗಳು ಬೆಂಗಳೂರು ನಗರ ಮತ್ತು ದಂಡು ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ದಂಡುಪ್ರದೇಶವು ಅಂದು ಬಹು ವ್ಯಾಪಕವಾಗಿ ನಡೆಯುತ್ತಿದ್ದ ಖಾಸಗಿ ಸಾವುಕಾರರ ಲೇವಾದೇವಿಗಾರರ ಕೇಂದ್ರವಾಗಿತ್ತು. ಈ ಬ್ಯಾಂಕುಗಳ ಹೆಸರುಗಳು ತುಂಬಾ ವೈವಿಧ್ಯಮಯವಾಗಿದ್ದು ಅಂದು ಹೆಚ್ಚು ಪ್ರಚಲಿತ ಇದ್ದ ಜಾತಿ, ಧರ್ಮ, ವ್ಯಕ್ತಿ ನಾಮ ಸೂಚಕವಾಗಿದ್ದವು. ಉದಾ :–ಧನಾಭಿವೃದ್ಧಿ ಬ್ಯಾಂಕ್ (೧೮೭೨), ಕಲ್ಯಾಣಪುರಿ ಬ್ಯಾಂಕ್ (೧೮೭೩), ಮುರಹರ ಸ್ವಾಮಿ ಬ್ಯಾಂಕ್, ಮನೋರಂಜನಿ ಬ್ಯಾಂಕ್ (೧೮೭೪), ಅಲಸೂರು ಜನೋಪಕಾರಿ ಬ್ಯಾಂಕ್ (೧೮೭೪), ಅಲಸೂರು ಹಿಂದು ದ್ರವ್ಯ ಪೋಷಿಣಿಸಂಘ (೧೮೭೫) ಇತ್ಯಾದಿ.

೧೮೭೦-೧೯೪೭ರ ಅವಧಿಯಲ್ಲಿ ಮೈಸೂರು ನಗರದಲ್ಲಿ ೧೨ ಹೊಸ ಬ್ಯಾಂಕಿಂಗ್ ಕಂಪನಿಗಳ ಮೂಡಿ ಬಂದವು. ನಗರದಲ್ಲಿ ಹೆಚ್ಚುತ್ತಿರುವ ಬ್ಯಾಂಕುಗಳ ಸಂಖ್ಯೆ ಒಂದು ರೀತಿಯಲ್ಲಿ ಅನಾರೋಗ್ಯಕರ ವ್ಯವಹಾರ ಪೈಪೋಟಿಯನ್ನು ಉಂಟುಮಾಡಿತ್ತು. ಬ್ಯಾಂಕುಗಳು ವಿಧಿಸುತ್ತಿದ್ದ ಬಡ್ಡಿದರಗಳಲ್ಲಿ ಬಹಳ ಪೈಪೋಟಿ ಇತ್ತು. ಅನೇಕ ಬ್ಯಾಂಕುಗಳು ಸಾಕಷ್ಟು ಸ್ವಂತ ಬಂಡವಾಳದ ಕೊರತೆಯಿಂದ, ತೀವ್ರ ಪೈಪೋಟಿಯಿಂದ, ಬಂಡವಾಳವನ್ನು ಸಮರ್ಪಕ ರೀತಿಯಿಂದ ವಿನಿಯೋಗಿಸದೇ ಇರುವದರಿಂದ ಬೇಗನೇ ಅವಸಾನ ಹೊಂದಬೇಕಾಯಿತು. ಅಂದಿನ ಮೈಸೂರು ರಾಜ್ಯದಲ್ಲಿ ಬ್ಯಾಂಕಿಂಗ್ ವ್ಯವಹಾರ ಕೇವಲ ಬೆಂಗಳೂರು ಮೈಸೂರಿಗೆ ಸೀಮಿತವಾಗಿರದೇ ಇತರೇ ಪ್ರದೇಶಗಳಿಗೂ ವ್ಯಾಪಿಸಿತ್ತು. ಅಂದಿನ ಕೋಲಾರ ಜಿಲ್ಲೆಯಲ್ಲಿ ೨೯, ತುಮಕೂರು ಜಿಲ್ಲೆಯಲ್ಲಿ ೭ ಬ್ಯಾಂಕುಗಳು ಇದ್ದವು. ಚಿಕ್ಕಪಟ್ಟಣ ಪ್ರದೇಶಗಳಾದ ಚಿಕ್ಕಬಳ್ಳಾಪುರ, ಕಮ್ಮಸಂದ್ರ, ಗುಡಿಬಂಡೆ, ಶಿಡ್ಲಘಟ್ಟ, ಮಾಲೂರು, (ಎಲ್ಲವೂ ಕೋಲಾರ ಜಿಲ್ಲೆ), ಕ್ಯಾತಸಂದ್ರ, ಮಾಗಡಿ ಮುಂತಾದ ಸ್ಥಳಗಳಲ್ಲಿ ಸ್ಥಳೀಯ ವರ್ತಕರು ತಮ್ಮದೇ ಆದ ಬ್ಯಾಂಕುಗಳನ್ನು ರಚಿಸಿಕೊಂಡಿದ್ದರು.

ಮೈಸೂರು ಜಿಲ್ಲೆಯ ವಿವಿಧ ನಗರಗಳಲ್ಲಿ ಸುಮಾರು ೨೫ ವರ್ಷಗಳ ಅವಧಿಯಲ್ಲಿ (೧೮೮೫-೧೯೦೮) ೧೬ ಬ್ಯಾಂಕಿಂಗ್ ಕಂಪನಿಗಳು ಮೂಡಿ ಬಂದವು. ರಾಜಧಾನಿ ಬ್ಯಾಂಕ್, ಮೈಸೂರು (೧೮೭೫) ಮತ್ತು ಟೌನ ಬ್ಯಾಂಕ್, ಮೈಸೂರು (೧೮೭೫) ಇವು ಮೈಸೂರು ನಗರದ ಪ್ರಾರಂಭದ ಬ್ಯಾಂಕುಗಳು.

ಹಳೇ ಮೈಸೂರಿನಲ್ಲಿ ದೀರ್ಘಕಾಲ ಸೇವೆಸಲ್ಲಿಸಿ ಮುಂದೆ ಬೇರೆ ಬ್ಯಾಂಕುಗಳೊಂದಿಗೆ, ವಿಲಿನವಾದ ಬ್ಯಾಂಕುಗಳಲ್ಲಿ ೧೮೭೦ರಲ್ಲಿ ಪ್ರಾರಂಭಿಸಲ್ಪಟ್ಟ 'ಚಿತ್ರದುರ್ಗ ಸೇವಿಂಗ್ಸ ಬ್ಯಾಂಕು' ಪ್ರಮುಖವಾದುದು. ಸದರಿಬ್ಯಾಂಕ್ ೯೬ ವರ್ಷಗಳ ಸುದೀರ್ಘ ಸೇವೆಯ ನಂತರ ೧೯೬೬ರಲ್ಲಿ ಕರ್ನಾಟಕ ಬ್ಯಾಂಕ್‌ನೊಂದಿಗೆ ವಿಲೀನವಾಯಿತು. ಅದರಂತೆ ೧೮೮೫ರಲ್ಲಿ ಪ್ರಾರಂಭವಾದ ನಂಜನಗೂಡಿನ ಶ್ರೀಕಂಠೇಶ್ವರ ಬ್ಯಾಂಕು ೮ ದಶಕಗಳ ದೀರ್ಘ ಸೇವೆಯ ನಂತರ ೧೮೬೫ರಲ್ಲಿ ಮುಚ್ಚಿ ಹೋಯಿತು.

## ಏಕೀಕೃತ ಕರ್ನಾಟಕದ ಕಲ್ಪನೆ ;

ಏಕೀಕೃತ ಕರ್ನಾಟಕದ ಕಲ್ಪನೆ ಸ್ವಾತ್ರಂತ್ರ್ಯಾ ನಂತರದ ದಶಕಗಳಲ್ಲಿ ಹೆಚ್ಚು ಬಲಗೊಂಡರೂ, ಸುಮಾರು ಒಂದು ಶತಮಾನದ ಹಿಂದೆಯೇ ಅಂದಿನ ವರ್ತಕ ಸಮುದಾಯವು ತಾವು ಪ್ರವರ್ತಿಸಿದ ಅನೇಕ

ಬ್ಯಾಂಕುಗಳಿಗೆ "ಕರ್ನಾಟಕ" ಎಂದು ನಾಮಕರಣ ಮಾಡಿ ಸಮಗ್ರ ಕರ್ನಾಟಕತ್ವದ ಭಾವೈಕ್ಯತೆಯ ವಿಶಾಲ ತಳಹದಿಯನ್ನು ಹಾಕಿದ್ದರು ಎಂಬುದನ್ನು ಕಾಣಬಹುದು. ಉದಾ :-೧೮೬೯ರಲ್ಲಿ ಬೆಂಗಳೂರಿನ ಒಂದು ಬ್ಯಾಂಕು, ತುಮಕೂರು, ಕೋಲಾರ, ಶಿಡ್ಲಘಟ್ಟಗಳಲ್ಲಿ ೧೮೭೪ರಲ್ಲಿ ಪ್ರಾರಂಭಿಸಲಾದ ಹಲವು ಬ್ಯಾಂಕುಗಳು ತಮ್ಮ ಹೆಸರನ್ನು 'ಕರ್ನಾಟಿಕ್' ಎಂದು ಇಟ್ಟುಕೊಂಡದ್ದನ್ನು ಕಾಣಬಹುದು.

## ವ್ಯವಸಾಯ ಬ್ಯಾಂಕುಗಳು :

ಹಳೇ ಮೈಸೂರು ಪ್ರದೇಶದ ಬ್ಯಾಂಕಿನ ಇತಿಹಾಸ ಇತರೇ ಪ್ರದೇಶಗಳಿಗಿಂತ ತೀರಾಭಿನ್ನವಾದದು. ಮಾದರಿ ಮೈಸೂರು ಎಂದು ಹೆಸರಾಗಿದ್ದ ಈ ಪ್ರಾಂತ್ಯದಲ್ಲಿ ಸಹಕಾರಿ ಆಂಧೋಲನವು ೧೯೦೪ರಲ್ಲಿ ಕಾನೂನು ಬದ್ಧವಾಗಿ ಆರಂಭವಾಗುವ ಒಂದು ದಶಕಕ್ಕೆ ಮೋದಲೇ ಅಂದರೆ ೧೮೯೪ ರಲ್ಲಿ ಸಹಕಾರಿ ತತ್ವ ಮತ್ತು ಕೂಡು ಬಂಡವಾಳ ಸಂಸ್ಥೆಗಳ (ಕಂಪನಿ) ತತ್ವಗಳನ್ನು ಸಮೀಕರಿಸಿಕೊಂಡು "ವ್ಯವಸಾಯ ಬ್ಯಾಂಕು" ಎಂಬ ವಿಶೇಷ ಮಾದರಿಯ 'ಮಿಶ್ರತಳಿಯ' ಬ್ಯಾಂಕುಗಳನ್ನು ಗ್ರಾಮೀಣ ಪ್ರದೇಶದಲ್ಲಿ ಸರ್ಕಾರವೇ ತನ್ನ ಬಂಡವಾಳ ತೊಡಗಿಸಿ ಪ್ರಾರಂಭಿಸಿತ್ತು. ಈ 'ಅರೆ ಸಹಕಾರಿ' ಮತ್ತು 'ಅರೆ ಕಂಪನಿ' ವ್ಯವಸ್ಥೆಯನ್ನು ಮೈಗೂಡಿ ಕೊಂಡ ಮಿಶ್ರತಳಿಯ ಬ್ಯಾಂಕುಗಳ ಮೂಲೋದ್ದೇಶ ಚಿಕ್ಕ ಪುಟ್ಟ ಹಿಡುವಳಿದಾರರಿಗೆ ಕಡಿಮೆ ಬಡ್ಡಿದರದಲ್ಲಿ ಸಾಲ ಸೌಲಭ್ಯದ ನೆರವು ಒದಗಿಸುವದು. ಈ ರೀತಿಯ ಪ್ರಥಮ ಬ್ಯಾಂಕು ೧೮೯೪ ಡಿಸೆಂಬರನಲ್ಲಿ ಶ್ರೀರಂಗ ಪಟ್ಟಣದ ಪಲಹಳ್ಳಿಯಲ್ಲಿ ಪ್ರಾರಂಭಿಸಲ್ಪಟ್ಟಿತು ; ಎರಡನೆಯ ಬ್ಯಾಂಕ್ ೧೮೯೭ರಲ್ಲಿ ನಂಜನಗೂಡಿನಲ್ಲಿ ಪ್ರಾರಂಭವಾಯಿತು. ೧೯೧೧ರ ಸುಮಾರಿಗೆ ಮೈಸೂರು ರಾಜ್ಯದಲ್ಲಿ ಇಂತಹ ೬೪ ಬ್ಯಾಂಕುಗಳು ೩೦೦೦ ಸದಸ್ಯರೊಂದಿಗೆ ಕಾರ್ಯರಂಭ ಮಾಡಿದ್ದವು. ಆದರೆ ೧೯೩೦ರ ಸುಮಾರಿಗೆ ಸರ್ಕಾರ ಈ ಎಲ್ಲಾ ಬ್ಯಾಂಕುಗಳನ್ನು ಮುಚ್ಚಬೇಕಾಯಿತು ಕಾರಣ ದೊಡ್ಡ ಹಿಡುವಳಿದಾರರು ಮತ್ತು ಶ್ರೀಮಂತ ಸದಸ್ಯರು ಈ ಬ್ಯಾಂಕಿನ ಸುಲಭ ಬಡ್ಡಿಯ ಸಾಲವನ್ನು ವ್ಯಾಪಕವಾಗಿ ಪಡೆದು, (ಶೇ ೫ರ ದರದಲ್ಲಿ) ಹೊರಗೆ ಹೆಚ್ಚಿನ ಬಡ್ಡಿಗೆ ಸಾಲ ನೀಡಿ, ತಾವು ಪಡೆದ ಸಾಲವನ್ನು ಮರುಪಾವತಿ ಮಾಡದೆ ಹೋದರು. ಇದರಿಂದ ಜನಸಾಮಾನ್ಯರಿಗೆ ಮುಂದೆ ಸಾಲ ದೊರೆಯದೇ ಹೋಯಿತು. ಈ ಬ್ಯಾಂಕುಗಳಿಗೆ ಸರ್ಕಾರ ಶೇ ೪ರ ದರದಲ್ಲಿ ಸಾಲವನ್ನು ಒದಗಿಸುತ್ತಿತ್ತು.

## ದಕ್ಷಿಣ ಕನ್ನಡ :

ಭಾರತೀಯ ಆಧುನಿಕ ಬ್ಯಾಂಕಿಂಗ್ ಇತಿಹಾಸಕ್ಕೆ ಈ ಜಿಲ್ಲೆಯ ಕೊಡುಗೆ ಅಪೂರ್ವ ಮತ್ತು ಅಪಾರವಾದದ್ದು. ಈ ಜಿಲ್ಲೆಯ ಬ್ಯಾಂಕಿಂಗ್ ವ್ಯವಸ್ಥೆ ಬಹುಮಟ್ಟಿಗೆ ಮದ್ರಾಸ ಪ್ರಾಂತೀಯ ಬ್ಯಾಂಕಿಂಗ್ ವ್ಯವಸ್ಥೆಯೊಂದಿಗೆ ನಡೆದುಕೊಂಡು ಬಂದಿತ್ತು ಎಂದು ಹೇಳಬಹುದು. ಅಲ್ಲಿಯ ಪ್ರಾರಂಭದ 'ಚಿಟ್ಸ್, ನಿಧಿ, ಫಂಡ್ಸ್' ಮುಂತಾದ ಹಣಕಾಸು ಸಂಸ್ಥೆಗಳು ಮುಂದೆ ಆಯಾ ಸಮುದಾಯದವರ ಬ್ಯಾಂಕುಗಳಾಗಿ ಪರಿವರ್ತಿತವಾದವು. ಸ್ವಾತಂತ್ರ ಪೂರ್ವದ ನಾಲ್ಕು ದಶಕಗಳಲ್ಲಿ ಅಂದರೆ ೧೯೦೬ ರಿಂದ ೧೯೪೫ರ ಅವಧಿಯಲ್ಲಿ ಈ ಜಿಲ್ಲೆಯಲ್ಲಿ ಸುಮಾರು ೨೨ ವಿವಿಧ ಗಾತ್ರದ ಬ್ಯಾಂಕುಗಳು ಮೂಡಿ ಬಂದವು. ರಾಜ್ಯದಲ್ಲಿ ಹುಟ್ಟಿ ಬೆಳೆದ ಸುಮಾರು ೧೦೦ ಬ್ಯಾಂಕುಗಳಲ್ಲಿ ೨೨ ಈ ಜಿಲ್ಲೆಯಲ್ಲಿ ಹುಟ್ಟಿವೆ ಎಂದರೆ ಈ ಜಿಲ್ಲೆಯ ಜನತೆಯ ಉಳಿತಾಯ ಮನೋಭಾವನೆ, ವ್ಯವಹಾರ ಸಂಘಟನಾ ಶಕ್ತಿ, ಕಾರ್ಯ ದಕ್ಷತೆ, ವ್ಯವಹಾರ ಕುಶಲತೆಯನ್ನು ಯಾರಾದರೂ ಮೆಚ್ಚುವಂತಹದು. ಭಾರತದಲ್ಲಿ ಅತೀ ಹೆಚ್ಚಿನ ಸಂಖ್ಯೆಯಲ್ಲಿ ಬ್ಯಾಂಕುಗಳಿಗೆ ಜನ್ಮ ಇತ್ತ ಮೂರು ಜಿಲ್ಲೆಗಳಲ್ಲಿ ಇದೂ ಒಂದು (ಉಳಿದೆರಡು ತಮಿಳುನಾಡಿನ ಕೊಯಮತ್ತೂರು ಮತ್ತು ಕೇರಳದ ತ್ರಿಚೂರು)

೧೯೦೬ರಲ್ಲಿ ಪ್ರಸಿದ್ಧ ಧಾರ್ಮಿಕ ಕ್ಷೇತ್ರ, ಅಷ್ಠ ಮಠಗಳ ಕೇಂದ್ರ ಉಡುಪಿಯಲ್ಲಿ ಜಿಲ್ಲೆಯ ಪ್ರಥಮ ಬ್ಯಾಂಕು ಇಂದಿನ ಕಾರ್ಪೊರೇಶನ್ ಬ್ಯಾಂಕ್ (ಅಂದಿನ ಕೆನರಾ ಬ್ಯಾಂಕಿಂಗ್ ಕಾರ್ಪೊರೇಷನ್) ಪ್ರಾರಂಭವಾಯಿತು. ಇದಾದ ಒಂದು ತಿಂಗಳ ನಂತರ ಮಂಗಳೂರಿನಲ್ಲಿ ಇಂದಿನ ಕೆನರಾ ಬ್ಯಾಂಕ್ ಪ್ರಾರಂಭವಾಯಿತು. ಅದರ ಪ್ರಾರಂಭದ ಹೆಸರು "ಕೆನರಾ ಹಿಂದು ಪರ್ಮನೆಂಟ್ ಫಂಡ್", ಬ್ಯಾಂಕುಗಳನ್ನು ಪ್ರವರ್ತಿಸುವಲ್ಲಿ ಉಡುಪಿ ಮತ್ತು ಮಂಗಳೂರುಗಳಲ್ಲಿ ಒಂದು ರೀತಿಯ ಪೈಪೋಟಿ ಇದ್ದುದಾಗಿ ಕಂಡು ಬರುವದು. ಗ್ರಾಮೀಣ ಪ್ರದೇಶದಲ್ಲಿ ಬ್ಯಾಂಕಿಂಗ್

ಸೇವೆಯನ್ನು ವಿಸ್ತರಿಸುವಲ್ಲಿ ಮತ್ತು ಅಲ್ಪ, ಮಧ್ಯಮ ಆದಾಯ ವರ್ಗದವರಲ್ಲಿ ಉಳಿತಾಯ ಮನೋಭಾವನೆಯನ್ನು ಪ್ರೇರೇಪಿಸುವಲ್ಲಿ ಈ ಜಿಲ್ಲೆಯ ಬ್ಯಾಂಕುಗಳು ಮಾದರಿಯಾಗಿದ್ದವು ಎಂದು ಹೇಳಬಹುದು. ಗ್ರಾಮೀಣ ಪ್ರದೇಶದ ಬ್ಯಾಂಕುಗಳ ನಿರ್ವಾಹಣಾ ವೆಚ್ಚವನ್ನು ಗಣನೀಯ ಪ್ರಮಾಣದಲ್ಲಿ ತಗ್ಗಿಸಲು ಸಹಾಯಕವಾಗುವಂತೆ ಪ್ರಾರಂಭದಲ್ಲಿ ಹಳ್ಳಿಯ ಶಾಲೆಯ ಅದ್ಯಾಪಕರನ್ನು ಕಮಿಶನ್ ಆಧಾರದ ಮೇಲೆ ಈ ಕೆಲಸಕ್ಕೆ ಏಜೆಂಟರೆಂದು ನಿಯಮಿಸಲಾಯಿತು. ಅಂದಿನ ಅದ್ಯಾಪಕರು ಮೂರು ಬಗೆಯ ಲೆಖ್ಖಗಳನ್ನು ಇಡಬೇಕಾಗುತ್ತಿತ್ತು ಎಂದು ತಿಳಿದವರು ಹೇಳುವರು (ತ್ರಿ ಇನ್ ಒನ್) ಶಾಲೆಯ ಲೆಖ್ಖ, ಬ್ಯಾಂಕಿನ ಲೆಖ್ಖ ಮತ್ತು ಸ್ಥಳಿಯ ಅಂಚೆಕಛೇರಿ ಲೆಖ್ಖ.

**ಬೊಂಬಾಯಿ ಕರ್ನಾಟಕ :**

ಬೊಂಬಾಯಿ ಕರ್ನಾಟಕದ ಮಟ್ಟಿಗೆ ಹೇಳುವದಾದರೆ, ಲಭ್ಯ ಇರುವ ದಾಖಲಾತಿಗಳ ಪ್ರಕಾರ ಧಾರವಾಡದಲ್ಲಿ ೧೮೬೩ರಲ್ಲಿ ಪ್ರಾರಂಭಿಸಲಾದ ಬೊಂಬಾಯಿ ಪ್ರೆಸಿಡೆನ್ಸಿ ಬ್ಯಾಂಕಿನ ಶಾಖೆಯೇ ಮೊದಲನೆಯದು. ಮುಂದಿನ ವರ್ಷಗಳಲ್ಲಿ ಅಂದರೆ ೧೮೬೭ ರಲ್ಲಿ ಬೆಳಗಾವಿಯಲ್ಲಿ ೧೮೭೦ರಲ್ಲಿ ಹುಬ್ಬಳ್ಳಿಯಲ್ಲಿ, ಪ್ರೆಸಿಡೆನ್ಸಿ ಬ್ಯಾಂಕಿನ ಶಾಖೆಗಳು ತೆರೆಯಲ್ಪಟ್ಟವು.

ಇಂದಿನ ಕರ್ನಾಟಕದವ್ಯಾಪ್ತಿಯನ್ನು ಗಮನಿಸಿದರೆ ೧೮೬೩ರ ಧಾರವಾಡದ ಬೊಂಬಾಯಿ ಬ್ಯಾಂಕಿನ ಶಾಖೆಯೇರಾಜ್ಯದ ಪ್ರಥಮ ವಾಣಿಜ್ಯ ಬ್ಯಾಂಕು ಎಂದು ಹೇಳಬಹುದು. ಮುಂದಿನ ವರ್ಷಗಳಲ್ಲಿ ಮದ್ರಾಸ ಪ್ರೆಸಿಡೆನ್ಸಿ ಬ್ಯಾಂಕ್ ಬೆಂಗಳೂರಿನಲ್ಲಿ ೧೮೬೪ರಲ್ಲಿ ಮಂಗಳೂರಿನಲ್ಲಿ ೧೮೬೮ರಲ್ಲಿ ತನ್ನ ಶಾಖೆಗಳನ್ನು ತೆರೆಯಿತು. ಬೊಂಬಾಯಿ ಕರ್ನಾಟಕದಲ್ಲಿ ಬ್ಯಾಂಕಿಂಗ್ ಉದ್ಯಮ ಕರ್ನಾಟಕದ ಇತರೇ ಭಾಗಗಳಿಗಿಂತ ತುಸು ಮೊದಲೇ ರೂಪುಗೊಳ್ಳಲು ಈ ಭಾಗದ ಪ್ರಮುಖ ಬೆಳೆಯಾದ ಹತ್ತಿಯೇ ಮೂಲಕಾರಣ. ೧೮೨೮ ರಿಂದಲೇ ಅಂದಿನ ಬ್ರಿಟೀಷ ಸರ್ಕಾರ ಈ ಭಾಗದ ಹತ್ತಿಯ ವ್ಯಾಪಾರವನ್ನು ಉತ್ತೇಜಿಸಲು ಅನೇಕ ಕ್ರಮ ಕೈಗೊಂಡಿತ್ತು. ೧೮೪೨ ರಿಂದಲೇ ಈ ಭಾಗದಲ್ಲಿ ಅಮೆರಿಕೆಯ ಹತ್ತಿಯನ್ನು ಬೆಳೆಯುವ ಪ್ರಯೋಗದಲ್ಲಿ ಯಶಸ್ಸು ಸಾಧಿಸಲಾಯಿತು,

ಪ್ರೆಸಿಡಿನ್ಸಿ ಬ್ಯಾಂಕಿನ ಧಾರವಾಡ ಶಾಖೆ ಬಹಳ ಕಾಲದವರೆಗೆ ಮುಂದುವರೆಯಲಿಲ್ಲ. ೧೫ ವರ್ಷಗಳ ಸೇವೆಯ ನಂತರ ೧೮೭೮ರಲ್ಲಿ ಅದನ್ನು ಮುಚ್ಚಿ ಅದರ ವ್ಯವಹಾರವನ್ನು ಹುಬ್ಬಳ್ಳಿಗೆ ವರ್ಗಾಯಿಸಲಾಯಿತು. ಹುಬ್ಬಳ್ಳಿ ನಗರವು ಇಂದಿನಂತೆ ಅಂದೂ ಹತ್ತಿಯ ವ್ಯಾಪಾರದ ಪಡಮಾತೆಯ ಸ್ಥಳವಾಗಿತ್ತು. ಬ್ಯಾಂಕು ಠೇವಣಿದಾರರಲ್ಲಿ ಹತ್ತಿಯ ವ್ಯಾಪಾರದಲ್ಲಿ ತೊಡಗಿದ್ದ ಯೂರೋಪಿಯನ್ ಕಂಪನಿಗಳು ಬಹು ಮುಖ್ಯವಾಗಿದ್ದವು. ಈ ವರ್ತಕರಿಗೆ ಹುಂಡಿಯ ವ್ಯಾಪಾರ ಸೌಲಭ್ಯವನ್ನು ಒದಗಿಸುವ ಏಕಮೇವ ಉದ್ದೇಶದಿಂದ ಈ ಬ್ಯಾಂಕುಗಳನ್ನು ಪ್ರಾರಂಭಿಸಲಾಗಿತ್ತು. ೧೮೬೩-೬೫ರ ಅಮೇರಿಕನ್ ಸಿವಿಲ್ ಯುದ್ಧ ಬೊಂಬಾಯಿ ಕರ್ನಾಟಕ ಹತ್ತಿಗೆ ಹಲವು ಬೇಡಿಕೆ ಮತ್ತು ಬೆಲೆಯನ್ನು ಒದಗಿಸಿ ಉತ್ತರ ಕರ್ನಾಟಕದಲ್ಲಿ ಹೊನ್ನಿನ ಹೊಳೆಯನ್ನು ಹರಿಸಿತು ಎಂದು ಹೇಳುವರು. ಅತೀಹೆಚ್ಚಿನ ಹಣದ ಚಲಾವಣೆ ಈ ಭಾಗದ ರೈತರ ಆರ್ಥಿಕ, ಸಾಮಾಜಿಕ ಜೀವನದ ಸ್ಥಿತಿಗತಿ ಮೇಲೆ ತನ್ನದೇ ಆದ ಒಳಿತು ಮತ್ತು ಕೆಡಕಿನ ಪ್ರಭಾವ ಬೀರಿತು. ಬಹುಃ ಇದೇ ಕಾರಣದಿಂದಲೇ 'ಹತ್ತಿಬಿತ್ತಿ ರೈತ ಹಾಳಾದ' ಎಂಬ ಗಾದೆಯು ಮಾತು ರೂಡಿಯಲ್ಲಿ ಬಂದಿರಬಹುದು. ೧೮೭೬-೭೭ರ ಭೀಕರ ಬರಗಾಲ (ದವಗಿಬರ)ದಲ್ಲಿ ಈ ಭಾಗದ ಬ್ಯಾಂಕಿನ ವ್ಯವಹಾರ ತುಂಬಾ ತೊಂದರೆಗೆ ಒಳಗಾಯಿತು. ಈ ಬರಗಾಲದಲ್ಲಿ ಧಾರವಾಡ ಜಿಲ್ಲೆಯ ಜನಸಂಖ್ಯೆ ಸುಮಾರು ೧.೦೬ ಲಕ್ಷ ಕಡಿಮೆ ಆಯಿತು). ಹತ್ತಿಯ ವ್ಯಾಪಾರದಲ್ಲಿ ಉಂಟಾದ ತೀವ್ರ ಹಿಂಜರಿತದಿಂದ ಹುಬ್ಬಳ್ಳಿಯ ಶಾಖೆಯನ್ನು ೧೧ ವರ್ಷದ ನಂತರ ೧೮೮೧ರಲ್ಲಿ ಮುಚ್ಚಲಾಯಿತು. ಪುನ್ಹ ೧೮೮೨ರಲ್ಲಿ ಪ್ರಾರಂಭ ಮಾಡಿ ಎರಡು ವರ್ಷದ ನಂತರ ಶಾಶ್ವತವಾಗಿ ೧೮೮೪ರಲ್ಲಿ ಮುಚ್ಚಲಾಯಿತು. ಹಳೇ ಮೈಸೂರು ಪ್ರದೇಶಕ್ಕೆ ಹೋಲಿಸಿದರೆ ಈ ಭಾಗದಲ್ಲಿ ಸ್ವತಂತ್ರವಾದ ಖಾಸಗಿ ವಲಯದ ಸ್ಥಳೀಯ ವಾಣಿಜ್ಯ ಬ್ಯಾಂಕುಗಳು ಮೂಡಿ ಬಂದದ್ದು 3-4 ದಶಕಗಳ ನಂತರವೇ ಎಂದು ಹೇಳಬಹುದು. ಬೊಂಬಾಯಿ ಕರ್ನಾಟಕದಲ್ಲಿ ಮೊದಲು ಪ್ರಾರಂಭವಾದ ಸ್ಥಳೀಯವಾಣಿಜ್ಯ ಬ್ಯಾಂಕ್ ೧೯೦೮ರಲ್ಲಿ

ಆದಿಲ್ ಶಾಹಿ ನಗರವಾದ ಬಿಜಾಪುರದಲ್ಲಿ (ಯುನಿಯನ್ ಬ್ಯಾಂಕ್ ಆಫ್ ಬಿಜಾಪುರ ಮತ್ತು ಸೊಲಾಪುರ) ಸದರಿ ಬ್ಯಾಂಕ್ ೫೬ ವರ್ಷಗಳ ಸೇವೆಯನಂತರ ೧೯೬೪ರಲ್ಲಿ ಸಾಂಗಲಿ ಬ್ಯಾಂಕಿನೊಂದಿಗೆ ವಿಲೀನವಾಯಿತು. ಧಾರವಾಡ ಜಿಲ್ಲೆಯ ಪ್ರಥಮ ಖಾಸಗಿ ವಲಯದ ಬ್ಯಾಂಕ್ ಪ್ರಾರಂಭವಾದದ್ದು ಐತಿಹಾಸಿಕ ನಗರವಾದ ಹಾನಗಲ್ಲನಲ್ಲಿ ೧೯೨೯ ರಲ್ಲಿ ಶ್ರೀ ಲಕ್ಷ್ಮೀ ಬ್ಯಾಂಕ್.

**ಕನ್ನಡ ಮರಾಠಿ ತುರುಸು :**

ಕರ್ನಾಟಕ ಕಾಲೇಜ್ ಧಾರವಾಡದಲ್ಲಿ ಪ್ರಾರಂಭ ವಾಗುವ ಮುನ್ನ ಅಲ್ಲಿ (M & S M) ಮದ್ರಾಸ ಮತ್ತು ಸದರ್ನ ಮರಾಠಿ ರೇಲ್ವೆಯ ಕಂಪನಿಯ ಕಛೇರಿ ಇತ್ತು. ಅದರ ನೌಕರರಲ್ಲಿ ಹೆಚ್ಚಿನವರು ಮರಾಠಿಗ ರಾಗಿದ್ದರು. ಇವರು ೧೯೦೭ರಲ್ಲಿ ಪ್ರಾರಂಭಿಸಿದ 'ಸದರ್ನ ಮರಾಠಾ ಅರ್ಬನ್' ಸಹಕಾರಿ ಬ್ಯಾಂಕ್ (೧೯೫೬ ರಿಂದ ಮಹಾಲಕ್ಷ್ಮೀ ಬ್ಯಾಂಕ್) ಧಾರವಾಡದ ಮೊದಲನೆಯ ಸಹಕಾರಿ ಬ್ಯಾಂಕ್ ಎಂದು ಹೇಳಬಹುದು. ಮರಾಠಿ ಹೆಸರಿನ ಈ ಬ್ಯಾಂಕ್ ಕನ್ನಡಿಗರ ಕೆಚ್ಚನ್ನು ಕೆರಳಿಸಿತು ಅದರ ಫಲವಾಗಿ ದಿ. ಶಾಂತವೀರಪ್ಪ ಮೆಣಸಿನಕಾಯಿ ಯವರು ೧೯೧೫ರಲ್ಲಿ ಕೆ.ಸಿ.ನೆ. ಬ್ಯಾಂಕ್‌ನ್ನು ಪ್ರಾರಂಭಿಸಿದರು. ಅದರಂತೆ ೧೯೧೪ರಲ್ಲಿ ಧಾರವಾಡದಲ್ಲಿ ರೆಡ್ಡಿ ಬ್ಯಾಂಕನ್ನು ಪ್ರಾರಂಭಿಸಲಾಯಿತು.

೧೯೧೦ರ ವೇಳೆಗೆ ಧಾರವಾಡದಲ್ಲಿ ಧಾರವಾಡ ಬ್ಯಾಂಕ್, ಅಂಕಲಗಿ ಬ್ಯಾಂಕ್, ಜಯಲಕ್ಷ್ಮೀ ಬ್ಯಾಂಕ್ ಕರ್ನಾಟಕ ಇಂಡಸ್ಟ್ರೀಯಲ್ ಬ್ಯಾಂಕ್ ಮುಂತಾದವು ಗಳು ಇದ್ದವೆಂದು ಹಲವು ದಾಖಲೆಗಳು ತಿಳಿಸುತ್ತವೆ. ಆದರೆ ಮುಂದೆ ೧೯೩೦ರ ವಿಶ್ವ ಹಣಕಾಸಿನ ಮುಗಟ್ಟಿನ ದಿನಗಳಲ್ಲಿ ಈ ಬ್ಯಾಂಕುಗಳು ಅವಸಾನಗೊಂಡಂತೆ ತೋರುವದು. ಧಾರವಾಡದ ಅಂಕಲಗಿ ಬ್ಯಾಂಕ್ ಕನಿಷ್ಠ ಒಂದಾಣೆಯ ಠೇವಣಿ ಸ್ವಿಕರಿಸುವ ಮೂಲಕ ಈ ಭಾಗದಲ್ಲಿ 'ಪಿಗ್ಮಿ ಡಿಪಾಜಿಟ್' ಯೋಜನೆಯನ್ನು ಪ್ರಾರಂಭಿಸಿದ್ದು ಕಂಡು ಬರುವದು.

ಹೈದಾರಾಬಾದ ಕರ್ನಾಟಕದಲ್ಲಿ, ರಾಯಚೂರು ಜಿಲ್ಲೆಗೆ ಸಂಬಂಧ ಪಟ್ಟಂತೆ, 'ಚಾವಣಿ ಪಕೀರಪ್ಪ ಪಂಡ್' ಈ ಭಾಗದಲ್ಲಿ ವಾಣಿಜ್ಯ ಬ್ಯಾಂಕುಗಳು ಬೆಳವಣಿಗೆಗೆ ಮೂಲಾಧಾರ ಎಂದು ಹೇಳುವರು. ನೈಜಾಮ ಪ್ರದೇಶ ದಲ್ಲಿ ೧೯೪೧ರ ನಂತರ ಅಂದರೆ ಸ್ಟೇಟ್‌ಬ್ಯಾಂಕ್ ಆಫ್ ಹೈದರಾಬಾದ ಪ್ರಾರಂಭಿಸಿದ ನಂತರ ಬ್ಯಾಂಕಿಂಗ್ ಚಟುವಟಿಕೆಗಳು ತೀವ್ರಗೊಂಡವು. ಕೊಡಗಿನಲ್ಲಿ ಸ್ಥಳಿಯ ಸಹಕಾರಿ ಬ್ಯಾಂಕುಗಳು ಹೆಚ್ಚು ಚಟುವಟಿಕೆ ಗಳಿಂದ ಕೆಲಸ ಮಾಡುತ್ತಿದ್ದರಿಂದ ೧೯೩೪ರ ವರೆಗೆ ಯಾವದೇ ವಾಣಿಜ್ಯ ಬ್ಯಾಂಕ್ ಈ ಜಿಲ್ಲೆಯನ್ನು ಪ್ರವೇಶಿಸಲು ಅನುಕೂಲವಾಗಲಿಲ್ಲ ಎಂದು ತೋರುವದು.

# ಮುಂಬಯಿ ಕರ್ನಾಟಕ : ಪ್ರಾದೇಶಿಕ ಇತಿಹಾಸದ ಆಕರಗಳು ಮತ್ತು ಅವುಗಳ ಅಧ್ಯಯನ

ಡಾ॥ ಶ್ರೀನಿವಾಸ ಹಾವನೂರ

ಈಗಿನ ಕರ್ನಾಟಕ ರಾಜ್ಯದ ನಾಲ್ಕು ಜಿಲ್ಲೆಗಳಾದ ಬಿಜಾಪುರ, [ಬೆಳಗಾವಿ, ಧಾರವಾಡ ಮತ್ತು ಉತ್ತರ ಕನ್ನಡಗಳನ್ನೊಳಗೊಂಡ ಸಣ್ಣ ಪ್ರಾಂತ್ಯವೇ ಮುಂಬಯಿ ಕರ್ನಾಟಕ. ಕ್ರಿ.ಶ. ೧೮೧೮ರ ಬ್ರಿಟಿಷರ ಆಳ್ವಿಕೆಯ ಆರಂಭದಲ್ಲಿ ಮೇಲಿನ ಜಿಲ್ಲೆಗಳನ್ನು ಮುಂಬಯಿ ಪ್ರಾಂತ್ಯಕ್ಕೆ ಸೇರಿಸಿದಾಗ ಈ ಭಾಗಕ್ಕೆ 'ಮುಂಬಯಿ ಕರ್ನಾಟಕ' ಎಂಬ ಹೆಸರು ಬಂದಿತು. (ಉತ್ತರ ಕನ್ನಡ ಕ್ರಿ.ಶ. ೧೮೬೨ರಲ್ಲಿ ಈ ವಿಭಾಗಕ್ಕೆ ಸೇರಿಸಲ್ಪಟ್ಟಿತು). ಕ್ರಿ.ಶ. ೧೯೫೬ರಲ್ಲಿ ರಾಜ್ಯಗಳ ಪುನರ್ರಚನೆಯಾಗುವವರೆಗೂ ಇದೇ ಹೆಸರು ಮುಂದುವರೆಯಿತು.

ಆದಿಲ್‌ಷಾಹಿಗಳ ಪತನ (ಕ್ರಿ.ಶ ೧೬೮೬) ಮತ್ತು ಔರಂಗಜೇಬನ ಮರಣ (ಕ್ರಿ.ಶ. ೧೭೦೭)ಗಳ ನಂತರದ ಪೇಷ್ವಾಯಿ ಕಾಲದಲ್ಲಿಯೇ ಈ ಪ್ರಾಂತ್ಯಕ್ಕೆ ಒಂದು ಅಂಗೀಕೃತ ಅಸ್ತಿತ್ವವಿದ್ದಿತು. ನಂತರ ಕೆಲವು ಕಾಲ ಇದು ಸತಾರ, ಕೊಲ್ಹಾಪುರ ಮತ್ತು ಸಾಂಗ್ಲಿಯ ಮರಾಠಿ ನಾಯಕರ, ಮೈಸೂರು ಅರಸರ ಹಾಗೂ ಕೆಲ ಮಟ್ಟಿಗೆ ನಿಜಾಮರ ವಶದಲ್ಲಿದ್ದಿತು. ಮೇಲಿನ ನಾಯಕರು ಆಗಿಂದಾಗ್ಗೆ ನಡೆಸಿದ ಧಾಳಿಗಳನ್ನು ಈ ಪ್ರಾಂತ್ಯದ ಸ್ವಾದಿ, ಸವಣೂರು, ಕಿತ್ತೂರು ಮುಂತಾದ ಸಂಸ್ಥಾನಿಕರು ಭಾರಿ ಕಪ್ಪ ಕಾಣಿಕೆಗಳನ್ನು ನೀಡಿ, ನಿವಾರಿಸಿಕೊಳ್ಳಬೇಕಿತ್ತು. ತುಂಗಭದ್ರಾ ನದಿಯ ನೈಸರ್ಗಿಕ ತಡೆಯಿಂದಾಗಿ ಮೈಸೂರು ಅರಸರ ಧಾಳಿ ಪರಿಣಾಮಕಾರಿಯಾಗಿರಲಿಲ್ಲ. ಆದರೆ ಮರಾಠರ ಭೌಗೋಲಿಕ ಸಾಮೀಪ್ಯದಿಂದಾಗಿ ಅವರೊಡನೆ ಈ ಪ್ರಾಂತ್ಯದವರ ಒಡನಾಟ ಆಳವಾಗಿಯೇ ಇದ್ದಿತು. ಇಬ್ಬರ ನಡುವೆ ಸಾಮಾಜಿಕ, ಧಾರ್ಮಿಕ ಮತ್ತು ಆಡಳಿತಾತ್ಮಕ ಕೊಡುಪಡೆಗಳು ನಡೆಯುತ್ತಿದ್ದವು. ಅಂತರ್ ಪ್ರಾಂತೀಯ ವಿವಾಹಗಳು ಸಾಮಾನ್ಯವಾಗಿದ್ದು, ಎಷ್ಟೋ ಸಂಸಾರಗಳು ಇತ್ತಿಂದತ್ತ ವಲಸೆ ಹೋದ ಸಂದರ್ಭಗಳೂ ಇದ್ದವು. ಮರಾಠರ ರಾಜಕೀಯ ಪರಮಾಧಿಕಾರದಿಂದ ಮುಂಬಯಿ ಕರ್ನಾಟಕದ ಮೇಲೆ ಅವರ ಪ್ರಭಾವ ತೀಕ್ಷ್ಣವಾಗಿತ್ತು. ಈ ಪ್ರಾಂತ್ಯದ ಸ್ವಾತಂತ್ರ್ಯ ಚಳುವಳಿ ಹಾಗೂ ಸಾಮಾಜಿಕ ಮತ್ತು ಶೈಕ್ಷಣಿಕ ಪುನರುತ್ಥಾನಗಳ ಕಾರಣಪುರುಷರೂ ಆಗರ್‌ಕರ್, ತಿಲಕ್, ರಾನಡೆ ಮತ್ತು ಗೋಖಲೆ ಮುಂತಾದವರೇ ಆಗಿದ್ದರು.

'ಮುಂಬಯಿ ಕರ್ನಾಟಕ' ಎಂಬ ಹಣೆಪಟ್ಟಿ ಈಗ ಈ ಪ್ರಾಂತ್ಯಕ್ಕೆ ಇಲ್ಲವಾದುದರಿಂದ ಕ್ರಿ.ಶ. ೧೭೦೦ ರಿಂದ ೧೯೨೦ರ ತನಕ, ಅಂದರೆ ಪೇಷ್ವೆಯರ ಕಾಲದಿಂದ ತಿಲಕರ ತನಕ ಈ ಪ್ರಾಂತ್ಯದಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ರಂಗಗಳ ಪರಸ್ಪರ ಕೊಡುಪಡೆಯ ಸುದೀರ್ಘ ಅಧ್ಯಯನ ನಡೆಸಬೇಕೆಂದು ಯೋಜಿಸಲಾಗಿದೆ. ಅಧ್ಯಯನ ನಡೆಯಬೇಕಾದ ಕಾಲವನ್ನು ಸ್ಥೂಲವಾಗಿ ಕೆಳಕಂಡಂತೆ ವಿಂಗಡಿಸಬಹುದು ;

ಕ್ರಿ.ಶ. ೧೭೦೦ ರಿಂದ ೧೮೦೦–ಪೇಷ್ವಾಯಿ ಪ್ರಭಾವದ ಕಾಲ

ಕ್ರಿ.ಶ. ೧೮೮೦ ರಿಂದ ೧೮೮೮-ಬ್ರಿಟಿಷರ ಆಳ್ವಿಕೆ (ಪ್ರಥಮ ಘಟ್ಟ)

ಕ್ರಿ.ಶ. ೧೮೮೮ ರಿಂದ ೧೯೨೦- ಪುನರುತ್ಥಾನ (ತಿಲಕರ ಕಾಲ)

ಈ ಪ್ರಾಂತ್ಯದ ಇತಿಹಾಸ ಪುನರ್ರಚನೆಯ ಆಕರ ಗಳನ್ನು ಕೆಳಕಂಡ ರೀತಿ ವಿಂಗಡಿಸಬಹುದು.

೧) ಪತ್ರಾಗಾರ ಇಲಾಖೆಯಲ್ಲಿ ಲಭ್ಯವಿರುವ ಕಾಗದ ಪತ್ರ, ದಾಖಲೆಗಳು (ಮೋಡಿ ಲಿಪಿಯ ಮರಾಠಿ ದಾಖಲೆಗಳು ಹಾಗೂ ಇಂಗ್ಲಿಷ್, ಕನ್ನಡ, ಪರ್ಶಿಯನ್ ಮತ್ತು ಕೆಲವು ಐರೋಪ್ಯ ಭಾಷೆ ಗಳ ದಾಖಲೆಗಳು)

೨) ಸಾಹಿತ್ಯಕ ಕೃತಿಗಳು (ಕನ್ನಡ ಮತ್ತು ಮರಾಠಿ)

೩) ಬಖೈರುಗಳು/ಖೈಫೀಯತ್‌ಗಳು

೪) ಜಾನಪದ ಸಂಪ್ರದಾಯಗಳು

೫) ವಂಶಾವಳಿ (ವಂಶಗಳ ಹೆಸರುಗಳು, ಹೊಸ ಸ್ಥಳ ನಾಮಗಳು)

೬) ಚರಿತ್ರಪೂರ್ವ ಮಾನವ ನಿರ್ಮಾಣಗಳು

೭) ವಾಸ್ತುಶಿಲ್ಪ ಉಳಿಕೆಗಳು

೮) ವಾಚಿಕ ಇತಿಹಾಸ

ಆಡಳಿತ, ಕಲೆ ಮತ್ತು ವಾಸ್ತುಶಿಲ್ಪ, ವಾಣಿಜ್ಯ ಮತ್ತು ಆರ್ಥಿಕ ಪರಿಸ್ಥಿತಿ, ಭಾಷೆ ಮತ್ತು ಸಾಹಿತ್ಯ, ಸೇನಾ ವ್ಯವಸ್ಥೆ, ಧಾರ್ಮಿಕ ಕಟ್ಟುಪಾಡು, ಸಾಮಾಜಿಕ ನೀತಿ, ಇವುಗಳ ಸಂಬದ್ಧತೆ—ಈ ದಿಶೆಯಲ್ಲಿ ಆಕರಗಳನ್ನು ಪತ್ತೆ ಹಚ್ಚಿ ದಾಖಲಿಸಲು ಉದ್ದೇಶಿಸಲಾಗಿದೆ. ಇದು ಮಾಮೂಲು ದಾಖಲಿಕೆಯಾಗಿರದೆ, ಮುಂಬಯಿ ಕರ್ನಾಟಕ ಪ್ರಾಂತ್ಯದ ಅಧ್ಯಯನ ಮಾಹಿತಿಯ ಪ್ರಾಮುಖ್ಯತೆಯ ಉಲ್ಲೇಖವೆಂಬುದು ಗಮನಾರ್ಹ. ಮೇಲಿನ ಮಾಹಿತಿ ಅಗಾಧವಾಗಿದ್ದು, ಗೌಣವೆಂಬಂತೆ ಕಾಣುವ ವಿಷಯಗಳೂ ತತ್ಕಾಲಕ್ಕೆ ಲಭ್ಯವಾಗಲು, ಅವು ಗಳನ್ನು ಗಣಕ ಯಂತ್ರದಲ್ಲಿ ಶೇಖರಿಸಿಡಲು ಉದ್ದೇಶಿಸ ಲಾಗಿದೆ.

ಆಡಳಿತಾತ್ಮಕ ದೃಷ್ಟಿಯಿಂದ ಮಾತ್ರ ಸೃಷ್ಟಿಯಾದ ನಾಲ್ಕು ಜಿಲ್ಲೆಗಳಿಗೇ ಈ ಅಧ್ಯಯನ ಸೀಮಿತವಾಗಿದ್ದರೂ ನೆರೆಯ ಪ್ರಾಂತ್ಯಗಳಾದ ಸೊಲ್ಲಾಪುರ, ಗುಲ್ಬರ್ಗ, ಚಿತ್ರದುರ್ಗ, ಗೋವಾ ಹಾಗೂ ದಕ್ಷಿಣ ಕನ್ನಡಗಳಿಗೆ ಈ ಪ್ರಾಂತ್ಯ ನಿಕಟವಾಗಿದ್ದುದರಿಂದ ಮೇಲಿನ ಸ್ಥಳಗಳ ಬಗ್ಗೆ ಲಭ್ಯವಿರುವ ಆಕರಗಳ ಶೋಧನೆ ಹಾಗೂ ಅಧ್ಯಯನಗಳೂ ಇಲ್ಲಿ ಸೇರಿವೆ.

ಆಕರಗಳು ಲಭ್ಯವಿರುವ ಸ್ಥಳಗಳೆಂದರೆ :

೧) ಪುಣೆ, ಮುಂಬಯಿ, ಬೆಂಗಳೂರು ಮತ್ತು ಮೈಸೂರುಗಳಲ್ಲಿನ ರಾಜ್ಯ ಪತ್ರಾಗಾರಗಳು (ಪುಣೆಯ ಪೇಷ್ವಾಯಿ ದಫ್ತರುಗಳು ಮುಖ್ಯ)

೨) ದೆಹಲಿ ಮತ್ತು ಕಲ್ಕತ್ತಾಗಳ ಕೇಂದ್ರ ಪತ್ರಾಗಾರ ಗಳು.

೩) ಹೊರದೇಶದ ಪತ್ರಾಗಾರಗಳು – ಬ್ರಿಟಿಷ್ ಗ್ರಂಥಾಲಯ, ಲಂಡನ್.
(ಇಲ್ಲಿನ ಓರಿಯಂಟಲ್ ಕಲೆಕ್ಷನ್ ಮತ್ತು ಇಂಡಿಯಾ ಆಫೀಸ್ ಲೈಬ್ರರಿ), ಆಕ್ಸ್‌ಫರ್ಡ್, ಕೇಂಬ್ರಿಡ್ಜ್ ಮತ್ತು ಎಡಿನ್‌ಬರೋಗಳ ವಿಶ್ವ ವಿದ್ಯಾಲಯ ಗ್ರಂಥಾಲಯಗಳು.

೪) ಕೊಲ್ಲಾಪುರ, ರಾಮದುರ್ಗ ಮುಂತಾದೆಡೆಗಳ ಸಂಸ್ಥಾನಿಕರ ಸಂಗ್ರಹಗಳು.

೫) ಖಾಸಗಿ ಸಂಗ್ರಹಗಳು.

೬) ಮುಂಬಯಿ ಸರಕಾರದ ಇನಾಂ ಕಮಿಷನ್ ನಡ ವಳಿಕೆಗಳು.

೭) ವಿಶ್ವವಿದ್ಯಾಲಯ ಗ್ರಂಥಾಲಯಗಳಲ್ಲಿ ಲಭ್ಯವಿರುವ ಆಡಳಿತ ವರದಿಗಳು ಗ್ಯಾಸೆಟಿಯರ್ ಮುಂತಾದ ಮುದ್ರಿತ ಸಾಮಗ್ರಿ.

**ಮುಂದುವರೆಯುವ ವಿಧಾನ :**

ಮೊದಲನೆಯ ಹಂತ : ಮುಂಬಯಿ, ಪುಣೆ, ಬೆಂಗಳೂರು, ಮೈಸೂರು, ನವದೆಹಲಿ ಮತ್ತು ಕಲ್ಕತ್ತಗಳಲ್ಲಿ ಲಭ್ಯವಿರುವ ಪುಸ್ತಕಗಳು, ವರದಿಗಳು ಹಾಗೂ ಪತ್ರಿಕೆಗಳೇ ಮುಂತಾದ ಮುದ್ರಿತ ಸಾಮಗ್ರಿಯ ಪರಿಶೀಲನೆ.

ಎರಡನೆಯ ಹಂತ : ಮುಂಬಯಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ಮೇಲ್ಕಂಡ ಸ್ಥಳಗಳಲ್ಲಿನ ದಾಖಲೆ ಪರಿಶೀಲನೆಗಾಗಿ ಆಯಾಯ ಸ್ಥಳಗಳ ಪತ್ರಾಗಾರಗಳ ಭೇಟಿ.

ಮೂರನೆಯ ಹಂತ : ಕನ್ನಡ ಹಾಗೂ ಮರಾಠಿ ಸಾಹಿತ್ಯ ಕೃತಿಗಳನ್ನು, ಪ್ರವಾಸ ಕಥನಗಳನ್ನೂ ಬಖೈರುಗಳು ಮತ್ತು ಖೈಫಿಯತ್‌ಗಳನ್ನು ಕೂಲಂಕಷವಾಗಿ ಪರಿಶೀಲಿಸುವುದು.

ನಾಲ್ಕನೆಯ ಹಂತ : ಐತಿಹಾಸಿಕ ಘಟನಾವಳಿಗಳನ್ನು ಒದಗಿಸುವ ಲಾವಣಿಗಳೇ ಮುಂತಾದ ಜಾನಪದ ಸಾಹಿತ್ಯದ ಪರಾಮರ್ಶೆ.

ಐದನೆಯ ಹಂತ : ವಲಸೆಗಳ ಬಗ್ಗೆ ಮಾಹಿತಿ ನೀಡುವ ವಂಶಗಳ ಕುಲನಾಮಗಳನ್ನು ಪತ್ತೆ ಮಾಡುವುದು.

ಆರನೆಯ ಹಂತ : ಕೆಲವು ಹಿರಿಯ ವ್ಯಕ್ತಿಗಳನ್ನು ಸಂದರ್ಶಿಸಿ ತನ್ಮೂಲಕ ಅವರವರ ವಂಶ ಚರಿತ್ರೆಯನ್ನೂ ಜೀವನದ ಪ್ರಮುಖ ಘಟನೆಗಳನ್ನೂ ಹಿಂದಿನ ಸಾಮಾಜಿಕ ಸಂಪರ್ಕಗಳನ್ನೂ ಅರಿಯುವುದು.

ಏಳನೆಯ ಹಂತ : ಈ ರೀತಿ ಸಂಗ್ರಹಿಸಿದ ಮಾಹಿತಿಯ ಗ್ರಂಥ ವಿವರಣಾ ಪಟ್ಟಿ, ಅಪರೂಪ ಪದಗಳು ಮತ್ತು ಪ್ರಮುಖ ಐತಿಹಾಸಿಕ ವಿಷಯಗಳನ್ನು ಕ್ರೋಢೀಕರಿಸುವುದು.

ಎಂಟನೆಯ ಹಂತ : ಮುಖ್ಯ ದಾಖಲೆಗಳ ಪರಿಶೀಲನೆಗಾಗಿ ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿ ಅಂಡ್ ರೆಕಾರ್ಡ್ಸ್, ಹಾಗೂ ಇತರೆ ಬ್ರಿಟಿಷ್ ಗ್ರಂಥಾಲಯಗಳ ಭೇಟಿ.

## ಸಾರಾಂಶ

ಈ ಯೋಜನೆ ಪೂರ್ಣಗೊಂಡಾಗ ಇತಿಹಾಸ ಅಧ್ಯಯನದ ವಿಧಾನಶಾಸ್ತ್ರದ ಕೆಲವು ಪ್ರಮುಖ ಅಂಶಗಳು ಬೆಳಕಿಗೆ ಬರುತ್ತವೆ–ಅವೆಂದರೆ :

ಅ) ಒಂದು ಸಣ್ಣ ಪ್ರಾಂತ್ಯದ ಅನನ್ಯತೆ ಸ್ಫುಟವಾಗಿ ಚಿತ್ರಿತವಾಗುವಂತೆ ಅದರ ಚರಿತ್ರೆಯ ಪುನರ‍್ರಚನೆ.

ಆ) ಸ್ಥಳೀಯ ಇತಿಹಾಸದ ಪ್ರಬಲ ಮೂಲಗಳಾದ ಸಣ್ಣ ನಾಯಕರ ಹಾಗೂ ಸಂಸ್ಥಾನಿಕರ ಚರಿತ್ರೆ ರೂಪಗೊಳ್ಳುವುದು.

ಇ) ನೆರೆ ರಾಜ್ಯಗಳ ಸಾಮಾಜಿಕ ಕೊಡುಪಡೆಯ ಸವಿವರ ಅಧ್ಯಯನ.

ಈ) ಅಸಾಂಪ್ರದಾಯಿಕ ಆಕರಗಳಲ್ಲಿನ ಮಾಹಿತಿಯನ್ನು ನಿಖರವಾಗಿ ಗುರ್ತಿಸುವ ಕ್ರಮದ ಮನವರಿಕೆ.

ಉ) ಪತ್ರಾಗಾರ ದಾಖಲೆಗಳ ಅಧ್ಯಯನವನ್ನು ತ್ವರಿತಗೊಳಿಸುವಿಕೆ.

ಊ) ಐತಿಹಾಸಿಕ ಮಾಹಿತಿಯ ರಕ್ಷಣೆ ಹಾಗೂ ವ್ಯವಸ್ಥಿತ ಅಧ್ಯಯನಕ್ಕಾಗಿ ಗಣಕ ಯಂತ್ರದ ಬಳಕೆ.

ಋ) ಒಂದು ಭಾಷೆಯಲ್ಲಿ ನಡೆದಿರುವ ಅಧ್ಯಯನವನ್ನು ಅನ್ಯ ಭಾಷೆಯ ಪಂಡಿತರ ಗಮನಕ್ಕೆ ತರುವುದು.

ೠ) ಮುಂದಿನ ಆಳವಾದ ಅಧ್ಯಯನಕ್ಕೆ ಪೂರ್ವಸಿದ್ಧ ಮೂಲಗಳನ್ನು ಒದಗಿಸುವುದು.

(ಕನ್ನಡಾನುವಾದ/ಟಿ.ಜಿ. ನರಸಿಂಹಮೂರ್ತಿ)

# ಗ್ರೀಕ್ ಪ್ರಹಸನದಲ್ಲಿ ಕನ್ನಡ-ತುಳು: ಒಂದು ಪುನರ್ವಿಮರ್ಶೆ

ಪಿ. ಗಣಪಯ್ಯ ಭಟ್

ಈಜಿಪ್ಟ್ ದೇಶದ ಆಕ್ಸಿರಿಂಕಸ್ ಎಂಬಲ್ಲಿ ಕ್ರಿ.ಶ. ೧೮೯೭-೧೯೦೩ರ ನಡುವೆ ನಡೆಸಲಾದ ಉತ್ಖನನದಲ್ಲಿ ಈಜಿಪ್ಟ್ ಇತಿಹಾಸದ ಮೇಲೆ ವಿಶೇಷ ಬೆಳಕು ಬೀರಬಲ್ಲ ಹಲವಾರು ವಲ್ಕಲೇಖಗಳು (Papyri) ಬೆಳಕಿಗೆ ಬಂದವು. ಈ ಎಲ್ಲ ದಾಖಲೆಗಳನ್ನು ೧೯೦೩ರಲ್ಲಿ ಬರ್ನಾರ್ಡ್ ಗ್ರೀನ್‌ಫಿಲ್ ಮತ್ತು ಆರ್ಥರ್ ಹಂಟ್ ಎಂಬವರು "ಆಕ್ಸಿರಿಂಕಸ್ ಪೆಪ್ಯೆರಿ"[1] ಎಂಬ ಗ್ರಂಥ ಮಾಲೆಯಲ್ಲಿ ಪ್ರಥಮ ಬಾರಿಗೆ ಸಂಪಾದಿಸಿ ಪ್ರಕಟಿಸಿದರು. ಈ ದಾಖಲೆಗಳ ಪೈಕಿ ಭಾರತ ಶಾಸ್ತ್ರಜ್ಞರು ಕುತೂಹಲವನ್ನು ಕೆರಳಿಸಿರುವ ಒಂದು ವಲ್ಕಲೇಖವೂ ಕಂಡು ಬಂದಿದೆ (ನಂ. ೪೧೩)

ಈ ವಲ್ಕ ಲೇಖದಲ್ಲಿ ಕಂಡುಬರುವ ಬರಹ ಗ್ರೀಕ್ ಪ್ರಹಸನದ ಒಂದು ಭಾಗ. ಇಲ್ಲಿನ ವರ್ಣನೆಯ ಪ್ರಕಾರ ಪ್ರಹಸನದ ಕಥಾಭಾಗ ಈ ರೀತಿ ಇದೆ. ಹಿಂದೂ ಸಾಗರ ತೀರ ಪ್ರದೇಶದ ದೇವಾಲಯವೊಂದರಲ್ಲಿ ಖರೀತಿಯಾನ್ ಹೆಸರಿನ ಒಬ್ಬಾಕೆ ಗ್ರೀಕ್ ತರುಣಿ ಭಾರತದ ಸ್ಥಳೀಯ ನಾಯಕನೋರ್ವನಿಂದ ಬಂಧನದಲ್ಲಿರಿಸಲ್ಪಟ್ಟಿರುತ್ತಾಳೆ. ಆ ಸಂದರ್ಭದಲ್ಲಿ ಆ ನಾಯಕ ಮತ್ತು ಆತನ ಜೊತೆಗಾರರಿಗೆ ಖರೀತಿಯಾನ್‌ಳ ಸಹೋದರ ಮತ್ತು ಆತನ ಕೂಟದವರು ದ್ರಾಕ್ಷಾರಸವನ್ನು ಕುಡಿಸುವ ಮೂಲಕ ಅಮಲುಗೊಳಿಸಿ ಆಕೆಯನ್ನು ಬಿಡುಗಡೆಗೊಳಿಸಿ ಕರೆದೊಯ್ಯುತ್ತಾರೆ. ಈ ಪ್ರಹಸನದಲ್ಲಿ ಸ್ಥಳೀಯನಾಯಕ ಮತ್ತು ಆತನ ಜೊತೆಗಾರರು ವಿಚಿತ್ರವಾದ ಭಾಷೆಯೊಂದನ್ನು ಆಡುತ್ತಿರುವಂತೆ ನಿರೂಪಿಸಲಾಗಿದೆ. ಈ ಭಾಷೆಯನ್ನು ಕುರಿತು ಹಲವಾರು ಮಂದಿ ವಿದ್ವಾಂಸರು ತಮ್ಮದೇ ಆದಂತಹ ವಿವರಣೆಯನ್ನು ನೀಡಿರುತ್ತಾರೆ. ಖ್ಯಾತ ಭಾರತ ಶಾಸ್ತ್ರಜ್ಞ ಹುಲ್ಷ್[2] ಈ ಪ್ರಹಸನದಲ್ಲಿ ನಿರೂಪಿಸಲಾದ ಸ್ಥಳ ಕರ್ನಾಟಕದ ತೀರ ಪ್ರದೇಶವೆಂದೂ ಅಲ್ಲಿನ ನಾಯಕ ಮತ್ತು ಆತನ ಸಂಗಡಿಗರು ಆಡುವ ಮಾತು ಕನ್ನಡ ಎಂದೂ ಪ್ರಥಮವಾಗಿ ತಮ್ಮ ವಾದವನ್ನು ಮಂಡಿಸಿದರು. ನಂತರ ಭಾರತೀಯ ವಿದ್ವಾಂಸರಾದ ಶಾಮಾಶಾಸ್ತ್ರಿ[3],

---

1 Grenfell and Hunt. A — (Ed.) Oxirinchus Papyri Part iii, p 41-57, London 1903

2 Hultzseh —in Harmes, vol 39, 1904. p. 307 ff. referred by E.P. Rice

3 ಶಾಮಾಶಾಸ್ತ್ರಿ —Annual Report of the Mysore Archaeo logiceal Department, 1926-referred by E.P. Rice

ಎಂ. ಗೋವಿಂದ ಪೈ[4], ಬಿ.ಎ. ಸಾಲೆತ್ತೂರ್[5], ಶ್ರೀಕಂಠ ಶಾಸ್ತ್ರಿ[6] ಮುಂತಾದವರು ಇಲ್ಲಿನ ಮಾತುಗಳ್ಕ ಕನ್ನಡ ಭಾಷೆಯುವು ಎಂದೇ ವಾದಿಸಿದ್ದಾರೆ. ಇದಕ್ಕೆ ವಿರುದ್ಧವಾಗಿ ಇ. ಪಿ. ರೈಸ್[7], ಎಲ್. ಡಿ. ಬರ್ನೆಟ್[8] ಮುಂತಾದವರು ತಮ್ಮ ವಾದಗಳನ್ನು ಮಂಡಿಸಿ ಇಲ್ಲಿ ಕಂಡು ಬರುವ ಮಾತುಗಳು ಕೇವಲ ಅರ್ಥಹೀನ ಪದ ಪುಂಜಗಳಿರಬಹುದೆಂಬ ಅನುಮಾನವನ್ನು ವ್ಯಕ್ತ ಪಡಿಸಿದ್ದಿದೆ.

ಬಹಳ ಕಾಲ ತಟಸ್ಥವಾಗಿದ್ದ ಈ ಪ್ರಹಸನವನ್ನು ಕುರಿತ ವಿಚಾರ ವಿಮರ್ಶೆಗಳಿಗೆ ಇತ್ತೀಚೆಗೆ ಹೊಸ ರೂಪ ಬಂದಿದೆ. ಶ್ರೀ ಪಿ. ಶಿವಪ್ರಸಾದ ರೈ ಎಂಬವರು ಈ ಪ್ರಹಸನದಲ್ಲಿ ಬರುವ ಮಾತುಗಳು ತುಳು ಭಾಷೆಯುವು ಎಂಬ ತಮ್ಮ ವಾದವನ್ನು ಹಲವಾರು ವೇದಿಕೆಗಳಲ್ಲಿ ಹಾಗೂ ಲೇಖನಗಳ ಮೂಲಕ ಪ್ರತಿಪಾದಿಸುತ್ತಿದ್ದಾರೆ.[9] ಇವರ ಅಭಿಪ್ರಾಯದಂತೆ ೧) ಈ ಪ್ರಹಸನದ ಕಥಾವಸ್ತು ಒಂದು ನೈಜ ಘಟನೆಯ ನಿರೂಪಣೆ ೨)ಈ ಘಟನೆ ನಡೆದದ್ದು ತುಳುನಾಡಿನ ತೀರ ಪ್ರದೇಶದಲ್ಲಿ ೩) ಪ್ರಹಸನದ ನಾಯಕಿ ತುಳುವ ತಾಯಿ ಗ್ರೀಕ್ ತಂದೆಯ ಮಗಳು, ತುಳುವ ಸಂಪ್ರದಾಯದಲ್ಲಿ ಬೆಳೆದವಳು, ಪ್ರಾಯಶಃ ಪಣಂಬೂರಿನ ದೇವಿ ದೇಗುಲದ ಪೂಜಾರಿಣಿ ೪) ಈ ಪ್ರಹಸನ ಈಜಿಪ್ಟ್‌ಗೆ ಹೋಗಿ ನೆಲಸಿದ ತುಳುನಾಡಿನವನೊಬ್ಬನಿಂದ ರಚಿಸಲ್ಪಟ್ಟದ್ದು ೫) ತುಳುಭಾಷೆ ಕಳೆದ ೩೦೦೦ ವರ್ಷಗಳಿಂದ ಬದಲಾವಣೆ ಹೊಂದಿಲ್ಲ. ಆಗಲೇ ಅದೊಂದು ಪ್ರಬುದ್ಧ ಭಾಷೆಯಾಗಿ ಬೆಳೆದಿತ್ತು* ತಮ್ಮ ಈ ವಾದಗಳಿಗೆ ಏನು ಆಧಾರ ಎಂದು ನಿರೂಪಿಸುವ ಬಗ್ಗೆ ಶ್ರೀ ರೈಗಳು ವಿಶೇಷ ಆಸಕ್ತಿ ವಹಿಸಿದಂತೆ ಕಾಣುವುದಿಲ್ಲ. ಈ ಎಲ್ಲ ವಾದ ವಿವಾದಗಳನ್ನು ಪರಿಶೀಲಿಸಿದಾಗ ಈ ಪ್ರಹಸವನ್ನು ಚಾರಿತ್ರಿಕ ಹಾಗೂ ತಾರ್ಕಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಅಗತ್ಯ ಕಂಡು ಬರುತ್ತದೆ.

ಪ್ರಸ್ತುತ ಪ್ರಹಸನದಲ್ಲಿ ಭಾರತೀಯ ಭಾಷೆಯೊಂದರ ಮಾತುಗಳು ಇವೆಯೋ ಇಲ್ಲವೇ ಎಂದು

---

4 ಗೋವಿಂದ ಪೈ ಎಂ. —ಪ್ರಬುದ್ಧ ಕರ್ನಾಟಕ, xi, 1930 referred by B.A. Saletore

5 ಸಾಲೆತ್ತೂರ್, ಬಿ.ಎ. —Ahcient Karnataka, History of Tuluva, poona 1936, p. 584-597

6 ಶ್ರೀಕಂಠ ಶಾಸ್ತ್ರಿ —Soureces of Karanataka History, vol 1 Mysore 1940

7 Rice, E.P —"Notes on the Proposed Identification of the foreign languese in No. 413 with Kanarese" in New chapters in Greek literature (second series) J.U. Powell and E.A. Barber (ed). oxford 1929, P. 215-222.

8 Barnett L.D. —" the Alleged Kanerese Speeches in papyrus oxirinchus 413" Journal of Egyptian Archaeology vol 12, p. 13-15

9 Rai, Shivaprasad, P —a) Antiquity of Tulu Language and the oxirinchus papyripaper presented in all India Tulu conferenec at Bangalore
b) Sariti : A 2000 year old Bilingual Tulu-Greek Play, International Jr. of Dravisdian Lingiustics, 1985, p. 320-330

* ಈ ಪ್ರಹಸದಲ್ಲಿ ಒಟ್ಟು ೧೦೬ ತುಳು ಪದಗಳಿವೆ.

ವಿಚಾರ ವಿಮರ್ಶೆ ನಡೆಸಿದ ಎಲ್ಲ ವಿದ್ವಾಂಸರೂ ಒಂದು ಮೂಲಭೂತವಾದ ಪ್ರಮಾದವನ್ನೆಸಗಿದ್ದಾರೆ. ಅದೆಂದರೆ ಈ ಪ್ರಹಸನವು ಚಾರಿತ್ರಿಕ ಘಟನೆಯೊಂದರ ವಸ್ತುನಿಷ್ಠ ನಿರೂಪಣೆ ಎಂಬ ರೀತಿಯಲ್ಲಿ ಈ ಪ್ರಹಸನ ವನ್ನು ವಿಶ್ಲೇಷಿರುವುದು. ಪ್ರಹಸನದ ಹಾಗೂ ಅದರ ಭಾಷೆಯ ವಿಶ್ಲೇಷಣೆಗೆ ಮುನ್ನ ಮುಖ್ಯವಾಗಿ ನಾವು ಗಮನದಲ್ಲಿರಿಸಿಕೊಳ್ಳಬೇಕಾದ್ದು ಇದು ಒಂದು ಐತಿಹಾಸಿಕ ಘಟನೆಯ ನಿರೂಪಣೆಯಲ್ಲ ಬದಲಾಗಿ ಕೇವಲ ಕಾಲ್ಪನಿಕ ಕಥೆ ಎಂಬ ವಿಚಾರವನ್ನು; ಇದೊಂದು ಚಾರಿತ್ರಿಕ ದಾಖಲೆಯಲ್ಲ ಬದಲಾಗಿ ಸಾಹಿತ್ಯ ಕೃತಿ ಎಂಬ ಸಂಗತಿಯನ್ನು.

ಇನ್ನೊಂದು ಮುಖ್ಯವಾದ ವಿಚಾರವೆಂದರೆ ಈ ಪ್ರಹಸನ ಖ್ಯಾತ ಗ್ರೀಕ್ ನಾಟಕಕಾರ ಯುರಿಪಿಡಿಸನ "ಇಫಿಜೀನಿಯಾ ಇನ್ ಟೌರಿಸ್" ಎಂಬ ನಾಟಕದ ಕೀಳ್ಮಟ್ಟದ ಅನುಕರಣೆ ಎಂಬುದು.[10] ಯುರಿಪಿಡಿಸನ ಈ ಕೃತಿಯ ಕಥಾಭಾಗವೂ ಪ್ರಹಸನದ ಕಥಾವಸ್ತುವೂ ಒಂದೇ ಆಗಿದೆ. ಇಫಿಜೀನಿಯಾ ಎಂಬ ಗ್ರೀಕ್ ತರುಣಿ ಅನಾಗರಿಕ ರಾಜನೊಬ್ಬನ ವಶದಲ್ಲಿರುವುದು ಮತ್ತು ಆಕೆಯ ಸಹೋದರ ಆಕೆಯನ್ನು ತನ್ನ ಬುದ್ಧಿವಂತಿಕೆಯಿಂದ ಪಾರುಮಾಡಿ ಕರೆದೊಯ್ಯುವುದು–ಇದು ಇಫಿಜೀನಿಯಾ ಇನ್ ಟೌರಿಸ್ ನಾಟಕದ ಕಥಾವಸ್ತು. ಇಲ್ಲಿ ಗ್ರೀಕ್ ಪ್ರಹಸನ ಮತ್ತು ಯುರಿಪಿಡಿಸನ ನಾಟಕದ ನಡುವಿನ ಕಥಾಸಾಮ್ಯವನ್ನು ಸ್ಪಷ್ಟವಾಗಿ ಗುರುತಿಸ ಬಹುದು.

ಈ ಪ್ರಹಸನ ಒಂದು ಶ್ರೇಷ್ಠ ದರ್ಜೆಯ ಗ್ರೀಕ್ ನಾಟಕವಲ್ಲ ಎಂಬುದು ಗಮನಾರ್ಹ. ಇದೊಂದು ಎರಡನೆಯ ದರ್ಜೆಯ ಪ್ರೇಕ್ಷಕರ ಮನರಂಜನೆಗಾಗಿ ರಚಿತವಾದ ಲಘುಪ್ರಹಸನ. ಮೇಲಾಗಿ ಲಭ್ಯವಿರುವ ಪ್ರತಿ ಪ್ರಹಸನದ ಮೂಲಕೃತಿಯಲ್ಲ. ನಾಟಕದ ಒಂದಿಬ್ಬರು ನಟರು ತಮ್ಮ ಉಪಯೋಗಕ್ಕಾಗಿ ಪ್ರತಿ ಮಾಡಿ ಕೊಂಡ ಭಾಗವಿದು.[11] ಒಂದು ದೃಶ್ಯವನ್ನು ಬೇರೆ ಬೇರೆ ರೀತಿಯಲ್ಲಿ ಎರಡು ಬಾರಿ ಕೊಡಲಾಗಿರುವುದು, ಪ್ರಹಸನದುದ್ದಕ್ಕೂ ಅಲ್ಲಲ್ಲಿ ಕಂಡುಬರುವ ರಂಗ ನಿರ್ದೇಶನದ ಚಿಹ್ನೆಗಳು, ಹಿನ್ನೆಲೆ ಸಂಗೀತದ ಸೂಚನೆಗಳು ಇವೆಲ್ಲ ಮೇಲಿನ ಮಾತನ್ನು ಪುಷ್ಟೀಕರಿಸುತ್ತವೆ. ಇದರಿಂದ, ಲಭ್ಯವಿರುವ ಪ್ರತಿ ಓದುಗರಿಗಾಗಿ ರಚಿತವಾದ ಕೃತಿಯಲ್ಲ. ಬದಲಾಗಿ ನಟರ ವೈಯಕ್ತಿಕ ಉಪಯೋಗಕ್ಕಾಗಿ ಪ್ರತಿ ಮಾಡಿಕೊಳ್ಳಲಾದ ಭಾಗ ಎಂಬುದು ಖಚಿತವಾಗುತ್ತದೆ.

ಪ್ರಹಸನದ ಕೂಲಂಕಷ ಪರಿಶೀಲನೆಯಿಂದ ಅದರಲ್ಲಿರುವ ಹಲವಾರು ಆಭಾಸಗಳನ್ನು ಗುರುತಿಸ ಬಹುದು. ಮೂಲರೂಪದಲ್ಲಿ ಒಟ್ಟು ಸುಮಾರು ೨೩೦ ಸಾಲುಗಳನ್ನು ಹೊಂದಿರುವ ಇದರಲ್ಲಿ ೩೬ ಸಾಲುಗಳು ಭಾರತೀಯ ನಾಯಕ ಮತ್ತು ಆತನ ಕೂಟದವರ ಭಾಷೆ ಎನ್ನಲಾಗುವ ಮಾತುಗಳಲ್ಲಿವೆ. ವಿಚಿತ್ರವೆಂದರೆ ತನ್ನದೇ ಆದ ಭಾಷೆಯನ್ನಾಡುವ ಈ ನಾಯಕ ಒಂದೆರಡು ಕಡೆ ಅದನ್ನು ಮರೆತು ಶುದ್ಧ ಗ್ರೀಕ್ ಭಾಷೆಯನ್ನಾಡುತ್ತಾನೆ. ಇನ್ನೊಂದೆಡೆ ಗ್ರೀಕ್ ವಿದೂಷಕ ಸ್ಥಳೀಯ ವಿಚಿತ್ರ ಭಾಷೆಯನ್ನಾಡುತ್ತಾನೆ. ಈ ಪ್ರಹಸನ ತುಳು, ಕನ್ನಡ ಅಥವಾ ಯಾವುದೇ ಭಾರತೀಯ ಭಾಷೆ ಪ್ರಚಲಿತವಿಲ್ಲದ ಗ್ರೀಕ್ ಪ್ರದೇಶವಾದ ಅಲೆಗ್ಸಾಂಡ್ರಿಯಾದಲ್ಲಿ ಪ್ರದರ್ಶನಕ್ಕಾಗಿ ಇರುವ ಭಾಗ ಎಂಬುದನ್ನಿಲ್ಲಿ ವಿಶೇಶವಾಗಿ ನೆನಪಿನಲ್ಲಿಟ್ಟುಕೊಳ್ಳಬೇಕು. ಅಲ್ಲಿ ಭಾರತೀಯ ಭಾಷೆಯನ್ನು ಯಥಾವತ್ತಾಗಿ ಪ್ರಹಸನದಲ್ಲಿ ಅಳವಡಿಸಿಕೊಳ್ಳಬೇಕಾದ ಅಗತ್ಯವಿಲ್ಲ, ಅಳವಡಿಸಿಕೊಂಡಿದ್ದಲ್ಲಿ ಅದು ಪ್ರೇಕ್ಷಕರಿಗೆ ಅರ್ಥವಾಗುವ ಸಂಭವವೂ ಇಲ್ಲ. ಪ್ರಹಸನದಲ್ಲಿ ಭಾರತೀಯ ನಾಯಕ ಮತ್ತಾತನ ಸಂಗಡಿಗರ ವಿಚಿತ್ರ ಮಾತುಗಳನ್ನು ಗ್ರೀಕ್ ಲಿಪಿಯಲ್ಲೇ ಬರೆಯಲಾಗಿದೆ. ಅಂದರೆ ಆ ಪಾತ್ರಗಳನ್ನಭಿನಯಿಸುವವರು ಗ್ರೀಕರಾಗಿದ್ದಿರಬೇಕು. ಹಾಗಿದ್ದಲ್ಲಿ ಅವರಿಗೆ ಕನ್ನಡ ಅಥವಾ ತುಳು ಭಾಷೆಯ ಜ್ಞಾನವಿತ್ತೆಂದು

---

10 Page D.L. —Select Papyri vol iii, Egypt Exploration Society, London 1950, p. 336-37

11 Riee E.P. —ಅದೇ. ಪುಟ ೨೨೧
Winter J.G. —Life and Letters in the Papyri University of Michigan Press, 1933

ತೀರ್ಮಾನಿಸೋಣವೇ ಅಥವಾ ಗ್ರೀಕ್ ಲಿಪಿಯನ್ನೋದ ಬಲ್ಲ ಕನ್ನಡಿಗರು ಅಥವಾ ತುಳುವರು ಅಲೆಗ್ಸಾಂಡ್ರಿಯಾಕ್ಕೆ ತೆರಳಿ ಅಲ್ಲಿ ಆ ಪಾತ್ರಗಳನ್ನು ಅಭಿನಯಿಸುತ್ತಿದ್ದರೆಂದು ಭಾವಿಸೋಣವೆ. ಇವೆಲ್ಲ ಉತ್ತರಿಸಲೇ ಬೇಕಾಗುವ ಆದರೆ ಉತ್ತರಿಸಲು ಸುಲಭ ಸಾಧ್ಯವಲ್ಲದ ಪ್ರಶ್ನೆಗಳು.

ಈ ಸಂದರ್ಭ, ಪ್ರಹಸನದ ರಚನೆ ಮತ್ತು ಪ್ರಹಸನ ಕಾರನ ಕಲ್ಪನೆಯ ಹಿನ್ನೆಲೆಯನ್ನು ತಾರ್ಕಿಕವಾಗಿ ವಿಶ್ಲೇಷಿಸುವ ಅಗತ್ಯವಿದೆ. ಇಲ್ಲಿ ಎರಡು ಸಂದರ್ಭಗಳಲ್ಲಿ ಮಾತ್ರ ಭಾರತದ ಕುರಿತ ಸೂಚನೆಯಿದೆ. ೨೮ನೆಯ ಸಾಲಿನಲ್ಲಿ ಹಿಂದೂ ಮಹಾ ಸಾಗರ ಎಂಬ ಉಲ್ಲೇಖ, ಅಂತೆಯೆ ೧೦೬ನೇ ಸಾಲಿನಲ್ಲಿ ಭಾರತೀಯ ನಾಯಕರು ಎಂಬ ಪ್ರಸ್ತಾಪ. ಇದರಿಂದ ಪ್ರಹಸನದ ಕಥಾರಂಗ ಹಿಂದೂ ಸಾಗರದ ತೀರ ಪ್ರದೇಶ ಹಾಗೂ ಇಲ್ಲಿ ಪ್ರಸ್ತಾಪಿಸಲಾದ ಸ್ಥಳೀಯ ನಾಯಕ ಭಾರತಿಯ ಎಂಬ ತೀರ್ಮಾನಕ್ಕೆ ಬರಲು ಸಾಧ್ಯವಾಗಿದೆ. ಗ್ರೀಕ್ ಪ್ರೇಕ್ಷಕರೆದುರು ಪ್ರದರ್ಶನಕ್ಕಾಗಿ ರಚಿತವಾದ ಈ ಕಥಾಭಾಗದಲ್ಲಿ ಭಾರತೀಯ ನಾಯಕನ ಪಾತ್ರಧಾರಿ ಆಡುವ ಮಾತು ಭಾರತೀಯ ಭಾಷೆಯದೇ ಆಗಿರಬೇಕಾದ ಅಗತ್ಯವಿಲ್ಲ. ಪ್ರಹಸನದ ಮುಖ್ಯ ಉದ್ದೇಶ ಮನರಂಜನೆಯೇ ಹೊರತು ವಸ್ತು ನಿಷ್ಠತೆಗೆ ಇಲ್ಲಿ ಹೆಚ್ಚಿನ ಮಹತ್ವವಿಲ್ಲದೆಂಬ ವಿಚಾರ ಪ್ರಹಸನದ ಸೂಕ್ಷ್ಮ ಪರಿಶೀಲನೆಯಿಂದ ವ್ಯಕ್ತವಾಗುತ್ತದೆ. ಗ್ರೀಕ್ ನಾಟಕಗಳಲ್ಲಿ ವಿದೇಶೀ ಪಾತ್ರಗಳು ಪ್ರವೇಶವಾಗುವ ಸಂದರ್ಭಗಳಲ್ಲಿ ಆ ವಿದೇಶೀಯರ ಭಾಷೆ ಎಂದು ಅರ್ಥಹೀನ ಪದಗಳನ್ನುನುಡಿಯುವ ಉದಾಹರಣೆ ಇದೆ. ಖ್ಯಾತ ಗ್ರೀಕ್ ನಾಟಕಕಾರ ಅರಿಸ್ಟೋಫಾನಿಸನ "ಬರ್ಡ್ಸ್"ಎಂಬ ನಾಟಕದಲ್ಲಿ ಅನಾಗರಿಕ ಟ್ರೈಬೆಲ್ಲಿಯನ್ ಜನರ ದೇವರು ಹಾಗೂ ಇನ್ನೊಂದು ನಾಟಕದಲ್ಲಿ ಸಿಥಿಯನ್‌ಬಿಲ್ಗಾರನು ತನ್ನ ದೇಶದ ಭಾಷೆ ಎಂದು ಅರ್ಥರಹಿತ ಪದಪುಂಜಗಳನ್ನು ನುಡಿದು ರಂಜಿಸುವ ಉದಾಹರಣೆ ಇದೆ.[12] ಆದ್ದರಿಂದ ಪ್ರಸ್ತುತ ಪ್ರಹಸನದಲ್ಲಿ ಭಾರತೀಯ ನಾಯಕ ಮತ್ತಾತನ ಕೂಟದವರು ತಮ್ಮ ಭಾಷೆ ಎಂಬುದಾಗಿ ಅರ್ಥಹೀನ ಶಬ್ದಪುಂಜಗಳನ್ನು ನುಡಿಯುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಪ್ರಾಯಶಃ ಅದೇ ಹೆಚ್ಚು ಸಮರ್ಥನೀಯ.

ಪ್ರಹಸನಕಾರನು ಹಿಂದೂ ಸಾಗರ ತೀರ ಪ್ರದೇಶವನ್ನು; ಭಾರತೀಯ ರಾಜನನ್ನು ತನ್ನ ಕಥಾಭಾಗದಲ್ಲಿ ವಿಶೇಷವಾಗಿ ಅಳವಡಿಸಿಕೊಳ್ಳಲು ಕಾರಣವೇನಿರಬಹುದು ಎಂಬ ಕುರಿತು ವಿಮರ್ಶೆಯ ಅಗತ್ಯವಿದೆ. ಈ ವಲ್ಕಲೇಖವು ಕ್ರಿ.ಶ. ೧ನೇ ಶತಮಾನದ ಕೊನೆ ಅಥವಾ ೨ನೇ ಶತಮಾನದ ಆರಂಭ ಕಾಲಕ್ಕನ್ವಯಿಸುವಂಥದು.[13] ಆದರೆ ಈ ಪ್ರಹಸನದ ಮೂಲ ಕೃತಿ ರಚನೆ ಇದಕ್ಕಿಂತಲೂ ಪೂರ್ವದಲ್ಲೇ ಆಗಿರಬೇಕು ಎಂಬುದು ವಿದ್ವಾಂಸರ ಅಭಿಪ್ರಾಯ.[14] ಅಲೆಗ್ಸಾಂಡ್ರಿಯಾ ಮತ್ತು ಭಾರತಗಳ ನಡುವೆ ಕ್ರಿ ಪೂ. ಯುಗದಿಂದಲೇ ನಿಕಟ ಸಂಪರ್ಕವಿತ್ತೆಂಬ ವಿಚಾರ ಚಾರಿತ್ರಿಕ ಆಧಾರಗಳಿಂದ ಖಚಿತವಾಗುತ್ತದೆ. ಕ್ರಿಸ್ತ ಪೂರ್ವ ೧೨೦ರ ಸುಮಾರಿಗೆ ಭಾರತ-ಅಲೆಗ್ಸಾಂಡ್ರಿಯಾಗಳ ನಡುವೆ ನಿಕಟವಾದ ಸಂಪರ್ಕ ಆರಂಭವಾಗಿತ್ತು.[15] ಕ್ರಿ.ಪೂ ೨೪ರ ಹೊತ್ತಿಗೆ ಭಾರತ–ಇಜಿಪ್ಟ್ ನಡುವಿನ ಸಂಪರ್ಕದಲ್ಲಿ ಎಷ್ಟೊಂದು ಹೆಚ್ಚಳವಾಗಿತ್ತೆಂದರೆ ಸುಮಾರು ೧೨೦ ಹಡಗುಗಳು ಪ್ರತಿವರ್ಷ ಈಜಿಪ್ಟ್‌ನಿಂದ ಭಾರತಕ್ಕೆ ತೆರಳುತ್ತಿದ್ದುವೆಂದು ಸ್ಟ್ರಾಬೋ.[16] ತಿಳಿಸುತ್ತಾನೆ. ಕ್ರಿ.ಪೂ ೧ನೇ ಶತಮಾನಕ್ಕನ್ವಯಿಸುವ ಕೃತಿ ಮಿಳಿಂದ ಪನ್ನ ಈ ಮಾತನ್ನು ಪುಷ್ಟೀಕರಿಸುವುದಲ್ಲದೆ ಅಲೆಗ್ಸಾಂಡ್ರಿಯಾದಲ್ಲಿ ಭಾರತಿಯ ವ್ಯಾಪಾರಿಗಳ ವಸಾಹತೇ ಇತ್ತೆಂದು ವಿವರಿಸುತ್ತದೆ.[17] ಅದಕ್ಕೆ ಈ ಎಲ್ಲ ಸಂಪರ್ಕಗಳೂ ಹೆಚ್ಚಾಗಿ ಪಶ್ಚಿಮ ಭಾರತಕ್ಕಷ್ಟೆ ಸೀಮಿತವಾಗಿದ್ದುವು

12 Dover K.J. —Aristo phanie comedy, London 1972
13 Page D.L. —ಅದೇ, ಪುಟ ೩೩೬
14 Powel J.U. and Barber E.A. —New chapters in Greek Literature (First series), Oxford 1921, p. 121
15 Wood cock, George —The Greeks in India, London 1966, p. 142
16 Woodcock, G —ಅದೇ, ಪು. ೧೪೨
17 Woodcock. G —ಅದೇ, ಪು. ೧೫೬

ಎಂಬುದಿಲ್ಲ ಗಮನಾರ್ಹ. ಅಲೆಗ್ಸಾಂಡ್ರಿಯಾದಿಂದ ಬರುವ ಎಲ್ಲ ಹಡಗುಗಳೂ ಪರ್ಶಿಯನ್ ಕೊಲ್ಲಿಯನ್ನು ಹಾದು ಗೆಡ್ರೋಸಿಯಾ ತೀರದ ಮೂಲಕ ಸಿಂಧೂ ಬಂದರುಗಳಿಗೆ ಮತ್ತು ಬಾರು, ಕಚ್ಛದತನಕ ಬರುತ್ತಿದ್ದುವು.[18] ಕ್ರಿ.ಶ. ೧ನೇ ಶತಮಾನದ ಹೊತ್ತಿಗೆ ಪಶ್ಚಿಮ ಭಾರತದ ಹಲವೆಡೆಗಳಲ್ಲಿ, ಮುಖ್ಯವಾಗಿ ಬಾರುಕಚ್ಛದಲ್ಲಿ ಗ್ರೀಕ್ ವಸಾಹತುಗಳಿದ್ದುವೆಂಬುದನ್ನು ಸ್ಟ್ರೇಬೋ ಸ್ಪಷ್ಟ ಪಡಿಸುತ್ತಾನೆ. ಈ ಎಲ್ಲ ವಿಚಾರಗಳನ್ನು ಗಮನಿಸಿದಾಗ ಅಲೆಗ್ಸಾಂಡ್ರಿಯಾದ ಗ್ರೀಕರಿಗೆ ಭಾರತದ ಸೌರಾಷ್ಟ್ರ–ಗುಜರಾತ್ ಪ್ರದೇಶದ ಜೊತೆ ನಿಕಟವಾದ ಸಂಪರ್ಕವಿತ್ತೆಂದೂ ಆದ್ದರಿಂದ ಪ್ರಹಸನಕಾರನ ಕಲ್ಪನೆಯಲ್ಲಿ ಇಂಡಿಯಾ ಎಂದರೆ ಸಿಂಧು, ಸೌರಾಷ್ಟ್ರ, ಗುಜರಾತ್ ಪ್ರದೇಶಗಳಿದ್ದಿರಬೇಕೆಂದೂ ಸ್ಪಷ್ಟವಾಗುತ್ತದೆ.

ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಪ್ರಹಸನಕಾರನ ಕಲ್ಪನೆಯಲ್ಲಿ ಭಾರತೀಯ ರಾಜ ಗ್ರೀಕ್ ಮಾತುಗಳನ್ನಾಡುವುದು ಆಭಾಸವೆನಿಸಲಾರದು. ಪಶ್ಚಿಮ ಭಾರತದ ಹಲವು ರಾಜರಿಗೆ ಗ್ರೀಕ್ ಭಾಷಾಜ್ಞಾನವಿದ್ದಿತು. ಕ್ರಿ.ಪೂ. ೩೦ರಲ್ಲಿ ಭಾರತೀಯರಾಜ (ಬಾರುಕಚ್ಛದ) ನೊಬ್ಬ ಗ್ರೀಕ್ ಭಾಷೆಯಲ್ಲಿ ಬರೆದ ಪತ್ರವನ್ನು ರಾಯಭಾರಿಗಳು ಅಗಸ್ಟಸ್ ದೊರೆಯ ಬಳಿ ಒಯ್ದುದಾಗಿ ಸ್ಟ್ರಾಬೋ[19] ತಿಳಿಸುತ್ತಾನೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯ ಅಂಶ ಭಾರತದ ರಾಜನು ಪ್ರಹಸನದಲ್ಲಿ ತನ್ನವರನ್ನು "ಭಾರತೀಯ ನಾಯಕರೇ" (ಸಾಲು. ೯೬) ಎಂಬುದಾಗಿ ಸಂಬೋಧಿಸುವುದು. ಕರ್ನಾಟಕದ ಅಥವಾ ತುಳು ನಾಡಿನ ಯಾವುದೇ ಒಬ್ಬ ರಾಜನ ಬಾಯಲ್ಲಿ, ಅದೂ ಕ್ರಿ.ಶ. ೧ನೇ ಶತಮಾನದಷ್ಟು ಪೂರ್ವದಲ್ಲಿ, "ಭಾರತೀಯ ನಾಯಕರೇ" ಎಂಬ ಮಾತುಗಳು ಹೊರ ಬರುವುದು ಎಷ್ಟೊಂದು ಅವಾಸ್ತವ.

ಈ ಮೊದಲೇ ಸೂಚಿಸಿದ್ದಂತೆ ಈ ಪ್ರಹಸನವೂ ಯುರಿಪಿಡಿಸನ ಇಫಿಜೀನಿಯಾ ನಾಟಕದ ಕೀಳ್ಮಟ್ಟದ ಅನುಕರಣೆ ಎಂಬುದು ನಿಜವಾದರೂ, ಗ್ರೀಕ್ ಕನ್ಯೆಯೊಬ್ಬಳು ಭಾರತೀಯ ರಾಜನ ಬಂಧನದಲ್ಲಿರುವ ಇಲ್ಲಿನ ಕಥಾವಸ್ತುವಿನ ಆಯ್ಕೆಗೆ ಪ್ರತ್ಯೇಕವಾದ ಹಿನ್ನೆಲೆ ಇದ್ದಂತೆ ತೋರುತ್ತದೆ. ಅಂದಿನ ಯುಗದಲ್ಲಿ ಗ್ರೀಕ್ ಕನ್ಯೆಯರು ಭಾರತೀಯ ರಾಜರ ವಶದಲ್ಲಿರುವುದು ಪ್ರಚಲಿತ ಸಂಗತಿಯಾಗಿತ್ತು.[20] ಬಾರುಕಚ್ಛದಲ್ಲಿ ಗ್ರೀಕ್ ಕನ್ಯೆಯರಿಗೆ ವಿಶೇಷವಾದ ಬೇಡಿಕೆಯಿತ್ತು. ಭಾರತೀಯ ರಾಜರು ಗ್ರೀಕ್ ತರುಣಿಯರನ್ನು ಖರೀದಿಸಿ ತಮ್ಮ ವಶದಲ್ಲಿಟ್ಟುಕೊಳ್ಳುತ್ತಿದ್ದರೆಂಬುದಕ್ಕೆ ಸಾಕಷ್ಟು ದಾಖಲೆಗಳು ದೊರಕುತ್ತವೆ.[21] ಈಜಿಪ್ಟಿನಿಂದ ಗ್ರೀಕ್ ಕನ್ಯೆಯರನ್ನು ಭಾರತಕ್ಕೆ ರಫ್ತು ಮಾಡುವುದು ಅಂದಿನ ಕಾಲದಲ್ಲಿ ಬಹಳವಾಗಿ ರೂಢಿಯಲ್ಲಿದ್ದ ಸಂಗತಿ. ಇಂತಹ ಸ್ತ್ರೀ ವ್ಯಾಪಾರವೂ ಪ್ರಹಸನಕಾರನಿಗೆ ಈ ರೀತಿಯ ಒಂದು ಕತೆಯ ರಚನೆಗೆ ಪ್ರೇರಣೆ ನೀಡಿರುವ ಸಾಧ್ಯತೆ ಇದೆ. ಅಲ್ಲದೆ ಈ ರೀತಿಯ ಪ್ರಚಲಿತ ಸಂಗತಿ ಆಧಾರಿತ ಪ್ರಹಸನ ಗ್ರೀಕ್ ಪ್ರೇಕ್ಷಕರಿಗೂ ಸಾಕಷ್ಟು ಮನರಂಜನೆಯೊದಗಿಸಿರಲು ಸಾಧ್ಯವಿದೆ.

ಈ ಮೇಲಿನ ವಿಶ್ಲೇಷಣೆಯಿಂದ ಪ್ರಹಸನದ ಮಹತ್ವವನ್ನು ಕುರಿತಂತೆ ಕೆಲವು ಪ್ರಾಮುಖ್ಯ ಅಂಶಗಳು ಸ್ಪಷ್ಟವಾಗುತ್ತವೆ. ೧) ಈ ಪ್ರಹಸನ ಒಂದು ಕಾಲ್ಪನಿಕ ಕೃತಿಯೇ ಹೊರತು ಚಾರಿತ್ರಿಕ ದಾಖಲೆಯಲ್ಲ. ಆದ್ದರಿಂದ ಇಲ್ಲಿ ವಿವರಿಸಲಾದ ಘಟನೆಗಳು ಕರ್ನಾಟಕ ಅಥವಾ ತುಳುನಾಡಿಗೆ ಸಂಬಂಧಿಸಿದ್ದೆಂದು ವಾದಿಸುವುದರಲ್ಲಿ ಅರ್ಥವಿಲ್ಲ. ೨) ಪ್ರಹಸನಕಾರನು ಹಿಂದೂ

18 Woodcock, G —ಅದೇ, ಪು. ೧೪೨

19 Jones H.L. the Geography of Strabo vii, London, 1954, P. 129.

20 Tarn w.w. —the Greeks in Bactria and india Cambridge 1938

21 Tarn w.w. —ಅದೇ, ಪು. ೩೭೩-೭೪

ಸಾಗರದ ತೀರ ಪ್ರದೇಶ ಎಂದು ವಿವರಿಸಿರುವುದು ಸಿಂಧು, ಸೌರಾಷ್ಟ್ರ, ಗುಜರಾತ್ ಪ್ರದೇಶವನ್ನೇ ಹೊರತು ದಕ್ಷಿಣ ಭಾರತವನ್ನೆಲ್ಲ ೩) ಇಂಡಿಯಾದ ರಾಜ ಮತ್ತು ತನ್ನ ಜೊತೆಗಾರರು ಆಡುವ ಮಾತುಗಳು ಯಾವುದೇ ಭಾರತೀಯ ಭಾಷೆಯುವಾಗಿರದೆ ಅವು ಅರ್ಥಹೀನ ಪದ ಪುಂಜಗಳಾಗಿರುವ ಸಾಧ್ಯತೆಯೇ ಹೆಚ್ಚು. ೪) ಒಂದು ವೇಳೆ ಅವು ಯಾವುದೇ ಭಾರತೀಯ ಭಾಷೆಯ ಪದಗಳನ್ನು ಹೊಂದಿದ್ದರೆ ಅವುಗಳ ಮೂಲವನ್ನು ಸಿಂಧು, ಸೌರಾಷ್ಟ್ರ, ಗುಜರಾತ್ ಪ್ರದೇಶದ ಭಾಷೆಯಲ್ಲಿ ಹುಡುಕಬೇಕಲ್ಲದೆ ಕನ್ನಡ, ತುಳು ಅಥವಾ ಇನ್ನ್ಯಾವುದೇ ದಕ್ಷಿಣ ಭಾರತದ ಭಾಷೆಗಳಲ್ಲಿ ಅಲ್ಲ. ಚಾರಿತ್ರಿಕ ಮತ್ತು ಸಾಂದರ್ಭಿಕ ಆಧಾರಗಳನ್ನು ಕಡೆಗಣಿಸಿ ಈ ಪ್ರಹಸನವನ್ನು ಒಂದು ಐತಿಹಾಸಿಕ ದಾಖಲೆ ಎಂಬ ರೀತಿಯಲ್ಲಿ ವಿಶ್ಲೇಷಿಸಿ ಅದರಲ್ಲಿ ಕನ್ನಡ, ತುಳು ಅಥವಾ ಇನ್ನ್ಯಾವುದೇ ದಕ್ಷಿಣ ಭಾರತದ ಭಾಷೆಯ ಪದಗಳಿವೆ ಎಂದು ವಾದಿಸುವುದು ನಿರರ್ಥಕ ಪ್ರಯತ್ನವೇ ಸರಿ.

○

# ಪಂಪ ಪೂರ್ವ ಯುಗದ ರಾಜಾಶ್ರಯದ ಸಾಹಿತ್ಯ

—ಮೃತ್ಯುಂಜಯ ರುಮಾಲೆ

ಪಂಚ ದ್ರಾವಿಡ ಭಾಷೆಗಳಲ್ಲಿ ಪ್ರಾಚೀನತೆಯ ದೃಷ್ಟಿಯಿಂದ ತಮಿಳಿನ ನಂತರದ ಸ್ಥಾನ ಕನ್ನಡಕ್ಕೆ. ಸುದೀರ್ಘವೂ ಸಂಪದ್ಯುಕ್ತವೂ ಆದ ಕನ್ನಡ ಸಾಹಿತ್ಯ ಕಾಲದಿಂದ ಕಾಲಕ್ಕೆ ತನ್ನ ಮೌಲ್ಯವನ್ನು ಹೆಚ್ಚಿಸಿಕೊಳ್ಳುತ್ತಾ ಬೆಳೆದದ್ದು ಈ ಸಾಹಿತ್ಯದ ವೈಶಿಷ್ಟ್ಯವಾಗಿದೆ. "ಸಾಹಿತ್ಯವು ನೂತನ ಯುಗವನ್ನು ಸೃಷ್ಟಿಸುವಂತೆ ಸಮಕಾಲೀನ ಯುಗದ ಪ್ರಭಾವಕ್ಕೂ ಒಳಗಾಗುತ್ತದೆ. ಅದು ಯುಗಜನ್ಯ, ಯುಗ ಜನಕ ಎರಡೂ ಹೌದು. Literature creates the age; Literature is the creature of the age. ಎಂಬಿವೆರಡೂ ಋತುವಾಕ್ಯಗಳು."[1] ಕನ್ನಡ ಇಂದಿನ ಭಾರತದ ಹಲವಾರು ಭಾಷೆಗಳಂತೆ ಸಂಸ್ಕೃತ ಜನ್ಯಭಾಷೆ. ದೇವಭಾಷೆಯಾದ ಸಂಸ್ಕೃತ ಭಾರತದ ತುಂಬೆಲ್ಲಾ ಓಡಾಡುತ್ತಾ ಅದೂ ನಾಡಿನ ಸತ್ವಕ್ಕನುಗುಣವಾಗಿ ಪ್ರಾದೇಶಿಕ ಭಾಷೆಯನ್ನು ಹುಟ್ಟಿಸಿತು. "ಸಾಹಿತ್ಯವು ಸಂಸ್ಕೃತಿ ಮತ್ತು ನಾಗರಿಕತೆಗಳ ನಿಧಿಯೂ ಹೌದು, ಪ್ರತಿನಿಧಿಯೂ ಹೌದು. ವಿಶಿಷ್ಟಾರ್ಥ ಗಣಿಸಿದಾಗ ಅದು ಜನಜೀವನದ ಗತಿಬಿಂಬವೂ ಆಗಬಲ್ಲದು."[2] ಎಂಬ ಜಿ. ಎಸ್. ಶಿವರುದ್ರಪ್ಪನವರ ಮಾತು ಸಮಯೋಚಿತವಾದುದು. ಸಾಹಿತ್ಯ ಒಂದು ನಾಡಿನ ಸಂಸ್ಕೃತಿಯ ಸಂಕೇತ. ಆ ನಾಡಿನ ಮಹತಿಯನ್ನು ಹೆಚ್ಚಿಸುವ ಒಂದು ಶ್ರೀಮಂತ ಮಾಧ್ಯಮ. ಜೀವನ-ಬದುಕು-ಸಮಾಜ-ನಾಡು-ಇವುಗಳಿಗೆ ಅರ್ಥವನ್ನು ಕೊಡುವ ಈ ಸಾಹಿತ್ಯ. ಸ್ಫೂರ್ತಿಗಾಗಿ ಸಮಾಜದ ಹಲವು ಹತ್ತು ಮೂಲೆಗಳನ್ನು ಆಶ್ರಯಿಸುತ್ತದೆ. ಜತೆಗೆ ತನ್ನಲ್ಲಿ ತನ್ನ ಸಮಕಾಲೀನತೆಯನ್ನು ಪ್ರತಿಬಿಂಬಿಸುತ್ತದೆ. ಈ ಮಾತಿನ ಹಿಂದೆಯೇ "ಸಾಹಿತ್ಯದಲ್ಲಿ ಶಾಶ್ವತತೆ ಎಂಬುದು ಇಲ್ಲವೇ ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. ಸಾಹಿತ್ಯದಲ್ಲಿ ಕಾಲಕಾಲಕ್ಕೆ ಬದಲಾಗುವ ಅಂಶಗಳಿದ್ದಂತೆ ಚಿರಂತನವಾಗಿ ಉಳಿದುಬರುವ ತತ್ವಗಳೂ ಉಂಟು. ಸಾಹಿತ್ಯ, ಸಾಹಿತ್ಯವಾಗಬೇಕಾದರೆ ಅದಕ್ಕೆ ಮೌಲಿಕವಾದ ಕೆಲವು ಅಂಶ ಬೇಕಾಗುತ್ತದೆ."[3] ಅಂತರಂಗದ ಭಾವನೆಗಳನ್ನು ಹೊರಹಾಕುವುದು ಭಾಷೆಯಾದರೆ ಅದನ್ನು ಹೊರಡಿಸುವವನು 'ಭಾಷಿಗ'ನಾಗುತ್ತಾನೆ. ಅದೇ ರೀತಿಯಾಗಿ ಅಂತರಂಗದ ಭಾವನೆಗಳನ್ನು ಸುಂದರಾಭಿವ್ಯಕ್ತಿಯಲ್ಲಿ ಹೊರ ತಂದರೆ ಅದು ಸಾಹಿತ್ಯವೂ ಅದನ್ನು ಹೊರಡಿಸುವವನು ಸಾಹಿತಿ, ಕವಿಯೂ ಆಗುತ್ತಾನೆ. ತನ್ನ ಬದುಕಿನ ಯಾವುದೋ ಒಂದು ಘಟನೆ. ವಸ್ತು, ವಿಷಯ, ವ್ಯಕ್ತಿ, ಸಮಾಜ ಅವನ ಸಾಹಿತ್ಯಿಕ ವ್ಯಕ್ತಿತ್ವವನ್ನು ಮುಟ್ಟಿ ಮುಟ್ಟಿ ಎಬ್ಬಿಸುತ್ತವೆ. ತನಗೇ ತಿಳಿಯದಂತೆ ತನ್ನ ಸಮಾಜವನ್ನು ತನ್ನ ಸಾಹಿತ್ಯದಲ್ಲಿ ಆತ ತುಂಬುತ್ತಾನೆ, "ಕವಿ ತನ್ನ ಕಾಲಕ್ಕೆ ಹೇಗೆ ಕನ್ನಡಿಯಾಗಿರುವನೋ ಹಾಗೇ ಆ ಕಾಲ

1 ಪ್ರಾಚೀನ ಕನ್ನಡ ಸಾಹಿತ್ಯ ವಿಮರ್ಶೆಯ ತತ್ವಗಳು—ಆರ್. ಸಿ. ಹಿರೇಮಠ—ಸಾಹಿತ್ಯ ವಿಮರ್ಶೆ—ಧಾರವಾಡ, ೧೯೬೬. ಪು—೮೮

2 ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ (ಮೂಲ ಪ್ರತಿ)—ಸಾ. ಶಿ. ಮರುಳಯ್ಯ, ೯೭೦, ಪ್ರಸ್ತಾವನೆ

3 ಪ್ರಾಚೀನ ಕನ್ನಡ ಸಾಹಿತ್ಯ ವಿಮರ್ಶೆಯ ತತ್ವಗಳು—ಆರ್. ಸಿ. ಹಿರೇಮಠ, ಧಾರವಾಡ, ೧೯೬೬, ಪುಟ ೯೦.

ಆ ಕವಿಗೂ ಕನ್ನಡಿಯಾಗುತ್ತದೆ."[4]-ಹೀಗೆ ಕವಿ ಏನು ನೋಡುತ್ತಾನೆ? ಹೇಗೆ ತಿಳಿಸುತ್ತಾನೆ? ಎಂಬಿವು ಗಳೆಲ್ಲಾ ಆತನ ವೈಯಕ್ತಿಕತೆಗೆ, ವ್ಯಕ್ತಿತ್ವಕ್ಕೆ ಕ್ರಮವಾಗಿ ಸಂಬಂಧಿಸಿದವುಗಳು. "ಪ್ರತಿಭೆ ಕವಿಯಾದವನ ಮೂಲ ಆಸ್ತಿ. ಸಾಹಿತ್ಯ ಸೃಷ್ಟಿಗೆ ಅದೊಂದು ಪ್ರೇರಣೆ. ಯಾವುದೋ ಒಂದು ವಸ್ತು ಇಲ್ಲವೆ ಘಟನೆಯಲ್ಲಿ ಸಾಮಾನ್ಯರೂ ಕಾಣದ ಅರ್ಥ ಹಾಗೂ ಮಹತಿಯನ್ನು ಕವಿ ಕಂಡುಕೊಳ್ಳುತ್ತಾನೆ. ಹಾಗೆ ಕಂಡುಂಡ ಅನುಭವ ಅನಿಸಿಕೆಗಳನ್ನು ಕಾವ್ಯಮಾಧ್ಯಮದ ಮೂಲಕ ಹೊರ ಹಾಕುತ್ತಾನೆ."[5] ಆದೇ ರೀತಿಯಾಗಿ ಆತನ ವಿಶೇಷ ದೃಷ್ಟಿಯಿಂದ ಸೃಷ್ಟಿಗೊಂಡ ಸಾಹಿತ್ಯ ಕಲಾತ್ಮಕ ವಾಗಿರುತ್ತದೆ. "ಸಾಹಿತ್ಯವೆನ್ನುವುದು ಭಾಷಾ ಮಾಧ್ಯ ಮದ ಕಲೆಯಾಗಿದೆ. ಭಾಷೆಗೆ ಇರುವ ಬರಹ ಮತ್ತು ಉಚ್ಚಾರ ಎಂಬ ಎರಡೂ ಸಾಧ್ಯತೆಗಳನ್ನು ಬಳಸಿಕೊಂಡು ಯಾವುದೇ ದೇಶದ ಸಾಹಿತ್ಯ ಕ್ರಮವಾಗಿ ಬರೆವಣಿಗೆಯಲ್ಲಿ ಇಳಿದು ಬರುತ್ತದೆ, ಬಾಯೊಳಗೆ ಬಂದಿರುತ್ತದೆ. ಇವು ಗಳಲ್ಲಿ ಒಂದು ಶಿಷ್ಟಪದ ಸಾಹಿತ್ಯ, ಇನ್ನೊಂದು ಜನಪದ ಸಾಹಿತ್ಯ"[6] ಜನರ ಬಾಯಲ್ಲೇ ಉಳಿದು ಅನಕ್ಷರಸ್ಥರೂ ಅವಿದ್ಯಾವಂತರ ಭಾಷೆಯಾಗಿ ಜನಪದ ಸಾಹಿತ್ಯ ದಾಖಲಾರಹಿತವಾಗಿ ಬೆಳೆದು ಬಂದರೆ, ಪ್ರತಿಯಿಂದ ಪ್ರತಿಗೆ, ಕವಿಯಿಂದ ಕವಿಗೆ, ನಾಡಿನಿಂದ ನಾಡಿಗೆ ಪ್ರಭಾವ ಬೀರಿ ಅಂದಿನ ಪ್ರಬಲ ಮಾಧ್ಯಮವೆನ್ನಬಹುದಾದ ಗ್ರಾಂಥಿಕರೂಪವಾಗಿ, ಅಕ್ಷರಸ್ಥರ-ವಿದ್ಯಾವಂತರ ಭಾಷೆ ಯಾಗಿ ಶಿಷ್ಟಪದ ಸಾಹಿತ್ಯ ದಾಖಲಾಪೂರ್ವಕವಾಗಿ ಬೆಳೆದು ಬಂತು. (ಆದರೆ ಪ್ರಾಚೀನ ಕೃತಿಗಳನೇಕ ಕನ್ನಡ ನಾಡಿನಲ್ಲಿ ಹುಟ್ಟಿದ್ದರೂ ಅಲಭ್ಯವಾಗಿರುವುದು ನಮ್ಮ ದುರದೃಷ್ಟ)-ಹೀಗೆ ಕ್ರಿ.ಪೂ.ದಲ್ಲಿ ದೇಶದಾದ್ಯಂತವೂ (ಕೊಂಚಮಟ್ಟಿಗೆ ವಿಶ್ವದಾದ್ಯಂತವೂ) ಸಂಸ್ಕೃತ-ಪ್ರಾಕೃತ ಗಳು ಪ್ರಾದೇಶಿಕ ಭಾಷೆಗಳಿಗೆ ಸ್ಫೂರ್ತಿ ಲಭಿಸುವಂತೆ ಮಾಡಿ, ನಂತರ ಆ ಭಾಷೆಯು ಸ್ವಂತಿಕೆ-ಸ್ವಾತಂತ್ರಿಕೆ ಗಳಿಗೆ ನಾಂದಿ ಹಾಡಿದವು. ಸಂಸ್ಕೃತದ ಪ್ರಬಲ ಮುಷ್ಟಿ ಯಿಂದ ತಪ್ಪಿಸಿಕೊಳ್ಳುವುದು ಎಲ್ಲಾ ಭಾಷೆಗಳಂತೆ ಕನ್ನಡಕ್ಕೂ ಕಷ್ಟವಾಯಿತು. ಮೂಲ ಕನ್ನಡನಾಡಿನಲ್ಲಿ ಬೌದ್ಧರ ಆಗಮನದಿಂದ ಪಾಲಿಭಾಷೆ, ಜೈನರಿಂದ ಪ್ರಾಕೃತ ಮತ್ತು ಸಂಸ್ಕೃತಭೂಯಿಷ್ಠ ಪ್ರಾದೇಶಿಕ ಭಾಷೆ, ವೈದಿಕರ ಹೆಗ್ಗಳಿಕೆಯನ್ನು ಇಮ್ಮಡಿಸುತ್ತದೆ ಎಂಬ ಭ್ರಮೆಯು ಸಂಸ್ಕೃತ ಭಾಷೆ-ಕನ್ನಡದ ಮೇಲೆ ದಾಳಿಯಿಟ್ಟಿ ದ್ದವು. ಕನ್ನಡನಾಡಿನಲ್ಲಿಯೇ ಸ್ವತಂತ್ರವಾಗಿ ಕನ್ನಡ ಬೆಳೆಯಲು ಹನ್ನೆರಡನೇ ಶತಮಾನದ ವಚನಕಾರರು ಬರಬೇಕಾದದ್ದು, ನಂತರ ಭಾಷೆಯ ಅಸ್ತವ್ಯಸ್ತತೆಯನ್ನು ವ್ಯವಸ್ಥಿಸಲು ಶಬ್ದಮಣಿದರ್ಪಣದ ಕೇಶಿರಾಜ ಹುಟ್ಟ ಬೇಕಾದದ್ದು ನಮಗೆ ತಿಳಿದೇ ಇದೆ.

ಕವಿಯಾದವನಿಗೆ ಕಾವ್ಯ ರಚಿಸಲು ವಸ್ತು, ನಿರೂಪಣೆ. ಸ್ಫೂರ್ತಿಸಲು ಪ್ರಪಂಚ ದೊಡ್ಡದಾಗಿದ್ದರೂ ಆತ ಸ್ವತಂತ್ರವಾಗಿ ರಚನೆ ಮಾಡಲು ಆತನ ಸ್ವತಂತ್ರ ಭಾಷೆಯು (ಅಂದರೆ ನಾಡಿನ ಭಾಷೆಯು) ಮಾಧ್ಯಮ ವಾಗಲೀ, ಸಹೃದಯರ ಕೊರತೆಯಾಗಲೀ ಸಾಮಾಜಿಕ ಸ್ಥಾನ-ಮಾನಗಳಾಗಲೀ ಆತನ ಮುಂದೆ ದೊಡ್ಡ ಸಮಸ್ಯೆ ಯಾಯಿತು. ಕಾವ್ಯಕ್ಕೆ ಪ್ರೇರಣೆ ಸಿಕ್ಕರೂ ಕವಿಗೆ ಪೋಷಣೆ ಸಿಗಲಿಲ್ಲ. 'ನೀನು ಬರೆ, ನಾನು ನೋಡು ತ್ತೇನೆ. ನಿನ್ನ ಹಿಂದೆ ನಾನು' ಎನ್ನುವ ಗಟ್ಟಿನೆಲದ ಗಟ್ಟಿಗನೊಬ್ಬ ಕನ್ನಡ ಸಾಹಿತ್ಯಕ್ಕೆ ಪ್ರಾಥಮಿಕ ಹಂತ ದಲ್ಲಿ, ಶೈಶವಸ್ಥಿತಿಯಲ್ಲಿ ಬೇಕಾಗಿತ್ತು. ಅಂಥ ಸಂದರ್ಭ ದಲ್ಲಿ "ತತ್ವಶಾಸ್ತ್ರ, ಕಾವ್ಯ, ವೈದ್ಯ ಶಾಸ್ತ್ರಾದಿಗಳಲ್ಲಿ ಕನ್ನಡನಾಡಿನ ಸಂಸ್ಕೃತ ಕವಿಗಳು ಅಮೂಲ್ಯ ಗ್ರಂಥ ಗಳನ್ನು ಬರೆದವರಾಗಿದ್ದಾರೆ. ಸರ್ವಮತಸಹಿಷ್ಣುಗಳಾದ ಸಾತವಾಹನ, ಕದಂಬ, ಗಂಗಾದಿ ಕನ್ನಡ (ನಾಡಿನ) ರಾಜಕುಲಗಳು ನಾನಾ ಧರ್ಮ ಪಂಥಗಳ ಬೆಳವಣಿಗೆಗೆ ತನುಮನಧನಗಳ ನೆರವು ನೀಡಿ, ಸನಾತನ ಧರ್ಮ

---

4 ಕನ್ನಡ ಸಾಹಿತ್ಯದ ಇತಿಹಾಸ—ಡಿಎಲ್ಲೆನ್ ಬೋಧಿಸಿದ ಡಾ. ಎಸ್.ಎಂ. ವೃಷಭೇಂದ್ರಸ್ವಾಮಿ, ಬೆಂಗಳೂರು, ಪುಟ-೧೦.

5 ಪಂಪ ಭಾರತ—ಒಂದು ಸಾಂಸ್ಕೃತಿಕ ಅಧ್ಯಯನ – ಡಾ. ಶಾಂತಿನಾಥ ದಿಬ್ಬದ (ಅಪ್ರಕಟಿತ ಪಿ.ಎಚ್.ಡಿ. ಪ್ರಬಂಧ, ೧೯೮೧, (ಪೂರ್ವ ಪೀಠಿಕೆ)

6 ಸಾಹಿತ್ಯ ಸಂಪಾದನೆ, ಡಾ. ಎಂ. ಎಂ. ಕಲಬುರ್ಗಿ, ೧೯೭೯, ಮದರಾಸು, ಪುಟ ೨.

ರಕ್ಷಣೆಯ ಅಧ್ವರ್ಯುರ್ಗಳಾಗಿ ಹಲವಾರು ಅನರ್ಘ್ಯ ಗ್ರಂಥಗಳ ರಚನೆಗೆ ಕಾರಣವಾಗಿವೆ. ಉಜ್ವಲ ಕಾವ್ಯ ಗುಣ, ಸಮನ್ವಿತವಾದ ಪುರಾಣ, ಇತಿಹಾಸ, ಕಾವ್ಯ. ನಾಟಕ, ಚಂಪೂಕಾವ್ಯ, ವ್ಯಾಕರಣ, ಛಂದಸ್ಸು, ಸಂಗೀತಾದಿ ಕೃತಿಗಳ ರಚನೆಗೆ ಪ್ರೋತ್ಸಾಹ ನೀಡಿವೆ, ಸಾತವಾಹನರು, ಗಂಗರು, ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ವಿಜಯನಗರದರಸರೇ ಮೊದಲಾದ ಸಾರ್ವಭೌಮ ಪ್ರಭುಗಳನೇಕರು ಸ್ವತಃ ಉದ್ದಾಮ ಸಂಸ್ಕೃತ ಕವಿಗಳಾಗಿದ್ದರು. ಈ ಸಾರ್ವಭೌಮರೊಡನೆ ಅವರ ಸಾಮಂತರೂ ಮಹಾಮಂಡಲೇಶ್ವರರೂ ಸಂಸ್ಕೃತ ಸಾಹಿತ್ಯಪೋಷಕರಾಗಿದ್ದರು.[7] ಆಗ ಬಂದ ಕೃತಿಗಳ ರಚನೆಯ ಕಾರ್ಯದಲ್ಲಿ ಈ ರಾಜರು ವಹಿಸಿದ ಪಾತ್ರ ನೋಡಿದರೆ, ಅದರಲ್ಲೂ ವಿಶೇಷವಾಗಿ ಒಂದನೇ ಶತಮಾನದಲ್ಲಿದ್ದ ಸಾತವಾಹನರ ಹಾಲರಾಜನಲ್ಲಿದ್ದ ಸಾಹಿತ್ಯಿಕ ಕ್ಷೇತ್ರ ಕಾರ್ಯಪ್ರಜ್ಞೆ, ಜಾನಪದ ಸಾಹಿತ್ಯ ಸತ್ವದ ಅರಿವಿನ ಜ್ಞಾನ ಅದ್ಭುತವಾದುದು. ರಾಜರು ಬೆಳೆಸಿದ ಈ ಭಾಷೆಗೆ ಸಾಹಿತ್ಯಿಕ ರೂಪ ಬಂದದ್ದು ಅದರ ತೀವ್ರ ಬೆಳವಣಿಗೆಯನ್ನು ತೋರಿಸುತ್ತದೆ. ಕನ್ನಡ ನಾಡೂ ನುಡಿಗಳಂತೆ ಸಾಹಿತ್ಯವೂ ಕ್ರಿಸ್ತಪೂರ್ವದಷ್ಟು ಹಿಂದೆ ಹೋಗಬಹುದೆಂಬ ಪಂಡಿತರ ಅಭಿಪ್ರಾಯಗಳು ಈ ಸಾಹಿತ್ಯದ ಪ್ರಾಚೀನತೆಯನ್ನು ಮತ್ತಷ್ಟು ಆಳಕ್ಕೆ ಇಳಿಸುತ್ತವೆ. ಬಾಯ್ಮಾತಿನ ಭಾಷೆ ಮತ್ತು ಸಾಹಿತ್ಯಗಳು ಉಚ್ಚಾರಣೆ-ಲಿಖಿತ ರೂಪದಲ್ಲಿ ಮೊಟ್ಟಮೊದಲನೆಯದಾಗಿ ಹಲ್ಮಿಡಿ ಶಾಸನದಲ್ಲಿ ಕಾಣಿಸಿಕೊಂಡಿತು. "ಪ್ರಾಚೀನ ಕಾಲದಲ್ಲಿ ಈ ಗ್ರಂಥಸಾಹಿತ್ಯ ಮೊದಲು ಆಶ್ರಮದಲ್ಲಿ, ಆಮೇಲೆ ಅರಮನೆಯಲ್ಲಿ ತರುವಾಯ ಗುರುಮನೆಯಲ್ಲಿ ಸೃಷ್ಟಿಪಡೆಯಿತು. ಈ ಮೂರೂ ಕ್ಷೇತ್ರದವರು ತಮ್ಮ ಜೀವಿತಕರ್ತವ್ಯದ ಒಂದು ಅಂಗವೆಂಬಂತೆ ಈ ಕಾರ್ಯವನ್ನು ನಡೆಸಿಕೊಂಡು ಬಂದರು."[8] ಕನ್ನಡ, ತನ್ನ ಕನ್ನಡತನವನ್ನು ಬೇರು ಬಿಡುವ ಮುನ್ನ ಭರತವರ್ಷದಲ್ಲಿ ಸಂಸ್ಕೃತ ವ್ಯಾಪಕ ಭಾಷೆಯಾಗಿತ್ತು ಎಂಬುದು ನಿರ್ವಿವಾದದ ವಿಷಯ. ಸಂಸ್ಕೃತ ಸಾಹಿತ್ಯ, ಭಾರತೀಯ ಭಾಷೆಗಳ ಪ್ರೇರಕ, ಪೋಷಕ. ಅದು ಸತ್ಯವಾದುದು. ಆದುದರಿಂದಲೇ ಕನ್ನಡ ತನ್ನ ಜೀವನವನ್ನು ಸಂಸ್ಕೃತದೊಂದಿಗೇ ಪ್ರಾರಂಭಿಸಿತು. ಸಂಸ್ಕೃತ ಭೂಯಿಷ್ಠತೆಯೇ ಅಂದಿನ ಅನಿವಾರ್ಯ ಮಾಧ್ಯಮವಾಯಿತು. ಅದಕ್ಕೆ ಪ್ರಸಾರಮಾಧ್ಯಮಗಳಾಗಿ ಶಾಸನಗಳು ಬಂದವು. ಮೊಟ್ಟಮೊದಲಿಗೆ ಸಾಹಿತ್ಯ ನಿರ್ಮಾಣವೇ ಶಾಸನಗಳ ಉದ್ದೇಶವಲ್ಲ. ಘಟನೆಗಳ ನಿರೂಪಣೆಯಲ್ಲಿರುವ ಕಾವ್ಯಾಂಶವೇ ಮುಂದೆ ಬೆಳೆದ ಈ ಭಾಷೆಯ ಶ್ರೀಮಂತ ಸಾಹಿತ್ಯಕ್ಕೆ ನಾಂದಿ ಹಾಡಿದ್ದು. ಅವು ಸಾಹಿತ್ಯದ ಅಧಿಕೃತ ಸ್ವರೂಪದ ದಾಖಲೆಗಳೆನಿಸಿಕೊಳ್ಳುತ್ತವೆ. 'ಕನ್ನಡ ಸಾಹಿತ್ಯದ ತಲಕಾವೇರಿ' ಎಂಬ ಮಾತು ಔಚಿತ್ಯಪೂರ್ಣವಾದುದು. ರಾಜಾಶ್ರಯದಲ್ಲೇ ಬೆಳೆದ ಈ ಶಾಸನದ ಭಾಷೆ, ನೇರವಾಗಿ 'ಸಾಹಿತ್ಯ' ಎಂದೆನಿಸಿಕೊಳ್ಳದಿದ್ದರೂ ಪರೋಕ್ಷವಾಗಿ ಈ ಕನ್ನಡ ಭಾಷೆಯ ಸಾಹಿತ್ಯಕ್ಕೆ ಪ್ರಚೋದನೆ ನೀಡಿದೆ. ಕನ್ನಡನಾಡಿನಲ್ಲಿ ಬೆಳೆದ ಸಾಹಿತ್ಯವೇ ಏಕೆ ಭಾರತೀಯ ಸಾಹಿತ್ಯಗಳಿಗೆಲ್ಲಾ ರಾಜಾಶ್ರಯವೇ ಪ್ರಬಲವಾದ ಬೆಳವಣಿಗೆಯ ಮಾಧ್ಯಮವಾಗಿದೆ. ಶ್ರೀಮಂತ ಸಾಹಿತ್ಯ ರಚನೆಯ ಕೇಂದ್ರಬಿಂದುವಾಗಿದೆ. ರಾಜೋತ್ತಿಗೆಯ ಏಳು-ಬೀಳುಗಳ ನಡುವೆಯೂ ಶಾಸನಗಳಲ್ಲಿ ಸಂಪದ್ಭರಿತವಾದ ಈ ಸಾಹಿತ್ಯ, ಧಾರ್ಮಿಕ-ಚಾರಿತ್ರಿಕ-ಸಾಂಸ್ಕೃತಿಕ-ರಾಜಕೀಯದ ಉಲ್ಲೇಖಗಳನ್ನು ನೀಡುವುದರೊಂದಿಗೆ ಸಾಹಿತ್ಯ ರಚನೆಗೆ, ಸಾಹಿತ್ಯ ಚರಿತ್ರೆಗೆ ಮೂಲ ಅಡಿಗಲ್ಲಾಗಿ ನಿಲ್ಲುತ್ತವೆ.—ಈ ದೃಷ್ಟಿಯಿಂದ ನೋಡಿದಾಗ ರಾಜಾಶ್ರಯದಲ್ಲಿ, ರಾಜಪರಿವಾರದಲ್ಲಿ, ರಾಜರಿಂದಲೇ ಬೆಳೆದ ಶಾಸನ ಸಾಹಿತ್ಯ, ಜನಪದ ಸಾಹಿತ್ಯ, ಶಿಷ್ಟಪದ ಸಾಹಿತ್ಯ ಇವುಗಳ ಅಭ್ಯಾಸ ಯೋಗ್ಯವೆನಿಸುತ್ತದೆ.

'ವಿನಾಶ್ರಯಂ ನಶೋಭಂತೇ ಕವಿತಾ ವನಿತಾ ಲತಾ'—ಎಂಬುದು ರಾಜ-ಕವಿಯರ ನಡುವಿನ ಸಂಬಂಧ ಕರ್ತವ್ಯಪರವೋ, ಋಣಪರವೋ ಆಗಿರುತ್ತದೆ ಎಂದು ಗೆರೆ ಹಾಕಿ ಹೇಳುವುದು ಸುಲಭವಲ್ಲ. ಆದರೂ ಸಾಹಿತ್ಯಕ್ಕೆ, ಅದನ್ನು ರಚಿಸುವ ಕವಿಸಂಕುಲಕ್ಕೆ ಶೈಶವಾವಸ್ಥೆಯಲ್ಲಿ ಆಶ್ರಯ ಅಗತ್ಯವೆನಿಸುತ್ತದೆ. "ಯಾವ ಭಾಷೆಯೇ

---

7 ಕರ್ನಾಟಕ ಇತಿಹಾಸ ದರ್ಶನ—ಡಾ. ಎಂ. ವಿ. ಕೃಷ್ಣರಾವ್, ಎಂ. ಕೇಶವಭಟ್ಟ, ೧೯೬೦, ಪುಟ ೧೧೮.

8 'ಸಾಹಿತ್ಯ ಸಂಪಾದನೆ', ಡಾ. ಎಂ. ಎಂ. ಕಲಬುರ್ಗಿ, ೧೯೭೮, ಮದರಾಸು, ಪುಟ ೩.

ಆಗಲೀ ಏಳಿಗೆಗೆ ಬರಬೇಕಾದರೆ ರಾಜಾಶ್ರಯ ಅವಶ್ಯವೆಂಬುದನ್ನು ಯಾರೂ ಒಪ್ಪದೇ ಇರಲಾರರು."[9] ಅದೇ ರೀತಿಯಾಗಿ ಸಾಹಿತ್ಯಕ್ಕೆ ರಾಜಾಶ್ರಯ ನೀಡುವುದು ನಮ್ಮ ಸಂಪ್ರದಾಯದ ಒಂದು ಅಂಗವಾಗಿ ಬಂದಿದೆಯಲ್ಲದೆ ಅನೇಕ ಯುಗಗಳವರೆಗೆ ಒಬ್ಬ ಕವಿ, ಆಸ್ಥಾನ ಕವಿಯಾಗಿರುವುದು ಸರ್ವಸಾಮಾನ್ಯ ಪದ್ಧತಿಯಾಗಿತ್ತು."[10] ಒಟ್ಟಿನಲ್ಲಿ ರಾಜಾಶ್ರಯ ಸಾಹಿತ್ಯಕ್ಕೆ ಬಿಡಲಾರದ ಸಂಬಂಧವನ್ನು ನೀಡಿ ತಾನೂ ಬೆಳೆದು ಸಾಹಿತ್ಯವನ್ನು ಬೆಳಸಿಕೊಂಡು ಬಂದಿದೆ. ಆದುದರಿಂದ "ಪ್ರಾಚೀನ ಕರ್ನಾಟಕವನ್ನು ಮುನ್ನಡೆಸಿದ ಶಕ್ತಿಗಳಲ್ಲಿ ರಾಜಶಕ್ತಿ ಪ್ರಮುಖವಾದುದು."[11] ಕರ್ನಾಟಕದ ಅರಸುಮನೆತನಗಳ "ರಾಜಾಶ್ರಯದ ಬೆಳ್ಗೊಡೆಯ ನೆರಳಿನಲ್ಲಿ ಕನ್ನಡ ಸಾಹಿತ್ಯ ಹುಲುಸಾಗಿ ಬೆಳೆಯಿತು."[12] ಪ್ರಸಿದ್ಧ ಕವಿಗಳನ್ನು ತಮ್ಮ ಆಸ್ಥಾನಕ್ಕೆ ಆಹ್ವಾನಿಸುವುದಲ್ಲದೇ ಸ್ವತಃ ತಾವೇ ಕಾವ್ಯ ರಚಿಸಿ ಸಾಹಿತ್ಯ ಸೇವೆ ಮಾಡಿದವರಿದ್ದಾರೆ. "ಪ್ರಪಂಚದ ಎಲ್ಲಾ ಸಾಹಿತ್ಯದಲ್ಲೂ ರಾಜಾಶ್ರಯವನ್ನು ಪಡೆದು ಸೃಷ್ಟಿಯಾದ ಗ್ರಂಥಸಮುದಾಯವಿರುತ್ತದೆ. ಇದರ ಜೊತೆಗೆ ಶ್ರೀಮಂತರೂ, ದಂಡನಾಯಕರೂ ಆಶ್ರಯದಾತರಾಗಿರುತ್ತಾರೆ. ಮತ್ತೆ ಕೆಲವು ರಾಜರೇ ಸ್ವತಃ ಕವಿಗಳಾಗಿ ಆಶ್ರಯದಾತರಾಗಿ ಸಾಹಿತ್ಯ ಸೇವೆ ಸಲ್ಲಿಸಿರುತ್ತಾರೆ."[13] "ರಾಜಾಶ್ರಯ; ಒಂದು ನಾಡಿನ ಶ್ರೀಮಂತ ಸಾಹಿತ್ಯ ರಚನೆಗೆ ಕಾರಣವಾಗುತ್ತದೆ ಎಂಬ ಮಾತಿನ ಹಿಂದೆಯೇ ಅಂಥ ಸಾಹಿತ್ಯದ ಸ್ವಂತಿಕೆ-ಸ್ವಾತಂತ್ರಿಕೆಗಳಿಗೆ ಸೀಮಿತ ಪರಿಧಿಯನ್ನು ನಿರ್ಮಿಸುತ್ತದೆ. ಎಂಬುದೂ ಐತಿಹಾಸಿಕ ಸತ್ಯ."[14] ಭಾರತೀಯ ಸಾಹಿತ್ಯ ನಿರ್ಮಾಣದಲ್ಲಿ ರಾಜಾಶ್ರಯ ಬಹು ದೊಡ್ಡ ಪಾತ್ರ ವಹಿಸಿದೆ. ಕನ್ನಡ ಸಾಹಿತ್ಯಕ್ಕೆ ರಾಜಾಶ್ರಯದ ಋಣ ಸಣ್ಣದೇನೂ ಅಲ್ಲ. ಪಂಪ ಪೂರ್ವಯುಗದಲ್ಲಿ ಬಂದ ಸಾಹಿತ್ಯವಂತೂ ರಾಜಾಶ್ರಯದ ಸಾಹಿತ್ಯವೇ ಆಗಿದೆ. (ಜನಪದ ಸಾಹಿತ್ಯ ಕಾಣಲಾಗದಷ್ಟು ರಾಜಾಶ್ರಯದ ಸಾಹಿತ್ಯ ಪ್ರಬಲವಾಗಿದೆ) ಕನ್ನಡನಾಡಿನ ಪ್ರಾಚೀನತೆಯಂತೂ ವ್ಯಾಸಭಾರತದ ಭೀಷ್ಮಪರ್ವದಲ್ಲಿ ಉಲ್ಲೇಖವಾಗುವುದರ ಮೂಲಕ ಭಾರತ ರಚನಾಕಾಲದಷ್ಟು ಹಿಂದೆ ಹೋಗುತ್ತದೆ. ಅದೇ ರೀತಿಯಾಗಿ ಕನ್ನಡ ನುಡಿಯೂ ಕ್ರಿ.ಪೂ. ಒಂದನೇ ಶತಮಾನದ ಮೂಲವನ್ನು ಅಸ್ಪಷ್ಟವಾಗಿ ತೋರಿಸುತ್ತದೆ. ಕನ್ನಡನಾಡು–ನುಡಿಗಳಿಂದ ನಾನಾ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಸಂಪ್ರದಾಯಗಳ ಸುಮಧುರ ಸ್ಥಾನವನ್ನು ನಾವು ಒಂದನೇ ಶತಮಾನದಿಂದಲೂ ಗುರುತಿಸಬಹುದು.

ಕನ್ನಡ ನಾಡನ್ನು ರಾಜಕೀಯವಾಗಿ ಮೊದಲು ಗುರುತಿಸುವುದು ಮೌರ್ಯರಿಂದಲೇ. "ಅಶೋಕನ ಕಾಲದಲ್ಲಿ ಬೌದ್ಧ ಧರ್ಮ ಕರ್ನಾಟಕಕ್ಕೆ ಹರಡಿತ್ತೆಂದು ಶ್ರೀಲಂಕಾದ ಬೌದ್ಧ ಧರ್ಮೀಯ ಗ್ರಂಥಗಳಾದ 'ದೀಪವಂಸ' ಮತ್ತು 'ಮಹಾವಂಸ' ತಿಳಿಸುತ್ತವೆ."[15] ಅಶೋಕನ ಶಾಸನಗಳಂತೂ ಗಟ್ಟಿ ಸಾಕ್ಷಿಗಳಾಗಿವೆ. "ಕರ್ನಾಟಕಕ್ಕೆ ಬಂದ ಜೈನ ಸಂಘವಾದರೋ ಉಜ್ಜಯಿನಿಯಿಂದ ಬಂತೆಂದು ಮಾತ್ರವಲ್ಲ. ಉಜ್ಜಯಿನಿಯ ಅರಸನಾದ ಚಂದ್ರಗುಪ್ತನ ಜತೆಯಲ್ಲಿ ಕರ್ನಾಟಕಕ್ಕೆ ಬಂತೆಂಬ ಕಾರಣ ಅದು ಪ್ರತ್ಯಕ್ಷತಃ ರಾಜಾಶ್ರಯದಲ್ಲೇ ಬಂದಿರಬೇಕೆಂದು ನಿಶ್ಚಯಿಸಬಹುದು."[16] ದಕ್ಷಿಣದಲ್ಲಿ ಪ್ರಾಬಲ್ಯಗೊಂಡ ಶಾತವಾಹನರು ಕರ್ನಾಟಕವನ್ನು ಆಳುತ್ತಿದ್ದರು. ಕುಂತಲವೆಂಬ ಕರ್ನಾಟಕದ ಪ್ರದೇಶವನ್ನು ಶಾತವಾಹ

---

9 ಶ್ರೀಯವರ 'ಸಂಭಾವನೆ', ಮೈಸೂರು, ೧೯೭೯ ಪುಟ ೧೩೮.

10 'ಮಣ್ಣಿನ ವಾಸನೆ'. ಡಾ. ಎಂ. ಗೋಪಾಲಕೃಷ್ಣ ಅಡಿಗ, ೧೯೭೫, ಸಾಗರ. ಪುಟ ೭೨.

11 ಧಾರವಾಡ ತಾಲೂಕಿನ ಶಾಸನಗಳು. ಡಾ. ಎಂ ಎಂ. ಕಲಬುರ್ಗಿ, ೧೯೭೬, ಪುಟ VI.

12 ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಡಾ. ಕೆ. ಶ್ರೀಕಂಠಯ್ಯ, ಮೈಸೂರು, ೧೯೮೩. ಪುಟ ೧೯.

13 ಕನ್ನಡ ಸಾಹಿತ್ಯ ಮತ್ತು ಮೈಸೂರು ಒಡೆಯರು, ಡಿ. ಟಿ. ರಂಗಸ್ವಾಮಿ, ಮೈಸೂರು, ೧೯೫೫.

14 ಶರಣ ಸಂಗಮ, ಅಖಿಲ ಭಾರತ ತೃತೀಯ ಶರಣ ಸಾಹಿತ್ಯ ಸಮ್ಮೇಳನದ ನೆನಪಿನ ಸಂಚಿಕೆ, ೧೯೯೦. ಬಸವಣ್ಣನವರ ರಾಜತ್ವ ಚಿಂತನೆ, ಮೃತ್ಯುಂಜಯ ರುಮಾಲೆ, ಪುಟ ೮೯.

15 ಕನ್ನಡ ಸಾಹಿತ್ಯ ಚರಿತ್ರೆ, ಮೈ ವಿ.ವಿ. ಮೈಸೂರು, ಸಂಪುಟ ೨, ೧೯೭೫. ಪುಟ ೩೮೧.

16 'ಕರ್ನಾಟಕಕ್ಕೆ ಜೈನಧರ್ಮದ ಆಗಮನ', ಕನ್ನಡ ಸಾಹಿತ್ಯ ಪಂಪತ್ರಿಕೆ. ಪೈ–೨೬.೨, ಡಿಸೆಂಬರ್ ೧೯೪೧, ಪು. ೧೨೮.

ನರು ಆಳುತ್ತಿದ್ದರೆಂಬುದಕ್ಕೆ ಸಾಕಷ್ಟು ಉಲ್ಲೇಖ ಗಳಿವೆ."[17] ಇದರ ಜತೆಗೆ ಕುಂತಲನಾಡು ಹೆಸರಾದ ಕರ್ನಾಟಕ ನಂದ ಸಾಮ್ರಾಜ್ಯದ ಒಂದು ಅಂಗವಾಗಿ ತ್ತೆಂದು ಹೇಳಲು ಆಧಾರಗಳಿವೆ.[18] ಈ ಶಾತವಾಹನರು ಅಧಿಕೃತವಾಗಿ ಆಳಲು ಪ್ರಾರಂಭಿಸಿರುವುದರ ಜತೆಗೆ ಕನ್ನಡನಾಡಿಗೆ–ನುಡಿಗೆ ಸಾಹಿತ್ಯ ಬಣ್ಣ ನೀಡಿದರು. "ರಾಜಶೇಖರ ತನ್ನ ಕಾವ್ಯಮೀಮಾಂಸೆಯಲ್ಲಿ ಹೆಸರಿಸು ವಂತೆ, ಕುಂತಲ ನಾಡಿನ ಅರಸ ಸಾತವಾಹನ ಮತ್ತು ವಾತ್ಸಾಯನ ತನ್ನ ಕಾಮಸೂತ್ರದಲ್ಲಿ 'ಕುಂತಲ ಸಾತಕರಣಿ' ಎಂದೂ ಪೌರಾಣಿಕವಾಗಿ ಈತನ ಹೆಸರು 'ಗೌತಮೀ ಪುತ್ರ ಸಾತಕರಣಿ' ಎಂದೂ ತಿಳಿಸುತ್ತಾನೆ."[19] ನಂತರ ಬಂದ ಇದೇ ರಾಜಮನೆತನದ ಹಾಲರಾಜ ಪಂಪ ಪೂರ್ವ ಯುಗದ ಕವಿಯೂ ರಾಜನೂ ಆಗಿ ದ್ವಿಮುಖ ಹೊತ್ತು ನಾಡು-ನುಡಿಯಲ್ಲಿ ಮಹತ್ವದ ಸ್ಥಾನ ಪಡೆಯು ತ್ತಾನೆ. ಸಾಹಿತ್ಯಿಕವಾಗಿ ಈತನ ರಾಚನಿಕ-ಕಾರ್ಯ ಕ್ಷೇತ್ರ ಮೆಚ್ಚುವಂಥದ್ದು. ತನಗಿಂತಲೂ ಹಿಂದಿನ, ತನ್ನ ಕಾಲದ ಬೇರೆ ಬೇರೆ ಕವಿಗಳಿಂದ ರಚಿತವಾದ ಸುಮಾರು ಏಳುನೂರು ಪ್ರಾಕೃತ ಪದ್ಯಗಳನ್ನು ಸಂಗ್ರಹಿಸಿ ದ್ದಾನೆ.[20] ಈ ಸಂಕಲನ ಗ್ರಂಥವು "ಹಳೆಯ ಮಹಾ ರಾಷ್ಟ್ರ ಭಾಷೆಯಲ್ಲಿ ಬರೆಯಲ್ಪಟ್ಟದ್ದು. ಸುಮಾರು ಏಳು ನೂರು ಆರ್ಯಾವೃತ್ತಗಳಿರುವ ಈ ಗ್ರಂಥದಲ್ಲಿ ಹಾಲ ರಾಜ ವಿಕ್ರಮಾದಿತ್ಯನ ಹೆಸರನ್ನು ಅವನ ಔದಾರ್ಯ ವನ್ನು ವರ್ಣಿಸಿರುವನು. ಈ ಹಾಲನು ಕ್ರಿ.ಶ. ೬೮ರಲ್ಲಿ (ಒಂದನೇ ಶತಕ) ಇದ್ದವನು. ಈತ ವರ್ಣಿಸಿರುವ ವಿಕ್ರಮಾರ್ಕ, ಕಾಳಿದಾಸನ ಆಶ್ರಯದಾತನಿರಬೇಕೆಂದು ಶ್ರೀ ಐರೋಡಿ ಶಿವರಾಮಯ್ಯನವರು ಊಹಿಸುತ್ತಾರೆ.[21] ಈತನಿಂದ ಸಂಕಲಿತವಾದ ಗಾಥಾಸಪ್ತಶತಿಯಲ್ಲಿ "ಅಮೃತಂ ಪ್ರಾಕೃತ ಕಾವ್ಯಂ" ಎಂದು ಪ್ರಾಕೃತವನ್ನು ಹೊಗಳಿರುವುದರಿಂದ ಪ್ರಾಕೃತವೇ ಮುಖ್ಯ ರಾಜ್ಯ ಭಾಷೆ ಯಾಗಿತ್ತು"[22] ಎಂಬ ಅಭಿಪ್ರಾಯವೂ ಮತ್ತು "ಸಂಸ್ಕೃತ ಪ್ರಾಕೃತ ಭಾಷೇತರವಾದ ಅತ್ತಾ, ತುಪ್ಪ, ಪೊಟ್ಟೆ, ತೀರ್ ಎಂಬ ನಾಮ ಮತ್ತು ಕ್ರಿಯಾಪ್ರಕೃತಿ ಗಳೇ ಆಗಿವೆ.[23] ಇದರ ಉಲ್ಲೇಖದಿಂದ ಶ್ರೀ ಪೈಗಳು ಕನ್ನಡ ಸಾಹಿತ್ಯವು ಕ್ರಿ.ಪೂ. ೧-೨ನೇ ಶತಮಾನದಲ್ಲೂ ಇದ್ದಿರಬೇಕೆಂದೂ ಊಹಿಸುತ್ತಾರೆ.[24] ಇದರ ಜತೆಗೆ ಈತನ ಸಂಗ್ರಾಹ್ಯ ಕಾರ್ಯದ ಪರಿಶ್ರಮಕ್ಕೆ ಸಾಕ್ಷಿಯಾಗಿ "ಅತ್ತಾ, ಅದ್ದಾಯೇ, ಕರಣಿ ಕೈ, ಪಿಲೂ ಅ, ಪೋಡಿ, ರೊಂಪ ಮುಂತಾದವುಗಳು ತೆಲುಗು ಶಬ್ದಗಳೆಂದು ಊಹಿಸಲಾಗಿದೆ."[25] ಈ ದೃಷ್ಟಿಯಿಂದ ನೋಡಿದಾಗ ಒಬ್ಬ ರಾಜನಾಗಿ, ಕವಿಯಾಗಿ ನಾಡಿನ, ನುಡಿಯ ಬಗ್ಗೆ ಯಿದ್ದ ವಿಶೇಷ ಅಭಿಮಾನದಿಂದ ನಮಗೂ ಈತನ ಬಗ್ಗೆ ವಿಶೇಷ ಅಭಿಮಾನ ಬರುತ್ತದೆ. ಜೊತೆಗೆ ಪೈ ಗುರುತಿಸು ವಂತೆ "ರಾಏಣ ವಿ ರ ಇ ಅ ಏ ಕುಂತಲ ಜಣವಅ ಇಣೇಣ ಹಾಲೇಣ । ಕುಂತಲ ಜಣವಅ ಇಣ=ಕುಂತಲ ಜನಪಇನ, ಅಂದರೆ ಕುಂತಲ ಜನಪದೇಶ್ವರನೆಂದೂ 'ಕುಂತಲ ಜಾನಪದೇಶ್ವರ ಪ್ರತಿಷ್ಠಾನ ಪತ್ತನಾಧೀಶ.... ಹಾಲಾದ್ಯುಪ ನಾಮಕ ಶ್ರೀ ಸಾತವಾಹನನರೇಂದ್ರ' ನೆಂದೂ[26] ಬಿರುದು ಪಡೆದಿರುವುದು ಈತನ ಸಾರ್ಥಕ ಬದುಕನ್ನು ತೋರಿಸುತ್ತದೆ. ಇದರ ಜತೆಗೆ ರಾಜವಲಯದ ಪ್ರಥಮ ಕೃತಿ ಆಗಿರುವುದರಿಂದ ಈ ಕೃತಿಯ ಪರಿಸರ

---

17 Mysore State Gazetteer (Bellary Dist), Bangalore, 1972, P-43.
18 EC VII SK 225
19 Mysore State Gazetteer (Bellary Dist), Bangalore, 1972, P-43.
20 ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಸಾ.ಶಿ. ಮರುಳಯ್ಯ (ಮೂಲ ಪ್ರತಿ) ಪ್ರಸ್ತಾವನೆಯಲ್ಲಿ.
21 ಐರೋಡಿ ಶಿವರಾಮಯ್ಯ: ಬದುಕು-ಬರೆಹ, ಸಂ. ಕೆ. ಶಿವರಾಮ ಕಾರಂತ, ೧೯೭೭, P-79.
22 ಕನ್ನಡ ಸಾಹಿತ್ಯ ಒಂದು ಚಾರಿತ್ರಿಕ ಬೆಳವಣಿಗೆ, ಸಿ. ವೀರಣ್ಣ, ಬೆಂಗಳೂರು, ಪುಟ ೨೮.
23 ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೨. ಮೈ.ವಿ.ವಿ. ಪುಟ ೪೨೮.
24 ಅದೇ., ಪುಟ ೪೮೧.
25 ತೆಲುಗು ಭಾಷೆ ಮತ್ತು ಸಾಹಿತ್ಯ, ಡಾ. ಆರ್ವಿಯಸ್ ಸುಂದರಂ, ೧೯೮೨, ಮೈಸೂರು. ಪುಟ ೪.
26 ಶ್ರೀಯುವರ 'ಸಂಭಾವನೆ', ಪುಟ ೧೭೧. ೧೯೭೯ ಬೆಂಗಳೂರು.

ವೀಕ್ಷಣೆ ಸೂಕ್ತವೆನಿಸುತ್ತದೆ." ಶಾತವಾಹನ ಮನೆತನದ ಅರಸರಿಗೆ ಪ್ರಾಕೃತ ಭಾಷೆಗಳ ಬಗ್ಗೆ ಬಹಳ ಗೌರವ ಮತ್ತು ಮೋಹವಿತ್ತೆಂಬುದಕ್ಕೆ ಇವರ ಕಾಲದ ಪ್ರಾಕೃತ ದಲ್ಲಿನ ಶಾಸನಗಳೇ ಸಾಕ್ಷಿ."[27] ಅಂದು ಮತ್ತು ಎಂದೂ ಈ ಶಾಸನಗಳು ರಾಜನ ಮೂಲಕ, ರಾಜಾಜ್ಞೆಯಾಗಿ ಹೊರಡುವುದರಿಂದ ಆ ಶಾಸನಗಳಲ್ಲಿ ಬಳಸುವ ಭಾಷೆ ಸಾಮಾನ್ಯವಾಗಿ ರಾಜಭಾಷೆಯಲ್ಲೇ ಇರುತಿತ್ತು." ಇವು (ಶಾಸನಗಳು) ಮುಖ್ಯವಾಗಿ ನಾಸಿಕ್, ನಾನಾ ಘಾಟ,' ಸಾಂಚಿ, ಕಾರ್ಲೆ, ಕಣ್ಹೇರಿ, ಅಮರಾವತಿ ಮೊದಲಾದ ಸ್ಥಳಗಳಲ್ಲಿ ದೊರೆತಿವೆ.[28] "ಸಂಸ್ಕೃತದ ಜತೆಗೆ ಪ್ರಾಕೃತವನ್ನು ಆ ಕಾಲದ ಅರಸರು ಪೋಷಿಸುತ್ತಾ ಬಂದರು."[29] ಹೀಗೆ ಸಂಸ್ಕೃತ-ಪ್ರಾಕೃತ-ಪಾಲಿ (ಬೌದ್ಧರು ತಂದ ಭಾಷೆ) ಮುಂತಾದ ಪ್ರಾಚೀನ ಭಾಷೆಗಳ ಮಧ್ಯೆ ಸಿಕ್ಕ ಕನ್ನಡ ಎಂಥ ಸಂದಿಗ್ಧತೆಯಲ್ಲಿತ್ತು ಎಂದು ಊಹಿಸಬಹುದು. ಜತೆಗೆ ಈ ದೃಷ್ಟಿಯಿಂದ ಹಾಲರಾಜನಿಂದ ಸಂಪಾದಿಸಲ್ಪಟ್ಟ 'ಗಾಥಾಸಪ್ತಸತೀ'ಯ ಮಹತ್ವವನ್ನು ಗುರುತಿಸಬಹುದು—ಒಟ್ಟಿನಲ್ಲಿ ಸಾಹಿತ್ಯ ರಚನೆಯಾಗುವಷ್ಟು ಪ್ರಬಲವಾಗಿ ಆ ಕಾಲದಲ್ಲಿ ಕನ್ನಡ ಬೆಳೆದಿದ್ದಿಲ್ಲ ಎಂದು ಭಾವಿಸಿದರೂ ಮುಂದಿನ ಸಾಹಿತ್ಯ ಸೃಷ್ಟಿಗೆ ಸ್ವಲ್ಪ ವೇಗವನ್ನು ನೀಡಿತು ಎಂದು ಹೇಳಬಹುದು.

ಆ ಕಾಲದಲ್ಲಿ ನಂತರ, ಕನ್ನಡ ಕೃತಿಗೆ ಬದಲಾಗಿ ಪ್ರಾಕೃತ ಭಾಷೆಯನ್ನು ಸ್ವೀಕರಿಸದೇ ಅದರ ಒಂದು ಉಪಭಾಷೆಯಾದ ಪೈಶಾಚೀ ಭಾಷೆಯಲ್ಲಿ ರಚನೆಯಾದ ಕೃತಿಯೊಂದು ಸಿಗುತ್ತದೆ. "ಹಾಲರಾಜನ ಆಸ್ಥಾನ ಕವಿಯಾದ ಗುಣಾಢ್ಯನಿಂದ 'ಬೃಹತ್ಕಥೆ' ಎಂಬ ಕಥಾಸಂಕಲನವೊಂದು ಸಿಗುತ್ತದೆ."[30] ಶರ್ವವರ್ಮ ಮುಂತಾದ ಬೇರೆ ಹಲವಾರು ವಿದ್ವಾಂಸರು ಹಾಲರಾಜನ ಆಸ್ಥಾನವನ್ನು ಅಲಂಕರಿಸಿದ್ದರು.[31] ಗುಣಾಢ್ಯನ ಪೈಶಾಚಿ ಭಾಷೆಯ ಬೃಹತ್ಕಥಾ ಈಗ ಉಪಲಬ್ಧವಿಲ್ಲ.[32] ಹಾಲರಾಜನ ಕೃತಿಯನ್ನು ಹನ್ನೆರಡನೇ ಶತಮಾನದ ಬಂಗಾಳದ ಗೋವರ್ಧನನೆಂಬ ಕವಿ ಸಂಸ್ಕೃತಕ್ಕೆ ಅನುವಾದಿಸಿದ್ದಾನೆ.[33] ಪ್ರಾಕೃತ ಭಾಷೆ ಅಂದು ಹೆಚ್ಚು ಪ್ರಚಾಲನೆಯಲ್ಲಿದ್ದರೂ ಸಂಸ್ಕೃತವೇ ಪಂಡಿತ ಭಾಷೆಯಾಗಿತ್ತು. ಹಾಲರಾಜನು ತನ್ನ ಆಸ್ಥಾನ ಕವಿ ಶರ್ವವರ್ಮನಿಂದ "ಕಾತಂತ್ರ ವ್ಯಾಕರಣ"ವೆಂಬ ಸುಲಭ ಸಂಸ್ಕೃತ ವ್ಯಾಕರಣ ಗ್ರಂಥವನ್ನು ಬರೆಯಿಸಿದನು.[34] ಶಾತವಾಹನರಲ್ಲಿ ರಾಜರು ಮೊದಮೊದಲು ಬೌದ್ಧ ಧರ್ಮವನ್ನೆ ಸೂತ್ರವನ್ನಾಗಿಸಿ ಅನಂತರ ವೈದಿಕ ಧರ್ಮದ ಪ್ರಭಾವವೂ ಆಗ ತೊಡಗಿರಬೇಕು ಎಂದೆನಿಸುತ್ತದೆ.— ಹೀಗೆ ಶಾತವಾಹನರಿಂದ ಅಸ್ಪಷ್ಟ ವಿನ್ಯಾಸ ಪಡೆದ ಕನ್ನಡ ಸಾಹಿತ್ಯಕ್ಕೆ ಒಂದು ರೂಪ ಕೊಟ್ಟವರು ಗಂಗರು. ಕ್ರಿ.ಶ. ೨ನೇ ಶತಮಾನದಿಂದ ಹನ್ನೊಂದನೇ ಶತಮಾನದ ವರೆಗೆ ಆಳಿದ ಗಂಗರ ಆಶ್ರಯದಲ್ಲಿ ಪಾಂಡಿತ್ಯಪೂರ್ಣ ಕನ್ನಡ ಕೃತಿಗಳು ರಚನೆಯಾಗಿವೆ.

ಕ್ರಿ.ಶ. ೨ನೇ ಶತಮಾನದಲ್ಲಿ ಗಂಗ ರಾಜ್ಯ ಸ್ಥಾಪನೆಗೆ ನೆರವಾದ ಸಿಂಹನಂದಿ ಕವಿಯಾಗಿದ್ದನೆಂದು ಹೇಳಲಾಗಿದೆ.[35] ಸುಮಾರು ಮೂರನೇ ಶತಮಾನದಲ್ಲಿ ಆಳುತ್ತಿದ್ದ ಇಮ್ಮಡಿ ಮಾಧವನೂ ದತ್ತಕನ ಬಗ್ಗೆ ಗ್ರಂಥವನ್ನು ರಚಿಸಿದ್ದಾನೆ.[36] ಆದರೆ "ಕಾಮಸೂತ್ರದಲ್ಲಿ

---

27 ಪ್ರಾಕೃತ ಭಾಷೆಗಳು, ಡಾ. ಪಿ.ಬಿ ಬಡಿಗೇರ, ೧೯೭೮, ಮೈಸೂರು, ಪುಟ ೧೦.

28 ಅದೇ ಪುಟ ೧೦.

29 ಅದೇ ಪುಟ ೧೦

30 ಕರ್ನಾಟಕದ ಇತಿಹಾಸ ದರ್ಶನ, ಡಾ. ಎಂ.ವಿ ಕೃಷ್ಣರಾವ್, ಎಂ ಕೇಶವಭಟ್ಟ, ೧೯೭೦, ಪುಟ ೧೧೦೩ ಮತ್ತು ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಸಿ.ಕೆ. ಮರುಳಯ್ಯ (ಮೂಲಪ್ರತಿ) ಪ್ರಸ್ತಾವನೆಯಲ್ಲಿ.

31 ಕರ್ನಾಟಕದ ಇತಿಹಾಸ ದರ್ಶನ, ಡಾ ಎಂ ವಿ. ಕೃಷ್ಣರಾವ್, ಎಂ ಕೇಶವಭಟ್ಟ, ೧೯೭೦, ಪು-೧೧೦೩.

32 ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಡಾ. ಎಂ.ಎಂ. ಕಲಬುರ್ಗಿ. ೧೯೭೩. ಧಾರವಾಡ, ಪುಟ ೧೮೩.

33 ಕರ್ನಾಟಕದ ಇತಿಹಾಸ ದರ್ಶನ, ಡಾ. ಎಂ.ವಿ ಕೃಷ್ಣರಾವ್, ಎಂ. ಕೇಶವಭಟ್ಟ, ೧೯೭೦, ಪುಟ ೧೧೦೩.

34 ಅದೇ, ಪುಟ ೧೧೦೩.

35 ಪ್ರಾಚೀನ ಭಾರತದ ಸಾಮಾಜಿಕ ಇತಿಹಾಸ, ಎಂ. ನಂಜಮ್ಮಣ್ಣಿ. ಪುಟ ೪೧, ೧೯೮೦, ಮೈಸೂರು.

36 ಅದೇ., ಪುಟ ೪೧.

ಬರುವ ವೈಶಿಕವೆಂಬ ವಿಷಯದ ಬಗ್ಗೆ 'ದತ್ತಕ' ಎಂಬ (ಕನ್ನಡ ಜತ್ತಕ) ಪ್ರತ್ಯೇಕ ಗ್ರಂಥ ಬರೆದಿರುವುದಾಗಿ ವಾತ್ಸಾಯನ ಹೇಳಿಕೊಂಡಿದ್ದಾನೆ. ಆದ್ದರಿಂದ ಇಮ್ಮಡಿ ಮಾಧವನು ವಾತ್ಸಾಯನನ 'ಕಾಮಸೂತ್ರ'ದ ವೈಶಿಕ ವಿಭಾಗದ ಮೇಲೆ ಟೀಕೆಯನ್ನು ಬರೆದಿರಬೇಕೆಂಬುದು ಹೆಚ್ಚು ಸಾಧುವಾದುದು.[37]

ಜೈನ ಮತಾವಲಂಬಿಗಳಾಗಿದ್ದ ಈ ತಲಕಾಡಿನ ಗಂಗರು ಕನ್ನಡ ನುಡಿಗೆ ಸಾಕಷ್ಟು ಪ್ರೋತ್ಸಾಹ ನೀಡಿದ್ದಾರೆ. ಕನ್ನಡ ಕಣ್ಣು ಬಿಟ್ಟದ್ದು ಇವರ ಕಾಲದಲ್ಲೇ.

ಈ ಗಂಗರಸರಲ್ಲೇ ಶ್ರೇಷ್ಠ ದೊರೆಯೆನಿಸಿದ ದುರ್ವಿನೀತ ಸಾಹಿತ್ಯಿಕವಾಗಿ ಶ್ರೇಷ್ಠನೇ. "ಕ್ರಿ.ಶ. ೫೮೨-೬೨೨ ರವರೆಗಿದ್ದ ಈತನು ಮಹಾಯೋಧನಷ್ಟೇ ಅಲ್ಲದೇ ಶ್ರೇಷ್ಠ ವಿದ್ವಾಂಸನೂ ವಿದ್ಯಾಭಿಮಾನಿಯೂ ಆಗಿದ್ದ.[38] ಈತ ರಚಿಸಿದ ಕೃತಿಗಳು; ಈ ಮುನ್ನ ಬಂದ ಗುಣಾಢ್ಯನ 'ಬೃಹತ್ಕಥೆ'ಯ ಸಂಸ್ಕೃತ ಅನುವಾದ, ಶಬ್ದಾವತಾರಕವೆಂಬ ಸಂಸ್ಕೃತ ವ್ಯಾಕರಣ ಮತ್ತು ಭಾರವಿಯ 'ಕಿರಾತಾರ್ಜುನೀಯ'ದ ಪಂಚದಶಸರ್ಗಕ್ಕೆ ಟೀಕೆಯನ್ನು ರಚಿಸಿರಬಹುದೆಂದು ವಿದ್ವಾಂಸರು ಅಭಿಪ್ರಾಯಿಸುತ್ತಾರೆ.

ಈತನ ಗುರುಗಳಾದ ಪೂಜ್ಯಪಾದರೂ ಶಬ್ದಾವತಾರವೆಂಬ ಪಾಣಿನೀಸೂತ್ರ ವೃತ್ತಿಯನ್ನು ಬರೆದಿದ್ದು, ಅದಕ್ಕೆ ಟೀಕೆಯಾಗಿ ದುರ್ವಿನೀತ ಅದೇ ಹೆಸರಿನ ಗ್ರಂಥವನ್ನು ಬಹುಶಃ ಕನ್ನಡದಲ್ಲಿ ಬರೆದಿರಬೇಕೆಂದು ಹೇಳಲಾಗಿದೆ. ಭಾರವಿ ಇವನ ಆಸ್ಥಾನದಲ್ಲಿ ಕೆಲಕಾಲ ಇದ್ದಂತೆ ತೋರುತ್ತದೆ.[39] ಹೀಗೆ ಸಾಹಿತ್ಯ ಕ್ಷೇತ್ರದಲ್ಲಿ ಈ ರಾಜ ಪಡೆದುಕೊಂಡಿರುವ ಸ್ಥಾನವೇ ಮುಂದೆ:

ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನೀತಾದಿಗಳೀ
ಕ್ರಮದೊಳೆ ನೆಗಳ್ದಿ ಗದ್ಯಾ
ಶ್ರಮ ಪದ ಗುರುತಾ ಪ್ರತೀತಿಯಂ ಕೆಯ್ಕೊಂಡರ್
(೧-೨೯)

ಕವಿರಾಜಮಾರ್ಗದಲ್ಲಿ ಶ್ರೀವಿಜಯ ಗದ್ಯಕವಿಗಳಿಗೆ ಸ್ಥಾನ ಕೊಟ್ಟಿರಬಹುದು. ಈ ದುರ್ವಿನೀತನ ಗುರುವಾದ ಪೂಜ್ಯಪಾದನು ಉಮಾಸ್ವಾಮಿಯ 'ತತ್ವಾರ್ಥ ಸೂತ್ರ'ದ ಟೀಕಾಗ್ರಂಥವಾದ 'ಸರ್ವಾರ್ಥ ಸಿದ್ಧಿ'ಯನ್ನು ಬರೆದನು. ಇವನ 'ಸಮಾಧಿ ಶತಕ' ಎಂಬ ಜೈನ ಸಿದ್ಧಾಂತ ಗ್ರಂಥವು ಪ್ರಸಿದ್ಧವಾಗಿದೆ. ಈತನ 'ಜೈನೇಂದ್ರ ವ್ಯಾಕರಣ'ವೂ ಹೆಸರಾಗಿದೆ. ವೈದ್ಯಶಾಸ್ತ್ರದಲ್ಲೂ ಈತ ನಿಷ್ಣಾತನಾಗಿದ್ದ.[40] ಆದರೆ ಕಲಬುರ್ಗಿಯವರು ದುರ್ವಿನೀತ ಪೂಜಪಾದರ ನಡುವಿನ ಗುರುಶಿಷ್ಯರ ಸಂಬಂಧವನ್ನು ಅನುಮಾನಿಸುತ್ತಾರೆ.[41] ಬೇಂದ್ರೆಯವರು ಈ ಪೂಜ್ಯಪಾದನೇ ಪಂಡಿತನೆಂದು ಬಿರುದಿಸಿಕೊಂಡ ಕವಿರಾಜಮಾರ್ಗೋಕ್ತನಾಗಿರಬೇಕೆಂದು ಊಹಿಸುತ್ತಾರೆ.

ಈತನ ನಂತರ ಗಂಗರಲ್ಲಿ ಹೆಸರಿಸಬಹುದಾದವನು ಶ್ರೀಪುರುಷ (ಕ್ರಿ.ಶ. ೭೨೬–೭೮೯) ಇವನು ಗಜಶಾಸ್ತ್ರವನ್ನು ರಚಿಸಿದ್ದಾನೆ. (ಇದು ಯಾವ ಭಾಷೆಯದೋ ತಿಳಿಯದು.[44] ಇದೇ ವಂಶದ ಮತ್ತೊಬ್ಬ ಪ್ರಸಿದ್ಧ ದೊರೆ ಸೈಗೊಟ್ಟ ಶಿವಮಾರನು ('ಶಿವಮಾರದೇವರ ಸೈಗೊಟ್ಟನೆಂಬೆರಡನೆಯ ಪೆಸರಂ ತಾಳ್ದಿ')[45] ಈ ಶಿವಮಾರನು (೭೮೦–೮೧೪) ಬರೆದ ಒನಕೆವಾಡಾದುದ

37 ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೩, ಮೈ.ವಿ.ವಿ., ಪುಟ ೩೦೮.
38 ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ- ಸಾ.ಶಿ. ಮರುಳಯ್ಯ (ಮೂಲಪ್ರತಿ) ಪ್ರಸ್ತಾವನೆಯಲ್ಲಿ.
39 ಕನ್ನಡ ವಿಶ್ವಕೋಶ, ಸಂ ೫, ಮೈ.ವಿ.ವಿ. ಮೈಸೂರು, ೧೯೬೨, ಪುಟ ೮೬೫.
40 ಕರ್ನಾಟಕದಲ್ಲಿ ಜೈನಧರ್ಮ— ಒಂದು ಅಧ್ಯಯನ, ಡಾ. ಟಿ.ಜಿ. ಕಲಘಟಗಿ, ಪುಟ ೪.
41 ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಡಾ. ಎಂ.ಎಂ. ಕಲಬುರ್ಗಿ, ಧಾರವಾಡ, ೧೯೬೪, ಪುಟ ೩೮೦.
42 ಅದೇ., ಪುಟ ೩೮೦.
43 Karnataka through the ages, ಪುಟ ೧೩೦.
44 ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಸಾ.ಶಿ. ಮರುಳಯ್ಯ (ಮೂಲಪ್ರತಿ) ಪ್ರಸ್ತಾವನೆಯಲ್ಲಿ.
45 ಅದೇ.

(ಹೆಂಗಸರು ಧಾನ್ಯ ಕುಟ್ಟುವಾಗ ಹೇಳುವ ಹಾಡು) ಎಂದು ಶಾಸನವೊಂದು ತಿಳಿಸುತ್ತದೆ.[46] ಅಂದು ಅರಮನೆಯ ಸುತ್ತಮುತ್ತ ಅಥವಾ ಒಳಗೆ ಜನಪದ ಸಾಹಿತ್ಯ ಪ್ರವೇಶಿಸಿತ್ತು ಎಂದು ಧೈರ್ಯ ವಾಗಿ ಹೇಳಲು 'ಓನಕೆವಾಡು' ಮುಂದೆ ಬಂದು ನಿಲ್ಲುತ್ತದೆ. "ಶಿವಮಾರದೇವರ ಸೈಗೊಟ್ಟಸೆಂಬರಡನೆಯ ಪೆಸರಂ ತಾಳ್ದಿ ಶಿವಮಾರಮತಮೆಂದು ಗಜಶಾಸ್ತ್ರಮಂ ಮಾಡಿ ಮತ್ತಂ–

ಏವೇೞ್ವುದೊಶಿವಮಾರ ಮ ।
ಹೀವಳಯಾಧಿಪನ ಸುಭಗ ಕವಿತಾಗುಣಮಂ ।
ಭೂವಳಯದೊಳ್ ಗಜಾಷ್ಟಕ ।
ಮೋವನಿಗೆಯುಮೊನಕೆವಾಡುಮಾದುದೆ
ಪೇೞ್ಗುಂ ॥ 47

ಓನಕೆವಾಡು ಇದು ಕುಟ್ಟುವ ಹಾಡು. ಓವನಿಗೆ ಎಂದರೇನು ? ಓವೀ ಎಂಬ ಪದ್ಯ ಪ್ರಕಾರವು ಮರಾಠಿ ಯಲ್ಲಿ ಪ್ರಸಿದ್ಧವಾಗಿದೆ. ಹನ್ನೆರಡನೇ ಶತಮಾನದ ಚಾಲುಕ್ಯ ದೊರೆ ಸೋಮೇಶ್ವರನ ಮಾನಸೋಲ್ಲಾಸದಲ್ಲಿ 'ತಥಾ ಮಹಾರಾಷ್ಟ್ರೇಸು ಯೋಷಿದ್ಭಿರ್ ಓಂ ವೀ ಗೇಯಾತು ಕಂಡನೇ' ಎಂದಿದೆ. ಕಂಡನ ಎಂದರೆ ಕುಟ್ಟುವಿಕೆ. ಓಂ ವೀ ಇದು ಕುಟ್ಟುವ ಹಾಡಾ ಯಿತು[48]....ಮುಂತಾಗಿ ಡಾ. ರಂ.ಶ್ರೀ ಮುಗುಳಿಯವರ ಸಂಶೋಧನೆ ಅಂದಿನ ಪರಿಸರವನ್ನು ತೋರಿಸು ತ್ತದೆ.

ಇದರ ಜತೆಗೆ ಸೇತುಬಂಧವನ್ನು ಪ್ರಾಕೃತದಲ್ಲೂ, ಜಗಮತಕಲ್ಪನ ಮತ್ತು ಮೃಚ್ಛಕಟಿಕ ನಾಟಕದ ಉತ್ತ ರಾರ್ಧ ಇವುಗಳನ್ನು ಸಂಸ್ಕೃತದಲ್ಲೂ ರಚಿಸಿರುವು ದಾಗಿಯೂ ತಿಳಿಯುತ್ತದೆ.[49] ಇದರಿಂದ ಮಾತೃಭೂಮಿ ಗಾಗಿ ಕತ್ತಿ ಹಿಡಿದು ರಾಜನಾಗಿಯೂ ಮಾತೃಭಾಷೆಗಾಗಿ ಲೇಖನಿ ಹಿಡಿದು ಕವಿಯಾಗಿಯೂ ಮೆರೆದ ತನ್ನ ರಾಜ ವಂಶ ಪರಂಪರೆಯನ್ನು ಸಮರ್ಥವಾಗಿ ಮುಂದುವರಿಸಿ ಕೊಂಡು ಹೋದ. ಶಿವಮಾರ ನಿಜಕ್ಕೂ ಸ್ಮರಣಾರ್ಹನೇ. "ಈತನ ಗಜಾಷ್ಟಕ ಕನ್ನಡ ಕೃತಿಯೇ ಆಗಿದ್ದು ಅದು ಕನ್ನಡದ ಮೊದಲ ಅಷ್ಟಕ"[50] ಶಿವಮಾರನ ಈ ಸಾಹಿತ್ಯಿಕ ಪರಿಶೋಧ. ಈತನ ಪಾರಂಪರಿಕ ಹಿನ್ನೆಲೆಯನ್ನು ತೋರಿಸುತ್ತದೆ.

ನಂತರ ಎರಡನೇ ಶಿವಮಾರನ ತರುವಾಯ ಬಂದ ಮಾರಸಿಂಹನ (?) ಆಸ್ಥಾನದಲ್ಲಿ ಪಂಡಿತ 'ವಾದಿಘಂಗಲ' ಭಟ್ಟನು ಇದ್ದನು.[51] ಮುಂದೆ ಬಂದ ಮತ್ತೊಬ್ಬ ಸಾಹಿತ್ಯಾಭಿಲಾಷಿ ರಾಜನೆಂದರೆ, ಮಹೇಂದ್ರಾಂತಕ ಬಿರುದುಳ್ಳ ಎರೆಯಂಗ–ಎರೆಗಂಗ–ಎರೆಯಪ್ಪ. ಈತ ಅಲಭ್ಯಕೃತಿಗಳ ಕರ್ತೃ ಒಂದನೇ ಗುಣವರ್ಮನ ಆಶ್ರಯ ದಾತ. ಈತನೂ ಸಾಹಿತ್ಯಿಕವಾಗಿಯೂ ಚಾರಿತ್ರಿಕ ವಾಗಿಯೂ ಮಹತ್ವದ ಸ್ಥಾನ ಪಡೆದಿದ್ದಾನೆ. "....ಕಾವ್ಯ ಸಾರದಲ್ಲಿ ಉದ್ಧೃತಗೊಳಿಸಿದ ಪದ್ಯಗಳಲ್ಲಿ 'ಗಂಗಾ ಚಕ್ರಾಯುಧ, ಕಾನುದ, ಮಹೇಂದ್ರಾಂತಕ' ಎಂಬ ಬಿರುದುಗಳುಳ್ಳ ಗಂಗವಂಶದ ಕ್ರಿ.ಶ. ೯೦೭ ರಿಂದ ೯೨೦ರ ವರೆಗೆ ಆಳಿದ ಎರೆಯಪ್ಪ ಗಂಗರಾಜನ ಸ್ತುತಿಯಿದೆ."[52] ಈತನ ಕಾಲದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಕವಿಚರಿತೆ ಕಾರರು ತಮ್ಮ ಎರಡನೇ ಸಂಪುಟದಲ್ಲಿ ಕ್ರಿ.ಶ. ೮೮೬– ೯೧೩ ಎಂದಿದ್ದಾರೆ.

---

46 ಕರ್ನಾಟಕ ಕವಿಚರಿತೆ, ಸಂ. ೨, ಪುಟ ೩೨.

47 ಕರ್ನಾಟಕ ಕವಿಚರಿತೆ, ಸಂ. ೧. ೧೯೭೨, ಪುಟ ೧೮.

48 ಕನ್ನಡ ಭಾಷೆಯ ಚರಿತ್ರೆ, ಪಿ.ಜಿ. ಕುಲಕರ್ಣಿ, ೧೯೭೫, ಪುಟ ೧೧೦.

49 ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಸಾ.ಶಿ. ಮರುಳಯ್ಯ-೧೯೭೦. ಪ್ರಸ್ತಾವನೆ.

50 ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೧, ಪುಟ ೩೧೨.

51 ಕರ್ನಾಟಕದಲ್ಲಿ ಜೈನಧರ್ಮ, ಒಂದು ಅಧ್ಯಯನ, ಡಾ. ಟಿ.ಜಿ. ಕಲಘಟಗಿ, ೧೯೭೬, ಪುಟ ೪.

52 ಪಂಪನ ಸಮೀಪಪೂರ್ವ ಕಾವ್ಯಲುಪ್ತ, ಗುಪ್ತ, ಕನ್ನಡ ಕವಿತ್ರಯರು, ಕನ್ನಡ ನುಡಿ, ೨೦-೩.

ಈತನ ಆಸ್ಥಾನದಲ್ಲಿ ಒಂದನೇ ಗುಣವರ್ಮ ಆಶ್ರಿತನಾಗಿದ್ದನು. ಈ ಗುಣವರ್ಮ 'ಹರಿವಂಶ-ಶೂದ್ರಕ' ಎಂಬ ಎರಡು ಗ್ರಂಥಗಳನ್ನು ರಚಿಸಿರುವಂತೆ ಮುಂದಿನ ಸಂಕಲನದಿಂದ ತಿಳಿದು ಬರುತ್ತದೆ. ಹರಿವಂಶವು ೨೨ನೇ ತೀರ್ಥಂಕರನ ಚರಿತ್ರೆಯಿರಬಹುದೆಂದೂ ಊಹಿಸ ಬಹುದು.[53] ಈತನ ಈ ಕೃತಿಗಳು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕೆಲವು ಕಾರಣಗಳಿಂದ ವಿಶೇಷ ಪಡೆದು ಕೊಂಡಿವೆ. ವಿದ್ವಾಂಸರ ಅಭಿಪ್ರಾಯದಂತೆ ಈತನ 'ಶೂದ್ರಕ' ಚಂಪೂಕೃತಿಯೆಂದು ಸ್ಪಷ್ಟವಾಗುತ್ತದೆ. ಅಭಿನವವಾದಿ ವಿದ್ಯಾನಂದನು 'ಕಾವ್ಯಸಾರ'ದಲ್ಲಿ ಇದರದೊಂದು ಗದ್ಯವನ್ನು, ಎರಡನೇ ನಾಗವರ್ಮ, ಕೇಶಿರಾಜ, ಮಲ್ಲಿಕಾರ್ಜುನರು ಇದರಿಂದ ಕೆಲವು ಪದ್ಯ ಗಳನ್ನು ಉದಾಹರಿಸಿದ್ದಾರೆ.[54] ಇದರ ಜತೆಗೆ ಮತ್ತೊಂದು ವಿಶೇಷವೆಂದರೆ ಪಂಪನಿಂದ ಪ್ರಾರಂಭ ವಾಯಿತು ಎನ್ನಲಾದ ಸಮೀಕರಣ ಪದ್ಧತಿ ಇವನಲ್ಲಿತ್ತು. 'ಕಾವ್ಯಸಾರ' 'ಕಾವ್ಯಾವಲೋಕನ'ಗಳಲ್ಲಿ ಹೇಳಿದ ಈ ಕಾವ್ಯದ ಪದ್ಯಗಳಲ್ಲಿ 'ಮಹೇಂದ್ರಾಂತಕ,' 'ಕಾಮದ' 'ಗಂಗಾ ಚಕ್ರಯುದ'–ಇತ್ಯಾದಿ ಬಿರುದುಗಳುಳ್ಳ ಗಂಗ ರಾಜನನ್ನು (ಎರೆಯಪ್ಪ) ಶೂದ್ರಕನಿಗೆ ಹೋಲಿಸಿದಂತೆ ತಿಳಿಯುತ್ತದೆ.[55] ಎಂದು ಕೆ. ವೆಂಕಟರಾಮಾಚಾರ್ಯರು ಗುರುತಿಸಿದ್ದಾರೆ. ಇದರ ಜತೆಗೆ ಅವರೇ"...ಗುಣ ವರ್ಮನ' ತತ್ಪೂರ್ವದ 'ಆವಂತೀ ಸುಂದರಿಕಥೆ' ಹಾಗೂ ತತ್ಪ್ರಾಚೀನ ಕೃತಿಗಳ ಹಿನ್ನೆಲೆಯಿಂದ ಶೂದ್ರಕ ಕಥೆಯನ್ನು ಬರೆಯುತ್ತಾ ತನ್ನ ಆಶ್ರಯದಾತನಾದ ಗಂಗರಾಜನನ್ನು ಅವನಿಗೆ ಹೋಲಿಸಿದ್ದಾನೆ" ಎನ್ನುತ್ತಾರೆ. ಆದರೆ ಈತನ ಮತ್ತು ಪಂಪನ ನಡುವಿರುವ ಈ ಅಬೇಧ ಕಲ್ಪನೆಗಳಲ್ಲಿ ಸೂಕ್ಷ್ಮವ್ಯತ್ಯಾಸವನ್ನು ಕೆ. ವಿ. ಸುಬ್ಬಣ್ಣನವರು ಗುರುತಿಸುತ್ತಾರೆ ಪುರಾಣ–ಪ್ರಕೃತಗಳ ಸಮೀಕರಣ ತಂತ್ರ ಪಂಪನಿಗೆ ಮೊದಲೇ ಕನ್ನಡದಲ್ಲಿ ಇತ್ತು ಅಂತ ನಾವು ಕೇಳ್ತೀವೆ. ಆದ್ರೆ ಅದನ್ನ ಕಾವ್ಯಕ್ಕೆ ಅನಿವಾರ್ಯ. ಆಗೋ ಹಾಗೇ ಕಾವ್ಯದ ಆಶಯಕ್ಕೆ ಅಭಿನ್ನ ಆಗೋ ಹಾಗೆ ಬಳಸಿಕೊಂಡದ್ದು ಪಂಪನ ಹೆಚ್ಚಳ."[56] ಒಂದನೇ ಗುಣವರ್ಮನಿಂದ ಗುರುತಿಸಲ್ಪಟ್ಟ ಮತ್ತೊಂದು ಅಂಶ ವೆಂದರೆ ಲೌಕಿಕ ಕಾವ್ಯವಾಗಿ 'ಶೂದ್ರಕ', ಧಾರ್ಮಿಕ ಕಾವ್ಯವಾಗಿ, 'ಹರಿವಂಶ' ರಚನೆಯಾಯಿತು ಎಂಬುದು. ಇನ್ನು ಈ ಶೂದ್ರಕನಾರು ? ಎಂಬುದರ ಬಗ್ಗೆ ನೋಡುವುದಾದರೆ "ಶೂದ್ರಕನೇ ಪ್ರಥಮ ವಿಕ್ರಮಾದಿತ್ಯ (ಗುಣವರ್ಮನ ಹಿಂದೆ ಆಗಿ ಹೋದರಾಜ) ವೆಂಬೀ ಸಂಸ್ಕೃತ ಲೇಖನದ ಉಲ್ಲೇಖದಿಂದ....ಕಾಳಿದಾಸನು ಕ್ರಿ.ಪೂ. ಪ್ರಥಮ ಶತಕದಲ್ಲಿದ್ದನೆಂದು ಸಂಸ್ಕೃತ ಲೇಖನ ವೊಂದರ ಹೇಳಿಕೆ (ಕಾಳೆ, ಎ.ಆರ್. ಕೃಷ್ಣಶಾಸ್ತ್ರಿ ಮತ್ತು ಎಂ. ಲಕ್ಷ್ಮೀನರಸಿಂಹಯ್ಯನವರ ಆಶಯ)–ಆ ಮೇರೆಗೆ, ಪ್ರಥಮ ವಿಕ್ರಮಾದಿತ್ಯನೇ ಶೂದ್ರಕನೆಂದು ಮೊದಲಾದ ಹೆಸರುಗಳಿಂದ ಕರೆಸಿಕೊಂಡಿದ್ದನೆಂಬ ಈ ಲೇಖನ ಸ್ವೀಕರಣೀಯ."[57] ವಾದುದು ಎಂದು ಶೂದ್ರಕನನ್ನು ಕೆ. ವೆಂಕಟರಾಮಾಚಾರ್ಯರು ಪತ್ತೆ ಹಚ್ಚಿದ್ದಾರೆ. "ಈ ಶೂದ್ರಕ ರಾಜನ ಆಸ್ಥಾನದ ರಾಮಿಲ ಸೋಮಿಲರು ತತ್ಕಥಾ ಲೇಖಕರಾಗಿದ್ದರು. ದಂಡಿಯು ಆ 'ವಿನಯ ವತೀಶೂದ್ರಕ ಕಥೆ'ಯನ್ನು ವಿಸ್ತರಿಸಿ 'ಆವಂತೀ ಸುಂದರಿ ಕಥೆ'ಯನ್ನು ಬರೆದನು. ಕನ್ನಡದ ಮಹಾಕವಿಯಾದ ಒಂದನೇ ಗುಣವರ್ಮನು 'ವಿನಯವತೀ–ಶೂದ್ರಕ ಕಥೆ' ಯನ್ನು, 'ಆವಂತೀ ಸುಂದರೀ ಕಥೆ'ಯನ್ನು ಕಂಡಿರ ಬಹುದು. ಅದನ್ನು ಆಧರಿಸಿ ಕನ್ನಡ ರಾಜನ ಕಥೆಯನ್ನು ಬೆರಸಿ 'ಶೂದ್ರಕ ಕಾವ್ಯ ಬರೆದ[58] ನೆನ್ನಬಹುದು.

–ಒಟ್ಟಿನಲ್ಲಿ ರಾಜನನ್ನು ಈ ಗುಣವರ್ಮ ನೋಡುವಲ್ಲಿ ಸಾಹಿತ್ಯದ ಪರಾಧೀನಾವಸ್ಥೆಯ ಮುನ್ಸೂಚನೆ ಕಂಡು ಬರುತ್ತದೆ. ಸಾಹಿತ್ಯಾಭಿಮಾನಿ ಯಾಗಿದ್ದ ರಾಜನನ್ನು ಕಾವ್ಯದ ಸಿಂಹಾಸನದ ಮೇಲೆ ಕೂಡಿಸಲು ಮಾಡಿದ ಈತನ ಪ್ರಯತ್ನ ಮುಂದೆ ಒಂದು

---

53 ಸಾಹಿತ್ಯ ಭಾರತೀ-ಎನ್. ಅನ ತರಂಗಾಚಾರ್-ಮೈ.ವಿ.ವಿ. ೧೯೭೮ ಪುಟ ೩೨೩

54 ಪ್ರಬುದ್ಧ ಕರ್ನಾಟಕ-೪೫-೩. ೧೯೬೪, 'ಒಂದನೇ ಗುಣವರ್ಮನ ಕೃತಿಗಳು'-ಕೆ. ವೆಂಕಟರಾಮಾಚಾರ್ಯ ಪುಟ. ೪೮

55 ಅದೇ ಪುಟ ೪೯

56 ಪಂಪ ಒಂದು ಅಧ್ಯಯನ ; ಪುಟ ೩೧೧

57 ಪ್ರಬುದ್ಧ ಕರ್ನಾಟಕ-೪೫-೩, ೧೯೬೪. ಕೆ. ವೆಂಕಟರಾಮಾಚಾರ್ಯ ಪುಟ ೫೧

58 ಅದೇ ; ಪುಟ. ೫೧

ಪರಂಪರೆಯನ್ನು ಸೃಷ್ಟಿಸಿತು. ಆದರೆ ಈತನ ಪಾರತಂತ್ರಿಕೆಗೆ ಅಸ್ವತಂತ್ರಿಕೆಗೆ ಇದ್ದ ಅಲ್ಪ ಸ್ವಲ್ಪ ಬಿರುಕು ಮುಂದೆ ಕಂದಕವೇ ಆದದ್ದು ಸಾಹಿತ್ಯದ ದೃಷ್ಟಿಯಿಂದ ಕಲಾತ್ಮಕತೆಗೆ ಧಕ್ಕೆ ತಂದ ವ್ಯವಸ್ಥೆಯೇ. 'ಪರಾಧೀನಾವಸ್ಥೆಯಲ್ಲಿ ಪ್ರಗತಿಯ ಪ್ರಕಾಂಡವಾಗದು' ಎಂಬ ಹಂತಕ್ಕೆ ತಂದುಕೊಂಡ ಈ ಸಾಹಿತ್ಯ ಸ್ಥಿತಿ ಪಂಪನಿಗೆ ಹತ್ತಿರವಾಗುತ್ತಿದ್ದ ಈ ರಾಜಾಶ್ರಯ ಸಾಹಿತ್ಯದ ಕಾಲಮಾನ' ಪಂಪನಿಂದ ಗಟ್ಟಿಯಾಯಿತು. ಆದರೂ ಈತನ ಬಗ್ಗೆ 'ಪಂಪ ಪೂರ್ವದಲ್ಲೇ ಕನ್ನಡ ಸಾಹಿತ್ಯ ಸಂಪತ್ತನ್ನು ವೃದ್ಧಿಪಡಿಸಿದ ಪುಣ್ಯಕವಿ, ಜಾತಿಯಲ್ಲಿ ಜೈನನಿರಬಹುದು. ಒಂದು ಲೌಕಿಕ-ಮತ್ತೊಂದು ಧಾರ್ಮಿಕ–ಹೀಗೆ ಎರಡು ಕಾವ್ಯಗಳನ್ನು ರಚಿಸುವ ಹಾದಿಯನ್ನು ಹಾಕಿಕೊಟ್ಟ ಕೀರ್ತಿ ಇವನಿಗೆ ಸಲ್ಲುತ್ತದೆ"[59] ಶಾತವಾನರ ಅನಂತರ ಕನ್ನಡ ನೆಲದಲ್ಲಿ ಪ್ರಾಬಲ್ಯಕ್ಕೆ ಬಂದ ಸ್ವತಂತ್ರ ಕನ್ನಡ ರಾಜಮನೆತನವೆಂದರೆ, ಬನವಾಸಿಯ ಕದಂಬರು. ಇವರು "ತಮ್ಮ ಆಳ್ವಿಕೆಯ ಆರಂಭದ ದಿನಗಳಲ್ಲಿ ಪ್ರಾಕೃತವನ್ನೇ ರಾಜ್ಯಭಾಷೆಯಾಗಿಟ್ಟುಕೊಂಡರು"[60] ಆದರೆ ಮುಂದೆ ಈ ರಾಜರ ರಾಜಾಜ್ಞೆಯ ಪ್ರತೀಕವಾಗಿ ಇಂದಿಗೂ ಉಳಿದ ಮಹತ್ವಪೂರ್ಣ ಶಾಸನಗಳೆನಿಸಿದ ತಾಳಗುಂದ ಶಾಸನ[61] ಮತ್ತು ಹಲ್ಮಿಡಿಶಾಸನ[62] ಇವುಗಳಿಂದ ತಾಳಗುಂದ ಶಾಸನವನ್ನು ಕಾವ್ಯಾಂಶ ಭೂಯಿಷ್ಠವಾಗಿ ರಚಿಸಿದ ಕವಿಕುಬ್ಜ[63] ಮತ್ತು ಹಲ್ಮಿಡಿ ಶಾಸನೋಕ್ತವಾಗಿರುವ "ಅಳುಪಗಣ ಪಶುಪತಿ"[64] ಎಂಬ ಹೆಸರು ಆ ಸಮ ಕಾಲೀನ ಬಲಿಷ್ಠ ಅರಸುಮನೆತನದ ಮೂಲ ವ್ಯಕ್ತಿಯನ್ನು ತಿಳಿಸುವುದರ ಮೂಲಕ ರಾಜವಲಯದ ಶಾಸನ ಸಾಹಿತ್ಯಕ್ಕೆ ಮೆರಗು ಕೊಡುತ್ತಾರೆ. ಕನ್ನಡ ಶಾಸನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ವಿಚಾರ ಮಾಡಿದರೆ ತಾಳಗುಂದ ಶಾಸನದ ಕವಿಕುಬ್ಜ ಪ್ರಪ್ರಥಮ ರಾಜಾಶ್ರಿತ ಶಾಸನಕವಿ ಎಂಬ ಕೀರ್ತಿಗೆ ಪಾತ್ರನಾಗುತ್ತಾನೆ. "ತಾಳಗುಂದ ಮತ್ತು ಹಲ್ಮಿಡಿ ಶಾಸನಗಳು ಕ್ರಮವಾಗಿ ಸಂಸ್ಕೃತ ಕನ್ನಡ ಭಾಷೆಗಳಲ್ಲಿ ರಚಿತವಾಗಿರುವುದನ್ನು ನೋಡಿದರೆ, ಕದಂಬರು ಕ್ರಮೇಣ ದೇವ ಭಾಷೆ ಮತ್ತು ದೇಶ ಭಾಷೆಗಳೆರಡಕ್ಕೂ ಮಾನ್ಯತೆ ನೀಡಿದರೆಂದು ಕಂಡು ಬರುತ್ತದೆ"[65]

ತಲಕಾಡಿನ ಗಂಗರಿಗೆ ಸಮಕಾಲೀನರಾಗಿದ್ದ, ಕನ್ನಡನಾಡನ್ನು ಆಳುತ್ತಾ ಸಾಮ್ರಾಜ್ಯ ನಿರ್ಮಾಣಕ್ಕೆ ತೊಡಗಿದ್ದ ಬಾದಾಮಿ ಚಾಲುಕ್ಯರ ಕಾಲದಲ್ಲೂ ಈ ದೇವ-ದೇಶ ಭಾಷೆಗಳ ಸಮ್ಮಿಶ್ರ ಶಾಸನಗಳ ರಚನೆ ಯಾದವು. ವೈದಿಕ ಧರ್ಮಿಗಳಾದ ಇವರಲ್ಲಿ ಸಂಸ್ಕೃತಕ್ಕೆ ಪ್ರೋತ್ಸಾಹ ದೊರತಿರಬಹುದು. ಪ್ರಸಿದ್ಧ ಸಂಸ್ಕೃತ ಶಾಸನ ಕವಿ ರವಿಕೀರ್ತಿಯು ಪುಲಿಕೇಶಿಯ ಆಸ್ಥಾನ ಕವಿಯಾಗಿದ್ದನೆಂದು ತಿಳಿಯುತ್ತದೆ.[66] ಒಟ್ಟಿನಲ್ಲಿ "ಈ ಚಾಲುಕ್ಯ ಶಾಖೆಯಲ್ಲಿ ಕನ್ನಡ ಗ್ರಂಥ ಸೃಷ್ಟಿ ಇಲ್ಲವೆಂದೇ ಹೇಳಬಹುದು"[67] ಆದರೆ ಮುಂದೆ ಇದೇ ಚಾಲುಕ್ಯವೃಕ್ಷ ಕವಲೊಡೆದು, ಪ್ರತ್ಯೇಕವೂ ಆಗಿ ರಾಷ್ಟ್ರಕೂಟರೊಂದಿಗೆ ಅಧೀನ ಸಂಸಾರ ನಡೆಸಿ ಸಾಹಿತ್ಯಿಕ ರಾಜಕೀಯ ಪೈಪೋಟಿ ನಡೆಸಿತು. ಅಂಥ ಒಂದು ಚಾಲುಕ್ಯ ಸಾಮಂತತ್ವ ಪಡೆದಿದ್ದ ಅರಿಕೇಸರಿಯ ಆಶ್ರಯದಲ್ಲೇ ಪ್ರಸ್ತುತ ಲೇಖನದ ವಿಷಯಕ್ಕೆ ಗಡಿಗಲ್ಲಾಗಿ ನಿಂತಿರುವ ಪಂಪ ನಿಂತಿದ್ದ.

---

59 ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ-ಸಾ.ಶಿ. ಮರುಳಯ್ಯ-ಮೂಲಪ್ರತಿ-ಪ್ರಸ್ತಾವನೆ.
60 ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ–ಸಾ.ಶಿ. ಮರುಳಯ್ಯ-ಮೂಲಪ್ರತಿ-ಪ್ರಸ್ತಾವನೆಯಲ್ಲಿ
61 Ec VIII SK. 76
62 'ಕನ್ನಡ ಶಾಸನ ಸಂಪದ' — ಡಾ॥ ಎಂ.ಎಂ. ಕೆ. ಡಾ॥ ಆರ್.ಸಿ. ಹಿರೇಮಠ, ಧಾರವಾಡ, ೧೯೬೮, ಪುಟ. ೧
63 ಕರ್ನಾಟಕ ಸಂಸ್ಕೃತಿ ಸಮೀಕ್ಷೆ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ, ಪುಟ, ೮೩
64 ಕನ್ನಡ ವಿಶ್ವಕೋಶ-೭. ಮೈಸೂರು, ೧೯೭೧, ಪುಟ, ೧೭೩
65 ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ-ಸಾ.ಶಿ. ಮರುಳಯ್ಯ-ಮೂಲಪ್ರತಿ-ಪ್ರಸ್ತಾವನೆಯಲ್ಲಿ
66 ಕರ್ನಾಟಕ ಸಂಸ್ಕೃತಿ ಸಮೀಕ್ಷೆ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ, ಪುಟ. ೬೮
67 ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ-ಸಾ.ಶಿ. ಮರುಳಯ್ಯ-ಮೂಲ ಪ್ರತಿ-ಪ್ರಸ್ತಾವನೆಯಲ್ಲಿ

ರಾಷ್ಟ್ರಕೂಟರು : ಕರ್ನಾಟಕವನ್ನಾಳಿದ ಮತ್ತೊಂದು ದೊಡ್ಡ ರಾಜಕುಲ. ಇವರ ಮೂಲ ಪುರುಷ ದಂತಿದುರ್ಗ. "ಸುಮಾರು ಕ್ರಿ.ಶ. ಏಳನೇ ಶತಮಾನದಲ್ಲಿ ಎಲಿಚಪುರವನ್ನಾಳುತ್ತಿದ್ದ ನನ್ನಿರಾಜನ ವಂಶದವನೆಂದು ಹೇಳಬಹುದು."[68] ಏಳನೇ ಶತಮಾನದಲ್ಲೇ ಸ್ವತಂತ್ರ ಅರಮನೆ ಕಟ್ಟಿಸಿಕೊಂಡರೂ ಸಾಹಿತ್ಯಕ ಚಟುವಟಿಕೆಗಳ ಗಮನೀಯವಾದ ನೋಟ ಕಣ್ಣಿಗೆ ಬಿದ್ದದ್ದು ಸುಮಾರು ಅರವತ್ತು ನಾಲ್ಕು ವರ್ಷಗಳ ಕಾಲ ಸುದೀರ್ಘವೂ ಸಂಪದ್ಯುಕ್ತವೂ ಆದ ಆಳ್ವಿಕೆಯನ್ನು ನೀಡಿದ ನೃಪತುಂಗನಿಂದಲೇ, ಮಾತೃಭೂಮಿಗಾಗಿ ಕತ್ತಿಯನ್ನು ಮಾತೃಭಾಷೆಗಾಗಿ ಲೇಖನಿಯನ್ನು ಹಿಡಿದ ಈ ನೃಪತುಂಗ ತಾನೇ ಸ್ವತಃ 'ಪ್ರಶ್ನೋತ್ತರ ರತ್ನ ಮಾಲೆ'ಯನ್ನು ಸಂಸ್ಕೃತದಲ್ಲಿ ಬರೆದನೆಂಬುದು ವಿದ್ವಾಂಸರ ಪರವಾಗಿದೆ. ಕವಿಚರಿತೆಕಾರರು ಇದಕ್ಕೆ ಪೋಷಣೆ ನೀಡುವ ಪದ್ಯವೊಂದನ್ನು ಅಡಿಟಿಪ್ಪಣಿಯಲ್ಲಿ ನೀಡುತ್ತಾರೆ.

'ವಿವೇಕಾತ್ಯಕ್ತ ರಾಜ್ಯೋನ ರಾಜ್ಞೀಯಂ
ರತ್ನಮಾಲಿಕಾ ।
ರಚಿತಾಮೋಘವರ್ಷೇಣ ಸುಧಿಯಾ
ಸದಲಂಕೃತಿಃ॥[69]"

ಈತನ ಗುರುಗಳು 'ಪೂರ್ವ ಪುರಾಣ' 'ಪಾರ್ಶ್ವಾಭ್ಯುದಯ'ವೆಂಬ ಶಾಂತರಸ ಪ್ರಧಾನಕಾವ್ಯ[70] ಬರೆದ ಜಿನಸೇನಾಚಾರ್ಯರು. "ಈತನ ಶಿಷ್ಯ ಗುಣಭದ್ರಾಚಾರ್ಯ (ಕ್ರಿ.ಶ. ೮೯೮), ತನ್ನ 'ಉತ್ತರ ಪುರಾಣ'ದಲ್ಲಿ ನೃಪತುಂಗನು ಜಿನಸೇನಾಚಾರ್ಯರ ಶಿಷ್ಯನಾಗಿದ್ದನೆಂಬ ವಿಷಯವನ್ನು ಉಲ್ಲೇಖ ಮಾಡಿದ್ದಾನೆ."[71] ನೃಪತುಂಗನ ಆಸ್ಥಾನವು ಕವಿಗಳಿಂದ, ಪಂಡಿತರಿಂದ, ತುಂಬಿತ್ತು.

ಶ್ರುತದೊಳ್ ಭಾವಿಸಿ ನೋಟಿಪ್ಪೊಡೆ
ಸತತಂ ಕವಿವೃಷಭರಾ ಪ್ರಯೋಗಂ
ಗಳೊಳಂ ।
ಕೃತ ಪರಿಚಯ ಬಲನಪ್ಪ
ನತಿಶಯ ಧವಳನ ಸಭಾಸದರ್
ಮನ್ನಿಸುವರ್॥
ವ್ಯಾಕರಣ ಕಾವ್ಯನಾಟಕ ।
ಲೋಕಕಳಾ ಸಮಯಮಾದಳಂ
ಕೃತಿಗಳೊಳಂ ।
ವ್ಯಾಕುಳನಲ್ಲದನೇಕೆ ವಿ ।
ವೇಕ ಬೃಹಸ್ಪತಿಯ ನಗರಮಂ ಪುಗು
ತರ್ಪಂ. (೧–೫,೬)

ಮುಂದೆ ಬಂದ ಮಹಾತ್ವಾಕಾಂಕ್ಷೆಯ ಕೃತಿ ನೃಪತುಂಗನ ಆಸ್ಥಾನದಲ್ಲಿದ್ದ ಶ್ರೀ ವಿಜಯನಿಂದ ವಿರಚಿತವಾದ 'ಕವಿರಾಜ ಮಾರ್ಗ.'[72] ಕನ್ನಡದ ಪ್ರಥಮ ಲಭ್ಯಕೃತಿ ಎಂಬ ಹೆಮ್ಮೆಪಡೆದು ಕೊಂಡಿರುವ ಈ ಕೃತಿ ಸಾಕಷ್ಟು ದೃಷ್ಟಿಕೋನಗಳಲ್ಲಿ ವಿಶೇಷ ಪಡೆದು ಹಲವು 'ಮೊದಲು'ಗಳ ಕೃತಿ ಎನಿಸಿದೆ. ಅಂದರೆ, ಕನ್ನಡದ ಅತಿ ಪ್ರಾಚೀನ ಅಲಂಕಾರ ಗ್ರಂಥ[73] ಎಂಬುದೂ, ಕನ್ನಡ ಸಾಹಿತ್ಯ ಚರಿತ್ರೆಯನ್ನು ತಿಳಿಸಲೆತ್ನಿಸಿದ ಪುಸ್ತಕ[74] ವೆಂಬುದೂ ಕನ್ನಡದ ಪ್ರಥಮ ಲಭ್ಯಕೃತಿ ಎಂಬುದೂ, ಇವುಗಳ ಜತೆಗೆ ಲಭ್ಯವಾಗಿರುವ ಈ ವರೆಗಿನ ಗ್ರಂಥಗಳಲ್ಲಿ ಪ್ರಥಮ ರಾಜಾಶ್ರಯದ ಕೃತಿ ಎಂಬ ಹೆಗ್ಗಳಿಕೆಯೂ ಆಗಿದೆ. 'ಜನಪದ ಕರ್ನಾಟಕವನ್ನು, ಅಂದಿನ ಪರಿಸರ, ಪ್ರಜ್ಞೆಯನ್ನು ಸಂಪೂರ್ಣವಾಗಿ ತುಂಬುವ ಪ್ರಯತ್ನ ಮಾಡಿದ ಈ ರಾಜವಲಯದ ಕೃತಿಗೆ ಕನ್ನಡ ಸಾಹಿತ್ಯ ನಿಜಕ್ಕೂ ಋಣಿಯಾಗಿದೆ, ಎಂದರೆ ತಪ್ಪಾಗಲಿಕ್ಕಿಲ್ಲ. ಹಲವು ಹತ್ತು ಕೋನಗಳಿಂದ ಪರಿಪೂರ್ಣವೆನಿಸಿದ ಈ ಕೃತಿಯ ಬಗ್ಗೆ

68 ಕರ್ನಾಟಕ ಸಂಸ್ಕೃತಿ ಸಮೀಕ್ಷೆ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ-ಪುಟ ೧೦೯
69 ಕರ್ನಾಟಕ ಕವಿಚರಿತೆ ೧. ೧೯೭೩. ಪುಟ-೧೯
70 ಕನ್ನಡ ಸಾಹಿತ್ಯದಲ್ಲಿ ಶಾಂತರಸ-ಸಂ. ಎಂ.ವಿ. ಸೀ-೧೯೭೯, ಪುಟ. ೧೪
71 ಜೈನ ವಾಙ್ಮಯ ಪರಿಶೋಧನೆ—ಬಿ ಬಿ. ಮಹೀಶವಾಡಿ, ಧಾರವಾಡ, ೧೯೭೭, ಪುಟ. ೬೯
72 ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ-೧೯೭೪. ಎಂ.ಎ. ಕಲಬುರ್ಗಿ, ಪುಟ. ೩೨
73 ಶ್ರೀಯವರ 'ಸಂಭಾವನೆ'—ಡಿ.ವಿ. ಶೇಷಗಿರಿರಾವ್-ಪುಟ ೨೯೫
74 ಕನ್ನಡ ಸಾಹಿತ್ಯ-ಒಂದು ಚಾರಿತ್ರಿಕ ಬೆಳವಣಿಗೆ-ಸ. ವೀರಣ್ಣ ಬೆಂಗಳೂರು, ೧೯೮೬, ಪುಟ. ೧

ಬಿ.ಎಂ. ಶ್ರೀ ಯವರು "ಕವಿರಾಜ ಮಾರ್ಗದ ವಿಷಯ ಸಂಪತ್ತಿ ಮತ್ತು ಕಾವ್ಯಗುಣವನ್ನು ಕುರಿತ 'Kariraja marga is not a Wondrful master piece in either matter or Style'[75] ಎಂದು ಕೃತಿಯನ್ನು ನೋಡಿದರೆ ಹೊರತು ಕೃತಿಬೆಳೆದ ಜಾಗ, ಬಗೆ, ಕಾಲಗಳನ್ನು ನೋಡಲಿಲ್ಲ. "ಆದರೆ ಕನ್ನಡದ ಕಾಲು ಅದೇ ಆಗ ಗಟ್ಟಿಗೊಂಡ ಸಮಯದಲ್ಲಿ, ಸಂಸ್ಕೃತದ ಪ್ರಭಾವ ದಟ್ಟವಾಗಿದ್ದ ಕಾಲದಲ್ಲಿ, 'ಕನ್ನಡ ಭಾಷೆಯು ಅಂತಸ್ಸತ್ವವನ್ನು ಮರೆಯದೆ, ಸಂಸ್ಕೃತ ಆದರ್ಶಗಳ ಅಗತ್ಯಗಳನ್ನು ತೃಣೀಕರಿಸದೆ ಕವಿರಾಜ ಮಾರ್ಗ ತನ್ನ ಇತಿ-ಮಿತಿಯುಲ್ಲಿ ಪಡೆದ ಸಿದ್ಧಿ, ವಿಷಯ ದೃಷ್ಟಿಯಿಂದ ಬಹುಮಟ್ಟಿಗೆ ಯಶಸ್ವಿಯೆಂದೇ ಹೇಳ ಬೇಕು"[76] ಎಂಬ ಮಾತು ಸತ್ಯವಾದದು. ಅದು ಹುಟ್ಟಿದ ಜಾಗ, ಕಾಲ ಮತ್ತು ಮಾಡಿದ ಕೆಲಸ ನೋಡಿದರೆ ಕೃತಿಯು ಬಗ್ಗೆ ಸಾರ್ಥಕ್ಯ ಮನೋಭಾವನೆ ಬಾರದೇ ಇರದು.

ಒಟ್ಟಿನಲ್ಲಿ ಶ್ರೀವಿಜಯನ ಕವಿರಾಜಮಾರ್ಗೋಕ್ತ ಗದ್ಯಪದ್ಯಗಳ (ಹಿಂದಿನ-ಅಂದಿನ) ಕವಿಗಳು ರಾಜವಲಯ ದಲ್ಲೂ ಇದ್ದಿರಬಹುದೆಂದು ಊಹಿಸಲು ಅವಕಾಶವಿದೆ. "ಸಾಕಷ್ಟು ಕವಿಗಳು ಕತ್ತಲಲ್ಲೇ ನಿಂತು ಪರಿಚಯಿಸಿ ಕೊಳ್ಳುತ್ತಾರೆ. ಕೆಲವರ ಉತ್ತಮ ಕೃತಿಗಳು ಪರಿಚಯ ವಾಗುತ್ತವೆ." ಆದರೆ "ಕನ್ನಡ ಸಾಹಿತ್ಯದ ಉತ್ತಮ ಕಾವ್ಯಗಳನ್ನು ರಚಿಸಿದ ಕವಿಗಳೆಲ್ಲರಿಗೂ ರಾಜಾಶ್ರಯ ದೊರೆತಿತ್ತು ಎಂದು ಹೇಳುವುದು ಕೇವಲ ಧಾಷ್ಟ್ಯದ ಮಾತಾಗುತ್ತದೆ"[77] ಜತೆಗೆ ಸ್ವತಂತ್ರವಾಗಿ, ಅರಮನೆ ಹಂಗಿಲ್ಲದೆ ಹೊರಗೆ ನಿಂತು ಕಾವ್ಯ ರಚನಾಕಾರ್ಯ ಕೈಗೊಂಡಿರಲು ಬಹುದು. ಆದುದರಿಂದ ಇಲ್ಲಿ ಊಹೆ ಪ್ರಾಮಾಣಿಕತೆ, ಅಧ್ಯಯನ, ಸೂಕ್ಷ್ಮತೆಗಳ ಚೌಕಟ್ಟಿನಲ್ಲಿರಬೇಕು.

ಮುಂದೆ ಪಂಪನ ಅರಿಕೇಸರಿಯ ಸಮಕಾಲೀನನಾದ ರಾಷ್ಟ್ರಕೂಟ ಚಕ್ರವರ್ತಿ ಮೂಢನೇ ಕೃಷ್ಣನ ಮಂತ್ರಿ ಭರತ "ಅಪಭ್ರಂಶ ಭಾಷೆಯ ಮಹಾಕವಿ ಪುಷ್ಪದಂತ ಮಹಾಪುರಾಣವನ್ನು ರಚಿಸಿದ. ಮಾನ್ಯಖೇಟದಲ್ಲಿ ಇತರ ಕೃತಿಗಳಾದ 'ಜಸ ಹರಿಚರಿಉ' ಮತ್ತು 'ಣಾಯ ಕುಮಾರ ಚರಿಉ'ಗಳನ್ನು ಭರತ ಪುತ್ರ 'ಣಣ್ಣ' ರಾಜನ ಆಶ್ರಯದಲ್ಲಿ ರಚಿಸಿದ್ದಾನೆ"[78] ಎಂದು ತಿಳಿದು ಬರುತ್ತದೆ. ಕಾಲದ ಸ್ಪಷ್ಟತೆ ಇಲ್ಲದಿರುವುದರಿಂದ ಇದರ ಉಲ್ಲೇಖ ವಿಷಯ ಉಲ್ಲಂಘನೆಯನಿಸಬಹುದು. ಆದರೂ ಪಂಪನಿಗೆ ಅಂಟಿಕೊಂಡೇ ಇರುವ ಪರಿಸರದಲ್ಲಿ, ರಾಷ್ಟ್ರಕೂಟರ ಅರಮನೆಯಲ್ಲಿ ರಚಿತವಾಗಿರುವುದರಿಂದ ಸಮಯೋಚಿತವೆನಿಸುತ್ತದೆ.

ಇದರ ಜತೆಗೆ ಕವಿರಾಜಮಾರ್ಗೋಕ್ತ ಕವಿಗಳ ಬಗ್ಗೆ ನೋಡುವುದಾದರೆ. ಮೊದಲು 'ವಿಮಲೋದಯ' "ವಿಮಲ-ಉದಯ", ಆಧಾರಗಳೇ ಇಲ್ಲದ ಈ ಸಮಯ ದಲ್ಲಿ 'ವಿಮಲೋದಯ' ಎಂದು ಕೂಡಿಸಿ ಹೇಳುವುದು ಎಷ್ಟು ಸತ್ಯವೋ, 'ವಿಮಲ' 'ಉದಯ' ಎಂದು ಬಿಡಿಸಿ ಓದುವುದೂ ಅಷ್ಟೇ ಸತ್ಯ[79] ಎಂಬ ಮಾತು ಸತ್ಯ ವಾದುದೇ. ಈ ಮುನ್ನ ರಾಷ್ಟ್ರಕೂಟ ಬದ್ದೆಗ ಅಮೋಘ ಬರೆದಿರಬಹುದಾದ 'ಪ್ರಶ್ನೋತ್ತರ ರತ್ನ ಮಾಲೆ'ಯನ್ನೂ ಈತನಿಗೆ ಅಂಟಿಸಿನೋಡಿದ್ದಾರೆ. ಒಂದು ವೇಳೆ ಪ್ರಶ್ನೋತ್ತರ ಮಾಲೆಯ ಕರ್ತೃ ವಿಮಲನಾಗಿದ್ದರೂ ಕ.ರಾ. ಮಾರ್ಗೋಕ್ತ ವಿಮಲೋದಯ ಈತನೇ ಎನ್ನಲು ಆಧಾರವಿಲ್ಲವೆಂದು ಕಲಬುರ್ಗಿಯವರು ಅಭಿಪ್ರಾಯಿಸುತ್ತಾರೆ.[80]

ನಾಗಾರ್ಜುನ : ಈತನ ಇರುವಿಕೆ ದೇಶ-ವಿದೇಶ ಗಳ ತುಂಬ ಓಡಾಡಿದೆ. "ಈತನ ಹೆಸರಿನ ಮೇಲಿರುವ 'ಕರ್ಣಾಟಕ ಮಣಿದರ್ಪಣ'ದಿಂದಾಗಿ ಕನ್ನಡ ಕೃತಿ

---

75 ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ – ಡಾ॥ ಎಂ.ಎಂ. ಕಲಬುರ್ಗಿ ೧೯೭೩, ಪು. ೧೫

76 ಅದೇ, ಪುಟ. ೧೫

77 ಕನ್ನಡ ಸಾಹಿತ್ಯ ಮತ್ತು ಮೈಸೂರು ಒಡೆಯರು'—ಡಿ.ಟಿ. ರಂಗಸ್ವಾಮಿ-ಮೈಸೂರು-೧೯೫೫ ಪುಟ. ೬

78 ನಯಸೇನ ಮತ್ತು ಅವನ ಕೃತಿಗಳು – ಡಾ॥ ಬಿ.ವಿ. ಮಲ್ಲಾಪುರ-೧೯೭೦, ಧಾರವಾಡ-ಪು ೩,೪,

79 ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ – ಡಾ॥ ಎಂ.ಎಂ. ಕಲಬುರ್ಗಿ, ೧೯೭೩, ಪುಟ. ೭೩

80 ಅದೇ, ಪುಟ-೭೪-೭೫ ನೋಡಿ

ಯೊಂದರ ಕರ್ತೃ ಎಂಬ ಭಾವನೆ ಹುಟ್ಟಿಸುತ್ತದೆ." ಎಂದು ಡಾ|| ಎಚ್.ಡಿ. ವೇಲಂಕರ್ ತಿಳಿಸುತ್ತಾರೆ. ಆದರೆ ಇದು ನಿರಾಧಾರ.[81] ಜಯ ಬಂಧು ನಂದನ ಎಂದು ಹೆಸರು ಪಡೆದಿರುವ ಚಾವುಂಡರಾಯನನ್ನು ನೋಡಿದರೆ, ಜಯಬಂಧುವು ಚಾವುಂಡರಾಯನ ತಂದೆಯಿರಬೇಕೆಂದು ನಮಗೆ ನೆನಪಿಗೆ ಬರುತ್ತದೆ.–ಹೀಗೆ ಈ ಕ.ರಾ.ಮಾ. ದಲ್ಲಿ ಬರುವ ಕವಿಗಳು ರಾಜವರ್ಗದವರೂ ರಾಜಾಶ್ರಿತರೂ ಆಗಿರಬಹುದು, ಆಗಿರಲಿಕ್ಕಿಲ್ಲ. ಇದು ಸಂಶೋಧನೆಯ ಆಹಾರವಾಗಬೇಕಾಗಿದೆ. ಆದರೂ ಆ ಕಾಲದ ಪ್ರಮುಖ ಕವಿಗಳು, ಶಾಸನ ಕವಿಗಳು ಪ್ರಾರಂಭದ ಹಂತದಲ್ಲಿ ಮಾಡಿದ ಸಾಹಿತ್ಯಿಕ ಚಟುವಟಿಕೆ ಸಾಧನೆಯೇ.

ಅಸಗನಿಂದ ರಚಿತವಾದ ಕನ್ನಡ ಕಾವ್ಯ, 'ಕರ್ಣಾಟಕ ಕುಮಾರ ಸಂಭವಂ' ಎಂಬ ಕೃತಿ ರಚನೆ ಮಾಡಿರುವ ಅಸಗನ ಕಾಲ ಪಂಪಪೂರ್ವದಿಂದ ಪಂಪನ ನಂತರದವರೆಗೂ ಓಡಾಡುತ್ತದೆ. 'ವರ್ಧಮಾನ ಪುರಾಣ'ದ ಈತನ ಕರ್ತೃತ್ವದಿಂದ ಸಂಸ್ಕೃತ ಅಸಗನೆಂದೂ ವಿದ್ವಾಂಸರು ಊಹಿಸಿದ್ದಾರೆ.—ಇದರ ಜತೆಗೆ ಪಂಪನ ಸುತ್ತಮುತ್ತಲಿನ ಈ ಕಾಲದಲ್ಲಿ ಕತ್ತಲಲ್ಲಿ ನಿಂತುಕೊಂಡು ಊಹಿಸುವ ದೃಷ್ಟಿಕೊಟ್ಟ ಕವಿಗಳು ಅಸ್ಪಷ್ಟವಾಗಿ ತಮ್ಮನ್ನು ಸರಿಯಾಗಿ ಪರಿಚಯಿಸಿಕೊಂಡಿಲ್ಲ.

ಪಂಪಪೂರ್ವದ ಈ ಕಾಲವು ಕಾಲಗರ್ಭದಲ್ಲೇ ಉಳಿದಿರುವುದರಿಂದ ಸಾಮಾನ್ಯವಾಗಿ ಕತ್ತಲಿನ ವಾತಾವರಣದಿಂದಲೇ ಕೂಡಿದೆ. ಆ ಕತ್ತಲಲ್ಲಿ ಕೊನೆಗೆ ಬಂದ ಕವಿರಾಜ ಮಾರ್ಗವೆಂಬ ಚಂದ್ರ ತನ್ನ ಬೆಳದಿಂಗಳಲ್ಲಿ ಕೆಲವರನ್ನು ಕಾಣಿಸಿದ. 'ವಡ್ಡಾರಾಧನೆ' ಯೆಂಬ ಬೆಳ್ಳಿ ನಕ್ಷತ್ರವೊಂದು ಉದಯಿಸಿ ಕನ್ನಡ ಸಾಹಿತ್ಯದ ಬೆಳಗಿನ ಮುನ್ಸೂಚನೆ ಕೊಟ್ಟಿತು. ಪಂಪನೆಂಬ ಸೂರ್ಯ ಉದಯಿಸುವುದರ ಮೂಲಕ ಆ ಸಂಪೂರ್ಣ ದಿನವನ್ನು ಬೆಳಕಿನಿಂದ ತೊಳೆದ.

ಪ್ರಾಚೀನ ಕರ್ನಾಟಕದ ರಾಜರುಗಳಿಗೆ ರಾಜಕೀಯ-ಸಾಮಾಜಿಕ; ಕವಿಗಳಿಗೆ ಧಾರ್ಮಿಕ-ಸಾಹಿತ್ಯಿಕ ನೋಟಗಳು ಪ್ರಬಲವಾದ ದೃಷ್ಟಿಯನ್ನು ಪಡೆದು ಕೊಂಡಿದ್ದವು. ಇವು ವಿಲೋಮವಾಗದೇ ಅನುಲೋಮವಾಗಿ ಸಮಾನಾಂತರ ಬೆಳವಣಿಗೆಯನ್ನು ಅನುಸ್ಯೂತವಾಗಿ ಪಡೆದುಕೊಂಡವು. "ಮಾನವನ ಇತಿಹಾಸದಲ್ಲಿ ಬಹುಪರಿಣಾಮಕಾರಿಯಾದ ಪಾತ್ರವನು ವಹಿಸಿದ ಮನೋರಂಗದ ಮತ್ತೊಂದು ವ್ಯಾಪಾರವೆಂದರೆ, ಅದು ಧರ್ಮ"[82] ಪ್ರಜ್ಞಾಶೀಲ ಮಾನವನ ಎಲ್ಲ ಸೃಷ್ಟ್ಯಾತ್ಮಕ ಕಾರ್ಯಗಳೂ-ಅದರಲ್ಲೂ ಕಲೆ, ಸಾಹಿತ್ಯ ಮುಂತಾದವುಗಳು-ಮೂಲತಃ ಉಗಮವಾದದ್ದು. ಧಾರ್ಮಿಕ ಭೂಮಿಕೆಯಿಂದಲೇ-ಎಂಬುದು ಅತ್ಯಂತ ಸಮಯೋಚಿತ ಮಾತು. ಇದರ ಜತೆಗೆ "ಒಂದು ಅರ್ಥದಲ್ಲಿ ಜೀವನ ವಿಮುಖತೆ ಹಾಗೂ ವೈರಾಗ್ಯ ಪರತೆಗಳು ಧರ್ಮನಿಷ್ಠ ಸಾಹಿತ್ಯದ ಆಯ್ಕೆಗಳಾದರೆ, ಜೀವನ ಸಂಮುಖತೆಯು 'ಪ್ರಭುನಿಷ್ಠ ಸಾಹಿತ್ಯದ ಪ್ರಧಾನ ನೆಲೆಯಾಯಿತು."[83] ರಾಜನ ಧರ್ಮಕ್ಕೂ ದೇಶದ ಧರ್ಮಕ್ಕೂ ಭಿನ್ನತ್ವವಿದ್ದರೂ ಧರ್ಮದ ಸೂಕ್ಷ್ಮತೆಯನ್ನು ಅರಿತ ಸೂಕ್ಷ್ಮ ಸಂವೇದಿಗಳಂತೆ ವರ್ತಿಸಿ ಅಭಿನ್ನ ಸೂತ್ರ ಬಳಸಿಕೊಂಡದ್ದು ನಮ್ಮ ರಾಜರ ಹೃದಯ ಶ್ರೀಮಂತಿಕೆಯನ್ನು ತೋರಿಸುತ್ತದೆ. ರಾಜಾಶ್ರಯದಲ್ಲಿ ಬೆಳೆದ ವಿವಿಧ ಧರ್ಮಗಳು ತಮ್ಮ ಪ್ರಭಾವವನ್ನು ಉಳಿಸಿ ಬೆಳಸಿಕೊಂಡು ಬಂದವು. ಇದು ಕನ್ನಡ ರಾಜರ ಧರ್ಮ ಸಮನ್ವಯ ಬದುಕಿಗೆ ಜೀವಂತ ಸಾಕ್ಷಿ–ಪಂಪ ಪೂರ್ವ ಯುಗದ ಈ ಕತ್ತಲ ಲೋಕದಲ್ಲೇ ಧರ್ಮ ಅಂದಿನ ಎಲ್ಲಾ ರೀತಿಯ ಪರಿಸ್ಥಿತಿಗಳೊಡನೆ ಸಮನ್ವಯ ಒಪ್ಪಂದ ಮಾಡಿ ಕೊಂಡದ್ದು ಕಂಡು ಬರುತ್ತದೆ.—ಮುಂದೆ ಈ ರಾಜಾಶ್ರಯದ ಧರ್ಮಸಾಹಿತ್ಯಗಳಿಗೆ ಹೊಸ ಬಣ್ಣ ಹಚ್ಚಿದವನು ಪಂಪ. ಅದನ್ನು ಅನಿವಾರ್ಯವೆಂಬಂತೆ ಬಳೆದ. ಅದರ ಮೇಲೆ ಪ್ರಬಲವಾದ, ಸೂಕ್ಷ್ಮವಾದ, ಆಳವಾದ ನೋಟ ಬೀರುವಂತೆ ಮಾಡಿದ. ಈ ಪಂಪ ಅದನ್ನು ಸೃಜಿಸಿದ, ಸೃಷ್ಟಿಸಿದ, ಬೆಳೆದ, ಬೆಳೆಸಿದ— ಈ ದೃಷ್ಟಿಯಿಂದಲೂ ಆತ ಪರಂಪರೆಯ ಪ್ರವರ್ತಕ. ○

81 ಅದೇ, ಪುಟ-೭೫-೭೬ ನೋಡಿ

82 ಕನ್ನಡ ಸಾಹಿತ್ಯ ಚರಿತ್ರೆ-೨. ಮೈ.ವಿ.ವಿ., ೧೯೭೫, ಪುಟ. ೩೨೯

83 ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು-ಸಾಹಿತ್ಯ ಅಕಾಡೆಮಿ—ಡಾ|| ಎಚ್.ಎಸ್. ರಾಘವೇಂದ್ರ ರಾವ್, ೧೯೯೦ ಪುಟ. ೧೧

# ೧೯ನೇ ಶತಮಾನದ ಸಮಾಜ ಸುಧಾರಣೆಯಲ್ಲಿ ಮಿತಪಾನ ಚಳುವಳಿ (ಮೈಸೂರಿಗೆ ಸಂಬಂಧಿಸಿದಂತೆ) ; ಒಂದು ವಿಶ್ಲೇಷಣೆ

ಡಾ|| ಲೀಲಾ ಬಿ.

ಅನಾದಿ ಕಾಲದಿಂದ ಭಾರತದಲ್ಲಿ ಸುರಾಪಾನ ಇದ್ದದ್ದೇ ಆದರೂ ೧೯ನೇ ಶತಮಾನದ ಸಾಮಾಜಿಕ ಸುಧಾರಕರು ಸುರಾಪಾನ ಬ್ರಿಟಿಷರ ಆಳ್ವಿಕೆಯ ಪ್ರತೀಕ ಎಂದು ವಾದಿಸಿದ್ದೂ ಅಲ್ಲದೆ ಸುರಾಪಾನದ ಸುಂಕ ಸರ್ಕಾರದ ಬೊಕ್ಕಸವನ್ನು ಹೆಚ್ಚಿಸಿದೆ ಎಂದು ಆಕ್ಷೇಪಿಸಿದರು. ಇದನ್ನು ಐತಿಹಾಸಿಕ ದಾಖಲೆಗಳಿಂದಲೂ ದೃಢಪಡಿಸಬಹುದು. ಕಂಪನಿ ಸರ್ಕಾರದ ಸುರಾಪಾನ ಕಾಯ್ದೆಯು (೧೭೯೦-೮೧) ಮದ್ಯಪಾನವನ್ನು ನಿಯಂತ್ರಿಸುವ ಒಂದು ಕ್ರಮವಾಗಿತ್ತು. ಆದರೆ ಸರ್ಕಾರದ ಅಧಿಕಾರಿಗಳು ಸುರಾಪಾನವನ್ನು ನಿಷೆಧಿಸುವ ಬದಲು, ಪರವಾನಗಿಯನ್ನು ಅತ್ಯಧಿಕವಾಗಿ ಕೊಟ್ಟದ್ದರಿಂದ ಸರ್ಕಾರದ ಬೊಕ್ಕಸವು ಇಮ್ಮಡಿಸಿತು. ಇದು ಬ್ರಿಟೀಷ ಸರ್ಕಾರಕ್ಕೆ ಲಾಭದಾಯಕವಾಗಿತ್ತು. ಇದರಿಂದ ಸರಕಾರದ ಪರವಾನಗಿಯನ್ನು ಹೊಂದಿ ಅನೇಕ ಸುರಾಪಾನ ಮಂದಿರಗಳು ಹೆಚ್ಚಾದವು. ಮತ್ತು ಇದರಿಂದ ಹೆಚ್ಚಿನ ಅನರ್ಥವಾದದ್ದು ಸಾಮಾನ್ಯ ಮನುಷ್ಯನ ಮೇಲೆ. ಆದ್ದರಿಂದ ಸಾಮಾಜಿಕ ಆಂದೋಲನೆಯೇ ಮೈ ತಳೆಯಿತು. ಮತ್ತು ಸಮಾಜ ಸುಧಾರಕರು ಇದನ್ನು ಎತ್ತಿ ಹಿಡಿದರು. ೧೮೨೦ರಲ್ಲಿ ಮುಂಬಯಿನ ಗೌರ್ನರ್ ಆಗಿದ್ದ ಮೌಂಟ್ ಸ್ಟೂಯರ್ಟ ಎಲ್‌ಫಿನಸ್ಟನ್ ಈಸ್ಟ ಇಂಡಿಯಾ ಕಂಪೆನಿಗೆ ಒಂದು ವರದಿಯನ್ನು ಬರೆದು ಮದ್ಯಪಾನದಿಂದ ಆಗುವ ಕೆಡುಕನ್ನು ವರ್ಣಿಸಿ ಅದನ್ನು ನಿಷೇಧಿಸುವಂತೆ ಕೋರಿದ್ದನು. ಕುಲೀನ ಜನ ಇದರ ಅನುಕರಣೆಯನ್ನು ಮಾಡುತ್ತಿದೆಯೆಂಬುದನ್ನೂ ಕೂಡ ಎಲ್‌ಫಿನ್‌ಸ್ಟನ್ ವಿವರಿಸಿದ್ದನು. ೧೮೫೨ರಲ್ಲಿ ಸತಾರದ ಜನರು ಸರ್ಕಾರಕ್ಕೆ ಒಂದು ಮನವಿಯನ್ನು ಸಲ್ಲಿಸಿ ಮದ್ಯಪಾನವನ್ನು ನಿಲ್ಲಿಸುವಂತೆ ಕೋರಿದ್ದರು. ೧೮೬೮ರಲ್ಲಿ ಸಿ.ಡಬ್ಲ್ಯೂ. ಬೆಲ್ ಎಂಬ ಸರ್ಕಾರದ ಅಧಿಕಾರಿಯು ಸರ್ಕಾರದ ಸುಂಕದ ರೀತಿಯ ಮೇಲೆ ಒಂದು ವರದಿಯನ್ನು ಬರೆದು ಒಪ್ಪಿಸಿದ್ದನು. ಅದರಲ್ಲಿ ಪೇಶ್ವೆಗಳ ಕಾಲದಲ್ಲಿ ಸುರಾಪಾನವು ಹೆಚ್ಚಾಗಿತ್ತೆಂದೂ ಅದರಿಂದ ಸರ್ಕಾರಕ್ಕೆ ಲಾಭವಿತ್ತೆಂದೂ ಇದಕ್ಕೆ ವ್ಯತಿರಿಕ್ತವಾಗಿ ಹೋದವರಿಗೆ ಜುಲ್ಮಾನೆ ವಿಧಿಸಲ್ಪಡುತ್ತಿತೆಂದೂ ತಿಳಿಸಿದ್ದಾನೆ.[1] ಪುಣೆಯಲ್ಲಿ ಸುರಾಪಾನ ಮಂದಿರಗಳು ಹೆಚ್ಚಾದಾಗ[2] ಮಹಾರಾಷ್ಟ್ರದ ಸುಧಾರಕರಾದ ಜ್ಯೋತಿರಾವ್ ಫುಲೆ ಪುನಾ ಮುನಿಸಿಪಾಲಿಟಿಗೆ

1 Dhanaiay Keer ; Mabatma Jyoti Rao Phoolay p. 160

2 ೧೮೭೩-೭೪ ರಿಂದ ೧೮೭೬-೭೭ ೪ ಸುರಾಪಾನ ಮಂದಿರ

೧೮೭೭-೭೮ ೧೦ „

ಸುರಾಪಾನದ ಆಮದು ೧೮೭೪—೧೫ ೬೯೭ ಗ್ಯಾಲನ್

„ „ ೧೮೭೯—೨೨, ೯೧೨

ಈ ಮೇಲ್ಕಂಡ ಅಂಕಿಗಳಿಂದ ಪುಣೆಯಲ್ಲಿ ಸುರಾಪಾನದ ಹೆಚ್ಚುವಿಕೆ ಸ್ಪಷ್ಟಪಡುತ್ತದೆ. ಮುಂಬಯಿನ ಜ್ಞಾನಪ್ರಕಾಶ್ ಪಾನ ಮಂದಿರಗಳನ್ನು ಮುಚ್ಚುವಂತೆ ಸೂಚಿಸಿತ್ತು. ಬ್ರಿಟೀಷ್ ಅಧಿಕಾರಿಗಳು ಮಿತ್ರಸುರೆಯು ಆರೋಗ್ಯ ಹಾನಿ ಎಂದೂ, ಅದಕ್ಕಿಂತ ಪರದೇಶದ ಸುರೆಯನ್ನು ಸೇವಿಸಬಹುದೆಂದೂ ವಾದಿಸಿದರು.

(18 July 1880) ಪತ್ರ ಬರೆದು ಪಾನ ಮಂದಿರಗಳು ಹೆಚ್ಚಾಗಿ ಸಹಸ್ರಾರು ಕುಟುಂಬಗಳು ಕುಡಿತದಿಂದ ಹಾಳಾಗುತ್ತಿರುವುದರಿಂದ ಅವುಗಳನ್ನು ಮುಚ್ಚುವಂತೆ ಸೂಚಿಸಿದ್ದರು. ಕುಡಿತವು ಅವಿದ್ಯಾವಂತರಲ್ಲಿ ಜಾಸ್ತಿ ಇತ್ತು. ಜ್ಯೋತಿರಾವ್ ಫುಲೆ ಜನರಿಗೆ ಅಕ್ಷರಾಭ್ಯಾಸ ಓದುವ ಕಲಿಸುವಿಕೆ, ಪುಸ್ತಕ ಹಂಚುವಿಕೆ ಇದರಲ್ಲಿ ಸಾಮಾನ್ಯ ಜನರ ಮನಸ್ಸನ್ನು ಗೆಲ್ಲಬಹುದೆಂದೂ ಸೂಚಿಸಿದ್ದರು. ಕುಡಿತದ ಅಭ್ಯಾಸ ರೈತರಲ್ಲಿ ಹೆಚ್ಚುತ್ತಿರುವುದನ್ನು ಕಂಡು ತೀವ್ರ ಕಳವಳವನ್ನು ವ್ಯಕ್ತ ಪಡಿಸಿದ್ದರು. ಇವರಿಗೆ ಬೆಂಬಲದಂತಿದ್ದ ಸತ್ಯ ಶೋಧಕ ಸಮಾಜವು ಬ್ರಾಹ್ಮಣ, ಬ್ರಾಹ್ಮಣೇತರ ಪಿಡುಗಿನಲ್ಲಿ ತೊಡಗಿದ್ದರಿಂದ ಸುರಾಪಾನದ ಅನರ್ಥದ ಪ್ರಚಾರ ಹಿಂದುಳಿಯಿತು. ೧೮೭೦ರ ಹೊತ್ತಿಗೆ, ಬಂಗಾಲದ ಯುವಕ, ಯುವತಿಯರಲ್ಲಿ ಸುರಾಪಾನ ಸೇವನೆ ನಾಗರೀಕತೆಯ ಪ್ರತೀಕವಾಗಿ ಕಂಡಿದ್ದನ್ನೂ ಬಿಪಿನ್ ಚಂದ್ರಪಾಲ್[3] ವರ್ಣಿಸಿದ್ದಾರೆ. ಕೇಶಭಸಿನ ಈಶ್ವರ ಚಂದ್ರ ವಿದ್ಯಾಸಾಗರ ಇವರೆಲ್ಲಾ ಪಾನನಿರೋಧ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು.

ಮದ್ಯಪಾನ ನಿರೋಧದ ಮೂಲ ಪ್ರವರ್ತಕ ಡಬ್ಲು.ಎಸ್. ಕೈಯನ್ಸ್ ಇಂಡಿಯಾ ದೇಶಕ್ಕೆ ಮೊದಲು ಭೇಟಿ ಕೊಟ್ಟದ್ದು (೧೮೮೭-೮೮) ಡಬ್ಲೂ. ಎಸ್. ಕೈಯನ್ಸ್‌ನ ಪ್ರಕಾರ ಇಂಡಿಯಾ ದೇಶವು ಮೂಲ ಭೂತವಾಗಿ ಹಲವು ತತ್ವಗಳನ್ನು ಪಾಲಿಸುತ್ತದೆ. ತಮ್ಮ ಹಕ್ಕನ್ನು ಚಲಾಯಿಸಲು ಬಿಟ್ಟಲ್ಲಿ ಇಂಡಿಯಾ ದೇಶದ ಮುಕ್ಕಾಲು ಪ್ರಜೆಗಳು ಕುಡಿತದಿಂದ ದೂರವಿರ ಬೇಕೆನ್ನುತ್ತಾರೆ. ಇದನ್ನೇ ಡಬ್ಲ್ಯೂ.ಎಸ್.ಕೈಯನ್ಸ್[4] ಜೊತೆಗೆ ಪಾನ ನಿರೋಧಕ್ಕಾಗಿ ದುಡಿದ ಇಂಗ್ಲೆಂಡಿನ ಆಂಗ್ಲ ಅಧಿಕಾರಿಯಾದ ಸ್ಯಾಮುಯಲ್ ಸ್ಮಿತ್‌ರವರ ಅಭಿಪ್ರಾಯವೂ ಆಗಿತ್ತು. ಡಬ್ಲ್ಯೂ.ಎಸ್. ಕೈಯನ್ಸ್‌ನು ಮತ್ತು ಮುಂದುವರಿದು ಇಂಡಿಯಾ ಸರಕಾರವು, ಸರಕಾರದ ಆದಾಯಕ್ಕೋಸ್ಕರ ಮದ್ಯ ಪಾನವನ್ನು ವಿಶೇಷವಾಗಿ ಪ್ರಚೋದಿಸುತ್ತಿದೆ. ಮತ್ತು ಹಲವು ವ್ಯಾಪಾರಿಗಳು ಸರ್ಕಾರದ ಪರವಾನಗಿಯನ್ನು ಹೊಂದಿ ಎಲ್ಲೆಡೆಯಲ್ಲೂ ಮದ್ಯದ ಅಂಗಡಿಯನ್ನು ತೆರೆಯು ತ್ತಿದ್ದಾರೆ. ಇದರಿಂದ ರೈತ, ಕೂಲಿಜನಾಂಗ ತಮ್ಮ ವಿರಾಮವೇಳೆಯನ್ನು ಮದ್ಯದಂಗಡಿಯಲ್ಲಿ ಕಳೆದು ಸರ್ಕಾರದ ಬೊಕ್ಕಸವನ್ನು ಹೆಚ್ಚಿಸಿ ತಮ್ಮ ಕೈಯನ್ನು ಬರಿದು ಮಾಡಿಕೊಳ್ಳುತ್ತಿದ್ದಾರೆ. ಇದಕ್ಕೆ ಸರ್ಕಾರ ಅವಕಾಶ ಕೊಡ ಕೂಡದೆಂದು ವಿನಂತಿಸಿದನು.

೧೮೮೦ರಲ್ಲಿ ಇಂಡಿಯಾ ದೇಶದ ಸರ್ಕಾರಿ ಖಾತೆಯು ಅಬ್ಕಾರಿ ಆದಾಯ ರೂ. ೨,೮೩೮,೦೦೦ ಇತ್ತು. ೧೮೯೦ ರಲ್ಲಿ ರೂ. ೪೮,೯೧,೦೦೦ ಆಗಿ ಇಮ್ಮಡಿಸಿ ೧೯೦೦ರಲ್ಲಿ ರೂ. ೫೭,೭೫,೦೦೦ ಇತ್ತು. ೧೮೮೦-೧೯೦೦ ರಲ್ಲಿ ಸರ್ಕಾರದ ಆದಾಯ ೧೨೫%(ಪಾಲು) ಹೆಚ್ಚಾಗಿತ್ತು. ಮತ್ತು ಜನಸಂಖ್ಯೆ ಕೇವಲ ೧೭½% ಹೆಚ್ಚಾಗಿತ್ತು.[5]

೧೮೮೮ ರಲ್ಲಿ ಡಬ್ಲ್ಯೂ. ಎಸ್. ಕೈಯನ್ಸ್‌ನು ಮುಂಬಯಿಯನ್ನು ಬಿಡುವ ಮೊದಲು ಹಲವಾರು ಜನಾಂಗದ ಜನರು ಅವನನ್ನು ಭೇಟಿ ಮಾಡಿ ತಮ್ಮ ಪರವಾಗಿ ಇಂಗ್ಲೆಂಡಿನಲ್ಲಿ ಒಂದು ಚಿಕ್ಕ ಸಮಿತಿ ಯೊಂದನ್ನು ರಚಿಸಬೇಕೆಂದೂ ಆ ಮೂಲಕ ಲಂಡನ್ನಿನ ಪಾರ್ಲಿಮೆಂಟ್‌ನಲ್ಲಿ ಇಂಡಿಯಾ ದೇಶದ ಜನರ ಕುಂದು ಕೊರತೆಗಳನ್ನು ಮಂಡಿಸಬೇಕೆಂದು ಪ್ರಾರ್ಥಿಸಿತು. ಇದರಿಂದ ಉಪಲಬ್ದವಾದದ್ದು "ಆಂಗ್ಲೊ ಇಂಡಿಯನ್ ಟೆಂಪರೆನ್ಸ್ ಅಸೋಸಿಯೇಷ್ನ"[6] ಈ ಸಂಸ್ಥೆಯಲ್ಲಿ ಸ್ಯಾಮುಯಲ್ ಸ್ಮಿತರವರು ಪ್ರೆಸಿಡೆಂಟರಾಗಿಯೂ, ಹೆಚ್. ಎಮ್. ಮ್ಯಾಥಿರ್ಸ ಖಜಾಂಚಿಯಾಗಿಯೂ. ಡಬ್ಲ್ಯೂ. ಎಸ್. ಕೈಯನ್ಸ್‌ನು ಸೆಕ್ರೆಟರಿಯಾಗಿಯೂ ದುಡಿದರು. ಇಂಡಿಯಾದಲ್ಲಿ ಆಂಗ್ಲೊ-ಇಂಡಿಯನ್ ಟೆಂಪರೆನ್ಸ್‌ನ ಅಸೋಸಿಯೇಷನ ಅಂಗ ಸಂಸ್ಥೆಗಳು

3 Bipin Chandra pal ; Memoirs of my Life and times 1886-1900 See also Surendranath Banarjee : A Nation in the making. p. 6,7
4 W.S Caines Speech in the House of Commons. 30/4/1889 See alsc Samuel Smith mp : my life Work 1903 p. 218
5 W.S. Caines Speech in the House of Commons 10, November 1990
6 John Newton ; W.S. Coines M.P. A biogrophy 1907 p. 236

ಸುಮಾರು ೨೫೦ಕ್ಕಿಂತ ಜಾಸ್ತಿ ಇದ್ದು ಚಟುವಟಿಕೆ ಯಿಂದ ಕೆಲಸ ಮಾಡಿದವು.

ಇಂಗ್ಲೆಂಡಿನ ರಾಜ್ಯಸಭೆಯಲ್ಲಿ ಕೈಯನ್ಸಿನ ಪ್ರಭಾವದಿಂದ ಮದ್ಯಪಾನ ನಿರೋಧಕ್ಕೆ ಸಂಬಂಧಪಟ್ಟ ಹಲವಾರು ಸೂಚನೆಗಳನ್ನು ತಿದ್ದುಪಡಿಯೊಡನೆ ಮಂಡಿಸಲಾಯ್ತು ಆಂಗ್ಲ ಸರ್ಕಾರವು ತನ್ನ ಹಲವು ಸೂಚನೆಯೊಡನೆ ಡಬ್ಲ್ಯೂ.ಎಸ್.ಕೈಯಸ್ಸ್‌ನ ಅಭಿಪ್ರಾಯ ವನ್ನು ಒಪ್ಪಿಕೊಂಡು ನಾಲ್ಕು ಸೂಚನೆಗಳನ್ನು ನೀಡಿತು.[7]

ನಾಲ್ಕನೇಯ ಸೂಚನೆಗೆ ಹೆಚ್ಚಿನ ಮಹತ್ವ ದೊರೆಯಿತು. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಸಭೆಯು ತನ್ನ ಅಧಿವೇಶನದಲ್ಲಿ ಕೈಯನ್ಸ್‌ನಿಗೆ ಕಾಂಗ್ರೆಸ್ ಪರವಾಗಿ ವಂದನೆ ಸೂಚಿಸಿ ಈ ಮಹತ್ಕಾರ್ಯವನ್ನು ತೀವ್ರಗೊಳಿಸುವಂತೆ ಸೂಚನೆ ನೀಡಿತು. ಕೈಯನ್ಸಿನ ಆದೇಶದಂತೆ ಬನಾರಸಿನಲ್ಲಿ ಹಿಂದುಳಿದ ಮತ್ತು ಔದ್ಯೋಗಿಕ ವರ್ಗದ ಜನರು ತಮ್ಮ ಮುಖಂಡರ ಪ್ರಚಾರದ ಪ್ರಭಾವಕ್ಕೆ ಒಳಗಾಗಿ ಮದ್ಯ ಪಾನದ ಕೆಡುಕನ್ನು ವಿವರಿಸಿ ತಿಳುವಳಿಕೆಯನ್ನು ಕೊಟ್ಟಾಗ ಬನಾರಸ್ಸಿನಲ್ಲಿ ಕುಡುಕರ ಸಂಖ್ಯೆ ಕಡಿಮೆ ಯಾಯಿತು.[8] ಇದು ಡಬ್ಲ್ಯೂ.ಎಸ್. ಕೈಯನ್ಸ್‌ನಿಗೆ ಅತ್ಯಂತ ಉತ್ತೇಜನ ನೀಡಿತು. ಟೆಂಪೊರೆನ್ಸ್ ಸೊಸೈಟಿ ಗಳು ಚಟುವಟಿಕೆಯಿಂದ ಕೆಲಸ ಮಾಡಿದವು. ಈ ಸಂಸ್ಥೆಯಿಂದ ಸಾಮಾನ್ಯ ಜನರಿಗೆ ತಿಳುವಳಿಕೆಯನ್ನು ನೀಡುವ ಚಿಕ್ಕ ಕೈಪಿಡಿಗಳೂ ಮತ್ತು 'ಅಬಕಾರಿ' ಎಂಬ ತ್ರೈ ಮಾಸಿಕ ಪತ್ರಿಕೆಯೂ ಹೊರಟವು. ಹಲವಾರು ಪತ್ರಿಕೆಗಳು ಸುರಾಪಾನ ನಿರೋಧದ ಕರೆಗೆ ತ್ವರಿತವಾದ ಕ್ರಮ ಕೈಗೊಳ್ಳುವಂತೆ ಮತ್ತು ಜನ ಸಾಮಾನ್ಯರ ಅಭಿಪ್ರಾಯವನ್ನು ಕೇಳುವಂತೆ ಸೂಚಿಸುತ್ತಿದ್ದುವು. ಟೆಂಪೊರೆನ್ಸ್ ಅಸೋಸಿಯೇಷನ್‌ಗಳು ಪಾನನಿರೋಧಕ ಚಳುವಳಿಯಲ್ಲಿ ಭಾಗವಹಿಸಿ ಪ್ರತಿಭಟನೆಯನ್ನು ಸೂಚಿಸುತ್ತಿದ್ದವು.[9]

ಧಾರವಾಡದ ಸುರಾಪಾನ ನಿಷೇಧಕ ಸಂಸ್ಥೆ[10] ಸುರಾಪಾನದಿಂದ ಒದಗುವ ಅನರ್ಥವನ್ನು ಚಿತ್ರದ ಮೂಲಕ ಪ್ರಕಟಿಸಿ ಊರಿಂದೂರಿಗೆ ಹಂಚುವದರಲ್ಲಿ ಯಶಸ್ವಿಯಾಯಿತು.

ಇನ್ನು ಮೈಸೂರಿನತ್ತ ಕಣ್ಣು ಹಾಯಿಸಿದಾಗ ನಮಗೆ ಮೊದಲು ಕಾಣುವ ಚಿತ್ರ ಟೀಪೂಸುಲ್ತಾನನು ಮೀಕಸಾದಕನಿಗೆ ಬರೆದ ನಿರೂಪ[11] (೧೭೮೭). ಟಿಪ್ಪೂವಿನ ರೆವಿನ್ಯೂ ನಿಯಮಾವಳಿಯನ್ನು ನೋಡು ವಾಗ (೧೭೮೭) "ನಮ್ಮ ಜನರ ಆರ್ಥಿಕ ಮತ್ತು ನೈತಿಕ ಹಿತದೃಷ್ಟಿಯಿಂದ ಮದ್ಯದ ತಯಾರಿಕೆ ಮತ್ತು ಮಾರಾಟ ಮಾಡುವದಕ್ಕೆ ಮಾತ್ರ ಕಡಿಮೆ ಪ್ರಮಾಣದಲ್ಲಿ ತಯಾರಿಸಲು 'ಲೈಸೆನ್ಸ್ ನೀಡಬಹುದು." ಇದರಂತೆ ಕಟ್ಟುನಿಟ್ಟಾಗಿ ನಡೆದುಕೊಂಡ ಬೆಂಗಳೂರಿನ ಆಗಿನ ಅಮಲ್ದಾರ ಗುಲಾಮ್ ಹೈದರನಿಗೆ ಟೀಪ್ಪು ಬರೆದ

7 (a) ಕುಡಿತವನ್ನು ನಿಲ್ಲಿಸಲು ಪ್ರಯತ್ನಿಸಬೇಕು
(b) ಮದ್ಯಪಾನದ ಸುಂಕ ಹೆಚ್ಚಿಸುವುದರ ಮೂಲಕ ಕುಡಿತ ಕಡಿಮೆಯಾಗುವಿಕೆ
ಸರ್ಕಾರದ ನಿಯಂತ್ರಣ ಪದ್ಧತಿ ಪ್ರಕಾರ :—(1) ಕುಡಿತವನ್ನು ನಿಲ್ಲಿಸಲು ಪ್ರಯತ್ನಿಸುವಿಕೆ
(2) ಸುರಾಪಾನದ ಸುಂಕ ಅತ್ಯಧಿಕವಾಗಿರಬೇಕು
(3) ಸುರಾಪಾನ ಮಂದಿರಗಳ ಪರವಾನಗಿ ಮಿತವಾಗತಕ್ಕದ್ದು
(4) ಸುರಾಪಾನ ಮಂದಿರಗಳನ್ನು ಆರಂಭಿಸುವ ಮುನ್ನ ಭಿನ್ನಾಭಿಪ್ರಾಯವನ್ನು ತಿಳಿಯತಕ್ಕದ್ದು.

8 John Newton, W.S. Caines M.P. a Biography 1907 p. 236

9 'Drink' *Maharatta* 7 July 1890

10 ಸುರಾಪಾನ ನಿಷೇದಾರ್ಥ ಚಿತ್ರಬೋಧ (೧ನೇ ಭಾಗ) (೧) ಆವೃತ್ತಿ
(Procured from India Office Library C. Records London)

11 ಹಣಕಾಸಿನ ವಿಚಾರಕ್ಕಾಗಿ ಅಂಜಬೇಕಾಗಿಲ್ಲವೆಂದೂ, ಇದು ಕೇವಲ ಧರ್ಮದ ಪ್ರಶ್ನೆ ಅಲ್ಲವೆಂದೂ ಮತ್ತು ಯುವ ಜನರ ಬಗ್ಗೆ ಚಿಂತಿಸಬೇಕಾಗಿದೆ ಯೆಂದೂ, ಪಾನನಿರೋಧದಿಂದ ಸರ್ಕಾರಕ್ಕೆ ನಷ್ಟವಾದರೂ ಸರ್ಕಾರದ ಆದಾಯಕ್ಕಿಂತ ನೈತಿಕ ಮಟ್ಟ ಉನ್ನತಿಯಲ್ಲಿರಬೇಕೆಂದು ನಿರೂಪದ ಅಂಶ.

ಪತ್ರ[12] "ಮದ್ಯವನ್ನು ತಯಾರು ಮಾಡದಂತೆ ಮುಚ್ಚಳಿಕೆಯನ್ನು ಬರೆಸಿಕೊಂಡಿರುವುದಾಗಿಯೂ ನೀವು ಮಾಡಿದ ವರದಿಯು ವೇದ್ಯವಾಯಿತು. ಇಷ್ಟೇ ಸಾಲದು; ಮದ್ಯವನ್ನು ತಯಾರು ಮಾಡುವವರಿಂದಲೂ ಇದೇ ರೀತಿಯ ಮುಚ್ಚಳಿಕೆಯನ್ನು ನೀವು ಬರೆಯಿಸಿಕೊಳ್ಳತಕ್ಕದ್ದು. ಮತ್ತು ಅವರು ಬೇರೆ ಯಾವುದಾದರೂ ಉದ್ಯೋಗವನ್ನು ಕೈಗೊಳ್ಳುವಂತೆ ನೆರವಾಗುವದು."

ಟಿಪ್ಪುವಿನ ನಂತರ ಬಂದ ಮೈಸೂರು ದಿವಾನರ ಕಾಲದಲ್ಲಿ ಅಬಕಾರಿ ಆದಾಯ ಹೆಚ್ಚಿರುವದು ಕಾಣುತ್ತದೆ. Ist October 1879 ಸುಂಕದ ಕಾಯ್ದೆ ಮೈಸೂರು ದೇಶದಲ್ಲಿ ಜಾರಿಗೆ ಬಂದಿತ್ತು. ಈ ಕಾಯ್ದೆಯು ಅಬಕಾರಿ ಆದಾಯದ XXI, 1856 ಸುಂಕದ ಕಾಯ್ದೆಯ ಅವಿಭಾಜ್ಯವಾದ ಅಂಗವಾಗಿತ್ತು. ೧೮೭೯-೮೦, ಮೈಸೂರು ಸರ್ಕಾರದ ಆದಾಯ ರೂ. 21,426–15 ಆಣೆ 7½ ಕಾಸು ಇದ್ದದ್ದು, ೧೮೭೮–೭೯ ರಲ್ಲಿ 17,279-5-1 ಇತ್ತು. ಸರಕಾರದ ಲಾಭ ಒಟ್ಟು ರೂ. 1125-14-10.[13]

ಆಂಗ್ಲರ ಕೈಕೆಳಗಿದ್ದ ಮೈಸೂರು ಸರ್ಕಾರಕ್ಕೆ ಅಬಕಾರಿ ಹಣ ಲಾಭದಾಯಕವಾಗಿತ್ತು. ಮೈಸೂರಿನ ಮೊದಲನೆಯ ದಿವಾನರಾದ ಸಿ. ರಂಗಚಾರ್ಲುರವರು (೧೮೮೧–೮೩) ಹೆಚ್ಚುಕಾಲ ದಿವಾನರಾಗಿ ಇರಲಿಲ್ಲವಾದ್ದರಿಂದ ಮದ್ಯಪಾನದ ಬಗ್ಗೆ ಅವರ ಅಭಿಪ್ರಾಯವನ್ನು ಖಚಿತವಾಗಿ ಹೇಳಲು ಸಾಧ್ಯವಾಗುವದಿಲ್ಲ. ಮೈಸೂರಿನ ಎರಡನೇ ದಿವಾನರಾದ ಎಸ್. ಶೇಷಾದ್ರಿ ಐಯರ್‌ರವರನ್ನು (೧೮೯೪) ಮದ್ಯಪಾನದ ಬಗ್ಗೆ ಗಮನ ಸೆಳೆದಾಗ ಅವರು ಮೈಸೂರು ನ್ಯಾಯ ವಿಧಾಯಕ ಸಭೆಗೆ ಕೊಟ್ಟ ಉತ್ತರ, "ನಮಗೆ ಅಬಕಾರಿ ಸುಂಕದ ಮೊತ್ತವು ಜನರ ಹಿತದೃಷ್ಟಿಗಿಂತ ಹೆಚ್ಚಲ್ಲ. ಮಿತಪಾನವನ್ನು ಜನರು ಬಯಸಿದ್ದೇ ಆದರೆ ಸರ್ಕಾರವು ತನ್ನ ಆದಾಯವನ್ನು ಕಳೆದುಕೊಳ್ಳಲು ಸಿದ್ಧ." ಇದು ಹಾರಿಕೆಯ ಉತ್ತರವಾಗಿತ್ತು.

| | 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|---|
| Year | Arrack | Toddy | Ganja | Gpium | Foreign liquor | Beer | Missel-antious | Total | Expen-diture |
| Rs. | Rs. | Rs. | Rs. | Rs. | Rs. | Rs. | Rs. | Rs. | Rs. |
| 1893—94 | 17,15,780 | 11,44,738 | 18,845 | 30,821 | 1698 | 839 | 11,439 | 32,24,210 | 2,64,392 |
| 1894—95 | 18,90,950 | 14,63,970 | 24,229 | 33,438 | 1725 | 638 | 10,877 | 34,25,827 | 2,13,955 |
| 1895—96 | 98,380 | 15,42 621 | 27,763 | 35,435 | 2036 | 915 | 7,566 | 36,14,716 | 2,20,054 |
| 1896—97 | 19,10,348 | 15,28 021 | 27,783 | 35,955 | 2047 | 1248 | 9,118 | 35,14,520 | 2,41,789 |
| 1897—98 | 20,25,570 | 14,69,858 | 35,759 | 38,837 | 2236 | 2295 | 7.950 | 35,82,505 | 2,74.993 |

**Net Reveneus for the years indicated**

| Year | Rs. |
|---|---|
| 1893—94 | 29,59,818 |
| 1894—95 | 32,11,872 |
| 1895—96 | 33,94,662 |
| 1896—97 | 32,73,331 |
| 1897—98 | 33.07,512 |

12 Tippu Sultan's letter to Gulam Hyder. 4/1/1787

13 S.R. 1879 File No. 9. S/s 1 to 8
Excise Report for the year 1879-80.

(Source : Excise Administration Report for the year 1897-98 [14])

ಮೈಸೂರು ಸರ್ಕಾರಕ್ಕೆ ಆದಾಯವು ಹೆಂಡ, ಸಾರಾಯಿ ಇವುಗಳ ವಿಕ್ರಯದಿಂದ ಬರುತ್ತಿತ್ತು. ಹೆಂಡ ರೈತರು ಕುಡಿಯುವ ಪಾನೀಯ. (ಹೆಂಡವು, ಮದ್ಯಸಾರ ಮತ್ತು ಬಿಸಿನೀರುಗಳ ಮಿಶ್ರಣಕ್ಕೆ ಸಿಹಿ ಸೇರಿದ ಪಾನೀಯ). ಆರಕ್ (ಭಟ್ಟಿ ಇಳಿಸಿ ತಯಾರಿಸಿದ ಮದ್ಯ) ಗಟ್ಟಿಯಾದ ಪಾನೀಯ. ಇದನ್ನು ಗಿರಣಿಯಲ್ಲಿ ಕೆಲಸ ಮಾಡತಕ್ಕಂತ ಕೂಲಿಮಕ್ಕಳು ಹೆಚ್ಚಾಗಿ ಸೇವಿಸಿ ತಮ್ಮ ಗೆಳಕೆಯನ್ನು ವ್ಯಯಗೊಳಿಸುತ್ತಿದ್ದರು. ಅದೂ ಅಲ್ಲದೆ ಆರಕ್‌ನ್ನು (Arrack) ಗಣಿ ಉದ್ಯಮದಲ್ಲಿ ಕೆಲಸ ಮಾಡುವ ಕೆಲಸಗಾರರು, ಕಾಫಿತೋಟದಲ್ಲಿ ಕೆಲಸ ಮಾಡುವ ಕೆಲಸದವರು ಹೆಚ್ಚು ಹೆಚ್ಚಾಗಿ ಸೇವಿಸುತ್ತಿದ್ದರು. ೧೮೮೧-೮೨ ಹೆಂಡದಿಂದ ಬಂದ ಆದಾಯ ರೂ. ೧,೨೦,೨೦೦ ಆಗಿದ್ದರೆ ೧೮೯೪ ರಲ್ಲಿ ರೂ. ೫,೬೭,೦೦೦ಕ್ಕೆ ಏರಿತ್ತು.[15] ಬೆಂಗಳೂರಿನ ಆರ್ಥಿಕ ನಾಗರೀಕತೆಯ ಮಟ್ಟ ಏರಿದ್ದು, ಗಿರಣಿಯ ಉದ್ಯೋಗದಲ್ಲಿ ತೊಡಗಿರುವವರು ಅತ್ಯಧಿಕವಾಗಿ ಸುರಾಪಾನ ಮಾಡುತ್ತಿದ್ದರು. ದಂಡಿನಲ್ಲೂ ಸುರಾಪಾನದ ಬಳಕೆಯನ್ನು ಕಾಣಬಹುದಾಗಿತ್ತು.

### ಸುರಾಪಾನ ಮಂದಿರಗಳು

| Year | No. of Liquor shops | Year | No. of Liquor shops |
|---|---|---|---|
| 1891–92 | 34 | | |
| 1892–93 | 34 | 1920–21 | 60 |
| 1893–94 | 36 | | |
| 1894–95 | 38 | | |

Taluks where no. of shops have been reduced but consumption has increased–

| Taluk | 1893–94 Gallons of liquor | 1894–95 Liquor/gallons | 1893–94 No. of shops | 1894–95 No. of shops |
|---|---|---|---|---|
| 1) Bangalore | 21146.42 | 24948.30 | 57 | 56 |
| 2) Heggadadevana kote | 866.0 | 921 | 8 | 6 |
| 3) Shimoga | 15,351.0 | 16,302 | 49 | 48 |
| 4) Nagar | 877.0 | 902 | 8 | 7 |
| 5) Koppa | 12,314.0 | 12,878 | 44 | 43 |

---

14 Excise Administation File No. 9. s/s. I to 8
Excise Report for the year 1879-80.

15 ೧೮೯೩.೯೪ ರಲ್ಲಿ ೩೯,೫೯೩ ಗ್ಯಾಲನ್ ಸುರೆಯು ಬಳಕೆಯಲ್ಲಿದ್ದು, ೧೮೯೪.೯೫ ರಲ್ಲಿ ೪,೨೬,೫೭೨ ಗ್ಯಾಲನ್‌ಗೆ ಏರಿತ್ತು. ಅಂದರೆ ೨.೬೫% ಬಳಕೆ ಏರಿದ್ದನ್ನು ಕಾಣಬಹುದು. (Proceedings of the Assembly of Representatives- Raiyats and Merchants of the State of Mysore, 1895 Excise incidence p. 14–15.)

ಬೆಂಗಳೂರು ಒಂದಲ್ಲದೆ, ಬೇರೆ ಡಿಸ್ಟ್ರಿಕ್ಟ್‌ಗಳಾದ ಕೋಲಾರ, ತುಮಕೂರು, ಚಿತ್ರದುರ್ಗ, ಶಿವಮೊಗ್ಗ, ಕಡೂರು, ಹಾಸನ ಈ ಊರುಗಳಲ್ಲಿ ಸುರಾಪಾನ ಸೇವನೆ ಹೆಚ್ಚಾಗಿತ್ತು. ಮೇಲಿನ ಅಂಕಿಗಳನ್ನು ಗಮನಿಸಿದಾಗ ನಮಗೆ ವೇದ್ಯವಾಗುವದು ಸರ್ಕಾರವು ಮೇಲ್ನೋಟಕ್ಕೆ ಪಾನನಿರೋಧವನ್ನು ಅನುಮೋದಿಸಿದರೂ, ಬರುತ್ತಿರುವ ಹೆಚ್ಚಿನ ಆದಾಯ ಸುರೆಯಿಂದ ಎಂಬುದನ್ನು ಮರೆಯಲಿಲ್ಲ. ಮೈಸೂರು ದೇಶದ ಮುಖ್ಯ ಪತ್ರಿಕೆಯಾದ 'ಕರ್ನಾಟಕ ಪ್ರಕಾಶಿಕಾ' ಮದ್ಯಪಾನದ ವಿರೋಧ ಆಗಾಗ್ಯೆ ಅಗ್ರ ಲೇಖನಗಳನ್ನು ಬರೆದು ಎಚ್ಚರಿಸುತ್ತಿತ್ತು.

"ಮೈಸೂರಿನಲ್ಲಿ ದೊರೆಯುವ (ಲಿಕರ್) ತೀವ್ರ ಮದ್ಯ ಅತ್ಯಂತ ರುಚಿಕಟ್ಟಾಗಿರುವದರಿಂದ, ಅದನ್ನು ಇಲ್ಲಿ ಜಾಸ್ತಿ ತಯಾರಿಸುವದರಿಂದ ಅದಕ್ಕೆ ವಿಶೇಷ ಬೇಡಿಕೆ ಇದೆ. ಹೊರಗಿನಿಂದ ಬಂದು ಕುಡಿಯುವವರ ಸಂಖ್ಯೆ ಜಾಸ್ತಿಯಾಗಿದೆ. ಮದ್ಯವನ್ನು ಮನೆಗೆ ಕೊಂಡು ಹೋಗಿ ಕುಡಿಯುವದು ಕೂಡ ಜಾಸ್ತಿಯಾಗಿದೆ. ಆದ್ದರಿಂದ ಸರ್ಕಾರ ಒಂದು ನಿಯಮಿತವಾದ ನಿರ್ದಿಷ್ಟ ವಾದ ಪ್ರಮಾಣವನ್ನು ನಿಶ್ಚರ್ಯ ಮಾಡಬೇಕು. ಅಗ ಮೈಸೂರು ದೇಶ ಕುಡುಕರ ಬೀಡಾಗುವದು ತಪ್ಪೀತು."[16]

೧೮೯೫ ರಲ್ಲಿ ನಡೆದ ಸಂಘ ಸಂಸ್ಕರಣ ಸಭೆ[17] (Social Conference) ಮಾದಕ ಪದಾರ್ಥ ನಿರೋಧಕ ಕ್ರಮವನ್ನು ಅನುಕರಿಸಿ ಹೊರದೇಶದ ಸಂಪರ್ಕವನ್ನು ಹೊಂದಿ ಸಾರ್ವಜನಿಕವಾಗಿ ಸಫಲವಾಗುವಂತೆ ಪ್ರಯತ್ನಿಸುವಂತೆ ಆದೇಶಿಸಿತ್ತು. ಅಬಕಾರಿ ತೆರಿಗೆಯ ದರವನ್ನು ಹೆಚ್ಚಿಸಿದರೆ ಮದ್ಯ ದುಬಾರಿಯಾಗಿ ಜನರು ಕುಡಿಯುವದನ್ನು ಕಡಿಮೆಮಾಡಬಹುದೆಂಬ ಸುಳ್ಳು ನಿರೀಕ್ಷಣೆಯನ್ನು ಉಂಟುಮಾಡಿ ಸರ್ಕಾರ ತನ್ನ ಆದಾಯವನ್ನು ಹೆಚ್ಚಿಸಿಕೊಂಡಿತು. ಸ್ಯಾಮುಯಲ್ ಸ್ಮಿತ್ ಎಂಬ ಆಂಗ್ಲಾಧಿಕಾರಿ, ಮದ್ಯವಿಸರ್ಜನೆಯ ಬಗ್ಗೆ ಹಲವಾರು ಕಡೆ ಪ್ರಚಾರ ಮಾಡಿ ೩೦ ಏಪ್ರಿಲ್ ೧೮೮೯ ರಲ್ಲಿ ಹೌಸ್ ಆಫ್ ಕಾಮನ್ಸ್ ಸಭೆಯಲ್ಲಿ ಈ ವಿಚಾರವನ್ನು ಇಂಗ್ಲೆಂಡಿನಲ್ಲಿ ಮಂಡಿಸಿದರು. ಸರ್ಕಾರ ಇದಕ್ಕೆ ವಿರೋಧವಾಗಿದ್ದರೂ, ಬಹುಮತ ದೊರಕಿದ್ದರಿಂದ ಇಂಡಿಯಾ ಸರ್ಕಾರವು ಒಂದು ಆದೇಶವನ್ನು ನೀಡಿ, ಹಾಲಿ ಇರತಕ್ಕಂತಹ ಸುರಾಪಾನ ಮಂದಿರಗಳನ್ನು ಕಡಿಮೆ ಮಾಡಬೇಕೆಂತಲೂ ತೆರಿಗೆಯನ್ನು ಅಧಿಕಗೊಳಿಸುವಂತೆಯೂ, ಸೂಕ್ತ ಕ್ರಮವನ್ನು ಕೈಗೊಳ್ಳುವಂತೆಯೂ ಮಿತಪಾನ ಪ್ರಚಾರವನ್ನು ಪ್ರಬಲಗೊಳಿಸಲು ಪ್ರಯತ್ನಪಟ್ಟಂತೆ ತೋರಿಸಿತು. ಆದರೆ ಅಬಕಾರಿ ತೆರಿಗೆಯು ಹೆಚ್ಚಾದರೂ ಕುಡಿಯುವವರ ಸಂಖ್ಯೆಯೇನೂ ಕಡಿಮೆಯಾಗಲಿಲ್ಲ.

| Year | No. of Shops | Consumption gallons | Annual Rental |
|---|---|---|---|
| 1900-01 | 923 | 301,633 | 3,85,549 |
| 1910-11 | 781 | 375,756 | 3,34,548 |
| 1917-18 | 722 | 409,904 | 6,98,722[18] |

೧೯೧೭ ರಲ್ಲಿ ಮೈಸೂರು ಸರ್ಕಾರವು ಕುಡಿತವು ಹೆಚ್ಚುತ್ತಿರುವ ಬಗ್ಗೆ ಕಳವಳವನ್ನು ವ್ಯಕ್ತಪಡಿಸಿ ಒಂದು ಕಮಿಟಿಯನ್ನು ರಚಿಸಿ ಸರ್ಕಾರಕ್ಕೆ ವರದಿಯನ್ನು ಒಪ್ಪಿಸುವಂತೆ ಕೇಳಿತು.[19]

೧೯೧೯ ರಲ್ಲಿ ದಿವಾನರಾಗಿದ್ದ ಕಾಂತರಾಜೇ ಅರಸ್‌ರವರು ಪಾನ ನಿರೋಧಕ್ಕಾಗಿ ಮೈಸೂರಿನ ಶ್ರಮ ಸಾಲದೆಂದೂ ಅಬಕಾರಿ ದರವನ್ನು ಹೆಚ್ಚಿಸಿ ಪಾನನಿರೋಧವನ್ನು ಜಾರಿಗೆ ತರುವ ಮೈಸೂರು ಸರ್ಕಾರದ

---

16 'The Drink question in Mysore, *Karnataka Prakashika*, 28th Dec. 1895

17 ಸಂಘ ಸಂಸ್ಕರಣ ಸಭೆ, ೧೧ ನವೆಂಬರ್, ೧೮೯೫

18 Administration Report on the Excise department, 1917–20

19 No 9450 9 Ex 62–18–24 dated 29 Jan. 1919 Proceedings of the H.H. the Maharaja of Mysore.

ನಿಯಮಾವಳಿ ಪಾನನಿರೋಧದ ಪ್ರತಿಬಂಧನ ಮಾಡಲು ಅಸಮರ್ಥವಾಗಿದೆಯೆಂದು, ಇದಕ್ಕಾಗಿ ಬೇರೆ ಜನ ಜಾಗೃತಿ ಕಾರ್ಯಕ್ರಮ ಕೈಕೊಳ್ಳಬೇಕೆಂದು ಆಶಿಸಿದರು."[20] ಇದಕ್ಕೆ ಉತ್ತರವಾಗಿ ಪೂರ್ಣ ಪಾನ ನಿರೋಧಕ್ಕೆ ಮೈಸೂರಿನ ಜನರು ಸಹಕರಿಸುವರೆಂದೂ ಇದು ಮೈಸೂರಿನ ಏಳ್ಗೆಗೆ ಸಹಾಯವಾಗುತ್ತದೆಂದೂ ಮತ್ತು ಆಂಗ್ಲರ ಕಣ್ಣಿನಲ್ಲಿ ಮೈಸೂರಿನದು ದಿಟ್ಟ ಹೆಜ್ಜೆಯಾದೀತೆಂದೂ, ಇಂಡಿಯನ್ ಸೋಷಿಯಲ್ ರಿಫಾರ್ಮರ್ ಪತ್ರಿಕೆ ಬರೆಯಿತು.

೧೯೧೯ ರಲ್ಲಿ ಸೌತ್ ಇಂಡಿಯಾ ಯುನೈಟೆಡ್ ಚರ್ಚ್‌ನವರು ಒಂದು ಒಕ್ಕೂಟದಲ್ಲಿ ಗೊತ್ತುವಳಿಯನ್ನು ಮಂಡಿಸಿದರು. ಇದರಲ್ಲಿ ಮೈಸೂರು, ಮದ್ರಾಸ್ ಮತ್ತು ತಿರುವಾಂಕೂರ್ ಸಂಸ್ಥಾನದ ಪ್ರತಿನಿಧಿಗಳು ಹಾಜರಿದ್ದು ಠರಾವು ಮಂಡಿಸಿ "ಎಲ್ಲಾ ದೇಶದಲ್ಲಿ ಮದ್ಯಪಾನದ ವಿರುದ್ಧ ಪ್ರಬಲವಾದ ಪ್ರಯತ್ನ ನಡೆಯುತ್ತಿದೆಯೆಂದೂ, ಇಂಡಿಯಾ ಸರ್ಕಾರ ಮಾದಕ ದ್ರವ್ಯವನ್ನು ಆಮದು ಮಾಡಲೇಬಾರದೆಂದೂ ಮತ್ತು ಸುರಾಪಾನ ಬಿಕರಿ ಮತ್ತು ಮಾಡುವಿಕೆ ಎರಡನ್ನೂ ನಿಲ್ಲಿಸಿದರೆ ಸುರಾಪಾನ ಪೂರ್ಣ ಪ್ರತಿಬಂಧವಾಗುತ್ತದೆ ಎಂದು ಠರಾವು ಮಂಡಿಸಿ ಇಂಡಿಯಾ ಸರ್ಕಾರಕ್ಕೆ ಕಳುಹಿಸಿದರು."[21]

ಜಾನ್ಸನ್ ಪುಸ್ಸಿಫೂಟ್‌ರವರು ಇಂಡಿಯಾ ದೇಶಕ್ಕೆ ಬಂದಾಗ ಅವರನ್ನು ಸೋಷಿಯಲ್ ಸೈಯನ್ಸ ಕಾನ್ಫರೆನ್ಸಿಗೆ ಬರಮಾಡಿಕೊಳ್ಳುತ್ತಾ, ಅಧ್ಯಕ್ಷರಾದ ಪುಟ್ಟಣ್ಣಶೆಟ್ಟರು "ಹೊರನಾಡಿನವರು ಸುರಾಪಾನದಂತಹ ಪಿಡುಗಿನಿಂದ ಪಾರಾಗುತ್ತಿರುವಾಗ ನಮ್ಮ ದೇಶದಲ್ಲಿ ಇದರ ಉಲ್ಬಣ ಹೆಚ್ಚುತ್ತಿರುವದು ನಮ್ಮ ದೌರ್ಭಾಗ್ಯ. ಬಲಶಾಲಿ ನಾಯಕರು ಇದರ ಮುಂಧಾಳತ್ವವನ್ನು ವಹಿಸಿ ಇದನ್ನು ಹೊರಗಟ್ಟಬೇಕು" ಎಂದರು. ಇದಕ್ಕೆ ಉತ್ತರವಾಗಿ ಯಾವುದೇ ಸಾಮಾಜಿಕ ಪ್ರಶ್ನೆ ಒಂದು ರಾತ್ರಿಯಲ್ಲಿ ಹೋಗುವಂಥದ್ದಲ್ಲ. ಇದಕ್ಕೆ ಪುಟ್ಟಣ್ಣಶೆಟ್ಟರೇ ಮುಂದಾಳತ್ವ ವಹಿಸಿದರೆ ಸಾಧ್ಯವಾದೀತು ಎಂದು Indian Social Reformer ಪತ್ರಿಕೆ ಬರೆಯಿತು.[22]

ಮೈಸೂರು ಸರ್ಕಾರ ಪಾನ ನಿರೋಧಕ್ಕೆ ಕೈಕೊಂಡ ಕ್ರಮ ಅಲ್ಪಸ್ವಲ್ಪ. ಇದಕ್ಕಾಗಿ ಸರ್ಕಾರ ರಚಿಸಿದ ಕಮಿಟಿಯ ಅಧ್ಯಕ್ಷರಾದ ಹೊಸಕೊಪ್ಪ ಕೃಷ್ಣರಾಯರು

---

20 Mysore and its Problems', *Indian Social Reformer.* 12 Oct. 1919.

21 'Total Prohibition' Indian Social Reformer, Vol XXX No 2, 1919.
ವೆಸ್ಲಿಯನ್ ಮಿಷಿನರಿಗೆ ಸೇರಿದ ರೆವರೆಂಡ್ ಹೆನ್ರಿಹೇಗ್ (ಮೈಸೂರು) 16ಕುಡಿತವು ಕ್ರೈಸ್ತಧರ್ಮದ ಪ್ರತೀಕವಾಗಿದೆ ಎಂಬುದನ್ನು ಪದೇ ಪದೇ ಕೇಳುತ್ತಿದ್ದೇವೆ. ಕ್ರೈಸ್ತಧರ್ಮಕ್ಕೆ ಮತಾಂತರ ಹೊಂದಿ ಕುಡಿತವನ್ನು ಕಲಿತಿದ್ದಾನೆ ಎಂಬ ಅಪವಾದವನ್ನು ಮಾಡುವುದು ಸಾಮಾನ್ಯವಾಗಿದೆ. ಇದು ಒಳಿತಲ್ಲ. ಈ ಪಿಡುಗಿನಿಂದ ಪಾರಾಗಬೇಕು ಎಂದು ಸೂಚಿಸಿದ್ದರು.

22 ಮೈಸೂರಿನ ಪೌರಸಾಮಾಜಿಕ ಎರಡನೆ ಮಹಾಸಭೆಯ ಅಧ್ಯಕ್ಷತೆ ವಹಿಸಿದ ಸರ್. ಎಫ್. ಪುಟ್ಟಣ್ಣಶೆಟ್ಟರು "ಸುರಾಪಾನ ಹೆಚ್ಚುತ್ತಿರುವದನ್ನೂ (ಜಮೀನು ಕಂದಾಯ ೧೦೦ ಲಕ್ಷ ಆದರೆ ಷರಾಬ್ ಹುಟ್ಟುವಳಿ ೮೦ ಲಕ್ಷ, ಕುಡಿತದ ಹಚ್ಚುವಿಕೆ ಬಗ್ಗೆ ವಿಷಾದವನ್ನು ವ್ಯಕ್ತಪಡಿಸಿ. ಈ ದುರಾಭ್ಯಾಸವನ್ನು ತಪ್ಪಿಸಲು ನಿರ್ದಿಷ್ಟವಾದ ಏರ್ಪಾಡನ್ನು ಸರ್ಕಾರದಿಂದ ಮಾಡಿರುವದಿಲ್ಲ, ಇದರಿಂದ ಸರಕಾರದ ಬೊಕ್ಕಸಕ್ಕೆ ಕೊರತೆಯಾಗುವದು. ಅನೇಕ ಇಲಾಖೆಗಳು ಮುಚ್ಚಲ್ಪಡಬಹುದು. ಪಾಶ್ಚಾತ್ಯ ದೇಶದಲ್ಲಿ ಅದು ನಿಂತು ಹೋಗಿರುವದು ಆಶ್ಚರ್ಯವಾಗಿದೆ. ಹಿಂದೂಸ್ಥಾನದಲ್ಲಿ ಈ ದುರಾಭ್ಯಾಸವನ್ನು ನಿರ್ನಾಮ ಮಾಡಲು ಜಾನ್‌ಸನ್ ಪುಸ್ಸಿಫುಟ್ ಮೈಸೂರಿಗೆ ಬರುವದು ಸಂತೋಷ. ಅವರಿಗೆ ನಮ್ಮ ಮುಖಂಡರ ಬೆಂಬಲ ದೊರಕೀತು" ಎಂದು ಆಶಿಸಿದ್ದರು. 11 Nov. 1920. See also "Mysore and Social prohibition", Indian Social Reformer, 31, October 1920. Vrittanta Patrike, Johnson Pussyfoot also addressed a largely attended public meeting at Fort School premises, Bangalore. (The writer thanks Sri Nitoor Srinivasa Rao, who gave this information and Sri Srinivasa Rao was present at the meeting).

ತಮ್ಮ ವರದಿಯನ್ನು ೧೯೧೮ ರಲ್ಲಿ ಒಪ್ಪಿಸಿದರು. ಸರ್ಕಾರ ಇವರ ವರದಿಯನ್ನು ಪರಿಶೀಲಿಸಿ ಸೂಕ್ತ ಕ್ರಮವನ್ನು ಕೈಕೊಂಡಿರುವುದಾಗಿಯೂ, ಪರವಾನಗಿ ನೀಡಲು ಅಧಿಕಾರಿಗಳನ್ನು ನೇಮಕ ಮಾಡಿರುವುದಾಗಿಯೂ, ಮುನಿಸಿಪಲ್ ಅಧಿಕಾರಿಗಳು ಸೂಕ್ತ ಸಲಹೆಗಳನ್ನು ನೀಡಬಹುದೆಂದೂ 'ಪೂರ್ಣ ಪಾನ ನಿರೋಧ' ಸಧ್ಯಕ್ಕೆ ಸಾಧ್ಯವಾಗಲಾರದೆಂದೂ ತಿಳಿಸಿತು. ಜಾತ್ರೆ ಸಮಯದಲ್ಲಿ ಪರವಾನಗಿ ನೀಡುವಿಕೆ, ಹೆಂಗಸರು ಕಳ್ಳು ಮಾರುವಿಕೆಗೆ ತಡೆ, ಮಿತಪಾನದ ಪ್ರಚಾರಕ್ಕೆ ಖರ್ಚನ್ನು ವಹಿಸುವುದೆಂದೂ ತಿಳಿಸಿತ್ತು. ಇದರಿಂದ ಕಳ್ಳು ಕುಡಿಯುವುದೇನೂ ಕಡಿಮೆಯಾದಂತೆ ಕಂಡು ಬಂದಿಲ್ಲವೆಂಬುದು ಕೆಳಗಿನ ಅಂಕಿಅಂಶಗಳಿಂದ ತಿಳಿಯ ಬರುತ್ತದೆ.

| No. of Foreign Liquor Shops | | Liquor Consumption |
|---|---|---|
| 1920–21 | 66 | 20,537 (Seers)[23] |
| 1921—22 | 40 | 18,746 |

ಮಿತಪಾನ ಚಳುವಳಿಯಿಂದ ಸರ್ಕಾರಕ್ಕೆ ವಿಶೇಷ ಆದಾಯ ಕಡಿಮೆಯಾದಂತೆ ಕಂಡುಬಂದಿಲ್ಲ. ಮಿತಪಾನ ಚಳುವಳಿಗೆ ಸತ್ಯಾಗ್ರಹ ಚಳುವಳಿ ಇಂಬುಕೊಟ್ಟಿತು ಸರಿ. ಮೈಸೂರಿನ ಮಟ್ಟಿಗೆ ಹೇಳುವುದಾದರೆ 'ಮಿತಪಾನ ಚಳುವಳಿ' ಜನರ ಮಟ್ಟಕ್ಕೆ ತಲುಪಲಿಲ್ಲ. ಮೈಸೂರು ದೇಶದ ಪಾನ ನಿರೋಧ ಸಮಿತಿಯು ಸಕ್ರಿಯವಾಗಿ ಕಾರ್ಯ ಮಾಡದಿರುವದು ಒಂದು ವಿಷಾದದ ಸಂಗತಿ. ಮೈಸೂರಿನಲ್ಲಿ ಹಲವಾರು ನಿವೃತ್ತ ಅಧಿಕಾರಿಗಳು, ಭೂ ಮಾಲೀಕರು ಇದ್ದರೂ ಯಾರೂ ಮುಖಂಡತ್ವವನ್ನು ವಹಿಸಿ ಸಾಮಾನ್ಯನಿಗೆ ತಿಳುವಳಿಕೆಯನ್ನು ನೀಡುವಂತಹ ಕೆಲಸ ಮಾಡಲಿಲ್ಲ.[24] ಬಂಗಾಲದಲ್ಲಿ ಶಶಿಪಾದ ಬ್ಯಾನರ್ಜಿಯವರು, ಗಿರಣಿ ಕೆಲಸಗಾರರಿಗಾಗಿ ಮಿತಪಾನ ಸಂಘವನ್ನು ಸ್ಥಾಪಿಸಿದ್ದನ್ನೂ, ಅದಕ್ಕಾಗಿ ಕೆಲಸಗಾರರು ಅವರಿಗೆ ಅಭಿನಂದನೆ ಸಲ್ಲಿಸಿದ್ದನ್ನೂ ಕಾಣುತ್ತೇವೆ. ಮುಂದುವರಿದ ದೇಶಗಳಾದ ಅಮೇರಿಕೆಯಲ್ಲಿ, 'Anti-Saloon League' ಎಂಬ ಸಂಘಗಳು ಸಕ್ರಿಯವಾಗಿ ಭಾಗವಹಿಸಿ ಪಾನನಿರೋಧ ಕಾಯಿದೆಯನ್ನು ಸಾಮಾನ್ಯ ಜನರಿಗೆ ದೊರಕಿಸುವದರಲ್ಲಿ ವಿಶೇಷ ಪಾತ್ರವನ್ನು ಹೊಂದಿದೆ. ಜನರನ್ನು ತಿಳುವಳಿಕಸ್ತರನ್ನಾಗಿ ಮಾಡಲು Dow Neal (1804-97) ಎಂಬ ಮಹಿಳೆ ತನ್ನ ಜೀವಿತವನ್ನೆಲ್ಲಾ ಮಿತಪಾನ ಚಳುವಳಿಗಾಗಿ ಮೀಸಲಿಟ್ಟಿದ್ದನ್ನು ಕಾಣಬಹುದು.

ಮೇಲೆ ವಿವರಿಸಿದಂತಹ ಸಂಘವಾಗಲಿ ಮುಖಂಡತ್ವವಾಗಲಿ ಮೈಸೂರಿಗೆ ದೊರಕಲೇ ಇಲ್ಲ. ಮದ್ಯಪಾನವು ರಾಜಕೀಯ ಪಕ್ಷಕ್ಕೆ, ಸಮಾಜಕ್ಕೆ ಹಿಡಿದಿರುವ ಪಿಡುಗು ಮತ್ತು ಇತ್ತೀಚೆಗೆ ನಾಗರಿಕ ಸಂಕೇತವಾಗಿ ಸಾಮಾನ್ಯ ಮನುಷ್ಯನಿಗೆ ತನ್ನ ಸಮಸ್ಯೆಗಳನ್ನು ಎದುರಿಸಲಾಗದೆ ಮದ್ಯಕ್ಕೆ ಮರೆಹೋಗುವ ಪ್ರಸಂಗವಾಗಿದೆ.

---

23 Report on the Administration of Mysore 1921–22

24 V. K. Jayagaraja Iyer, Plea for a new approach to an old problem P. 16.

# ಸ್ವಾತಂತ್ರ್ಯ ಹೋರಾಟದಲ್ಲಿ ದಾವಣಗೆರೆಯ ಪಾತ್ರ

ಡಾ|| ಸೂರ್ಯನಾಥ್ ಕಾಮತ್

ದಾವಣಗೆರೆಯಲ್ಲಿ ಸ್ವಾತಂತ್ರ್ಯ ಚಳುವಳಿಗೆ ಬೇಕಾದ ಜಾಗೃತಿಯ ಬೀಜ ಬಿತ್ತಿದವರು ನಿಸ್ಸಂಶಯವಾಗಿಯೂ ಹರ್ಡೇಕರ ಮಂಜಪ್ಪನವರು. ಆಗಿನ್ನೂ ಉತ್ತರ ಕರ್ನಾಟಕದ ನಗರಗಳಲ್ಲಿ ಅಲ್ಪಸ್ವಲ್ಪ ರಾಷ್ಟ್ರೀಯ ಜಾಗೃತಿ ಮೂಡಿತ್ತು. ಸಂಸ್ಥಾನೀಪ್ರದೇಶದ ನಗರಗಳಾದ ಮೈಸೂರು, ಬೆಂಗಳೂರು, ತುಮಕೂರುಗಳಲ್ಲಿ ಮಾತ್ರ ಕೆಲಮಟ್ಟಿಗೆ ಜಾಗೃತಿ ಇದ್ದರೂ ಅದರ ಸ್ಪಷ್ಟ ಪ್ರಕಟಣೆ ಆಗಿರಲಿಲ್ಲ. ಅವು ಸುಶಿಕ್ಷಿತರ ಕೇಂದ್ರಗಳಾಗಿದ್ದವು. ದಾವಣಗೆರೆ ವ್ಯಾಪಾರಿಗಳ, ಕೈಗಾರಿಕೋದ್ಯಮಿಗಳ ಕೇಂದ್ರ. ಮಂಜಪ್ಪನವರ ಪ್ರಯತ್ನದ ವಿನಾ ಇನ್ನಾವುದೇ ರಾಷ್ಟ್ರೀಯ ಜಾಗೃತಿಯ ಯತ್ನ ಇಲ್ಲಿ ನಡೆದಿರಲಿಲ್ಲ. ೧೯೦೬ರಲ್ಲಿ ಅವರು ಆರಂಭಿಸಿದ ದಾವಣಗೆರೆಯ ಮೊದಲ ಪತ್ರಿಕೆ 'ಧನುರ್ಧಾರಿ' (ಸೆಪ್ಟೆಂಬರ್) ಟಿಳಕರ ಕೇಸರಿಯ ಲೇಖನಗಳ ಅನುವಾದವನ್ನು ಒಳಗೊಂಡಿತ್ತು.[1] ಕಲ್ಕತ್ತಾದಲ್ಲಿ ಕಾಂಗ್ರೆಸ್ ಅಧಿವೇಶನ ನಡೆದಾದ (೧೯೦೬) ನವರೋಜಿಯವರ ಲೈನ್ ಬ್ಲಾಕ್ ಅನ್ನು ಊರ ಜಿನಗಾರರಿಂದ ಮಾಡಿಸಿ ಪ್ರಕಟಿಸಿದ ಹೆಮ್ಮೆ ಅವರದು. ಪತ್ರಿಕೆಗೆ ಆಗ ೭೦೦ ಚಂದಾದಾರರಿದ್ದರು.[2] ಒಂದು ವರ್ಷದಲ್ಲಿ ಪತ್ರಿಕೆ ನಿಂತರೂ ೧೯೦೮ರಲ್ಲಿ ಅದನ್ನು ಮತ್ತೆ ಆರಂಭಿಸಿದರು.[3] ೧೯೦೯ರಿಂದ ಪತ್ರಿಕೆಗೆ ಪೋಲೀಸರ ಕಾಟ ಆರಂಭ.[4] ೧೯೧೦ರಲ್ಲಿ ಪತ್ರಿಕೆಯ ಚಂದಾದಾರರ ಸಂಖ್ಯೆ ಕಡಿಮೆಯಾಯಿತು. ೧೯೧೫ರಲ್ಲಿ ಪತ್ರಿಕೆ ನಿಂತಿತು. ಇದಕ್ಕೆ ಕಾರಣವನ್ನು ಸ್ವತಃ ಮಂಜಪ್ಪನವರು ಸ್ಪಷ್ಟಪಡಿಸದಿದ್ದರು : ಬ್ರಿಟಿಷ್ ವಿರೋಧಿ ಚಳುವಳಿಗೆ ಇಲ್ಲಿನ ಸಮಾಜ ಸಿದ್ಧವಾಗಿರಲಿಲ್ಲವೆಂಬುದು ಸತ್ಯ. "೧೯೧೭ರಲ್ಲಿ ಬೆಜೆಂಟ್ ಅಮ್ಮನವರು ಹೂಡಿದ್ದ "ಹೋಮ್ ರೂಲ್" ಚಟುವಟಿಕೆಯು ನನಗೆ ಹುರುಪು ಕೊಟ್ಟಿತ್ತು. ಆದರೂ ನನಗೆ ಹುರುಪಿಗೆ ತಕ್ಕ ಅನುಕೂಲವಿರಲಿಲ್ಲ."[5] ಎಂದು ಒಂದೆಡೆ ಹೇಳಿ, ತಾವು ಆಗ ಆಸ್ಥೆ ವಹಿಸಿ ಆರಂಭಿಸಿದ್ದ ಚಳುವಳಿಯಾದ "ಖಾದಿಯ ವಿಷಯದಲ್ಲಿಯೂ ವೀರಶೈವ ಸಮಾಜ ವಿರೋಧವಾಗಿತ್ತು. ಅದು ಬ್ರಾಹ್ಮಣ ಚಟುವಟಿಕೆಯೆಂದೇ ವೀರಶೈವ ಸಮಾಜದ ಪ್ರಮುಖರು ಸಾರುತ್ತಿದ್ದರು" ಎಂದು ಹೇಳಿರುವುದರಿಂದ[6] ಬಹುಜನ ಸಮಾಜವು ರಾಷ್ಟ್ರೀಯ ಚಟುವಟಿಕೆಗಳ ಬಗ್ಗೆ ಆಗ ಹೊಂಡಿದ್ದ ತಪ್ಪು ಅಭಿಪ್ರಾಯದ ಕಲ್ಪನೆ ಬರುತ್ತದೆ.

ಆದರೆ ಆಗ ಮಂಜಪ್ಪನವರು ಆರಂಭಿಸಿದ್ದ

---

1 ಹಾಲಪ್ಪ, ಗ.ಸ.(ಸಂ.) ರಾಷ್ಟ್ರಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪ (೧೯೬೬). ಪು. ೧೪

2 ಅದೇ ಪು. ೧೫

3 ಅದೇ ಪು. ೧೬

4 ಅದೇ ಪು. ೧೯

5 ಅದೇ ಪು. ೩೨

6 ಅದೇ ಪು. ೩೪

ವೀರಶೈವ ತರುಣ ಸಂಘ (೧೯೧೭), ೧೯೧೩ರಲ್ಲಿ ದಾವಣಗೆರೆಯಲ್ಲಿ ಅವರು ಮೊದಲಿಟ್ಟ ಬಸವ ಜಯಂತಿ ಉತ್ಸವದ[7] ಆಚರಣೆಗಳ ಪರಿಣಾಮ ರಾಷ್ಟ್ರೀಯ ಜಾಗೃತಿಯಲ್ಲಿ ದೂರಗಾಮಿಯಾಗಿ ತನ್ನದೇ ಪಾತ್ರವನ್ನು ವಹಿಸಿದುವೆಂಬ ಸಂಗತಿ ನಿಸ್ಸಂಶಯವಾದುದು. ೧೯೧೯ರಂದು ಮಂಜಪ್ಪನವರು ಮಹಾತ್ಮರ ಜೀವನ ಚರಿತ್ರೆ ಹಾಗೂ ಅವರ ವ್ಯಾಖ್ಯಾನವನ್ನು ಒಳಗೊಂಡ ಒಂದು ಪುಸ್ತಕವನ್ನು ಪ್ರಕಟಿಸಿದರು.[8] ಅದೇ ರೀತಿ 'ಭಾರತೀಯ ದೇಶಭಕ್ತಿ' ಎಂಬ ಪುಸ್ತಕವನ್ನು ೧೯೨೧ರಲ್ಲಿ ಹೊರ ತಂದರು.[9] ಮುಂದೆ ೧೯೨೩ರಲ್ಲಿ ಹರಿಹರದ ಬಳಿ ತುಂಗಭದ್ರೆಯ ದಂಡೆಯಲ್ಲಿ ಅವರು ಸತ್ಯಾಗ್ರಹ ಆಶ್ರಮ ಸ್ಥಾಪನೆ ಮಾಡಿದರು.[10]

೧೯೨೦ರಲ್ಲಿ ಜ್ಞಾನ ಪ್ರಸಾರಕ ಸಂಘವೆಂಬ ಸಂಘವನ್ನು ಆರಂಭಿಸಿ ಖಾದಿ ಚಟುವಟಿಕೆಯನ್ನು ಮಂಜಪ್ಪನವರು ಮೊದಲಿಡಲು ಶಿರೂರ ಲಕ್ಷ್ಮಣರಾಯರೆಂಬ ವರ್ತಕರು ಇದರಲ್ಲಿ ಮುಂದಾಳಾಗಿದ್ದರು.[11] ವರ್ತಕರಾದ ಕಾಸಲ ಶ್ರೀನಿವಾಸಶೆಟ್ಟರು ಇದೇ ಕಾಲದಲ್ಲಿ ಖಾದಿಧಾರಿಗಳಾದರಲ್ಲದೆ ಪ್ರಾಣಿದಯಾ ಸಂಘದ ಕಾರ್ಯಕರ್ತರೂ ಆದರು.[12] ಕಾಸಲ ಶ್ರೀನಿವಾಸಶೆಟ್ಟಿ, ಬೆಲ್ಲದ ಸಿದ್ಧಲಿಂಗಪ್ಪ, ಶೇಷಪ್ಪ, ಆನೆಕೊಂಡದ ಮುತ್ತಣ್ಣ ಇವರು ಪ್ರಾಣಿದಯಾ ಸಂಘ ನಡೆಸಿದ್ದರು. "ಅದರ ಆಫೀಸಿಗೆ ಹೋಗುತ್ತಿದ್ದ ನಾನು ಅಲ್ಲಿ ತಕಲಿಯಿಂದ ನೂಲುತ್ತಿದ್ದ ಮಹನೀಯರನ್ನು" ಕಂಡುದಾಗಿ ಹೇಳಿರುವ ವೀರಬಸಯ್ಯ ಪುರಾಣಿಕಮಠ ಅವರು ಅಲ್ಲಿ ನೂಲುತ್ತಿದ್ದ ಜನ ಗಾಂಧೀಜಿಯವರ ವಿಚಾರ ತಮಗೆ ತಿಳಿಸಿದರು, ಎಂದಿರುವರಲ್ಲದೆ ಆಗಿನಿಂದ ತಾವೂ ಖಾದೀ ತೊಡಲು ಆರಂಭಿಸಿದ್ದಾಗಿ ಹೇಳಿದ್ದಾರೆ.[13] ಇದು ೧೯೨೫ರ ನಂತರ ಇರಬೇಕು. ಏಕೆಂದರೆ ಮುಂದೆ ತಾವು ಹುಬ್ಬಳ್ಳಿಗೆ ಡಾ|| ಹರ್ಡೀಕರರ ಸೇವಾದಳ ಸೇರಿದ್ದಾಗಿ ಪುರಾಣಿಕಮಠರು ಹೇಳಿದ್ದರೂ ೧೯೨೪ರ ಬೆಳಗಾವಿ ಕಾಂಗ್ರೆಸ್‌ನ ವಿಚಾರ ಹೇಳಿಲ್ಲ. ಇದಕ್ಕೂ ಮೊದಲು ೧೯೨೩ರ ಸುಮಾರಿಗೆ ಮೌಲಾನಾ ಮೋಜಮ್ ಅಲಿ ಎಂಬ ಕಾಂಗ್ರೆಸ್ ನಾಯಕರು ದಾವಣಗೆರೆಗೆ ಬಂದಾಗ ಶಿರೂರ ಲಕ್ಷ್ಮಣರಾವ್, ಶೇಟ್ ರುಸುಮಜಿ ಹಾಗೂ ತಾವು ೩೫೦ ರೂ.ಗಳನ್ನು ಸಂಗ್ರಹಿಸಿ ಅದರಲ್ಲಿ ೧೫೧ ರೂ.ಗಳನ್ನು ಸ್ವರಾಜ್ಯ ಫಂಡಿಗೆ ಅವರ ಕೈಗೆ ಕೊಟ್ಟುದಾಗಿ ಮಂಜಪ್ಪನವರು ತಿಳಿಸಿದ್ದಾರೆ.[14] ಅದಲ್ಲದೆ ಬೆಳಗಾವಿ ಕಾಂಗ್ರೆಸ್ಸಿಗೆ "ಬಸವೇಶ್ವರ ಸೇವಾದಳ" ಎಂಬ ಒಂದು ಸ್ವಯಂಸೇವಕದಳವನ್ನು ಅವರು ಒಯ್ದಿದ್ದರು.[15] ಇದರಲ್ಲಿ ಕೆಲವರಾದರೂ ದಾವಣಗೆರೆಯವರಿದ್ದಿರಬಹುದು. ಇದರಲ್ಲಿ ತಮ್ಮ ಅಣ್ಣ ಇದ್ದರು ಎಂದು ಇಲ್ಲಿನ ಕಾರ್ಯಕರ್ತ ಡಿ. ಮೌನೇಶ್ವರಪ್ಪ ಹೇಳಿರುವರಲ್ಲದೇ ೧೩ ವರ್ಷದ ತಾವೂ ಬೆಳಗಾವಿಗೆ ಹೋಗಿದ್ದಾಗಿ ಹೇಳಿದ್ದಾರೆ.[16] ಮುಂದೆ ೧೯೨೭ ರಿಂದ ಆಲಮಟ್ಟಿಗೆ ಮಂಜಪ್ಪನವರು ತೆರಳಿದರು. ೧೯೨೫ರ ನಂತರ ವಿಜಾಪುರ, ಹೈದರಾಬಾದ್ ಕರ್ನಾಟಕದ ಕಡೆ ಅವರ ಚಟುವಟಿಕೆ ಹೆಚ್ಚಿತು. ೧೯೨೭ರ ಆಗಸ್ಟ್ ೧೧ ರಂದು ಗಾಂಧೀಜಿ ಖಾದಿ ಪ್ರವಾಸದಂತೆ ದಾವಣಗೆರೆಗೆ ಬಂದಾಗ ಬ್ರಹ್ಮಪ್ಪ, ತವನಪ್ಪ, ಕಾಸಲ ಶ್ರೀನಿವಾಸಶೆಟ್ಟರಿಂದ ಒಳಗೊಂಡ ಸ್ವಾಗತ ಸಮಿತಿ ಗಾಂಧೀಜಿಗೆ ೫೦೦೦ ರೂ. ಹುಮ್ಮಣಿ ಅರ್ಪಿಸಿತು. ಅಲ್ಲಿ ಗಾಂಧೀಜಿ ದೀರ್ಘ ಭಾಷಣ

---

7 ಅದೇ ಪು. ೨೫, ೩೦
8 ಅದೇ ಪು. ೩೨
9 ಅದೇ ಪು. ೩೪
10 ಅದೇ ಪು. ೪೦
11 ಅದೇ ಪು. ೩೪
12 ಸೂರ್ಯನಾಥ್ ಕಾಮತ್ (ಸಂ) ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು II, ಕಾಸಲ ಅನಂತ್, ಪು. ೫೫೮
13 ಅದೇ ಪು. ೫೬೭
14 ಹರ್ಡೇಕರ್ ಮಂಜಪ್ಪ, ಪು. ೪೧
15 ಅದೇ ಪು. ೫೧
16 ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು II, ಪು. ೫೭೦

ಮಾಡಿದರು.[17] ಲಿಂಗಾಯತ ಹೆಂಗಸರ ಸಭೆಯಲ್ಲಿ ೫೦೦ ರೂ. ಕಾಣಿಕೆ ಹಾಗೂ ಒಡವೆಗಳ ಸುರಿಮಳೆ ಗಾಂಧೀಜಿಗೆ ಸಂದಿತು.[18]

ನೆರೆಯ ಧಾರವಾಡ ಜಿಲ್ಲೆಯ ಪ್ರಭಾವ ದಾವಣಗೆರೆಯಲ್ಲಿ ಆಗುತ್ತಿದ್ದು ಆ ಭಾಗದಲ್ಲಿ ಬಲವಾಗಿದ್ದ ಚಳವಳಿ ದಾವಣಗೆರೆಯ ಜನರನ್ನು ಎಚ್ಚರಿಸುತ್ತಿತ್ತು. ಮೌನೇಶ್ವರಪ್ಪ ೧೯೩೦ರ ಏಪ್ರಿಲ್‌ನಲ್ಲಿ ಹುಬ್ಬಳ್ಳಿಗೆ ಹೋಗಿದ್ದು ಮಲ್ಲಾಬಾದಿ ವಿರೂಪಾಕ್ಷಪ್ಪ ಮತ್ತು ಇವರು ಸೇವಾದಳದಲ್ಲಿ ತರಬೇತಿ ಪಡೆದು ಉತ್ತರ ಕನ್ನಡದಲ್ಲಿ ಚಳವಳಿಯಲ್ಲಿ ಪಾಲುಗೊಂಡು ಜೈಲು ಕಂಡರು.[19]

ಕಾಸಲ ಶ್ರೀನಿವಾಸಶೆಟ್ಟರ ಮನೆಯಲ್ಲಿ ಆಗ ಕಾಂಗ್ರೆಸ್ ಆಫೀಸು ಇತ್ತು. ಕಾಂಗ್ರೆಸ್ಸಿನ ಹಿಂದಿನ ಕಚೇರಿಯನ್ನು ಸರಕಾರ ಮುಟ್ಟುಗೋಲು ಹಾಕಿತ್ತು.[20] ಬಹಿರಂಗ ಕಾಂಗ್ರೆಸ್ ಕೆಲಸಕ್ಕೆ ಅಡ್ಡಿಯಾದುದರಿಂದ ತಿಲಕ ತರುಣ ಸಂಘವನ್ನು ವೀರಬಸಯ್ಯ ಪುರಾಣಿಕ ಮಠರ ಕಾರ್ಯದರ್ಶಿತ್ವದಲ್ಲಿ ಆರಂಭಿಸಿದರು.[21] ಮೌನೇಶ್ವರಪ್ಪನವರು ರಾಣೆಬೆನ್ನೂರಿನಲ್ಲಿ ನವೆಂಬರ್ ೧೯೩೧ರಲ್ಲಿ ನಡೆದ ವಿದೇಶಿ ಬಟ್ಟೆಗಳ ಪಿಕೆಟಿಂಗ್‌ನಲ್ಲಿ ಪಾಲುಗೊಂಡು, ಮುಂದೆ ಎಂಟೇ ದಿನಗಳಲ್ಲಿ ದಾವಣಗೆರೆಗೆ ಬಂದು ಅಲ್ಲೂ ಕಾಸಲ ಶ್ರೀನಿವಾಸಶೆಟ್ಟರ ನೇತೃತ್ವದಲ್ಲಿ ಪರದೇಶಿ ಬಟ್ಟೆ ಮಾರಡಂತೆ ಅಂಗಡಿಗಳ ಮುಂದೆ ಪಿಕೆಟಿಂಗ್ ಸಂಘಟಿಸಿದರು.[22] ಈ ಚಟುವಟಿಕೆ ೧೯೩೨ರ ಆರಂಭದಲ್ಲೂ ಮುಂದುವರಿಯಿತು. ಜನವರಿ ೨೧ಕ್ಕೆ ಕಾಸಲ ಶ್ರೀನಿವಾಸ ಶೆಟ್ಟಿ, ಬೆಲ್ಲದ ಸಿದ್ಧಲಿಂಗಯ್ಯ, ಖಾದಿ ವಸ್ತ್ರಾಲಯದ ಶಿವಗಂಗಯ್ಯ ಇವರು ಇಂಥದೇ ಪಿಕೆಟಿಂಗ್ ನಡೆಸಿದ್ದು, ಇದೇ ಚಟುವಟಿಕೆ ನಡೆಸಿದ್ದು ಹಾಗೂ ಮಾರ್ಚ್ ೨೧ರಂದು ವಿದೇಶೀ ವಸ್ತ್ರಗಳ ಹೋಳಿ ನಡೆದದ್ದು ಸರಕಾರಿ ವರದಿಗಳಿಂದಲೂ ತಿಳಿಯುತ್ತದೆ.[23]

ಗಾಂಧೀಜಿ ಹರಿಜನ ಪ್ರವಾಸವನ್ನು ಕೈಕೊಂಡಾಗ ಮಾರ್ಚ್ ೩, ೧೯೩೪ರಂದು ಹಾವೇರಿಯಿಂದ ದಾವಣಗೆರೆಗೆ ಬಂದಿರಲು ಅಲ್ಲಿ ಪುರಸಭೆ ಅವರನ್ನು ಸತ್ಕರಿಸಿ ನಿಧಿ ಅರ್ಪಿಸಿತು. ಊರಲ್ಲಿ ಹರಿಜನ ಹಾಸ್ಟೆಲ್‌ನ ಶಂಕುಸ್ಥಾಪನೆ ಮಾಡಿದರು. ಹರಿಜನ ಕೇರಿಗೂ ಗಾಂಧೀಜಿ ಭೇಟಿ ನೀಡಿದರು.[24] ೧೯೩೪ರ ಅಕ್ಟೋಬರ್‌ನಲ್ಲಿ ಊರಲ್ಲಿ ಜವಾಹಿರ ವ್ಯಾಯಾಮ ಶಾಲೆಯನ್ನು ಆರಂಭಿಸಿದರು.[25] ಡಿ. ಎಚ್. ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ಹಿಂದೀ ಪ್ರಚಾರ ಸಂಸ್ಥೆಯನ್ನು ಆರಂಭಿಸಿದರು.[26] ೧೯೩೬ರ ಅಕ್ಟೋಬರ್‌ನಲ್ಲೂ ೧೯೩೭ರ ಮೇಯಲ್ಲೂ ಡಾ|| ಹರ್ಡೀಕರರು ದಾವಣಗೆರೆಗೆ ಬಂದು ಭಾಷಣ ಮಾಡಿದರು. ಎರಡನೆಯ ಬಾರಿ ಅವರ ಜೊತೆ ಉಮಾಬಾಯಿ ಕುಂದಾಪುರ ಕೂಡ ಬಂದಿದ್ದರು.[27] ಈ ಕಾಲದಲ್ಲಿ ರೈತ ಸಂಘಟನೆಗಾಗಿ ಡಾ|| ಹರ್ಡೀಕರರು ಪ್ರಚಾರ ಮಾಡಲು ಸೆಕ್ಷನ್ ೩೯ರಂತೆ ಅವರು ಹಾಗೂ

---

17 ಗಾಂಧೀಜಿ ಮತ್ತು ಕರ್ನಾಟಕ, ಪು. ೨೧೮

18 ಅದೇ, ಪು. ೨೧೪

19 ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು II, ಪು. ೫೬೦-೬೧

20 ಅದೇ ಪು. ೫೬೭

21 ಅದೇ ಪು. ೫೬೮

22 ಅದೇ ಪು. ೫೬೧

23 ಅದೇ ; ಮೈಸೂರು ಸ್ಟೇಟ್ ಸ್ಪೆಷಲ್ ಬ್ರ್ಯಾಂಚ್ ಎಬ್‌ಸ್ಟ್ರಾಕ್ಟ್ಸ್ ಫಾರ್ ದಿ ಇಯರ್ ೧೯೩೨ ಜನವರಿ ಹಾಗೂ ಮಾರ್ಚ್ ವರದಿ

24 ಸಿಕ್ರೆಟ್ ಬ್ರ್ಯಾಂಚ್ ಎಬ್‌ಸ್ಟ್ರಾಕ್ಟ್ಸ್, ೧೯೩೪ ; ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು II, ಪು. ೫೬೨

25 ಅದೇ ಪು. ೫೬೨

26 ಅದೇ ಪುಟ

27 ಸೀಕ್ರೆಟ್ ಎಬ್‌ಸ್ಟ್ರಾಕ್ಟ್

ಕಾಸಲ ಶ್ರೀನಿವಾಸಶೆಟ್ಟಿ, ಬೊಂದಾಡೆ ಹನುಮಂತ ರಾವ್, ಮೌನೇಶ್ವರಪ್ಪ, ಕೊಟ್ರೆ ನಂಜಪ್ಪ, ಎಸ್. ನಿಜಲಿಂಗಪ್ಪ, ಎಸ್. ವಾಸುದೇವರಾವ್ ಇವರುಗಳು ಭಾಷಣ ಮಾಡದಂತೆ ಪ್ರತಿಬಂಧ ಹೇರಿ ದಾವಣಗೆರೆ ಮ್ಯಾಜಿಸ್ಟ್ರೇಟರು ಆಜ್ಞೆ ಹೊರಡಿಸಿದರು.[28]

೧೯೩೯ರಲ್ಲಿ ನಡೆದ ಜಂಗಲ್ ಸತ್ಯಾಗ್ರಹದಲ್ಲಿ ಮಾಯಕೊಂಡ ಮುಂತಾದ ಸುತ್ತಲ ಊರುಗಳಲ್ಲಿ ರೈತರು ಈಚಲ ಗಿಡ ಕಡಿದು ಸತ್ಯಾಗ್ರಹ ಮಾಡಿದಾಗ ದಾವಣಗೆರೆಯ ಕೊಟಗಿ ಸಿದ್ದಲಿಂಗಪ್ಪ ಮುಂತಾದ ಕಾರ್ಯಕರ್ತರು ಅಲ್ಲಿ ಸತ್ಯಾಗ್ರಹ ಸಂಘಟನೆಗೆ ದುಡಿದು ಬಂಧಿತರಾದರು.[29] ಬಳ್ಳಾರಿ ಸಿದ್ದಮ್ಮ ಹಾಗೂ ಅವರ ಪತಿ ಮುರಿಗೆಪ್ಪ ದಾವಣಗೆರೆಯಲ್ಲಿ ಎಲ್ಲ ರೀತಿಯ ಚಟುವಟಿಕೆಗಳಲ್ಲಿ ಮುಂದಿದ್ದರು. ಸಿದ್ದಮ್ಮನವರು ಶಿವಪುರದಲ್ಲಿ ಸತ್ಯಾಗ್ರಹ ಮಾಡಿದ್ದರಲ್ಲದೆ ತುರುವನೂರು ಜಂಗಲ್ ಸತ್ಯಾಗ್ರಹದಲ್ಲೂ ಬಂಧಿತರಾದರು.

ಕ್ವಿಟ್ ಇಂಡಿಯಾ ಚಳುವಳಿಗೆ ಮೊದಲು ಮುಂಬೈಯಲ್ಲಿ ಎ.ಐ.ಸಿ.ಸಿ.ಗೆ ಕೆ. ಎಸ್. ಸಿದ್ಧಪ್ಪ, ಎಚ್. ಕೆ. ವೀರಭದ್ರಪ್ಪ, ಭೂತೆ ಪಾಂಡುರಂಗರಾವ್ ಹೋಗಿದ್ದರು. ಅಲ್ಲಿಂದ ಮರಳಿದ ನಂತರ ೧೨-೮-೧೯೪೨ರಂದು ಪಿಕೆಟಿಂಗ್ ಆರಂಭಿಸಿದರು.[30] ಅದಕ್ಕೂ ಮೊದಲೇ ೧೧-೮-೧೯೪೨ರಂದು ಹೈಸ್ಕೂಲು ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸಿದರು.[31] ಮರುದಿನ ನಡೆದ ಜಯದೇವ ಹಾಸ್ಟಲ್‌ನ ವಿದ್ಯಾರ್ಥಿಗಳ ಮೆರವಣಿಗೆಯ ನೇತೃತ್ವವನ್ನು ಇಟಗಿ ವೇದಮೂರ್ತಿ ವಹಿಸಿದ್ದರು. ಬೊಂದಾಡೆ ಹನುಮಂತಪ್ಪ, ಜಿ. ವೀರಪ್ಪ, ಆರ್. ಡಿ. ಯಲ್ಲಪ್ಪ ಹಾಗೂ ಕೆ. ಡಿ. ಜಂಬಣ್ಣ ಹರತಾಳಕ್ಕೆ ಕರೆನೀಡಿದ್ದರು.[32] ಇದೇ ರೀತಿ ನಡೆದ ಚಳವಳಿ ೧೪ರಂದು ಮಿಲ್ ಕಾರ್ಮಿಕರ ಪ್ರವೇಶದಿಂದ ಉಗ್ರರೂಪ ತಾಳಿ, "ದಾವಣಗೆರೆ ಪರಿಸ್ಥಿತಿ ಭಯ ಹುಟ್ಟಿಸುತ್ತಿದೆ; ೮೦ ಜನ ಸೈನಿಕರನ್ನು ಕಳುಹಿಸಿ," ಎಂದು ಜಿಲ್ಲಾಧಿಕಾರಿ ರಾಜಧಾನಿಗೆ ತಂತಿ ಕಳುಹಿಸುವ ಸ್ಥಿತಿ ಉಂಟು ಮಾಡಿತು.[33]

ಆಗಸ್ಟ್ ೧೭ರಂದು ದಾವಣಗೆರೆಯಲ್ಲಿ ಚಳವಳಿ ಉಗ್ರರೂಪ ತಾಳಿತು. ಬಂಧನದಲ್ಲಿದ್ದ ಮಹಾದೇವ ಭಾಯಿ ದೇಸಾಯಿ ಅವರ ಮರಣ (ಆಗಸ್ಟ್ ೧೫) ವಾರ್ತೆ ಜನರನ್ನು ಎಲ್ಲೆಡೆ ರೊಚ್ಚಿಗೆ ಎಬ್ಬಿಸಿತು. ಗುಪ್ತಚಾರ ಇಲಾಖೆಯ ಅಂದಿನ ದಾವಣಗೆರೆ ಘಟನೆಗಳ ಬಗೆಗಿನ ವರದಿಯಂತೆ, ಆ ದಿನ ಜನ ರೊಚ್ಚಿಗೆದ್ದು ವಾಹನ ಸಂಚಾರಕ್ಕೆ ಅಡ್ಡಿ ಮಾಡಿದರು. ಹರಿಹರಕ್ಕೆ ಹೋಗುವ ರಸ್ತೆಯಲ್ಲಿ ತಡೆ ಒಡ್ಡಿದರು. ಹರಿಹರಕ್ಕೆ ಹೋಗುವ ರೈಲು ಮಾರ್ಗದ ಕಂಬಿಗಳನ್ನೂ ಕಿತ್ತರು. ಅಲ್ಲಿ ಕಾವಲಿದ್ದ ರೈಲ್ವೇ ಪೋಲೀಸರೂ ರಿಸರ್ವ್ ಪೋಲೀಸರೂ ಗೋಳೀಬಾರು ಮಾಡಲು ಮೂವರು ಸ್ಥಳದಲ್ಲೇ ಸತ್ತರು. ೧೦ ಜನ ಗಾಯಗೊಂಡರು. ಆರು ರೈಲು ಬಂಡಿಗಳನ್ನು ಜಖಂ ಮಾಡಿ ಸ್ಟೇಷನ್ ಮಾಸ್ಟರರ ಕೊಠಡಿಯನ್ನು ಲೂಟಿ ಮಾಡಲಾಯಿತು.[34] ಅಂದಿನ ಘಟನೆಯಲ್ಲಿ ಪಾಲುಗೊಂಡ ಚಿತ್ರಹಳ್ಳಿಯ ಎಂ. ಲಿಂಗಪ್ಪ ನೀಡುವ ವರದಿ ಹೀಗಿದೆ: "ದಾವಣಗೆರೆ ಸ್ಟೇಷನ್ ಸುಡುವ ಕೆಲಸದಲ್ಲಿ ನಾನು, ಕೊಟ್ರೆ ನಂಜಪ್ಪ, ಸಿದ್ಧಪ್ಪ, ದಾವಣಗೆರೆ ಶಿವಪ್ಪ, ಬೆನ್ನೂರು ಚನ್ನಬಸಪ್ಪ, ಶಾಮನೂರು ಕಲ್ಲಪ್ಪ, ಶ್ರೀನಿವಾಸರಾವ್ ಮುಂತಾದವರಿದ್ದರಲ್ಲದೆ ಅದೇ ಊರಿನ ನೂರಾರು ಜನ ರೈಲುಗೇಟು ಮುರಿದು ಬಂದಿದ್ದರು. ಹಗಲು ೧೧ಕ್ಕೆ ಈ ಕೆಲಸ ಆಯಿತು. ಪೋಲೀಸರು ಲಾಠಿ ಪ್ರಹಾರ ಮಾಡಲು ನಾವು ಚನ್ನಗಿರಿ ರಂಗಪ್ಪನ ಛತ್ರದ ಕಡೆ ಓಡಿದೆವು.

---

28 ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಪು. ೫೬೨ (ಆಜ್ಞೆಯ ಪ್ರತಿ ನನ್ನಲ್ಲಿ ಇದೆ)

29 ಅದೇ ಪು. ೫೬೫ (ಕೊಟಗಿ ಸಿದ್ಧಲಿಂಗಪ್ಪ)

30 ಅದೇ ಪು. ೫೬೪

31 ಕಾನ್ಫಿಡೆನ್ಸಲ್ ಬ್ರ್ಯಾಂಚ್, ಕಡತ-೪೧-೪೯, ಬಂಡ್ಲ್ ೩

32 ಅದೇ, ಪು. ೪೨.೪೫

33 ಅದೇ, ಪು.

34 ಅದೇ ಪು.

ರಸ್ತೆಗೆ ಹಾಕಲು ತಂದ ಜಲ್ಲಿ ಕಲ್ಲನ್ನು ಜನ ಪೋಲೀಸರ ಕಡೆ ತೂರಲು ಪೋಲೀಸರು ಏಟು ತಡೆಯಲಾರದೆ ಗುಂಡು ಹಾರಿಸಿ ಕೆಲವರು ಸತ್ತರು. ನಾವೆಲ್ಲ ಚೆಲ್ಲಾ ಪಿಲ್ಲಿಯಾಗಿ ಸಿಕ್ಕ ಕಡೆ ಓಡಿದೆವು."[35]

ಆಗಸ್ಟ ೧೭ರಂದು ಆದ ಗೋಳೀಬಾರಿನಿಂದ ಮೃತರಾದವರು ಇವರು : ನಿಂಗಪ್ಪ (೧೪), ನಾಗಪ್ಪ (೨೮), ವಿರೂಪಾಕ್ಷಪ್ಪ (೨೫), ಲಿಂಗಪ್ಪ (೨೦), ಹನುಮಂತಪ್ಪ (೪೫), ತಿಮ್ಮಪ್ಪ (೩೫) ಹಾಗೂ ಬಸಪ್ಪ (೪೨) ; ಇವರಲ್ಲಿ ಮೊದಲ ಮೂರು ಜನ ಗೋಳಿಬಾರಾದ ತಕ್ಷಣ ಸತ್ತಿದ್ದು ಉಳಿದವರು ಆ ದಿನ ಗಾಯಗೊಂಡು ಮುಂದೆ ನಿಧನರಾದ ಹುತಾತ್ಮರು.[36] ಸ್ವಾತಂತ್ರ್ಯ ಚಳುವಳಿಗೆ ದಾವಣಗೆರೆ ನೀಡಿದ ರಕ್ತ ತರ್ಪಣವಿದು.

35 ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು II, ಪು. ೫೪೭
36 ಕಾನ್ಫಿಡೆನ್ಸಲ್ ಬ್ರಾಂಚ್, ೪೨-೪೫

# ೧೮೫೧ರಲ್ಲಿ ಲಂಡನ್ನಿನಲ್ಲಿ ನಡೆದ ಬೃಹತ್ ವಸ್ತು ಪ್ರದರ್ಶನ

ನೇಮುಗಲ್ ಸೋಮಶೇಖರ

ಲಾಲ್‌ಬಾಗ್‌ನ ಗಾಜಿನ ಮನೆಗೆ ನೂರು ವರ್ಷ ಕಳೆದಿದೆ. ಈ ಗಾಜಿನ ಮನೆಯನ್ನು ನಿರ್ಮಿಸಿದ್ದು ಆಗ ಲಂಡನ್ನಿನಲ್ಲಿದ್ದ ಕ್ರಿಸ್ಟಲ್ ಪ್ಯಾಲೆಸ್ ಮಾದರಿಯಲ್ಲಿ: ಕ್ರಿಸ್ಟಲ್ ಪ್ಯಾಲೆಸ್ ಒಂದು ಅರಮನೆಯಲ್ಲ, ಲಂಡನ್ನಿನಲ್ಲಿ ೧೮೫೧ರಲ್ಲಿ ನಡೆದ ವಸ್ತು ಪ್ರದರ್ಶನದ ಬೃಹತ್ ಭವನ. ಆ ಪ್ರದರ್ಶನದ ಕಟ್ಟಡವನ್ನು ಪ್ಯಾಲೆಸ್ ಮಾದರಿಯಲ್ಲಿ ನಿರ್ಮಿಸಿರಬೇಕಾದರೆ ಆ ವಸ್ತು ಪ್ರದರ್ಶನ ಯಾವ ರೀತಿಯಲ್ಲಿ ನಡೆದಿರಬೇಕೆಂದು ಅವಲೋಕಿಸಿದರೆ ಆಶ್ಚರ್ಯವಾಗುತ್ತದೆ.

ವಿಶ್ವದಲ್ಲಿಯೇ ಮೊಟ್ಟಮೊದಲನೆಯ ಬಾರಿ ನಡೆದಂತಹ ಬೃಹತ್ ವಸ್ತು ಪ್ರದರ್ಶನ ನಡೆದದ್ದು ೧೪೧ ದಿವಸ; ಆವರಿಸಿದ ಜಾಗ ಇಪ್ಪತ್ತಾರು ಎಕರೆ. ಸುಮಾರು ಆರು ತಿಂಗಳು ಕಟ್ಟಡವನ್ನು ನಿರ್ಮಿಸಲು ದಿನವಹಿ ಎರಡು ಸಾವಿರ ಜನರು ಕೆಲಸ ಮಾಡಿದರು. ಕಟ್ಟಡವನ್ನು ಕಬ್ಬಿಣದ ಕಂಬಗಳು ಮತ್ತು ಇತರೆ ವಸ್ತುಗಳಿಂದ ಪ್ರದರ್ಶನ ನಡೆದ ನಂತರ ತೆಗೆಯುವಂತಹ ರೀತಿಯಲ್ಲಿ ನಿರ್ಮಿಸಿದರು. ಮಿಕ್ಕಭಾಗವೆಲ್ಲಾ ಪೂರ್ತ ಗಾಜಿನಿಂದ ಕೂಡಿತ್ತು. ಈ ಭವನದ ನಕ್ಷೆಯನ್ನು ಜೋಸೆಫ್ ಫಾಕ್ಸ‌ಟನ್ ಎಂಬ ಪ್ರಸಿದ್ಧ ಇಂಜಿನಿಯರ್ ರೂಪಿಸಿದ್ದರಿಂದ ಮತ್ತು ದೂರದಿಂದ ಭವನವನ್ನು ನೋಡಿದರೆ ಗಾಜುಗಳು ಹೊಳೆಯುತ್ತಿದ್ದರಿಂದ 'ಜೋಸೆಫ್ ಫಾಕ್ಸಟನ್ ಕ್ರಿಸ್ಟಲ್ ಪ್ಯಾಲೆಸ್' ಎಂದು ಲಂಡನ್ನಿನ ಸ್ಥಳೀಯ ಜನರು ಕರೆದರು. ಲಂಡನ್ನಿನ ಸ್ಥಳವಾದ ಹೈಡ್ ಪಾರ್ಕಿನಲ್ಲಿ, ಅಗಲ ೫೦೦ ಅಡಿ, ಉದ್ದ ೨,೩೦೦ ಅಡಿ ಆವರಣದಲ್ಲಿ (ಮಧ್ಯದ ಗಾಜಿನ ಗುಮ್ಮಟದ ಎತ್ತರ ೬೮ ಅಡಿ) ಭವನವನ್ನು ನಿರ್ಮಿಸಿದರು. ಈ ಪ್ರದರ್ಶನ ಬೃಹತ್ ಪ್ರಮಾಣದಲ್ಲಿ ಇದ್ದ ಕಾರಣದಿಂದಾಗಿ 'ಲಂಡನ್ ಗ್ರೇಟ್ ಎಕ್ಸಿಬಿಷನ್' ಎಂದೆನಿಸಿಕೊಂಡಿತು. ಆದರೆ ಇಟ್ಟಿದ್ದ ಹೆಸರು 'ಗ್ರೇಟ್ ಎಕ್ಸಿಬಿಷನ್ ಆಫ್ ದಿ ವರ್ಕ್ಸ್ ಆಫ್ ಇಂಡಸ್ಟ್ರೀಸ್ ಆಫ್ ದಿ ನೇಷನ್ಸ್ ೧೮೫೧' ಎಂದು.

೧೮೫೧, ಮೇ ಒಂದರಂದು ಪ್ರದರ್ಶನವನ್ನು ವಿಕ್ಟೋರಿಯಾ ರಾಣಿ ಮತ್ತು ರಾಜಕುಮಾರ ಆಲ್ಬರ್ಟ್ ವಿಕ್ಟರ್ ಅವರು ವಿಧಿವತ್ತಾಗಿ ಪ್ರಾರಂಭಿಸಿದರು. ನಡೆದ ಮೂರು ತಿಂಗಳು ದಿನವೂ ತಪ್ಪದೆ ವಿಕ್ಟೋರಿಯಾ ರಾಣಿ ಭೇಟಿ ಕೊಡುತ್ತಿದ್ದರು. ವಿಶ್ವದ ಮೂಲೆ ಮೂಲೆಗಳಿಂದಲೂ ವಸ್ತುಗಳು ಹೋಗಿ ಪ್ರದರ್ಶಿತವಾಗಿತ್ತು. ಈ ಪ್ರದರ್ಶನ ವಿಶ್ವದ ಇತಿಹಾಸದಲ್ಲೇ ಒಂದು ಮೈಲಿಗಲ್ಲನ್ನು ನಿರ್ಮಿಸಿತು. ಒಟ್ಟು ಭೇಟಿ ಕೊಟ್ಟ ಜನ ೬೦ ಲಕ್ಷ ೬೦ ಸಾವಿರ. ಒಂದೇ ದಿವಸದಲ್ಲಿ ಒಂದು ಲಕ್ಷ ಹತ್ತು ಸಾವಿರ ಜನ ಭೇಟಿ ಕೊಟ್ಟದ್ದು ದಾಖಲೆಯಾಗಿರುತ್ತದೆ. ಗಂಡಸರಿಗಿಂತ ಹೆಂಗಸರಿಗೆ ಪ್ರವೇಶ ದರ ಕಮ್ಮಿ ಇತ್ತು. ಸಾಯಂಕಾಲವಾದೊಡನೆ ಪ್ರದರ್ಶನವು ಕೊನೆಗೊಳ್ಳುತ್ತಿತ್ತು. ಭಾನುವಾರ ವಾರದ ರಜ ಆಗಿತ್ತು. ಭಾರತದ ಮೇಲೆ ಈ ಪ್ರದರ್ಶನದಿಂದ ಆದ ಪರಿಣಾಮ ಅಮೋಘವಾದದ್ದೆ.

ಮೈಸೂರು ಸಂಸ್ಥಾನದಿಂದ ಈ ಪ್ರದರ್ಶನಕ್ಕೆ ಹೋಗಿ ಪ್ರದರ್ಶಿತವಾದ ವಸ್ತುಗಳು ಭೂ ಖನಿಜ ಸಂಪತ್ತು, ಕೈಗಾರಿಕಾ ಸಂಪತ್ತು, ಆಹಾರ ದಿನಸಿ, ರೇಷ್ಮೆ, ಗಂಧದ ಎಣ್ಣೆ, ಬಟ್ಟೆ ಇನ್ನೂ ಕೆಲವು ವಸ್ತುಗಳು. ದಕ್ಷಿಣ ಭಾರತದಿಂದ ಈ ಪ್ರದರ್ಶನಕ್ಕೆ ಕಳುಹಿಸಿಕೊಡುವ

ವಸ್ತುಗಳಿಗೋಸ್ಕರ ಒಂದು ಸಮಿತಿಯನ್ನು ನೇಮಿಸಿದ್ದರು. ಆ ಸಮಿತಿಗೆ ಆಗ ಮದರಾಸಿನಲ್ಲಿದ್ದ ಹಿರಿಯ ಸಂಶೋಧಕರಾಗಿದ್ದ ಡಾ|| ಎಡ್ವರ್ಡ್ ಗ್ರೀನ್ ಬೆಲ್‌ಫೂರ್ ಅವರನ್ನು ಮುಖ್ಯ ಕಾರ್ಯದರ್ಶಿಯನ್ನಾಗಿ ನೇಮಿಸಿದ್ದರು. ಮೈಸೂರು ಸಂಸ್ಥಾನದಿಂದ ಕಳುಹಿಸಿ ಕೊಡಲ್ಪಡುವ ವಸ್ತುಗಳ ಉಸ್ತುವಾರಿಯನ್ನು ಮೈಸೂರು ಕಮೀಷನರ್ ಅವರೇ ವಹಿಸಿಕೊಂಡಿದ್ದರು.

ಈ ಪ್ರದರ್ಶನ ನಡೆದ ಪರಿಣಾಮವಾಗಿ ಮದರಾಸಿನ ವಸ್ತು ಸಂಗ್ರಹಾಲಯವನ್ನು ೧೮೫೧ ರಲ್ಲಿ ಇ.ಜಿ. ಬೆಲ್‌ಫೂರ್ ಅವರು ಸ್ಥಾಪಿಸಿದರು. ಈ ಬೆಲ್‌ಫೊರ್ ಅವರೇ ೧೮೬೫ರಲ್ಲಿ ಬೆಂಗಳೂರಿನ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಿದರು. ಬೊಂಬಾಯಿಯಲ್ಲಿನ ವಿಕ್ಟೋರಿಯಾ ಆಲ್ಬರ್ಟ್ ವಸ್ತುಸಂಗ್ರಹಾಲಯ ಪ್ರಾರಂಭವಾಗುವುದಕ್ಕೂ ಈ ಪ್ರದರ್ಶನವೇ ಕಾರಣವಾಯಿತು.

ಈ ಪ್ರದರ್ಶನ ನಡೆದನಂತರ ಲಂಡನ್ನಿನಲ್ಲೇ ಅಂಥದ್ದು ಹತ್ತು ವರ್ಷಗಳಿಗೊಮ್ಮೆ ಮತ್ತು ಪ್ಯಾರಿಸ್ಸಿನಲ್ಲಿ ಐದು ವರ್ಷಗಳಿಗೊಮ್ಮೆ ನಡೆಯಿತು. ನಂತರ ವಿಶ್ವದ ಮೂಲೆ ಮೂಲೆಗಳಲ್ಲಿಯೂ ನಡೆಯಲು ಪ್ರಾರಂಭವಾಯಿತು. ಕಲ್ಕತ್ತದಲ್ಲಿ ೧೮೮೩ರಲ್ಲಿ ಒಂದು ವಸ್ತು ಪ್ರದರ್ಶನವು ನಡೆಯಿತು. ೧೮೮೮ರಲ್ಲಿ ಮೈಸೂರಿನಲ್ಲಿ ಮೊಟ್ಟ ಮೊದಲನೆಯದಾಗಿ ದಸರಾ ವಸ್ತು ಪ್ರದರ್ಶನ ನಡೆಯಿತು. ಇದಕ್ಕೆಲ್ಲಾ ೧೮೫೧ರಲ್ಲಿ ಲಂಡನ್ನಿನಲ್ಲಿ ನಡೆದ ವಸ್ತು ಪ್ರದರ್ಶನವೇ ನಾಂದಿಯಾಯಿತು.

ಈ ಪ್ರದರ್ಶನ ನಡೆದನಂತರ ಸದರೀ ಕಟ್ಟಡವನ್ನು ಹೊರತೆಗೆದು ೧೮೫೨ರಲ್ಲಿ ಲಂಡನ್ನಿನಲ್ಲೇ ಇರುವ ಸಿಡನ್ಹ್ಯಾಮ್ ಬೆಟ್ಟದ ಮೇಲೆ ಶಾಶ್ವತವಾಗಿ ಇನ್ನೂ ಆಕರ್ಷಕವಾಗಿ ನಿರ್ಮಿಸಿ ಸುತ್ತಮುತ್ತಲಿನ ಸ್ಥಳವನ್ನು ಪ್ರವಾಸಿ ಕೇಂದ್ರವನ್ನಾಗಿ ಮಾರ್ಪಾಟು ಮಾಡಿದರು. ಲಂಡನ್ನಿನ ಜನರು ಶಾಶ್ವತವಾಗಿ ಈ ಭವನವನ್ನು "ಕ್ರಿಸ್ಟಲ್ ಪ್ಯಾಲೆಸ್" ಎಂದು ಕರೆದರು. ಆದರೆ ದುರದೃಷ್ಟವಶಾತ್ ೧೯೩೬ರಲ್ಲಿ ಈ ಕ್ರಿಸ್ಟಲ್ ಪ್ಯಾಲೆಸ್ ಬೆಂಕಿ ಅನಾಹುತದಿಂದ ಸುಟ್ಟು ನೆಲಸಮವಾಯಿತು. ಕ್ರಿಸ್ಟಲ್ ಪ್ಯಾಲೆಸ್ ಈಗ ಲಂಡನ್ನಿನಲ್ಲಿ ಇಲ್ಲದೆ ಹೋದರೂ ಆ ಪ್ಯಾಲೆಸ್ ಮಾದರಿಯಲ್ಲಿ ೧೮೯೦ರಲ್ಲಿ ನಿರ್ಮಿಸಿದ ಬೆಂಗಳೂರಿನ ಲಾಲ್‌ಬಾಗ್ ಗಾಜಿನ ಮನೆ ಕಂಗೊಳಿಸುತ್ತಿದೆ. ○

# ನಾಣ್ಯಗಳ ಇತಿಹಾಸ

ಶ್ರೀ ಡಿ. ಆರ್. ಶಹಾ
ಕನ್ನಡಾನುವಾದ : ಡಾ|| ಶಿವಗೌಡ ಬಾ. ಪಾಟೀಲ

ನಮ್ಮ ದಿನನಿತ್ಯದ ವ್ಯವಹಾರದಲ್ಲಿ ಹಣದ ಮಹತ್ವ ಬಹಳವಿದೆ. ಹಣವು ದೇಶದ ಅರ್ಥವ್ಯವಸ್ಥೆಯ ತಳಗಟ್ಟಾಗಿದೆ. ಅದಿಲ್ಲದೆ ಜೀವನವು ವ್ಯರ್ಥ.

ನಮ್ಮ ಪೂರ್ವಜರು ತಮ್ಮಲ್ಲಿದ್ದ ವಸ್ತುಗಳ ವಿನಿಮಯದಿಂದ ತಮ್ಮ ವ್ಯವಹಾರ ನಡೆಸಿಕೊಳ್ಳುತ್ತಿದ್ದರು. ಕಾಳಿಗೆ ಕಾಳು ಇಲ್ಲವೆ ಕಾಳಿಗೆ ದನಗಳನ್ನು ವಿನಿಮಯಿಸಿ ಕೊಳ್ಳುತ್ತಿದ್ದರು. ಮುಂದೆ ಬರಬರುತ್ತ ಲೋಹದ ಒಂದು ತುಣುಕನ್ನು ವ್ಯವಹಾರಕ್ಕೆ ಕೊಡ ಕೊಳ್ಳಲು ಮಾಧ್ಯಮವಾಗಿ ಬೆಳೆಸಲು ಪ್ರಾರಂಭಿಸಿದರು. ಜೀವನಾವಶ್ಯಕ ವಸ್ತುಗಳ ಕೊರತೆ ಇದ್ದಾಗ ಧಾನ್ಯ ಹಾಗೂ ದನಕರುಗಳ ವಿನಿಮಯ ಮಾಡುತ್ತಿದ್ದರು. ಆದರೆ ಧಾನ್ಯ ಕೂಡ ಕೆಲದಿವಸಗಳ ನಂತರ ನೈಸರ್ಗಿಕ ಕಾರಣಗಳಿಂದ ನಾಶವಾಗುತ್ತಿತ್ತು. ದನಕರುಗಳೂ ಕೂಡಾ ರೋಗ–ರುಜಿನಗಳಿಂದ ಸಾವನ್ನಪ್ಪುತ್ತಿದ್ದವು. ಅದರಂತೆ ಅವುಗಳ ರಕ್ಷಣೆಯೂ ದುಬಾರಿಯಾಗುತ್ತಿತ್ತು.

ಸುಮಾರು ಕ್ರಿಸ್ತಪೂರ್ವ ೭-೮ನೇ ಶತಮಾನ ನಾಣ್ಯಗಳ ಬಳಕೆ ಹೇಗೆ ಇದ್ದಿತು ಮತ್ತು ನಾಣ್ಯಗಳು ಹೇಗೆ ಇದ್ದವು ಎಂದು ಹೇಳಲು ಯಾವ ಸಾಕ್ಷ್ಯಾಧಾರ ಗಳೂ ಇಲ್ಲ. ನಾಣ್ಯಗಳ ಬಳಕೆ ಇತ್ತೆಂದು ಹೇಳುವುದೂ ಕಾಲ್ಪನಿಕ.

ವ್ಯಾಪಾರಿಗಳು ತಮ್ಮ ಹುಂಡಿಯ ರೂಪದ ಅಥವಾ ಲೋಹದ ತುಣುಕುಗಳ ಮೇಲೆ ತಮ್ಮ ಗುರುತನ್ನು ಮುದ್ರಿಸಿ ಅದನ್ನು ವ್ಯವಹಾರದಲ್ಲಿ ಬಳಸುತ್ತಿದ್ದರು. ಆ ಕಾಲದಲ್ಲಿ ಪಂಚ್ ಹೊಡೆದ ಅಂದರೆ ತೂತು ತೆಗೆದ ನಾಣ್ಯಗಳು ಬಳಕೆಯಲ್ಲಿದ್ದವು. ಬಂಗಾರ ಹಾಗೂ ತಾಮ್ರದ ನಾಣ್ಯಗಳಿದ್ದು ಅವುಗಳ ಮೇಲೆ ಸೂರ್ಯ, ಚಂದ್ರ, ಚಕ್ರ, ಗುಡ್ಡ, ಸ್ವಸ್ತಿಕ, ದಂಡ ಆಕೃತಿಗಳನ್ನು ಲೋಹದ ತುಣುಕುಗಳ ಮೇಲೆ ಮುದ್ರಿಸಿ ಬಳಸಲಾಗುತ್ತಿತ್ತು. ಇವು ಚೌಕಾಕಾರದವು ಇರಬಹುದಾಗಿತ್ತು ಇಲ್ಲವೆ ವರ್ತುಲಾಕಾರದವು ಇರಬಹುದಿತ್ತು. ಇವು ಯಾವ ಯಾವ ಭಾಗದಲ್ಲಿದ್ದವು ಎಂಬುದನ್ನು ಹೇಳಲು ಸಾಧ್ಯಉಂಟು. ಇತ್ತೀಚಿಗಿನ ಸಂಶೋಧನೆಯ ಆಧಾರದ ಮೇಲಿಂದ ಭಾರತದ ಹೊರಗೂ ಇಂಥ ನಾಣ್ಯಗಳು ಸಿಕ್ಕಿದ್ದು ತಿಳಿದು ಬರುತ್ತದೆ.

ಸಾಧಾರಣವಾಗಿ ಕ್ರಿಸ್ತಶಕ ಪ್ರಾರಂಭ ಅಥವಾ ಸ್ವಲ್ಪ ಪೂರ್ವದಲ್ಲಿ ನಾಣ್ಯಗಳ ಬಳಕೆ ಇದ್ದಂತೆ ತಿಳಿದು ಬರುತ್ತದೆ. ಆ ಹೊತ್ತಿನಲ್ಲಿ ರಾಜ ಮಹಾರಾಜರು ತಮ್ಮ ಮುದ್ರೆಯ ನಾಣ್ಯಗಳನ್ನು ತಯಾರಿಸಿ ಚಲಾವಣೆ ಯಲ್ಲಿ ಬಳಕೆಗೆ ತಂದಂತೆ ತಿಳಿದು ಬರುತ್ತದೆ. ಈ ಕಾಲ ದಲ್ಲಿ ಬಂಗಾರ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ಇದ್ದವು. ಆ ಹೊತ್ತಿನಲ್ಲಿ ನಾಣ್ಯಗಳ ಮೇಲೆ ಸೂರ್ಯ, ಚಂದ್ರ, ತಾರೆ, ಖಡ್ಗ, ತ್ರಿಶೂಲ, ಚಕ್ರ ಅಥವಾ ತಮ್ಮ ಕುಲದೈವದ ಚಿತ್ರ ಇದ್ದುದು ಗೊತ್ತಾಗುತ್ತದೆ. ಈ ನಾಣ್ಯಗಳ ಆಕಾರವು ನಿರ್ದಿಷ್ಟವಾಗಿರದೆ ಬೇರೆ ಬೇರೆ ಆಕಾರದಲ್ಲಿದ್ದು ನೋಡಲಿಕ್ಕೆ ಅಷ್ಟೊಂದು ಸುಂದರ ವಾಗಿರಲಿಲ್ಲ. ಅವುಗಳ ಮೇಲಿನ ಚಿತ್ರಗಳೂ ಕೂಡಾ ಅಷ್ಟೊಂದು ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ಮತ್ತು ಅಂದಿನ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಗೆ

ತಕ್ಕಂತೆ ಯಾವದಾದರೊಂದು ಲಿಪಿ ಮತ್ತು ಮುದ್ರೆ ಮತ್ತು ಆನೆ, ಕುದುರೆ ಗುಡ್ಡ, ಗಿಡ, ಖಡ್ಗ ಬಾಣ ಮುಂತಾದ ಗುರುತುಗಳು ಪ್ರಮುಖವಾಗಿದ್ದವು. ೧೭ನೇ ಶತಮಾನದವರೆಗೆ ದಕ್ಷಿಣ ಭಾರತದಲ್ಲಿ ಅನೇಕ ರಾಜ ಮನೆತನಗಳು ಆಳಿ ಹೋಗಿವೆ. ಇಕ್ಷ್ವಾಕು, ಕಾಕತೀಯ ರಾಷ್ಟ್ರಕೂಟ, ದೇವಗಿರಿಯ ಯಾದವ, ಹೊಯ್ಸಳ, ಚಾಳುಕ್ಯ, ಪಲ್ಲವ, ಕದಂಬ ಮುಂತಾದ ರಾಜಮನೆತನ ಗಳು ಪ್ರಮುಖವಾಗಿದ್ದವು ಎನ್ನಬಹುದು. ಕದಂಬರ ಬಂಗಾರದ ನಾಣ್ಯದ ಮೇಲೆ ಸಿಂಹ, ಕಮಲ, ಹನುಮಾನ ಚಿಹ್ನೆಗಳಿದ್ದವು. ಇಕ್ಷ್ವಾಕು ನಾಣ್ಯದ ಮೇಲೆ ಬಲಿ, ವೇದಿ (ಯಜ್ಞದ ಪೀಠ), ಅನೆ (ಉಜ್ಜಯನ)ಮುಂತಾದ ಚಿಹ್ನೆಗಳಿದ್ದವು. ಯಾದವರ ನಾಣ್ಯಗಳ ಮೇಲೆ ನೃತ್ಯ ಮುದ್ರೆಯಲ್ಲಿದ್ದ ಕೃಷ್ಣ, ಶಂಖ, ಸಿಂಹಗಳಿದ್ದವು. ಇವರು ಕೃಷ್ಣನ ಭಕ್ತರಿದ್ದಂತೆ ಗೊತ್ತಾಗುತ್ತದೆ. ಹೊಯ್ಸಳರ ನಾಣ್ಯಗಳ ಮೇಲೆ ಸಿಂಹಾರೂಢ ಚಾಮುಂಡಿ, ಮೂರ್ತಿ ಇದ್ದಂತೆ ಗೊತ್ತಾಗುತ್ತದೆ. ಇದು ದೇವಿ ಭಕ್ತಿಯ ನಿದರ್ಶನವಾಗಿರುತ್ತದೆ. ಚಾಲುಕ್ಯರ ನಾಣ್ಯಗಳ ಮೇಲೆ ಚಂದ್ರ, ಸೂರ್ಯ (ಸಿಂಹ), ಮುಂತಾದವು ಇದ್ದವು ಎನ್ನಬಹುದು. ಪಲ್ಲವರ ಕಾಲದ ನಾಣ್ಯಗಳ ಮೇಲೆ ವೃಷಭ ಚಿಹ್ನೆಗಳಿದ್ದವು. ಅದರಂತೆ ಅವರ ಕಾಲದ ತಾಮ್ರ ಪಟದ ಮೇಲೆಯೂ ಇದ್ದವು. ಅಲ್ಲದೆ ನಕ್ಷತ್ರ, ಡೋಣಿ (ನಾವೆ), ಆನೆ, ಮೀನು ಹಾಗೂ ಮುತ್ತಿನ ಚಿಹ್ನೆಗಳಿದ್ದವು. ಇದರ ಮೇಲಿಂದ ಪಲ್ಲವರ ಜಲ ಮಾರ್ಗದ ಬಗ್ಗೆ ಸಾಕಷ್ಟು ತಿಳಿದವರಾಗಿದ್ದಂತೆ ಗೊತ್ತಾಗುತ್ತದೆ.

ತಂಜಾವೂರಿನ ಚೋಳ ಮನೆತನದ ವಿಶೇಷವೆಂದರೆ ಇದು ಒಂದನೇ ಶತಮಾನದಿಂದ ಹದಿಮೂರನೇ ಶತ ಮಾನದವರೆಗೆ ರಾಜ್ಯ ವಾಳಿದೆ. ಆದರೆ ಅವರ ನಾಣ್ಯಗಳು ಹತ್ತನೇ ಶತಮಾನದಿಂದ ಮಾತ್ರ ಸಿಗುತ್ತವೆ. ಅವರ ನಾಣ್ಯಗಳ ಮೇಲೆ ವಾದ್ಯ, ಮನುಷ್ಯ ತ್ರಿಶೂಲಧಾರಿ ಅರಸು, ಮುರಲೀಧರ ಕೃಷ್ಣ, ಸಮಯ (ದೀಪ), ಮೀನಿನ ಚಿಹ್ನೆಗಳಿದ್ದವು. ಅವರು ಬೆಳ್ಳಿಯ ಕಾಸ್ ನಾಣ್ಯಗಳನ್ನು ಹೊರಡಿಸಿದ್ದರು. ದಕ್ಷಿಣ ಭಾರತದಲ್ಲಿ ೧೦೦ ವರ್ಷಗಳ ವರೆಗೆ ಈ ಹೆಸರು ಪ್ರಚಾರದಲ್ಲಿತ್ತು. ಆದರೆ ಆಂಗ್ಲರು ಇದನ್ನು ಕ್ಯಾಶ್ ಎಂದು ರೂಪಾಂತರ ಮಾಡಿದರು. ಕೇರಳೀಯ ಚೇರರ ನಾಣ್ಯಗಳು ಒಂಬತ್ತನೇ ಶತಮಾನದ ನಂತರ ಇದ್ದಂತೆ ಗೊತ್ತಾಗುತ್ತದೆ. ಆ ನಾಣ್ಯಗಳ ಮೇಲೆ ಮನುಷ್ಯ, ಖಡ್ಗ, ಚೌಕೋನದಲ್ಲಿ ಒಂದು ಚಿಹ್ನೆ, ರಾಜದಂಡ, ಹೂವು, ಮೀನು ಮುಂತಾದ ಚಿಹ್ನೆಗಳಿದ್ದವು. ಆದರೆ ಲಿಪಿ ಮಾತ್ರ ಇಲ್ಲ. ಇದರ ಆಧಾರದಿಂದ ಐತಿಹಾಸಿಕ ಸಂಶೋಧಕರಿಗೆ ಖಚಿತವಾಗಿ ಸ್ಥಳ, ಕಾಲಮಾನ ಹೇಳಲು ಸಾಧ್ಯವಿಲ್ಲ. ಮಧುರೆಯ ಪಾಂಡ್ಯ ರಾಜ್ಯರ ಮನೆತನೆದ ನಾಣ್ಯಗಳು ಮುಖ್ಯವಾಗಿ ತಾಮ್ರದವಾಗಿ ದ್ದವು. ಅವುಗಳ ಮೇಲೆ ಕಟ್ಟೆಯ ಮೇಲೆ ಗಿಡದ ಚಿತ್ರ, ಮೀನು, ಸಮಯ (ದೀಪ) ಮತ್ತು ಅರ್ಧಚಂದ್ರ ಮುಂತಾದ ಚಿತ್ರಗಳಿದ್ದವು.

ಈ ಎಲ್ಲದರಲ್ಲಿ ವಿಜಯನಗರ ಸಾಮ್ರಾಜ್ಯವು ಒಳ್ಳೆ ಊರ್ಜಿತಾವಸ್ಥೆಗೆ ಹೋಗಿತ್ತು. ಆಗ ೧೪ನೇ ಶತ ಮಾನದಿಂದ ೧೬ನೇ ಶತಮಾನದ ವರೆಗೆ (ಇಸವಿ ೧೩೩೬-೧೫೬೫) ಸುಮಾರು ೨೨೫ ವರ್ಷಗಳ ನಡುವಿನಲ್ಲಿ ಸಂಗಮ, ಸಾಳ್ವ, ತುಳುವ ಈ ರಾಜ್ಯ ಮನೆತನಗಳು ರಾಜ್ಯವಾಳಿದವು. ಇವರೆಲ್ಲರೂ ಬಂಗಾರ ಮತ್ತು ತಾಮ್ರದ ನಾಣ್ಯಗಳನ್ನು ಬಹಳ ದೊಡ್ಡ ಪ್ರಮಾಣದಲ್ಲಿ ಬಳಕೆಗೆ ತಂದರು. ನಾಣ್ಯಗಳ ಮೇಲೆ ಸಾಮಾನ್ಯವಾಗಿ ದೇವತೆಗಳ ಚಿತ್ರಗಳಿದ್ದವು. ಉಮಾ ಮಹೇಶ್ವರ, ಲಕ್ಷ್ಮೀನರಸಿಂಹ ಮುಂತಾದವು ಮುಂದೆ ಕೃಷ್ಣ ದೇವರಾಯನ ಸುವರ್ಣ ನಾಣ್ಯದ ಮೇಲೆ ಶಂಖ, ಚಕ್ರ ಸಹಿತ ಬಾಲಕೃಷ್ಣ ಮತ್ತು ಬೇರೆ ಹಲವು ನಾಣ್ಯಗಳ ಮೇಲೆ ಗರುಡ ಮತ್ತು ವರಾಹ ಹಾಗೂ ನದಿ ಮುಂತಾದ ಚಿತ್ರಗಳಿದ್ದವು. ಮೈಸೂರ ಸಂಸ್ಥಾನಾಧಿಪತಿ ಕೃಷ್ಣ ರಾಜ ಒಡೆಯರ ಬೆಳ್ಳಿನಾಣ್ಯಗಳ ಮೇಲೆ ತಮ್ಮ ಕುಲದೇವತೆಯಾದ ಚಾಮುಂಡಿದೇವಿಯ ಚಿತ್ರವಿದ್ದಿತು. ಅದರಂತೆ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನ ಇವರ ನಾಣ್ಯಗಳ ಮೇಲೆ ಪ್ರಮುಖವಾಗಿ ಆನೆಯೇ ಚಿತ್ರ ವಿದ್ದಿತು. ಆದರಂತೆ ನಿಜಾಮರ ಅಸಫ್‌ಜಾಹೀ ಸಂಸ್ಥಾನವು ದೊಡ್ಡದಿತ್ತು. ಅವರ ಹಲವು ನಾಣ್ಯಗಳ ಮೇಲೆ ಪ್ರಸಿದ್ಧ ಚಾರಮಿನಾರಿನ ಚಿತ್ರವಿತ್ತು, ಮತ್ತು ಅವುಗಳ ಮೇಲೆ ಫಾರ್ಸಿ ಭಾಷೆಯಲ್ಲಿ ಶ್ಲೋಕಗಳನ್ನೂ ಹಾಗೂ ವಿಶೇಷ ಮಾಹಿತಿಯನ್ನು ಬರೆಯಲಾಗಿತ್ತು.

ತಿರುವಾಂಕೂರ ಸಂಸ್ಥಾನದ ರಾಜಧಾನಿ ಮೂಲ

ದಲ್ಲಿ ತ್ರಿವೇಂಡ್ರಮ್ ಅಂದರೆ ತಿರುವನಂತಪುರ. ಈ ರಾಜರು ಪದ್ಮನಾಭ ಸ್ವಾಮಿಯ (ವಿಷ್ಣು) ಭಕ್ತರು. ಆದ್ದರಿಂದ ಆ ನಾಣ್ಯಗಳ ಮೇಲೆ ಶಂಖ ಚಕ್ರಮೂರ್ತಿ ಇದ್ದಂತೆ ತಿಳಿದು ಬಂದರೆ, ಬಹಮನಿ ಮತ್ತು ಇನ್ನುಳಿದ ಮುಸಲ್ಮಾನ ರಾಜರ ನಾಣ್ಯಗಳ ಮೇಲೆ ಕುರಾನಿನೊಳಗಿನ ಸುಭಾಷಿತ ಮತ್ತು ಕಲ್ಮಾ ಅಂದರೆ ಅಲ್ಲಾ ಮತ್ತು ಬಾದಶಹನ ಸಾಮರ್ಥ್ಯ ಹಾಗೂ ಸ್ತುತಿಗಳನ್ನು ಫಾರ್ಸಿ ಮತ್ತು ಅರೇಬಿಕ ಭಾಷೆಯಲ್ಲಿ ಬರೆಯಲಾಗಿದೆ. ಮತ್ತು ಮೊಗಲರ ಕಾಲದ ನಾಣ್ಯಗಳ ಮೇಲೆಯೂ ಅದೇ ಪ್ರಕಾರದ ಮಾಹಿತಿಯು ಇದ್ದು ಯಾವ ಟಂಕಶಾಲೆ ಯಲ್ಲಿ ನಿರ್ಮಾಣಗೊಂಡವು ಎಂಬುದನ್ನು ಸಹ ನಮೂದಿಸ ಲಾಗಿದೆ. ಇದು ಐತಿಹಾಸಿಕ ದೃಷ್ಟಿಯಿಂದ ಬಹಳ ಮಹತ್ವದ್ದು. ಮೂಲ ಬಹಮನೀ ರಾಜ್ಯದಲ್ಲಿ ಮುಂದೆ 5 ರಾಜಗಳಾದವು. ಪ್ರತಿಯೊಬ್ಬರೂ ತಮ್ಮ ನಾಣ್ಯಗಳನ್ನು ತೆಗೆದಿದ್ದಾರೆ. ದಿಲ್ಲಿಯ ಮೊಗಲ ಬಾದಶಹನ ಕಾಲದಲ್ಲಿ ಸುವರ್ಣ ನಾಣ್ಯಗಳಿದ್ದವು. ಅವುಗಳನ್ನು "ಮೋಹರ" ಎಂದು ಕರೆಯುತ್ತಿದ್ದರು. ಮೊಗಲರ ಕಾಲದಲ್ಲಿಯ ನಾಣ್ಯಗಳು ತುಲನಾತ್ಮಕವಾಗಿ ಸುಂದರವಾಗಿದ್ದು, ವ್ಯವಹಾರದಲ್ಲಿ ಸಾಕಷ್ಟು ಬಳಕೆಯಲ್ಲಿದ್ದವು. ಬಹಮನಿ ಹಾಗೂ ಮೊಗಲಾರದ ನಾಣ್ಯಗಳ ಮೇಲೆ "ಜುಲೂಸ" ಎಂಬ ಶಬ್ದವಿತ್ತು. ಇದು ಬಹಳಷ್ಟು ಸಲ ಕಂಡು ಬರುತ್ತದೆ. "ಜುಲೂಸ" ಅಂದರೆ ರಾಜನ ಪಟ್ಟಾಭಿಷೇಕ. ಇದರ ಮೇಲಿಂದ ನಾಣ್ಯದ ಕಾಲ ಗೊತ್ತಾಗುತ್ತದೆ. ಮೊಗಲ ಅರಸರು ಚಿನ್ನ, ಬೆಳ್ಳಿ ಮತ್ತು ತಾಮ್ರದ ಅನೇಕ ನಾಣ್ಯಗಳನ್ನು ಹೊರಡಿಸಿದರು. ಅದರ ಮೇಲೆ ಕುರಾನ್‌ನಲ್ಲಿಯ ಕಲಮಾ ಮತ್ತು ಬಾದಶಹಾನ ಗುಣಗಾನವು ಫಾರಸಿ, ಅರೇಬಿಕ್ ಭಾಷೆಯಲ್ಲಿ ಇದ್ದವು.

ಆ ಹೊತ್ತಿಗೆ ಮಹಾರಾಷ್ಟ್ರದಲ್ಲಿ ಮುಸ್ಲಿಮ್ ನಾಣ್ಯಗಳು ಬಳಕೆಯಲ್ಲಿದ್ದವು. ಮರಾಠಾ ಸಾಮ್ರಾಜ್ಯವು ಉದಯಿಸಿದ ನಂತರ, ಪ್ರಥಮ ಬಾದಶಹಾನ ಒಪ್ಪಿಗೆಯ ಮೇರೆಗೆ ತಮ್ಮ ಸ್ವತಂತ್ರ ನಾಣ್ಯ ಹೊರ ತೆಗೆದರು. ಶ್ರೀ ಶಿವಾಜಿ ಮಹಾರಾಜರು ತನ್ನ ಪಟ್ಟಾಭಿಷೇಕ ಪ್ರಸಂಗದಲ್ಲಿ (೪-೬-೧೬೭೪) 'ಹೋನ್' ಎಂಬ ಸುವರ್ಣ ನಾಣ್ಯ ಮತ್ತು 'ಶಿವರಾಯಿ' ಎಂಬ ತಾಮ್ರದ ನಾಣ್ಯ ಹೊರ ತಂದನು. ನಾಣ್ಯಗಳ ಮೇಲೆ ಶ್ರೀ ರಾಜಾ ಶಿವಛತ್ರಪತಿ ಎಂದು ದೇವನಾಗರಿ ಲಿಪಿಯಲ್ಲಿ ಬರೆದಿದೆ. ಅರ್ಧ ಶಿವರಾಯಿ ನಾಣ್ಯ (ಅರ್ಧನಾಣ್ಯ)ಗಳು ಸಾಕಷ್ಟು ಇದ್ದಂತೆ ಗೊತ್ತಾಗುತ್ತವೆ.

ಆದರೆ ಇತರ ನಾಣ್ಯಗಳೂ ಕೂಡಾ ಬಳಕೆ ಯಲ್ಲಿದ್ದವು. ಅದರ ನಂತರ ಪೇಶ್ವೆಯರ ಕಾಲದಲ್ಲಿ ಬೆಳ್ಳಿ ಹಾಗೂ ತಾಮ್ರದ ನಾಣ್ಯಗಳನ್ನು ಹೊರತಂದರು. ಬೇರೆ ರಾಜ್ಯದ ನಾಣ್ಯಗಳ ಸಂಗಡ ವಿನಿಮಯ ಮಾಡ ಬೇಕಾದರೆ ಸರ್ಕಾರಕ್ಕೆ ಬಟ್ಟಾ ಅಥವಾ ಕಮಿಶನ ಕೊಡ ಕೊಳ್ಳುವ ರೂಡಿಯಿತ್ತು. ನಾಣ್ಯಗಳನ್ನು ಅನೇಕ ಸಾರೆ ಗುತ್ತಿಗೆದಾರರು ತಯಾರಿಸುತ್ತಿದ್ದರು. ಅವರ ಕಡೆಯಿಂದ (ಖಂಡ) ಕರ ತಕ್ಕೊಳ್ಳುತ್ತಿದ್ದರು. ಚಾಂದವಡ, ಮಿರಜಿ, ರಕಟೆ, ಗಜವಾಡಿ, ಭಾತವಾಡಿ, ತ್ರಿಶೂನಿ, ಮುಂತಾದ ಅನೇಕ ಪ್ರಕಾರದ ನಾಣ್ಯಗಳು ಬಳಕೆಯಲ್ಲಿದ್ದವು. ಆ ಹೊತ್ತಿಗೆ ಫಾರ್ಸಿ ರೂಪಾಯಿ ೧೭೫ ಗ್ರೇನ್ (೧ ತೊಲೆಗೆ ಕಡಿಮೆ ಇತ್ತು) ಹಾಗೂ'ಸುರತೀ' ರೂಪಾಯಿಯೂ ಬಳಕೆಯಲ್ಲಿದ್ದವು ತಾಮ್ರದ ನಾಣ್ಯವು 'ಡಬು' ಎಂದು ಕರೆಯಲ್ಪಡುತ್ತಿತ್ತು. ಶಿವರಾಯಿಯ ತೂಕಕ್ಕಿಂತ ಕಡಿಮೆ ಭಾರದಲ್ಲಿ ಆಲಮಗಿರಿ, ಪೇಶ್ವಾಯಿ ನಾಣ್ಯಗಳಿದ್ದವು. ಮೋಹರ ಮತ್ತು ಹೋನ್ ಬಂಗಾರದವು ಇರುತ್ತಿದ್ದವು. ಅವುಗಳ ಬೆಲೆ ೧೩-೧೪- ರೂಪಾಯಿ ಆಗುತ್ತಿದ್ದವು. ರೂಪಾಯಿಗಳು ಬೆಳ್ಳಿಯವು ಇದ್ದವು. ದಿಲ್ಲಿ, ಮೋಹರ ರುಕೆ, ಟಕ್ಕಾ, ಅಶ್ರಫಿ, ಮುಂತಾದ ಹೆಸರಿನ ಎಷ್ಟೋ ನಾಣ್ಯಗಳಿದ್ದವು. ಅವುಗಳ ವಿನಿಮಯದ ಕೋಷ್ಟಕವಿದ್ದುದರಿಂದ, ಜನಸಾಮಾನ್ಯರ ಬಳಕೆಗೆ ಬಹಳೇ ಅನುಕೂಲವಾಗಿತ್ತು. ತೂತಿನ ರೂಪಾಯಿಗೆ 'ಸುಲಾಖಿ' ಎಂದು ಕರೆಯುತ್ತಿದ್ದರು. ಈ ಕಾಲದಲ್ಲಿ ಖೊಟ್ಟಿ ನಾಣ್ಯಗಳು ಹುಟ್ಟಿದ್ದಂತೆ ಉಲ್ಲೇಖ ದಿಂದ ತಿಳಿದು ಬರುತ್ತದೆ. ಗಣಪತಿಯ ಮುಖವಿದ್ದ ಬೆಳ್ಳಿನಾಣ್ಯಗಳನ್ನು ಪೇಶ್ವೆಯರು ಟಂಕಿಸಿದ್ದರು. ಆದರೆ ಸಂಪೂರ್ಣ ಸ್ವತಂತ್ರವಾಗಿ ಪೇಶ್ವೆ ನಾಣ್ಯಗಳೆಂದು ಅವರು ಹೊರಡಿಸಿದಂತೆ ತಿಳಿದು ಬರುವುದಿಲ್ಲ.

ಭಾರತದಲ್ಲಿ ಬ್ರಿಟಿಷರೊಂದಿಗೆ ಪೋರ್ತುಗೀಜ, ಡಚ್, ಫ್ರೆಂಚ್ ವಣಿಕರು ತಮ್ಮ ತಮ್ಮ ವಸಾಹತು ಗಳನ್ನು ಸ್ಥಾಪಿಸಿದರು ಮತ್ತು ವ್ಯಾಪಾರ ಮಾಡುತ್ತ

ರಾಜಕಾರಣದಲ್ಲಿ ತಲೆಹಾಕಿದರು. ಅಲ್ಲಿಯ ಅರಸರ ಮತ್ತು ನವಾಬರ ಒಪ್ಪಿಗೆಯ ಮೇರೆಗೆ ತಮ್ಮ ಕಂಪನಿಗಳ ಹೆಸರಿನಿಂದ ಫಾರ್ಸಿ ಭಾಷೆಯಲ್ಲಿ ನಾಣ್ಯಗಳನ್ನು ಹೊರತಂದರು ಮೊದಲು ಬ್ರಿಟಿಷರು ತಮ್ಮ ನಾಣ್ಯಗಳಲ್ಲಿ ಸ್ಥಳೀಯ ರಾಜರ ಮುದ್ರೆಯೊಂದಿಗೆ ಫಾರ್ಸಿ ಭಾಷೆಯಲ್ಲಿ ನಾಣ್ಯಗಳನ್ನು ಹೊರತಂದರು. ಅದರ ಮುದ್ರೆಗಳೊಂದಿಗೆ ತಮ್ಮ ಚಿಹ್ನೆಗಳನ್ನು ಸೇರಿಸಿ ಹೊರಡಿಸಿದರು. ಪೋರ್ತುಗೀಜರ ನಾಣ್ಯದ ಮೇಲೆ ಕ್ರಿಸ್ತನ ಕ್ರಾಸ್ ಮತ್ತು ಡಾಲಿನ ಆಕಾರದ ಪೃಥ್ವಿಗೋಲವನ್ನು ಕಾಣಿಸಿದರು. ಫ್ರೆಂಚರು ಮಾತ್ರ ಮೊಗಲರ ಪದ್ಧತಿಯ ಹಾಗೂ ದಕ್ಷಿಣ ಭಾರತದ ಪದ್ಧತಿಯ ನಾಣ್ಯಗಳನ್ನು ಹೊರಡಿಸಿದರು. ಲಕ್ಷ್ಮೀ ಮೊದಲಾದ ದೇವತೆಗಳ ಚಿತ್ರಗಳು ಅವರ ಕೆಲ ನಾಣ್ಯಗಳ ಮೇಲಿದ್ದವು. ತಾಮ್ರದ ಮತ್ತು ಕ್ಯಾಶ್ ಎನ್ನುವ ನಾಣ್ಯಗಳ ಮೇಲೆ ಲಿಲೀಯ ಹೂವು ಮತ್ತು ಕೋಳಿಯ ಚಿತ್ರವಿದ್ದವು. ಕೆಲವೊಂದು ನಾಣ್ಯಗಳ ಮೇಲೆ ರಾಜ ಮುದ್ರೆ ಹಾಗೂ ಡಾಲಿನ ಚಿತ್ರವಿದ್ದವು. ಭಾರತೀಯ ಇತಿಹಾಸ ನೋಡುವದಕ್ಕಿಂತಲೂ ರೂಪಾಯಿಯ ಜನ್ಮಕಥೆ ಹಾಗೂ ಅದರ ಬೆಳವಣಿಗೆ ಮತ್ತು ಅದರ ಚಲಾವಣೆಯ ಬಗ್ಗೆ ತಿಳಿದುಕೊಳ್ಳುವದು ಇನ್ನು ಮನೋರಂಜನೆಯ ಮಾತು ಎಂದು ಹೇಳಬಹುದಾಗಿದೆ.

ಭಾರತದಲ್ಲಿ ರೂಪಾಯಿ ಎಂಬ ನಾಣ್ಯವನ್ನು ಮೊಟ್ಟಮೊದಲು ಇ.ಸ. ೧೫೪೨ರಲ್ಲಿ ಮಹಮ್ಮದ ತಘಲಕನು ಪ್ರಾರಂಭಿಸಿದನು. ಅಂದಿನ ಆ ರೂಪಾಯಿ ಬೆಳ್ಳಿಯದಿದ್ದು ಒಂದು ತೊಲೆಗಿಂತ ಸ್ವಲ್ಪ ಭಾರದಲ್ಲಿ ಕಡಿಮೆ ಇದ್ದಿತ್ತು. ಅದರ ನಂತರ ಇ.ಸ. ೧೫೪೨ರಲ್ಲಿ ಪ್ರಮಾಣಬದ್ಧ ಮತ್ತು ಸುಂದರವಾಗಿ ಕಾಣುವ ಒಂದು ತೊಲೆ ಭಾರತ (೧೭೮ ಗ್ರೇನ್) ಬೆಳ್ಳಿಯ ರೂಪಾಯಿ ಸಿದ್ಧವಾಯಿತು. ಅದರ ಜನಕ ಷೇರಶಹಾ ಸೂರಿ ಎಂದೆನ್ನಬಹುದು. ಆ ವೇಳೆಯಲ್ಲಿ ಬೇರೆ ಬೇರೆ ರಾಜರ ಬೇರೆ ಹೆಸರಿನ ನಾಣ್ಯಗಳು ಪ್ರಚಲಿತಲ್ಲಿದ್ದವು, ಆದರೆ ಪ್ರಮುಖವಾಗಿ ಈ ರೂಪಾಯಿಗೆ ಬ್ರಿಟಿಷರೊಂದಿಗೆ ಅನೇಕರು ಮಾನ್ಯತೆಯನ್ನು ನೀಡಿದ್ದರು. ಸಾಮಾನ್ಯವಾಗಿ ಆ ಕಾಲದಲ್ಲಿ ಸುಮಾರು ಸಾವಿರ ಪ್ರಕಾರದ ನಾಣ್ಯಗಳು ಬಳಕೆಯಲ್ಲಿದ್ದವೆಂದು ಹೇಳಬಹುದು. ಇದಕ್ಕೆ ಕಾರಣ ದೇಶದಲ್ಲಿ ಅಂದು ಸಣ್ಣ ಪುಟ್ಟ ರಾಜರಿದ್ದರು. ಅವರೆಲ್ಲಾ ತಮ್ಮ ತಮ್ಮ ಪ್ರತಿಷ್ಠೆಗೆ ತಕ್ಕಂತೆ ನಾಣ್ಯಗಳ ಬಳಕೆ ಮಾಡುವ ಹವ್ಯಾಸದಲ್ಲಿದ್ದರು. ಬ್ರಿಟಿಷರು ಇಲ್ಲಿ ಚೆನ್ನಾಗಿ ನೆಲೆಯೂರಿನಿಂತ ತರುವಾಯ ಈಸ್ಟ ಇಂಡಿಯಾ ಕಂಪನಿ ಸ್ಥಾಪಿಸಿದ ನಂತರ ಅದರ ಅಧಿಕಾರವನ್ನೆಲ್ಲಾ ಈಸ್ಟ ಇಂಡಿಯಾ ಕಂಪನಿಗೆ ವಹಿಸಿಕೊಟ್ಟರು. ಈಗ ಈ ಕಂಪನಿಯವರು ೧೬೭೧ರಲ್ಲಿ ಮುಂಬೈಯಲ್ಲಿ, ೧೬೮೫ರಲ್ಲಿ ಮದ್ರಾಸಿನಲ್ಲಿ ೧೬೯೦ರಲ್ಲಿ ಕಲಕತ್ತಾದಲ್ಲಿ, ಟಂಕಶಾಲೆಗಳನ್ನು ಸ್ಥಾಪಿಸಿದರು. ಆಗ ಇಂಗ್ಲೆಂಡಿನಲ್ಲಿ ನಾಲ್ಕನೇ ವಿಲಿಯಂ ಆಳುತ್ತಿದ್ದು ನಾಣ್ಯಗಳ ಮೇಲೆ ಅವನ ಮುದ್ರೆಗಳನ್ನು ಹಾಕಿ ೧ ತೊಲೆಯ ಬೆಳ್ಳಿ ರೂಪಾಯಿ, ಅರ್ಧ ರೂಪಾಯಿ, ಪಾವರೂಪಾಯಿಗಳನ್ನು ಹೊರತಂದರು. ಇ.ಸ. ೧೮೩೫ ರಿಂದ ೧೮೫೪ರ ವರೆಗೆವಿಕ್ಟೋರಿಯಾ ರಾಣಿಯ ಬೆಳ್ಳಿ ನಾಣ್ಯಗಳು ಹೊರಬಂದವು (ಮೊಹರವು ೧೬ ರೂಪಾಯಿ ಬೆಲೆಯದು.) ಮುಂದೆ ಅರ್ಧ ರೂಪಾಯಿ ಕಾಲು ರೂಪಾಯಿ ಮತ್ತು ತಾಮ್ರದ ದುಡ್ಡು ಮತ್ತು ಪೈಗಳನ್ನು ಹೊರತಂದರು. ಈ ರಾಣಿಯ ಕಾಲಕ್ಕೆ ೫ ಹಾಗೂ ೧೦ ರೂಪಾಯಿಯ ನಾಣ್ಯಗಳನ್ನು ತಯಾರಿಸಿದರು. ವಿಕ್ಟೋರಿಯಾ ರಾಣಿಯ ಎಲ್ಲ ನಾಣ್ಯಗಳು ಇಡಿಯಾಗಿ ಈಗ ಅಲಭ್ಯವಾಗಿವೆ. ಅದಕ್ಕಾಗಿ ಅವುಗಳನ್ನು ದೊರಕಿಸಿಕೊಳ್ಳಲು ಅವುಗಳ ಸೆಟ್ಟಿನ ಬೆಲೆ ೬೦,೦೦೦ ರೂಪಾಯಿಗಳವರೆಗೆ ಹೋಗಿದೆ. ಬ್ರಿಟಿಷರು ತಮ್ಮ ದೇಶದಲ್ಲಿರುವ ಪೌಂಡನ್ನು ಬಳಕೆಯಲ್ಲಿ ತರಲು ಪ್ರಯತ್ನಿಸಿದರು. ಆದರೆ ಅದು ಸಫಲ ಹೊಂದಲಿಲ್ಲ ಮುಂದೆ ೧೮೩೭ರಲ್ಲಿಯ ನಾಣ್ಯಗಳ ಮೇಲಿರುವ ರಾಣಿ ತಲೆಯ ಮೇಲೆ ಕಿರೀಟವಿರಲಿಲ್ಲ. ೧೮೭೭ರಲ್ಲಿ ರಾಣಿಯ ಪಟ್ಟಾಭಿಷೇಕವಾಯಿತು. ಆಗ ರಾಣಿಯ ತಲೆಯ ಮೇಲೆ ಕಿರೀಟ ಸಹಿತ ರೂಪಾಯಿ ಅರ್ಧ ರೂಪಾಯಿ ನಾಣ್ಯಗಳು ಬಳಕೆಗೆ ಬಂದವು.

ಮುಂದೆ ೧೯೦೭ರಲ್ಲಿ ೭ನೇ ಎಡ್ವರ್ಡ ಇಂಗ್ಲೆಂಡದ ಗಾದಿಯ ಮೇಲೆ ಬರಲು, ಅವನ ಚಿತ್ರದ ಒಂದು ತೋಲೆ, ಅರ್ಧ ತೋಲೆ, ಪಾವ ತೋಲೆಯ ಬೆಳ್ಳಿ ನಾಣ್ಯಗಳು ಹೊರಬಂದವು. ಅದರಂತೆ ದುಡ್ಡುಗಳು, ಪೈಗಳು ಹೊರಬಂದವು. ಅದರ ನಂತರ ೧೯೧೦ರಲ್ಲಿ ಪಂಚಮ ಜಾರ್ಜ ಗಾದಿಗೆ ಬಂದನು. ಅವನು ತನ್ನ ಮುದ್ರೆಯ ನಾಣ್ಯಗಳನ್ನು ಹೊರತಂದನು. ಇವನ ಕಾಲದಲ್ಲಿ ಹಿಂದಿನ ಸಂಪ್ರದಾಯ ಅನುಸರಿಸುವರೊಂದಿಗೆ

ನಿಕೆಲ್ ಧಾತುವಿನಲ್ಲಿ ಅರ್ಧ ರೂಪಾಯಿ, ನಾಲ್ಕಾಣೆ, ಒಂದು ಆಣೆ ಎರಡು ಆಣೆ ಕಿರಿಯ ನಾಣ್ಯಗಳು ದೊಡ್ಡ ಪ್ರಮಾಣದಲ್ಲಿ ಬಳಕೆಯಲ್ಲಿ ಬಂದವು. ಆದರಂತೆ ತಾಮ್ರದ ದುಡ್ಡುಗಳು, ಪೈಗಳು ಹೊರಬಂದವು.

ಪಂಚಮ ಜಾರ್ಜ ತಾನು ತನ್ನ ರಾಣಿ ಮೇರಿಗಾಗಿ ಹೊಸ ಸಿಂಹಾಸನ ಮಾಡಿಸುವುದಕ್ಕಾಗಿ ಹಳೆಯ ಲಕ್ಷಗಟ್ಟಲೆ ರೂಪಾಯಿ ಕರಗಿಸಿ ಬೆಳ್ಳಿ ಸಿಂಹಾಸನವನ್ನು ಮಾಡಿಸಿದನು. ತನ್ನ ಆಳಿಕೆಯಲ್ಲಿ ಆನೆಯ ಚಿತ್ರದ ನಾಣ್ಯವನ್ನು ತೆಗೆಸಿದನು. ಆದರೆ ಅದರ ಸೊಂಡಿಲು ಟಂಕಶಾಲೆಯ ದೋಷದಿಂದ ಕೆಟ್ಟು ಹೋಗಿ ಹಂದಿ ಆಕಾರವಾಗಿ ಕಾಣತೊಡಗಿತು. ಅದಕ್ಕೆ ಜನರು ಅದನ್ನು ಕಂಡು (ಪಿಗ್ ಕಾಯಿನ್) 'ಹಂದಿ ನಾಣ್ಯ'ವೆಂದು ಹಾಸ್ಯ ಮಾಡಿದ್ದರಿಂದ, ಕೆಲ ದಿನಗಳಲ್ಲಿಯೇ ಅದನ್ನು ಹಿಂದೆ ತೆಗೆದುಕೊಂಡರು.

ಆ ಮೇಲಿನ ೬ನೇ ಜಾರ್ಜನು ಮೇಲಿನಂತೆ ರೂಪಾಯಿ, ಅರ್ಧ ರೂಪಾಯಿ, ಪಾವಲಿ, ಚವಲಿ, ಆಣೆ ದುಡ್ಡು ಮುಂತಾದ ನಾಣ್ಯಗಳನ್ನು ಬಳಕೆಯಲ್ಲಿ ತಂದನು. ಈ ಕಾಲದವರೆಗೆ ರೂಪಾಯಿ ನಾಣ್ಯಗಳಲ್ಲಿ ಬೆಳ್ಳಿ ಇರುತ್ತಿತ್ತು. ಅದಕ್ಕೆ ಒಂದು ವಿಶಿಷ್ಟವಾದ ಧ್ವನಿ (ಛಣಿ) ಇತ್ತು. ಜನರು ಖರೇ ನಾಣ್ಯ ಹಾಗೂ ಖೊಟ್ಟಿ ನಾಣ್ಯಗಳನ್ನು ನೆಲಕ್ಕೆ ಒಗೆದು, ಬಾರಿಸಿ ನೋಡಿ ಕಂಡು ಹಿಡಿಯುತ್ತಿದ್ದರು. ಆ ವೇಳೆಯಲ್ಲಿ ಒಂದು ರೂಪಾಯಿಯ ನಾಣ್ಯಗಳು ಚಲಾವಣೆಯಲ್ಲಿದ್ದವು. ಯಾವದಾದರೊಂದು ಸತ್ಯಮಾತಿಗೆ ಒಂದು ರೂಪಾಯಿಯ ನಾಣ್ಯದ ಉದಾಹರಣೆ ಕೊಡುತ್ತಿದ್ದರು. ಆ ವೇಳೆಯಲ್ಲಿ ಒಂದು ಮಾತು ರೂಢಿಯಲ್ಲಿದ್ದಿತು. "ನಮ್ಮ ಗಟ್ಟೀರೂಪಾಯಿ ಛಣಿ ಛಣಿ ಎಂದು ಭಾರಿಸುತ್ತದೆ." ಅಂದರೆ ನಮ್ಮ ಹೇಳಿಕೆ ನಿಜ ಮತ್ತು ಗಟ್ಟಿಮುಟ್ಟಮುಟ್ಟಾಗಿದೆ ಎಂದಂತೆ.

೧೯೪೭ರಲ್ಲಿ ಭಾರತ ಸ್ವತಂತ್ರವಾಯ್ತು. ಆಗ ನಾಣ್ಯದ ಮೇಲಿಂದ ಬಾದಶಹಾನ ಮುದ್ರೆ ಹೋಗಿ ಅಶೋಕ ಸ್ತಂಭದ ಮೇಲಿನ ಮೂರು ಸಿಂಹಗಳ ರಾಜ ಮುದ್ರೆ ಹಾಗೂ ಧಾನ್ಯದ ಹೊಡೆಯ ಚಿತ್ರವಿರುವ ನಿಕೆಲ್ಲಿನ ನಾಣ್ಯಗಳು ಬಳಕೆಯಲ್ಲಿ ಬಂದವು. ಅಲ್ಲಿಯವರೆಗೆ ನಾಣ್ಯಗಳು ರೂಪಾಯಿ, ಆಣೆ, ಪೈ ಈ ಪ್ರಕಾರ ಮೂರು ಮಡಿಕೆಯ ರೀತಿಯಲ್ಲಿದ್ದವು. ಭಾರತವು ಪ್ರಜಾರಾಜ್ಯವಾದ ನಂತರ, ರೂಪಾಯಿ, ಹಾಗೂ ಪೈಸೆ ಹೀಗೆ ಎರಡು ಪ್ರಕಾರವಾಯ್ತು. ಈಗ ೫೦ ಪೈಸೆ, ೨೫ ಪೈಸೆ, ೨೦ ಪೈಸೆ, ೫ ಪೈಸೆ, ೨ ಪೈಸೆಯವರೆಗೆ ನಿಕ್ಕೆಲ್ಲ ನಾಣ್ಯಗಳು ಇದ್ದವು. ೧ ಪೈಸೆಯ ತಾಮ್ರದ ನಾಣ್ಯವಿತ್ತು. ನಿಕ್ಕೆಲ್ ಮತ್ತು ತಾಮ್ರದ ಬೆಲೆಗಳು ಹೆಚ್ಚಾದ ಕಾರಣ ೨೦,೧೦,೫,೩,೧. ಈ ಎಲ್ಲ ನಾಣ್ಯಗಳು ಅಲ್ಯುಮಿನಿಯಂನಲ್ಲಿ ಹೊರಬಂದವು. ಈಗ ೩,೨,೧ ಪೈಸೆ ನಾಣ್ಯಗಳ ಉತ್ಪಾದನೆಯನ್ನು ನಿಲ್ಲಿಸಿ ಬಿಟ್ಟಿದ್ದಾರೆ.

೧೯೭೪ ರಿಂದ ಭಾರತ ಸರಕಾರವು ಕೆಲವೊಂದು ನಾಣ್ಯಗಳನ್ನು ವಿಶಿಷ್ಟ ರೀತಿಯಿಂದ ವಿಶಿಷ್ಟ ಕಾರಣಕ್ಕಾಗಿ ಹೊರತಂದಿತು. ೧೯೪೭ ರಿಂದ ರೂಪಾಯಿಯಲ್ಲಿಯ ಬೆಳ್ಳಿ ಹೋಯಿತು. ಅಷ್ಟೇ ಅಲ್ಲದೆ ಅದರ ಆಕಾರ ಮತ್ತು ತೂಕ ಕಡಿಮೆಯಾಯಿತು. ಅದರ ಭಾರವು ಅರ್ಧದಷ್ಟಕ್ಕೆ ಇಳಿಯಿತು. ರಾಜ ಮುದ್ರೆಯ ಸ್ಥಳದಲ್ಲಿ ರಾಷ್ಟ್ರಪಿತ ಮಹಾತ್ಮಾಗಾಂಧಿ ಹಾಗೂ ಮೊದಲನೇ ಪ್ರಧಾನ ಮಂತ್ರಿ ಜವಾಹರಲಾಲ ನೆಹರೂರವರ ಭಾವಚಿತ್ರವನ್ನು ರೂಪಾಯಿ ಹಾಗೂ ೫೦ ಪೈಸೆಗಳ ಮೇಲೆ ಮುದ್ರಿಸಿದರು. ಅದೇ ಪ್ರಕಾರ ಸಂದರ್ಭಕ್ಕೆ ತಕ್ಕಂತೆ ಏಸಿಯಾಡ್ ನೆನಪಿಗಾಗಿ ಅದರ ಚಿನ್ನದ ನಾಣ್ಯಗಳು ಹೊರಬಂದವು. ಇಲ್ಲಿಯವರೆಗೆ ಪ್ರಚಾರಾರ್ಥವಾಗಿ ಕುಟುಂಬಯೋಜನೆ, ವಿಶ್ವಬಂಧು ದಿನ, ಧಾನ್ಯಸಮೃದ್ಧಿ, ಮಹಿಳಾ ಉನ್ನತಿ, ಮಕ್ಕಳ ದಿನಾಚರಣೆ ಹಾಗೂ ಇಂದಿರಾಗಾಂಧಿ ಮುಂತಾದ ನಾಣ್ಯಗಳನ್ನು ನಾವು ಪ್ರಚಲಿತದಲ್ಲಿ ಕಾಣಬಹುದು. ಇವುಗಳಲ್ಲಿ ಹೆಚ್ಚು ಬೆಲೆಯ ನಾಣ್ಯಗಳಾದ ೧೦ ರೂಪಾಯಿ, ೫೦ ರೂಪಾಯಿ, ೧೦೦ ರೂಪಾಯಿಗಳಂತಹ ನಾಣ್ಯಗಳನ್ನು ಬಳಕೆಯಲ್ಲಿ ತರಲಾಯ್ತು. ೧೦, ೫೦ ಅಥವಾ ೧೦, ೧೦೦ ರೂಪಾಯಿಗಳ ಮುಲ್ಯಾಂಕನದಲ್ಲಿ ಹೊರಡಿಸಿದರು.

ಆದರೆ ಅವುಗಳ ಮೇಲೆ ಬರೆದ ಮೌಲ್ಯಕ್ಕಿಂತ ಎಷ್ಟೋ ಹೆಚ್ಚು ಬೆಲೆಗೆ ಸರಕಾರ ಸಂಗ್ರಾಹಕರಿಗೆ ಮಾರುತ್ತಲಿದೆ. ಸರಕಾರವು ಈ ನಾಣ್ಯಗಳನ್ನು ತಾನಾಗಿಯೇ ಬಳಕೆಯಲ್ಲಿ ತರಲು ಇಚ್ಛೆ ಪಡುವದಿಲ್ಲ. ಆದರೆ ಸಂಗ್ರಾಹಕರು ಮಾತ್ರ ಸಾಕಷ್ಟು ಬೆಲೆಕೊಟ್ಟು

ಅವುಗಳನ್ನು ಕೊಂಡುಕೊಳ್ಳುತ್ತಿದ್ದಾರೆ. ಈ ನಾಣ್ಯಗಳು ಬಳಕೆಯಲ್ಲಿ ಇಲ್ಲದ ಕಾರಣ ಜನಸಾಮಾನ್ಯರಿಗೆ ಇವುಗಳ ಬಗ್ಗೆ ತಿಳುವಳಿಕೆ ಇರುವದಿಲ್ಲ. ಬಹಳಷ್ಟು ಜನರು ಇಂಥ ನಾಣ್ಯಗಳನ್ನು ನೋಡಿಯೇ ಇಲ್ಲ ಎಂದೆನ್ನಬಹುದು.

ಭಾರತದಲ್ಲಿ ಚಿಲ್ಲರೆ ನಾಣ್ಯಗಳ ಕೊರತೆಯಿಂದ ಇಂಗ್ಲಂಡ, ಕೋರಿಯಾ ರಾಷ್ಟ್ರಗಳಿಂದ ರೂಪಾಯಿ, ೫೦ ಪೈಸೆ, ೨೫ ಪೈಸೆ ನಾಣ್ಯಗಳನ್ನು ಆಮದು ಮಾಡಿಕೊಳ್ಳಲಾಗಿದೆ.

ಭಾರತದಲ್ಲಿ ಮೊದಲನೆಯ ಚಲಾವಣೆಯ ಕಾಗದದ ನೋಟು ೧೯ನೇ ಶತಮಾನದ ಪ್ರಾರಂಭದಲ್ಲಿ ಬಂದಿತು. ವಿಕ್ಟೋರಿಯಾ ರಾಣಿಯ ಚಿತ್ರದ ೧೦ ರೂಪಾಯಿ ಬೆಲೆಯ ನೋಟು ಇತ್ತು. ಈಗ ಅದು ಅಲಭ್ಯವಾದ ಕಾರಣ ಅದರ ಬೆಲೆ ೪೦೦ ರೂಗೆ ಏರಿದೆ. ೧೯೧೯ರಲ್ಲಿ ೧೦ ರೂಪಾಯಿ ನೋಟಿನ ಸಂಗಡ ೫ ರೂಪಾಯಿಯ ನೋಟು ಚಲಾವಣೆಗೆ ಬಂದಿತು. ತದನಂತರದ ನಾಲ್ವತ್ತು ವರ್ಷಗಳವರೆಗೆ ನೋಟಿನ ಉತ್ಪಾದನೆ ಹಾಗೂ ಪ್ರಸಾರ ಮಂದಗತಿಯಲ್ಲಿತ್ತು. ೧೯೦೧ ನೇ ಇಸ್ವಿಯ ನೋಟಿನ ಮೇಲೆ ನಾಲ್ಕು ಸ್ಥಳಗಳಲ್ಲಿ ನಂಬರಗಳನ್ನು ಮುದ್ರಿಸುತ್ತಿದ್ದರು. ಅದರ ಮೇಲೆ ಅದು ಹುಟ್ಟಿದ ಸ್ಥಳ ಮುಂಬೈ, ಮುದ್ರಾಸ ಎಂದಾಗಿ ಬರೆದು, ಅದು ಹುಟ್ಟಿದ ದಿನಾಂಕವನ್ನು ಬರೆಯಲಾಗಿತ್ತು. ಆ ಮೇಲೆ ಮೇಲಿಂದ ಮೇಲೆ ಹೊರತರಲಾದ ನೋಟುಗಳ ಮೇಲೆ ಭಾರತೀಯ ಪ್ರಮುಖ ಭಾಷೆಗಳಲ್ಲಿ ಅವುಗಳ ಬೆಲೆ ಬರೆಯಲಾಯಿತು. ಮೊದಲು ಏಳು ಭಾಷೆಗಳಲ್ಲಿ ಬರೆಯುತ್ತಲಿದ್ದರು. ಈಗ ಹದಿನಾಲ್ಕು ಭಾಷೆಗಳನ್ನು ಅದರ ಮೇಲೆ ಅಳವಡಿಸಲಾಗಿದೆ. ಒಂದು ಸಾವಿರ ರೂಪಾಯಿಯ ಮೌಲ್ಯದ ನೋಟುಗಳು ಚಲಾವಣೆಯಲ್ಲಿದ್ದವು. ಕಾಲಾಂತರದಿಂದ ೧೦೦೦ ರೂಪಾಯಿಯ ನೋಟುಗಳನ್ನು ಹಿಂತೆಗೆದುಕೊಂಡರು. ಪ್ರಾರಂಭದಲ್ಲಿ ೧೦೦ ರೂಪಾಯಿಯ ನೋಟು ಎರಡು ಬೇರೆ ಬೇರೆ ಭಾಗಗಳಲ್ಲಿ ಸಿಗುತ್ತಿತ್ತು. ಅದನ್ನು ಕೂಡಿಸಿದಾಗ ೧೦೦ ರೂಪಾಯಿಯ ನೋಟು ತಯಾರಾಗುತ್ತಿತ್ತು. ಇದರಲ್ಲಿ ಈ ನೋಟುಗಳು ಕಳವು ಆಗಬಾರದೆಂಬ ಉದ್ದೇಶದಿಂದ ಹೀಗೆ ಮಾಡಿರಬಹುದು. ○

# ಚಿತ್ರದುರ್ಗದ ಒನಕೆ ಓಬವ್ವೆಯ ಘಟನೆ: ಚಾರಿತ್ರಿಕ ವಿಮರ್ಶೆ

ಲಕ್ಷ್ಮಣ್ ತೆಲಗಾವಿ

೧

ಕರ್ನಾಟಕ ಚಾರಿತ್ರಿಕ ಕಥಾಮಂಜರಿಯಲ್ಲಿ ಚಿತ್ರದುರ್ಗದ ಒನಕೆ ಓಬವ್ವೆಗೂ ಮಹತ್ವದ ಸ್ಥಾನ ಕಲ್ಪಿಸಿರುವುದುಂಟು. ಚಾರಿತ್ರಿಕ ಯುಗದ ವೀರ ವನಿತೆಯರ ಸಾಲಿನಲ್ಲಿ ಈಕೆಯನ್ನೂ ಗುರುತಿಸಿ ಈಕೆಯ ಧೀರೋದಾತ್ತ ನಿಲುವನ್ನೂ ಪ್ರಶಂಸಿಸಲಾಗಿದೆ. ಮುಖ್ಯವಾಗಿ, ಸ್ವಾಮಿನಿಷ್ಠೆ, ಸಮಯಸ್ಫೂರ್ತಿ, ತ್ಯಾಗ–ಇವು ಈಕೆಗೆ ಆರೋಪಿಸಿ ಕೊಂಡಾಡಲಾಗುತ್ತಿರುವ ಮೂರು ಗುಣಗಳು. ಚಿತ್ರದುರ್ಗ ನಾಯಕ ಅರಸರ ಚರಿತ್ರೆಯಲ್ಲಿ ಈಕೆಯು ನಿರ್ವಹಿಸಿದ ಪಾತ್ರದ ಬಗೆಗೆ ಚರಿತ್ರೆಯನ್ನಾಧರಿಸಿದ ಗ್ರಂಥಗಳಲ್ಲೂ ಪ್ರಬಂಧಗಳಲ್ಲೂ ಶಾಲಾ ಪಠ್ಯಪುಸ್ತಕಗಳಲ್ಲೂ ಪ್ರಸ್ತಾಪಿಸಲಾಗಿದೆ.

ಈಗಾಗಲೇ ಪ್ರಚಾರದಲ್ಲಿರುವ ವೃತ್ತಾಂತದ ಪ್ರಕಾರ, ಓಬವ್ವೆಯ ಘಟನೆಯು ಚಿತ್ರದುರ್ಗದ ಕೊನೆಯ ಅರಸ ರಾಜಾವೀರ ಮದಕರಿನಾಯಕನ (ಕ್ರಿ.ಶ. ೧೭೫೪–೧೭೭೯) ಆಡಳಿತಾವಧಿಯಲ್ಲಿ ನಡೆಯಿತೆಂದೂ ಶ್ರೀರಂಗಪಟ್ಟಣದ ನವಾಬ ಹೈದರ್ ಅಲಿ ಖಾನನು ದುರ್ಗವನ್ನು ಮುತ್ತಿದ ಸಂದರ್ಭದಲ್ಲಿ ಆತನ ಸೈನಿಕರು ಕೋಟೆಯ ಕಳ್ಳಗಂಡಿಯ ಮೂಲಕ ರಹಸ್ಯವಾಗಿ ಒಳನುಗ್ಗಲು ಪ್ರಯತ್ನ ನಡೆಸಿದರೆಂದೂ ಆಕಸ್ಮಿಕವಾಗಿ ಅದನ್ನು ಗಮನಿಸಿದ ಓಬವ್ವೆಯು ಅವರನ್ನು ತನ್ನ ಒನಕೆಯಿಂದ ಸದೆಬಡಿಯುವುದರೊಡನೆ ಅವರನ್ನು ಹಿಮ್ಮೆಟ್ಟಿಸಿ, ಆಗಿನ ಮಟ್ಟಿಗೆ ದುರ್ಗವನ್ನು ಕಾಪಾಡಿದಳೆಂದೂ ವ್ಯಕ್ತಪಡುತ್ತದೆ. ತನ್ನ ಈ ಸಾಹಸದ ಸಂದರ್ಭದಲ್ಲಿ ಈಕೆಯು ಶತ್ರು ಸೈನಿಕರಿಂದ ಹತಳಾದಳೆಂಬ ಸಂಗತಿಯೂ ಪ್ರಚಾರದಲ್ಲಿದ್ದು, ಈಕೆಯ ಸಾಹಸದ ಬಗೆಗಿನ ಅಭಿಮಾನ ಮತ್ತು ಈಕೆಗೆ ಒದಗಿದ ದುರಂತದ ಬಗೆಗಿನ ಅನುಕಂಪ–ಇಂತಹ ಭಾವನೆಗಳಿಂದ ಈಕೆಯ ಜನಪ್ರಿಯತೆ ಅಧಿಕಗೊಂಡಿದೆ ಎನ್ನಬಹುದು. ಈ ಹಿನ್ನೆಲೆಯಲ್ಲಿ, ಓಬವ್ವೆಯ ಘಟನೆಯು ಚಿತ್ರದುರ್ಗ ಚರಿತ್ರೆಯಿಂದ ಬೇರ್ಪಡಿಸಲಾಗದಷ್ಟು ಗಟ್ಟಿಯಾಗಿ ಬೆಸೆದುಕೊಂಡಿರುವುದಂತೂ ದಿಟ.

ಓಬವ್ವೆಯ ಘಟನೆ ಕುರಿತು ವಿದ್ವಾಂಸರನೇಕರು ವಿವಿಧ ರೀತಿಯಲ್ಲಿ ನಿರೂಪಿಸಿರುವುದುಂಟು. ಎಂ.ಎಸ್. ಪುಟ್ಟಣ್ಣ ಅವರು ಬರೆದಿರುವಂತೆ, ಓಬವ್ವ ಅಥವಾ ಓಬಿಯು ಚಿತ್ರದುರ್ಗ ಬಳಿಯ ಅಗಸನಕಲ್ಲು ಗ್ರಾಮದವಳು; ಚಿತ್ರದುರ್ಗ ಕೋಟೆಯ ಕಳ್ಳಗಂಡಿಯಲ್ಲಿ ನುಗ್ಗಲೆತ್ನಿಸಿದ ಶತ್ರು ಸೈನಿಕರನ್ನು ಹಿಮ್ಮೆಟ್ಟಿಸುವ ತನ್ನ ಸಾಹಸದಲ್ಲಿ ಅವರಿಂದ ಹತ್ಯೆಗೀಡಾದಳು ; ಆಕೆಯಿಂದ ಕೊಲ್ಲಲ್ಪಟ್ಟ ಶತ್ರು ಸೈನಿಕರ ಸಂಖ್ಯೆ ೨೦೦ ರಿಂದ ೩೦೦.[1] ಪ್ರಸಿದ್ಧ ಇತಿಹಾಸ ಸಂಶೋಧಕ ಹುಲ್ಲೂರು ಶ್ರೀನಿವಾಸ ಜೋಯಿಸರನ್ನು ಒಳಗೊಂಡಂತೆ ಹಲವಾರು ಲೇಖಕರು ಇದೇ ಸಂಗತಿಯನ್ನು ನಾನಾ ರೀತಿಯಲ್ಲಿ ಬರೆದು ಪ್ರಕಟಿಸಿರುವರು. ಅಲ್ಲದೆ, ತನ್ನ ಸಾಹಸದ ನಂತರವೂ ಓಬವ್ವೆಯು ಬದುಕಿದ್ದಳೆಂಬುದನ್ನೂ ದುರ್ಗದ ಅರಸನು

---

1 ಚಿತ್ರದುರ್ಗದ ಪಾಳಯಗಾರರು, ಬೆಂಗಳೂರು, ೧೯೨೪, ಪು. ೯೧-೯೪

ಈಕೆಯನ್ನು ಸನ್ಮಾನಿಸಿ ಗೌರವಿಸಿದ್ದನೆಂಬುದನ್ನೂ ವ್ಯಕ್ತಪಡಿಸಿರುವರು. ಪರಿಶಿಷ್ಟ ಜಾತಿಗೆ ಸೇರಿದ ಚಲವಾದಿ ಸಂಗಡದ ಓಬವ್ವೆಯನ್ನು ಬೇಡ ಜನಾಂಗದ ಮಹಿಳೆ ಎಂಬುದಾಗಿ ತಪ್ಪಾಗಿ ದಾಖಲಿಸಿರುವುದೂ ಉಂಟು.[2] ಹಾಗೆಯೇ, ಕೆಲವು ವಿದ್ವಾಂಸರು ಈಕೆಯ ಅಸ್ತಿತ್ವವನ್ನೇ ಶಂಕಿಸಿರುವರು.

ಪ್ರಸ್ತುತ ಪ್ರಬಂಧದಲ್ಲಿ ಓಬವ್ವೆಯ ಘಟನೆಯ ಚಾರಿತ್ರಕ ವಿಮರ್ಶೆಯನ್ನು ಈ ಕೆಳಗಿನ ಕೆಲವು ಸಮಸ್ಯೆಗಳ ಪರಿಶೀಲನೆಯೊಡನೆ ಕೈಗೊಳ್ಳಲೆತ್ನಿಸಿದೆ :

೧. ಓಬವ್ವೆಯು ಚಾರಿತ್ರಕ ವ್ಯಕ್ತಿಯೇ ?

೨. ಚಿತ್ರದುರ್ಗ ಕೋಟೆಯಲ್ಲಿ ಓಬವ್ವೆಯು ತೋರಿದಳೆನ್ನಲಾದ ಸಾಹಸವು ವಾಸ್ತವಿಕವೇ ?

೩. ಚಿತ್ರದುರ್ಗ ಕೋಟೆಯಲ್ಲಿ ಈಗಲೂ ತೋರಿಸಲಾಗುವ ಕಲ್ಲುಪೊಟರೆ ಅಥವಾ ಕಲ್ಲುಗಂಡಿ ಯೊಡನೆ ಕಲ್ಪಿಸಲಾಗಿರುವ ಓಬವ್ವೆಯ ಸಂಬಂಧವು ಸಮರ್ಥನೀಯವೇ ?

೪. ಓಬವ್ವೆಯ ಅಂತ್ಯ ಆದುದು ಹೇಗೆ ?– ಇತ್ಯಾದಿ.

೨

ಮೇಲೆ ಪ್ರಸ್ತಾಪಿಸಿದ ಸಮಸ್ಯೆಗಳಿಗೆ ಸಂಬಂಧಿಸಿ ದಂತೆ ಲಭ್ಯವಿರುವ ಮೂಲ ಮತ್ತು ಆನುಷಂಗಿಕ ಮಾಹಿತಿಯನ್ನು ಇಲ್ಲಿ ಪ್ರಸ್ತಾಪಿಸಿದೆ :

೧. ಓಬವ್ವೆಯು ಚಾರಿತ್ರಕ ವ್ಯಕ್ತಿಯೇ ಆಹುದೆಂಬುದಕ್ಕೆ ಈಕೆಯ ಘಟನೆಯ ಹಿನ್ನೆಲೆಯಲ್ಲಿ ಚಿತ್ರದುರ್ಗ ನಾಯಕ ಅರಸರಿಗೆ ಸಂಬಂಧಿಸಿದ ದಾಖಲೆ ಯೊಂದು[3] ಈ ರೀತಿ ನಿರೂಪಿಸುತ್ತದೆ: "... ಶತೃಗಳು ದುರ್ಗಕ್ಕೆ ಪಶ್ಚಿಮದಿಕ್ಕಿನ ಕಡೆ ಮೊಕ್ಕಾಂ ಮಾಡಿ ವಂದಾನೊಂದು ರಾತ್ರಿ ಸರುವತ್ತಿನಲ್ಲಿ ಹುಚ್ಚಂಗಮ್ಮನ ಹೊಂಡದ ವೋಣಿ ಹಿಡಿದು ದಿಡ್ಡಿಯಲ್ಲಿ ವಬ್ಬೊಬ್ಬರಾಗಿ ಹೋಗಬೇಕೆಂತ ಯತ್ನಿಸುತ್ತಿರುವಲ್ಲಿ ಆ ದಿಡ್ಡಿ ಬಾಗಿಲ ಪಹರೆಗೆ ನೇಮಿಸಿದ ಹೊಲೆಯರವನು ಪಹರೆಗೆ ಹೋಗ ಬೇಕು. ಜಾಗ್ರತೆ ವೂಟಕ್ಕೆ ಬಡಿಸೆನಲಾಗಿ ಆ ಸಮಯದಲ್ಲಿ ಯಿದ್ದ ಅನ್ನ ಮೊಸರು ಯಿಟ್ಟು ವುಣ್ಣಿಸುತ್ತಿರಲಾಗಿ ಜನರು ಬರುವಂತೆ ಶಬ್ದವು ಅವನ ಹೆಂಡತಿಗೆ ಕೇಳಿಸಿ ಬರು ವಲ್ಲಿ ಆಗ ಆಕೆಯು ಹೊರಗೆ ಹೋಗಿ ಚನ್ನಾಗಿ ನೋಡು ವಲ್ಲಿ ಶತೃ ಪಕ್ಷದವರು ವಳಗೆ ಬರಬೇಕಂತ ಪ್ರಯತ್ನಿಸು ತ್ತಿರುವುದಂ ಅರಿತು, ಗಂಡನಿಗೆ ಹೇಳಿದ ಕೂಡ್ಲೆ ಅನ್ನ ಬಿಟ್ಟು ಬರುವನು. ಅದರ ಪಾಪವು ನನಗೆ ಬರುವದು. ಸುಮ್ಮನೆ ಯಿದ್ದರೆ ರಾಜದ್ರೋಹ ಮಾಡಿದಂತೆ ಆಗುವುದೆಂದು ಯೋಚಿಸಿ ತನ್ನ ಸಾಹಸ್ತ ಯಿದ್ದಷ್ಟು ಪ್ರಯತ್ನಿಸುವೆನು. ಅಷ್ಟರಲ್ಲಿ ಗಂಡನೆ ಬರುವನೆಂದು ವಂದು ವನಕೆ ಹಸ್ತದಲ್ಲಿ ಪಿಡಿದು ದಿಡ್ಡಿ ಬಾಗಿಲಿಗೆ ವೋರೆಯಾಗಿ ನಿಂತು ವೀರಗಚ್ಚೆ ಹಾಕಿ ಆ ಬಾಗಿಲು ವಬ್ಬೊಬ್ಬ ಬರವಷ್ಟು ಯಿತ್ತು. ಹೀಗಿರಲಾಗಿ ವಬ್ಬನು ತಲೆ ತೂರಿಸಿದ ಕೂಡಲೆ ಮುಸಲದಿಂದ ತಲೆಗೆ ತನ್ನ ಶಕ್ತಿಯಿದ್ದಷ್ಟು ಪೆಟ್ಟು ಹಾಕಲು ಆ ಪೆಟ್ಟಿಗೆ ತಲೆ ಹೊಡದು ಸಾಯುವನು. ಆ ಶವವನ್ನು ಕಾಲು ಹಿಡಿದು

---

2 B. N. Sri Sathyan (Ed.) : *Mysore State Gazetteer–Chitradurga District*, Bangalore, 1967, p. 393

3 ಇದು ಕಾಗದದ ದಾಖಲೆ ; ವಂಶಾವಳಿ ಪ್ರತಿಗಳಲ್ಲಿ ಭಿನ್ನ ಸಂಪ್ರದಾಯದ್ದು. ಚಿತ್ರದುರ್ಗದ ಟಿ. ಜಯಣ್ಣ ಅವರಲ್ಲಿದ್ದ ಕೈಬರಹದ ಈ ದಾಖಲೆಯ ನಕಲನ್ನು ನನ್ನ ಅಧ್ಯಯನಕ್ಕೆ ಒದಗಿಸಿದವರು ನನ್ನ ಮಿತ್ರರಾದ ಚಿತ್ರದುರ್ಗದ ಎಚ್. ಶ್ರೀಶೈಲ ಆರಾಧ್ಯ ಮತ್ತು ಪಾಂಡವಪುರದ ನಾ. ಪ್ರಭಾಕರ್ ಅವರುಗಳು. ಇವರೆಲ್ಲರಿಗೆ ನಾನು ಋಣಿಯಾಗಿರುವೆ. ಈ ದಾಖಲೆಯ ವೃತ್ತಾಂತವನ್ನೇ ಹೋಲುವ ಇನ್ನೊಂದು ಹಸ್ತಪ್ರತಿ(ಕೈಫಿಯತ್)ಯು ಚಿತ್ರದುರ್ಗ ನಾಯಕ ಅರಸರ ಮಂತ್ರಿಯಾಗಿದ್ದ ಪರಶುರಾಮಪ್ಪನ ಸಂತತಿಗೆ ಸೇರಿದವರೆಂದು ಹೇಳಲಾದ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆ ರಾಮನಗರದ ನಿವಾಸಿಯಾಗಿದ್ದ 'ಪೋಸ್ಟ್' ರಂಗಪ್ಪ ಅವರ ವಶದಲ್ಲಿದ್ದು, ಅದರಲ್ಲಿಯ ಕೆಲ ಆಯ್ದ ಭಾಗಗಳನ್ನು ಡಾ॥ ಎಂ.ವಿ. ಶ್ರೀನಿವಾಸ್ ಮತ್ತು ಎಂ.ವಿ. ಚಿತ್ರಲಿಂಗಯ್ಯ ಅವರುಗಳು ಸಂಯುಕ್ತವಾಗಿ ಸಂಪಾದಿಸಿ 'ಇತಿಹಾಸ ಚಂದ್ರಿಕೆ' ಮಾಸಪತ್ರಿಕೆಯಲ್ಲಿ (೩-೧೨ ರಿಂದ ೫.೧೦, ೧೧-ಡಿಸೆಂಬರ್ ೧೯೬೨ ರಿಂದ ನವೆಂಬರ್ ೧೯೬೩) ಪ್ರಕಟಿಸಿರುವರು. ಈ ಎರಡು ಪಾಠಗಳಲ್ಲಿಯ ಓಬವ್ವೆಯನ್ನು ಕುರಿತ ವೃತ್ತಾಂತವು ಭಾಷೆಯ ವ್ಯತ್ಯಾಸದ ವಿನಾ ಉಳಿದಂತೆ ಒಂದೇ ರೀತಿಯು ದಾಗಿದೆ.

ತನ್ನ ಕಡೆ ಯಳಹಾಕುವದು. ಯೀ ರೀತಿ ಕಲೆ ಯಿಟ್ಟವರನ್ನೆಲ್ಲಾ ಕೊಲ್ಲುತಾ ನೂರಾರು ಮಂದಿಯನ್ನು ರಾಶಿ ಹಾಕಿದಳು. ಯೀ ಕಡೆ ಶತೃಪಕ್ಷದವರಿಗೆ ಅನುಮಾನ ತೋರಿ ವಳಗೆ ಹೊಕ್ಕವರೆಲ್ಲ ವಬ್ಬರೂ ಹಿಂದಿರುಗಲಿಲ್ಲ. ವಳಗಿನ ಮರ್ಮ ತಿಳಿಯದಂತಾಯ್ತು. ಯಿದು ಯೇನೋ ಮೋಸವಿರುತ್ತೆಂತ ಸೂಕ್ಷ್ಮಯಿಂದ ವಳಗಿನ ಕೃತ್ಯವನ್ನರಿತು ಪಲಾಯನವಾಗುವಷ್ಟಕ್ಕೆ ಯೀಕೆ ಗಂಡನು ವೂಟ ಮಾಡಿ ತನ್ನ ಸ್ತ್ರೀಯಳಿಗೆ ಬಾಗಿಲು ಭದ್ರ ಹಾಕು. ಶತೃಗಳು ಬರುವ ರಾಗಿದ್ದಾರೆಂತ ಹೇಳಿದ್ದಕ್ಕೆ ಪ್ರತಿ ಜವಾಬು ಯಿಲ್ಲದ್ದನ್ನು ಕಂಡು ಹೊರಗೆಲ್ಲಾ ಹುಡುಕಿ ಯೀ ನಿಶಿಯಲ್ಲಿ ಯಲ್ಲಿಗೆ ಹೋದಳೋ ಯಿದರ ನಿಜಸ್ಥಿತಿ ನಾಳೆ ತಿಳಕೊಂಡರೆ ಬಂದೀತು. ಯಿದು ಸಮಯವಲ್ಲ. ಪಹರೆಗೆ ಹೋಗ ಬೇಕಂತ ಜಾಗ್ರತೆಯಲ್ಲಿ ದಿಡ್ಡಿಬಾಗಿಲ ಬಳಿ ಬರುತ್ತಾ ಹೆಣದ ರಾಶಿಗಳನ್ನು ಮುಸಲದ ಶಬ್ದವನ್ನು ಕೇಳಿ ಗಾಬರಿಯಾಗಿ ತನ್ನ ಭಾರ್ಯಳು ಯಿರುವ ಸ್ಥಿತಿಯನ್ನು ನೋಡಿ ಭಯಪಟ್ಟು ಗದ್ದಲ ಮಾಡಲಾಗಿ ಶತೃಗಳೆಲ್ಲಾ ವೋಡಿಹೋದರು. ನಂತರ ನಡದ ವರ್ತಮಾನ ಗಂಡನಿಗೆ ಹೇಳಿ ತನ್ನ ತಪ್ಪು ಕ್ಷಮಿಸೆಂದು ಬೇಡಿ ಕೊಳ್ಳಲಾಗಿ ಪರಮಾನಂದದಿಂದ ಅದೇ ಸ್ಥಿತಿಯಿಂದಲೇ ಗಂಡ ಹೆಂಡಿರು ಧೊರೆಯ ಬಳಿಗೆ ಹೋಗಿ ನಡದ ಸಮಾಚಾರ ಅರಿಕೆ ಮಾಡಿಕೊಳ್ಳಲಾಗಿ ರಾಜನು ಸ್ತ್ರೀಯಳ ಸಾಹಸಕ್ಕೆ ಆನಂದಭರಿತನಾಗಿ ವಸ್ತ್ರಾದ್ಯಾಭರಣಗಳು ತರಿಸಿ ಮುಂದಿಡಲು ಯಿವುಗಳು ಅಶಾಶ್ವಿತವಾದವು. ನನ್ನ ಹೆಸರಿನ ಮೇಲೆ ಆ ಸ್ಥಲದಲ್ಲಿ ದೊಡ್ಡದಾಗಿ ಬಾಗಿಲು ಕಟ್ಟಿಸಿ ವರ್ಷಕ್ಕೊಮ್ಮೆ ತನ್ನವರಿಂದ ಪೂಜೆ ಮಾಡಿಸುತ್ತಾ ಬರಬೇಕೆಂತ ಪ್ರಾರ್ಥಿಸಲಾಗಿ ಅರಸು ಸಂತೋಷಪಟ್ಟು ಬಾಗಿಲುಕೋಟೆ ಸಹ ಕಟ್ಟಿಸಿ ವನಿಕೆಗಂಡಿ ಬಾಗಲೆಂತ ಹೆಸರಿಡಿಸಿ ಅಲ್ಲಿ ಆ ಸ್ತ್ರೀಯಳ ರೂಪು ಕೆತ್ತಿಸಿ ಗಂಡ ಹೆಂಡರಿಗೆ ಯಿನಾಮು ಕಿಲ್ಲತ್ತು ಕೊಡಿಸಿದನು."

೨. ಚಿತ್ರದುರ್ಗದ ಕಡೆಯ ಅರಸ ರಾಜಾವೀರ ಮದಕರಿನಾಯಕನ ಸಹೋದರ ಸಂಬಂಧಿ ದೊಡ್ಡ ಮದಕರಿನಾಯಕನ ಖಾಸಾ ವಂಶಸ್ಥರೂ ಚಿತ್ರದುರ್ಗ ತಾಲ್ಲೂಕು ಭರಮಸಾಗರದ 'ಅಂಬಾವಿಲಾಸ'ದ ನಿವಾಸಿಯೂ ಆಗಿದ್ದ ಬಿಚ್ಚುಗತ್ತಿ ದೊಡ್ಡ ಮದಕರಿ ನಾಯಕ(ಬಿ.ಡಿ. ಮದಕರಿನಾಯಕ)ಅವರು, ಚಿತ್ರದುರ್ಗದ ಚಲವಾದಿ ಮತಸ್ಥರಿಗೆ ತಮ್ಮ ಸ್ವಹಸ್ತದಿಂದ ಬರೆದುಕೊಟ್ಟ ರಹದಾರಿ ಪತ್ರದಲ್ಲಿ,[4] ಈ ಮೇಲೆ ಪ್ರಸ್ತಾಪಿಸಿದ ದಾಖಲೆಯಲ್ಲಿಯ ಅಂಶಗಳನ್ನೇ ಪ್ರಸ್ತಾಪಿಸಿರುವರು. ಇವರ ರಹದಾರಿ ಪತ್ರವು, ಶತ್ರುಗಳ ವಿರುದ್ಧ ತನ್ನ ಸಾಹಸ ತೋರಿದ ನಂತರ ಓಬವ್ವೆಯು ಅರಸನಿಂದ ಪುರಸ್ಕೃತಳಾದುದನ್ನೂ ಕಳ್ಳಗಂಡಿಯ ರಕ್ಷಣೆಗೆಂದು ಅದನ್ನು ಆವರಿಸಿದಂತೆ ಒಂದು ಪ್ರಾಕಾರವನ್ನು ನಿರ್ಮಿಸಲು ಈಕೆಯು ಅರಸನಲ್ಲಿ ಕೇಳಿಕೊಂಡುದನ್ನೂ ಅರಸನು ಸಂತೋಷದಿಂದ ಅದನ್ನು ನೆರವೇರಿಸಿದುದನ್ನೂ ಓಬವ್ವೆಯ ಮರಣಾನಂತರ ಈಕೆಯ ಜಲಧಿ ಉತ್ಸವ ನಡೆಯಲು ಅಪ್ಪಣೆಯಿತ್ತುದನ್ನೂ ಅರುಹುತ್ತದೆ.

ಬಿ.ಡಿ. ಮದಕರಿನಾಯಕರ ಪುತ್ರರೂ 'ಚಿತ್ರದುರ್ಗ ಸೀಮೆಯ ವಾಲ್ಮೀಕಿ ಮತ ಆಚಾರ ವಿಚಾರಕ್ಕೆ ಮೊಕ್ತೇಸರರೂ' ಆಗಿದ್ದ ರಾಜಾ ಜಿ.ಎಸ್. ಪಾಳೇಗಾರ್ ಪರಶುರಾಮನಾಯ್ಕರು ತಾವು ಈ ವಂಶಸ್ಥರಿಗೆ ನೀಡಿದ ರಹದಾರಿ ಲೇಖನದಲ್ಲಿ[5] ಓಬವ್ವೆಯ ಘಟನೆ ಕುರಿತು ಉಲ್ಲೇಖಿಸಿರುವುದು ಹೀಗೆ : "ರಾಜ್ಯಭಾರದಲ್ಲಿ ರಾಜ ಬಿಚ್ಚುಕತ್ತಿ ಮದಕರಿನಾಯ್ಕರವರ ಕಾಲದಲ್ಲಿ ನಿಮ್ಮ ವಂಶದ ಮದಲೆ ಹನುಮಯ್ಯನ ಹೆಂಡತಿ ಓಬವ್ವೆಯು

---

4 ಈ ರಹದಾರಿ ಪತ್ರವನ್ನು ೧೯೭೩ರಲ್ಲಿ ನನ್ನ ಪರಾಮರ್ಶೆಗೆ ನೀಡಿ ಸಹಕರಿಸಿದವರು ಚಿತ್ರದುರ್ಗದ ಏಕಾಂತಪ್ಪ (ಏಕಣ್ಣ) ಮತ್ತು ಈಚೆಗೆ ದಿವಂಗತರಾದ ನನ್ನ ಗೆಳೆಯ ಎಸ್.ಎನ್. ರುದ್ರೇಶ್ ಪೂಜಾರ್ ಅವರುಗಳು.

5 "ಚಿತ್ರದುರ್ಗ ಸಂಸ್ಥಾನದ ಆಶ್ರಿತರಾದ ವನಕೆಕಂಡಿ ಓಬವ್ವೆಯ ವಂಶೀಕರಾದ ಹಾಲಿ ಚಿತ್ರದುರ್ಗ ತಾಲ್ಕು ದೊಡ್ಡ ಸಿದ್ದವನಹಳ್ಳಿಯಲ್ಲಿ ವಾಸವಾಗಿರುವ ಚಲುವಾದಿ ಮತದ ಶ್ರೀ ಬಿ.ಸಿ. ಶ್ರೀಕಂಠಯ್ಯ, ಶ್ರೀ ಎ.ಡಿ. ನರಸಿಂಹಯ್ಯ, ಶ್ರೀ ಎ.ಡಿ. ರಾಮಯ್ಯ, ಶ್ರೀ ಸಿ. ತಿಪ್ಪೇರುದ್ರಯ್ಯ ಮೊದಲಾದವರಿಗೆ ಬರೆಸಿ ಕಳುಹಿಸಿದ ರಹದಾರಿ"—ಚಿತ್ರದುರ್ಗ ಟವನ್ ಹೊರಪೇಟೆ 'ದುರ್ಗದ ಅರಮನೆ', ತಾ। ೨೧-೫-೧೯೫೪ (R.T.NO. 675-IR-15.2-54).
ಈ ಪತ್ರದ ನಕಲನ್ನು ನನಗೆ ನೀಡಿ ಸಹಕರಿಸಿದವರು ಚಿತ್ರದುರ್ಗದ ಎ.ಡಿ. ನರಸಿಂಹಯ್ಯ ಅವರು (ಈಗ ದಿವಂಗತರು).

ಶತ್ರುಗಳು ದುರ್ಗದ ಕೋಟೆಯೊಳಗೆ ಪ್ರವೇಶಿಸಲು ಅವಕಾಶ ಕೊಡದೆ ತನ್ನ 'ವನಕೆ' ಕಟ್ಟಿಗೆಯಿಂದ ಸಾವಿರಾರು ಶತ್ರುತಲೆಗಳನ್ನು ಸಂಹಾರ ಮಾಡಿ ಮೆಹನತ್ತು, ಧೈರ್ಯ, ಸಾಹಸಕೃತ್ಯಕ್ಕಾಗಿ ದುರ್ಗದ ಧೊರೆಗಳು ೧೬೮೮ರ ವ್ಯಯ ಸಂವತ್ಸರ ಭಾದ್ರಪದ ಮಾಸದಲ್ಲಿ ಆಕೆಯ ಹೆಸರಿನಲ್ಲಿ ವನಕೆಕಂಡಿ ಬಾಗಿಲು ಸುತ್ತಿನ ಕೋಟೆ ಕಟ್ಟಿಸಿ, ಆಕೆ ಪ್ರತಿಮೆಯನ್ನು ಆ ಕೋಟೆ ಕಲ್ಲಿನಲ್ಲಿ ಕೆತ್ತಿಸಿದ್ದರಿಂದ ಅದೇ ಸಂವತ್ಸರ ಭಾದ್ರಪದ ಬಹುಳ ಪಂಚಮಿ ದಿವಸ ಚಿತ್ರದುರ್ಗದ ಕಟ್ಟಿಮನೆ ಯಜಮಾನ ದೊಡ್ಡ ಹನುಮಪ್ಪನ ಮಗ ಏಕನಾಥಪ್ಪ–ವಗೈರೆ ಅಣ್ಣ ತಮ್ಮಂದಿರು ಮೊದಲಾದವರು ಶ್ರೀ ಕುದರೆ ನರಸಿಂಹಸ್ವಾಮಿದೇವರು ಶ್ರೀ ಲಕ್ಷ್ಮೀದೇವರು ಶ್ರೀ ವನಕೆಕಂಡಿ ಓಬವ್ವೆ–ಇವರುಗಳ ಜಲದಿ ಉತ್ಸವ ವಗೈರೆ ಮಾಡಿರುವಂತೆ ಈ ಸಂಸ್ಥಾನದಲ್ಲಿರುವ ದಾಖಲೆಗಳಿಂದ ಕಂಡುಬರುತ್ತೆ."

೩. ಓಬವ್ವೆಯ ವಂಶಜರಾದ ಪ್ರೊ॥ ಎ.ಡಿ. ಕೃಷ್ಣಯ್ಯ ಅವರು ಸಂಪಾದಿಸಿ ಪ್ರಕಟಿಸಿದ 'ಭಾರತದ ಧೀರಮಹಿಳೆ ಚಿತ್ರದುರ್ಗದ ಒನಕೆ ಓಬವ್ವ' ಎಂಬ ಪುಸ್ತಿಕೆಯಲ್ಲಿ,[6] ಮೇಲೆ ಪ್ರಸ್ತಾಪಿಸಿದ ಚಿತ್ರದುರ್ಗ ನಾಯಕ ಅರಸರ ಸಂಬಂಧಿಗಳು ನೀಡಿರುವ ನಿರೂಪ ಮತ್ತು ಇತರ ಕಾಗದ-ಪತ್ರಗಳು ವ್ಯಾಪಕವಾಗಿ ಬಳಸಿಕೊಳ್ಳಲ್ಪಟ್ಟಿರುವುದನ್ನೂ ಓಬವ್ವೆಯ ಸಾಹಸ ಕೃತ್ಯ ಕುರಿತ ಜನಪ್ರಿಯ ಸಂಗತಿಗಳೇ ವಿವರವಾಗಿ ನಿರೂಪಿಸಲ್ಪಟ್ಟಿರುವುದನ್ನೂ ಕಾಣಬಹುದು.

ಈ ಪುಸ್ತಿಕೆಯಲ್ಲಿಯ ಓಬವ್ವೆಯ ಘಟನೆಯನ್ನು ಕುರಿತ ಪ್ರಮುಖ ಸಂಗತಿಗಳನ್ನು ಈ ಮುಂದಿನಂತೆ ಸಂಗ್ರಹಿಸಿದೆ : ಕ್ರಿ.ಶ. ೧೩೫೮ ರಲ್ಲಿ ಚಿತ್ರದುರ್ಗ ಸಂಸ್ಥಾನವನ್ನು ಸ್ಥಾಪಿಸಿದ ಪೂಲಿಪುರುಷ ಚಿತ್ರನಾಯಕ ತಿಮ್ಮಣ್ಣನಾಯಕರನ್ನು ಹಿಂಬಾಲಿಸಿಕೊಂಡು ರಾಜ ಪರಿವಾರದ ಸೇವಕರಾಗಿ ಓಬವ್ವಳ ವಂಶಸ್ಥರಾದ ಬಾಲಪ್ಪ ಮತ್ತು ರಂಗಪ್ಪ ಎಂಬ ಸಹೋದರರು ತಮ್ಮ ಕುಲದೈವಗಳ ಸಹಿತ ಬಂದವರೆಂದೂ ಇವರು ಮೊದಲಿಗೆ ರಾಮದುರ್ಗದಲ್ಲಿದ್ದವರೆಂದೂ ಪ್ರತೀತಿ ಇದೆ (ಪು. ೫).

ಓಬವ್ವೆಯು ಗುಡಿಕೋಟೆ ಸಂಸ್ಥಾನದಲ್ಲಿ ದೊರೆಗಳಿಗೆ ಅಚ್ಚುಮೆಚ್ಚಿನ ಆಪ್ತ ಸೇವಕನೂ ಕಹಳೆಯವನೂ ಆಗಿದ್ದ ಛಲವಾದಿ ಚಿನ್ನಪ್ಪನ ಮಗಳು ; ಕದುರಪ್ಪ ಮತ್ತು ತಿಮ್ಮಣ್ಣ ಎಂಬವರು ಈಕೆಯ ಸಹೋದರರು (ಪು. ೫-೬). ಓಬವ್ವಳನ್ನು ಚಿತ್ರದುರ್ಗದ ನಾಯಕರ ಬಳಿ ಕಹಳೆಯವನಾಗಿ ಸೇವೆ ಸಲ್ಲಿಸುತ್ತಿದ್ದ ಕಹಳೆ ದೊಡ್ಡ ಹನುಮಪ್ಪನ ಮಗ ಮದ್ದಹನುಮಪ್ಪನಿಗೆ ತಂದು ಕೊಂಡು ಶಕ ೧೬೮೩ ವೃಷ ಸಂವತ್ಸರ ವೈಶಾಖ ಶುದ್ಧ ಪಂಚಮಿಯಂದು ಇವರೀರ್ವರ ವಿವಾಹಕಾರ್ಯವನ್ನು ಚಿತ್ರದುರ್ಗದಲ್ಲಿ ಜರುಗಿಸಲಾಯಿತು (ಪು. ೭). ಆ ನಂತರ ಮದ್ದಹನುಮಪ್ಪನು ತನ್ನ ತಂದೆಯ ಸ್ಥಾನದಲ್ಲಿ ಕಹಳೆಯವನಾಗಿ ನೇಮಕಗೊಂಡನು ಮತ್ತು ಚಿತ್ರದುರ್ಗ ಕೋಟೆಯಲ್ಲಿಯ ಕಹಳೆ ಬತೇರಿಯ ಕಾವಲಿನ ಕೆಲಸವನ್ನು ನಿರ್ವಹಿಸತೊಡಗಿದನು (ಪು. ೯).

ಚಿತ್ರದುರ್ಗ ಕೋಟೆಯನ್ನು ಆಕ್ರಮಿಸಲು ಬಂದ ಹೈದರ್‌ಅಲಿಯು ತಿಂಗಳುಗಳು ಕಳೆದರೂ ಕೋಟೆಯನ್ನು ವಶಪಡಿಸಿಕೊಳ್ಳುವಲ್ಲಿ ವಿಫಲನಾದನು. ಕುಟಿಲ ಮಾರ್ಗವನ್ನು ಅನುಸರಿಸಿ ಕಳ್ಳಮಾರ್ಗದಿಂದ ಕೋಟೆಯನ್ನು ಭೇದಿಸಬೇಕೆಂದು ನಿರ್ಧರಿಸಿ ಗೂಢಚಾರರನ್ನು ನೇಮಿಸಿದನು. ಉತ್ತರದಿಕ್ಕಿನ ಕೋಟೆಯ ಕಡೆ ಒಂದು ದಿನ ಒಬ್ಬ ಮೊಸರಿನವಳು ಇದ್ದಕ್ಕಿದ್ದಂತೆ ಯಾವುದೋ ಮಾರ್ಗದಿಂದ ಕೋಟೆಯೊಳಗೆ ನುಸುಳಿ ಹೋದುದನ್ನು ಅವರು ಗಮನಿಸಿದರು ಹಾಗೂ ಪರಿಶೀಲನೆಯ ತರುವಾಯ ಅಲ್ಲಿ ಇದ್ದ ಒಂದು ಸಣ್ಣ ದ್ವಾರವನ್ನು ಪತ್ತೆ ಹಚ್ಚಿದರು. ಹೈದರ್‌ಅಲಿಯು ತನ್ನ ಸಾಮಂತರಾದ ಹರಪನಹಳ್ಳಿ ಮತ್ತು ರಾಯದುರ್ಗದ ಪಾಳೆಯಗಾರರೊಡನೆ ಸಮಾಲೋಚಿಸಿ, ಅವರ ಸೈನಿಕರು ಕಳ್ಳಗಂಡಿಯ ಮೂಲಕ ಕೋಟೆಯ ಒಳಹೊಕ್ಕು ದಾಳಿ ಮಾಡುತ್ತಾ ಹೆಬ್ಬಾಗಿಲು ತೆರೆಯಬೇಕೆಂತಲೂ ತನ್ನ ಸೈನ್ಯವು ಕೋಟೆಯನ್ನು ಪ್ರವೇಶಿಸಬೇಕೆಂತಲೂ ನಿರ್ಧರಿಸಿದನು. ಈ ಕಳ್ಳಗಂಡಿ ಬಳಿಯ ಬತೇರಿಯ ಮೇಲೆ ಕಾವಲು ಕಾಯುತ್ತಿದ್ದ ಮದ್ದಹನುಮಪ್ಪನು

---

6 ಬೆಂಗಳೂರಿನ ಹೇಮಂತ ಪ್ರಕಾಶನದ ಪ್ರಕಟಣೆ, ೧೯೭೯, ಪುಟಗಳು ೫೫

ನಿಯಮದಂತೆ ಮಧ್ಯಾಹ್ನದ ನಂತರ ಊಟಕ್ಕೆಂದು ಮನೆಗೆ ಹಿಂದಿರುಗಿದಾಗ ಸೈನಿಕರು ಕೋಟೆಯನ್ನು ಪ್ರವೇಶಿಸಬೇಕೆಂದು ತೀರ್ಮಾನಿಸಿಕೊಂಡರು. ಅವರು ನಿರೀಕ್ಷಿಸಿದಂತೆಯೇ ನಡೆಯಿತು (ಪು. ೧೦-೧೩).

ಮದ್ದಹನುಮಪ್ಪನು ಮಧ್ಯಾಹ್ನ ಮನೆಗೆ ಬಂದಾಗ ಓಬವ್ವೆಯು ಆತನಿಗೆ ಊಟಕ್ಕೆ ಬಡಿಸಿದಳು. ಕುಡಿಯುವ ನೀರನ್ನು ಕೊಡಲು ಬಿಂದಿಗೆಯನ್ನು ನೋಡಿದಾಗ ಅದು ಆಕಸ್ಮಿಕವಾಗಿ ಬರಿದಾಗಿತ್ತು. ಅವಸರದಲ್ಲಿ ಈಕೆಯು ಗುಪ್ತದ್ವಾರಕ್ಕೆ ಕೆಲವೇ ಗಜಗಳ ಅಂತರದಲ್ಲಿದ್ದ ಸಿಹಿನೀರಿನ ಕೊಳಕ್ಕೆ ನೀರು ತುಂಬಿ ಕೊಳ್ಳಲು ಬಂದಳು. ಕಳ್ಳಗಂಡಿಯ ಕಡೆಯಿಂದ ಅಸ್ಪಷ್ಟ ಮಾತುಗಳೂ ಕತ್ತಿ-ಗುರಾಣಿಗಳ ಶಬ್ದವೂ ಈಕೆಗೆ ಕೇಳಿಬಂದವು. ಶತ್ರುಗಳ ಸುಳಿವು ಮತ್ತು ಉದ್ದೇಶಗಳು ಈಕೆಗೆ ತಿಳಿದುಹೋದವು. ಕೂಡಲೇ ಸಮಯವನ್ನು ವ್ಯರ್ಥಮಾಡದೆ ಮನೆಗೆ ಹಿಂದಿರುಗಿ ಕೈಗೆ ದೊರಕಿದ ಒನಕೆಯನ್ನು ಹಿಡಿದು ಕಳ್ಳಗಂಡಿಯ ಬಳಿಗೆ ಬಂದು ಶತ್ರುಗಳನ್ನು ಎದುರಿಸಲು ಸಿದ್ಧಳಾದಳು. ಕಳ್ಳಗಂಡಿಯಲ್ಲಿ ಒಬ್ಬೊಬ್ಬರಾಗಿ ತೂರಿ ಬಂದವರ ತಲೆಗೆ ಒನಕೆ ಪೆಟ್ಟು ಕೊಟ್ಟು ಕೊಂದು ಹಾಕ ತೊಡಗಿದಳು. ಹರಪನಹಳ್ಳಿಯವರ ನಾಲ್ಕು ಪಟಲು ದಂಡು ಮತ್ತು ರಾಯದುರ್ಗದವರ ಮೂರು ಪಟಲು ದಂಡು ಈಕೆಯಿಂದ ಹತವಾಯಿತು. ಈ ಘಟನೆಯು ಕ್ರಿ.ಶ. ೧೭೬೬ ಅಕ್ಟೋಬರ್ ತಿಂಗಳ ಮೊದಲನೆಯ ದಿವಸ ಬುಧವಾರದಂದು ಮಧ್ಯಾಹ್ನದ ಉರಿ ಬಿಸಿಲಲ್ಲಿ ಸಂಭವಿಸಿತು (ಪು. ೧೪-೧೮).

ಊಟ ಮುಗಿಸಿದ ಮದ್ದಹನುಮಪ್ಪನು ತನಗೆ ಕುಡಿಯಲು ನೀರು ತರಲು ಹೋದ ಓಬವ್ವೆಯನ್ನು ಕಾಣಲು ಕೊಳದ ಬಳಿಗೆ ಬಂದಾಗ ಅಲ್ಲಿಯ ಸನ್ನಿವೇಶವು ಅವನಲ್ಲಿ ಎಚ್ಚರ ಮೂಡಿಸಿತು. ತತ್‌ಕ್ಷಣವೇ ಕಹಳೆಯ ಬತೇರಿಯನ್ನೇರಿ ತನ್ನ ಕಹಳೆಯನ್ನು ಮೊಳಗಿಸಿದನು. ದುರ್ಗದ ಸೈನಿಕರು ಸ್ಥಳಕ್ಕೆ ಧಾವಿಸಿ ಬಂದು ಶತ್ರುಗಳನ್ನು ಹೊಡೆದೋಡಿಸಿದರು. ತನ್ನ ಸಾಹಸ ಕಾರ್ಯದಲ್ಲಿ ಸಫಲಳಾದ ಓಬವ್ವೆಯೂ ದೈಹಿಕ ಮತ್ತು ಮಾನಸಿಕ ಆಲಸ್ಯದಿಂದಾಗಿ ಮೂರ್ಛೆ ಹೋಗಲು ಸೈನಿಕರು ಈಕೆಯನ್ನು ಅರಮನೆಗೆ ಸಾಗಿಸಿ ಸೂಕ್ತ ಉಪಚಾರಕ್ಕೆ ಅಣಿ ಮಾಡಿದರು. ಅಂದಿನ ಯುದ್ಧದಲ್ಲಿ ವೀರ ಮದಕರಿನಾಯಕನಿಗೇ ಜಯ ದೊರೆಯಿತು. ಹತಾಶನಾದ ಹೈದರ್‌ಅಲಿಯು ನಾಯಕನೊಂದಿಗೆ ಒಪ್ಪಂದ ಮಾಡಿಕೊಂಡು ಪೊಗದಿಯನ್ನು ಪಡೆದು ಶ್ರೀರಂಗಪಟ್ಟಣಕ್ಕೆ ಹಿಂದಿರುಗಿದನು (ಪು. ೧೯-೨೦).

ಶತ್ರುಗಳ ಕುಟಿಲ ಆಕ್ರಮಣವನ್ನು ಸಮಯ ಸ್ಫೂರ್ತಿಯಿಂದ ತಪ್ಪಿಸಿದ ಓಬವ್ವೆಯ ಸಾಹಸವು ಅರಸನಿಂದ ಮೊದಲ್ಗೊಂಡು ಎಲ್ಲ ವರ್ಗದವರಿಂದಲೂ ಪ್ರಶಂಸಿಸಲ್ಪಟ್ಟಿತು. ಮದಕರಿನಾಯಕನು ಓಬವ್ವೆಯನ್ನೂ ಈಕೆಯ ಬಂಧುಗಳನ್ನೂ ರಾಜಸಭೆಗೆ ಆಹ್ವಾನಿಸಿ, ಈಕೆಯ ಧೈರ್ಯ-ಸಾಹಸಗಳನ್ನು ಹೊಗಳಿ ಈಕೆಯು ದುರ್ಗದ ರಕ್ಷಣೆಗಾಗಿ ಮಾಡಿದ ಸೇವೆಯನ್ನು ಪರಿಗಣಿಸಿ, ತನಗೆ ಬೇಕಾದುದನ್ನು ಬೇಡಬಹುದೆಂದು ಈಕೆಯನ್ನು ಕೇಳಿದನು. ತನಗೆ ಏನೂ ಬೇಡವೆಂದು ಬಿನ್ನವಿಸಿಕೊಂಡ ಓಬವ್ವೆಯು, ತನ್ನ ಮರಣಾನಂತರ ತಾನು ತನ್ನ ವಂಶದವರಿಗೆ ಕುಲದೇವತೆಯಾಗಿರುವೆನೆಂತಲೂ ತನ್ನ ವಾರ್ಷಿಕ ಉತ್ಸವಗಳಿಗೆ ದೊರೆಗಳು ಎಪ್ಪತ್ತೇಳು ಬಿರುದು ಬಹುಮಾನಗಳನ್ನು ಹಿಡಿಯಲು ಅನುಮತಿ ನೀಡಿ ಇಂತಹ ಉತ್ಸವಗಳಿಗೆ ಪ್ರತಿಯೊಬ್ಬ ಪುರ ಪ್ರಮುಖರು ಎತ್ತು ಪ್ರಜೆಗಳಿಂದ ಅವರ ಶಕ್ತ್ಯಾನುಸಾರ ಕಾಣಿಕೆಯನ್ನು ಕೊಡಿಸಬೇಕೆಂತಲೂ ಪ್ರತಿ ಶುಭಮುಹೂರ್ತಗಳಲ್ಲಿಯೂ ತನ್ನ ಹೆಸರಿನಿಂದ ತನ್ನ ವಂಶಜರಿಗೆ ಒಂದು ವೀಳೆಯವನ್ನು ಕೊಡಿಸಬೇಕೆಂತಲೂ ಅರಸನಲ್ಲಿ ಬೇಡಿಕೊಂಡಳು. ಅರಸನು ಈಕೆಯ ಪ್ರತಿಯೊಂದು ಬೇಡಿಕೆಯನ್ನೂ ಚಾಚೂ ತಪ್ಪದೆ ನಡೆಸಿ ಕೊಡುವುದಾಗಿ ತಾಮ್ರ ಮತ್ತು ಶಿಲಾಶಾಸನಗಳನ್ನು ಬರೆಯಿಸಿದನು. ಅಲ್ಲದೆ, ಸ್ವಯಂಪ್ರೇರಿತನಾಗಿ ಚಿತ್ರದುರ್ಗದ ಬರಿಗೆರೆಯ ಪಶ್ಚಿಮದಲ್ಲಿರುವ ಅಗಸನ ಕಲ್ಲು ಗ್ರಾಮವನ್ನು ಈಕೆಯ ವಂಶಜರಿಗೆ ಜಹಗೀರಿಯಾಗಿ ನೀಡಿ, ಅದನ್ನು ವಂಶಪಾರಂಪರ್ಯವಾಗಿ ಅನುಭವಿಸಿ ಕೊಂಡು ಬರುವಂತೆಯೂ ಶಾಸನ ಬರೆಯಿಸಿಕೊಟ್ಟನು. ಓಬವ್ವೆಯನ್ನು ಪೀತಾಂಬರಗಳಿಂದ ಅಲಂಕರಿಸಿ, ಈಕೆಯ ಮುಡಿಲಲ್ಲಿ ಮೂರು ಮೊರ ಹೊನ್ನುಗಳನ್ನು ಸುರಿದು ಸತ್ಕರಿಸಿ ಎಲ್ಲಾ ರಾಜಮರ್ಯಾದೆಗಳೊಡನೆ ಮೇಲುದುರ್ಗ ಮತ್ತು ಕೆಳದುರ್ಗಗಳ ಬೀದಿಗಳಲ್ಲೆಲ್ಲಾ ಮೆರವಣಿಗೆ

ಮಾಡಿಸಿದನು. ಇದಲ್ಲದೆ, ಈಕೆಯ ಶೌರ್ಯದ ನೆನಪಿಗಾಗಿ ಶಕವರ್ಷ ೧೬೯೯ನೇ ಹೇವಿಳಂಬಿ ಸಂವತ್ಸರದ ಭಾದ್ರಪದ ಮಾಸದಲ್ಲಿ ಚಿತ್ರದುರ್ಗದ ಕೋಟೆಗೆ ಮತ್ತೊಂದು ಸುತ್ತು ಕೋಟೆಯನ್ನು ಕಟ್ಟಿಸಿ ಅದರ ಒಂದು ಬಾಗಿಲಿಗೆ 'ಒನಕೆಕಿಂಡಿ ಬಾಗಿಲು' ಎಂದು ಹೆಸರಿಸಿದನು. ಓಬವ್ವೆಯ ಒಂದು ಪ್ರತಿಮೆಯನ್ನು ಕರಿಯಕಲ್ಲಿನಲ್ಲಿ ಕೆತ್ತಿಸಿ ಕಳ್ಳಗಂಡಿಯ ಹತ್ತಿರದಲ್ಲಿ ಪೂರ್ವಾಭಿಮುಖನಾಗಿರುವಂತೆ ಸ್ಥಾಪಿಸಿದನು (ಪು. ೨೧–೨೩).

ಓಬವ್ವೆಯು ಶಕ ೧೬೯೧ನೇ ವಿರೋಧಿನಾಮ ಸಂವತ್ಸರದ ಭಾದ್ರಪದ ಮಾಸದಲ್ಲಿ (ಕ್ರಿ.ಶ. ೧೭೬೯ರ ಸೆಪ್ಟೆಂಬರ್‌ನಲ್ಲಿ) ದೈವಾಧೀನಳಾದಳು. ಈಕೆಯ ಪಾರ್ಥಿವ ಶರೀರವನ್ನು ರಾಜಮರ್ಯಾದೆಯೊಡನೆ ಪೇಟೆಗಳಲ್ಲಿ ಮೆರವಣಿಗೆಯಲ್ಲಿ ಕೊಂಡೊಯ್ದು ಬೆಟ್ಟದ ಮೇಲೆ ತಣ್ಣೀರು ಚಿಲುಮೆಯ ಪೂರ್ವಕ್ಕೆ ಈಕೆಯ ಸಮಾಧಿಯನ್ನು ಮಾಡಿಸಲಾಯಿತು. ಆ ನಂತರ ಈ ಸಮಾಧಿಯ ಮೇಲೆ ಒಂದು ಚಿಕ್ಕ ಕಲ್ಲುಮಂಟಪವನ್ನು ನಿರ್ಮಿಸಲಾಯಿತು (ಪು. ೨೪-೨೫).

ಕ್ರಿಸ್ತಶಕ ೧೭೭೯ರಲ್ಲಿ ಚಿತ್ರದುರ್ಗವು ಹೈದರ್‌ಅಲಿಯ ವಶವಾದ ತರುವಾಯ ಓಬವ್ವೆಯ ಏಕಮಾತ್ರ ಪುತ್ರನಾದ ಆನೆಪ್ಪ(ಹುಚ್ಚಪ್ಪ)ನೊಂದಿಗೆ ಉಳಿದ ಕಹಳೆಯವರು ಚಿತ್ರದುರ್ಗಕ್ಕೆ ಐದು ಮೈಲಿ ದೂರವಿರುವ ದೊಡ್ಡಸಿದ್ದವ್ವನಹಳ್ಳಿಗೆ ಹೋಗಿ ನೆಲಸಿದರು. ಇನ್ನುಳಿದ ಹಲವರು ಚಿತ್ರದುರ್ಗ ಮತ್ತು ಸುತ್ತಮುತ್ತಲಿನ ಪಿಳ್ಳೇಕೆರೇನಹಳ್ಳಿ, ತಮಟಕಲ್ಲು, ಕಸವನಹಳ್ಳಿ, ಅತ್ತಿಗೆರೆ, ಸಜ್ಜನಕೆರೆ, ಸೊಂಡೇಕೆರೆ, ಸಾಣೇಕೆರೆ, ದುಮ್ಮಿ, ಇತ್ಯಾದಿ ಸ್ಥಳಗಳಲ್ಲಿ ನೆಲಸಿದರು. ಈ ವಂಶಜರಿಗೆ ನ್ಯಾಯವಾಗಿ ಲಭ್ಯವಾಗಬೇಕಾಗಿದ್ದ ಅಗಸನಕಲ್ಲು ಗ್ರಾಮದ ಜಹಗೀರಿಯು ಹಲವು ಸ್ವಾರ್ಥಿಗಳ ಕುತಂತ್ರದ ದೆಸೆಯಿಂದಾಗಿ ತಪ್ಪಿಹೋಯಿತು (ಪು. ೨೮-೩೧).

೪. ಎ.ಡಿ. ನರಸಿಂಹಯ್ಯ ಅವರು ಒದಗಿಸಿದ ಮಾಹಿತಿಯ ಪ್ರಕಾರ, ಚಿತ್ರದುರ್ಗ ಕೋಟೆಯಲ್ಲಿ ಓಬವ್ವೆಯ ಘಟನೆಯು 'ಫಿರಂಗಿ ಯುದ್ಧ'ದಂದು ನಡೆಯಿತು. ಈ ಘಟನೆಯಲ್ಲಿ ಈಕೆಯು ಮಡಿಯಲಿಲ್ಲ. ಚಿತ್ರದುರ್ಗದ ಪತನದ ತರುವಾಯ, ಶಕ ೧೭೦೧ ಫಾಲ್ಗುಣ ಮಾಸದಲ್ಲಿ ಅಂದರೆ ಕ್ರಿ.ಶ. ೧೭೭೯ರಲ್ಲಿ, ಓಬವ್ವೆಯ ಪತಿ ಮದ್ದಹನುಮಪ್ಪನು ತನ್ನ ಮಗ ಆನೆಪ್ಪನ ಸಹಿತ ದೊಡ್ಡಸಿದ್ದವ್ವನಹಳ್ಳಿಗೆ ತೆರಳುವಾಗ ತನ್ನ ಸಂಗಡ ಈ ಮುಂದಿನ ವಸ್ತುಗಳನ್ನು ತೆಗೆದುಕೊಂಡು ಹೋದನು : ೪,೦೦೦ ವರಹ, ೧೨,೦೦೦ ಬೆಳ್ಳಿಯ ಪುಲಿಸೆ ರೂಪಾಯಿ, ೩೦,೦೦೦ ಹೊನ್ನು, ಚಿನ್ನ ಮತ್ತು ಬೆಳ್ಳಿಯ ಒಡವೆಗಳು, ೨ ಕಂಚಿನ ಕಹಳೆಗಳು, ೧ ಉಕ್ಕಿನ ಯುದ್ಧಕವಚ, ೧೬ ಸುರಾಯಿ ಕತ್ತಿಗಳು ಮತ್ತು ೨ ಗುರಾಣಿಗಳು. ಆನೆಪ್ಪನು ತನ್ನ ಸೋದರಮಾವ ಈಟಿ ಕದರಪ್ಪನ ಮಗ ನರಸಿಂಹಪ್ಪನ ಮಗಳು ಲಕ್ಷ್ಮೀದೇವಿಯನ್ನು ನಿಡುಗಲ್ಲಿನಲ್ಲಿ ಮದುವೆಯಾದನು. ಈತನ ನಾಲ್ಕು ಗಂಡುಮಕ್ಕಳ ಹೆಸರುಗಳೆಂದರೆ, ದೊಡ್ಡಹನುಮಪ್ಪ, ಬಾಲಪ್ಪ, ಏಕನಾಥಪ್ಪ ಮತ್ತು ಚಿಕ್ಕಹನುಮಪ್ಪ. ಇವರ ಪೀಳಿಗೆಯವರು ಚಿತ್ರದುರ್ಗ ತಾಲ್ಲೂಕು ದೊಡ್ಡಸಿದ್ದವ್ವನಹಳ್ಳಿ, ಆಂಧ್ರದ ಹಿಂದೂಪುರ, ಅನಂತಪುರ, ಮಡಕಸಿರಾ ತಾಲ್ಲೂಕು ಗುಡಿಬಂಡೆ ಮತ್ತು ಮಂದಲಹಳ್ಳಿಗಳಲ್ಲೂ ಓಬವ್ವೆಯ ಗೋತ್ರ-ಕುಲದವರು ಚಳ್ಳಕೆರೆ ತಾಲ್ಲೂಕು ಪರಶುರಾಂಪುರದ ಅಗ್ರಹಾರದಲ್ಲಿಯೂ ನೆಲಸಿರುವರು. (ವಿವರವಾದ ವಂಶವೃಕ್ಷಕ್ಕೆ ಅನುಬಂಧ ನೋಡಿ).

ಚಿತ್ರದುರ್ಗ ಬೆಟ್ಟದ ಮೇಲೆ ಅಕ್ಕ-ತಂಗಿ ಹೊಂಡದ ಉತ್ತರಕ್ಕೆ ಎತ್ತರದ ಸ್ಥಳದಲ್ಲಿರುವ ಈಗಿನ ತುಂಗಭದ್ರೇಶ್ವರ ದೇವಾಲಯವು ಹಿಂದೆ ನಾಯಕ ಅರಸರ ಕಾಲದಲ್ಲಿ ಲಕ್ಷ್ಮೀನರಸಿಂಹಸ್ವಾಮಿಯ ನೆಲೆಯಾಗಿದ್ದು, ಇಲ್ಲಿ ಆ ದೇವರ 'ಕೇಲು' ಇದ್ದಿತು.[7]

7 ಎ.ಡಿ. ನರಸಿಂಹಯ್ಯ ಅವರಿಂದ ತಿಳಿದುಬಂದ ಸಂಗತಿಯೆಂದರೆ, ಈ ಶತಮಾನದ ಮೂರನೆಯ ದಶಕದ ಸುಮಾರಿನಲ್ಲಿ ಸ್ವಾಮಿಯೊಬ್ಬರು ಹಾಳುಬಿದ್ದಿದ್ದ ಈ ಗುಡಿಯಲ್ಲಿ 'ತುಂಗಭದ್ರೇಶ್ವರ ಲಿಂಗ'ವನ್ನು ಪ್ರತಿಷ್ಠಾಪಿಸಿದರು ; ಅವರು ಲಿಂಗೈಕ್ಯರಾದ ತರುವಾಯ ಅವರ ಸಮಾಧಿಯನ್ನು ಈ ದೇವಾಲಯದ ಎದುರಿಗೇ ಮಾಡಲಾಯಿತು. ಇಲ್ಲಿ ಈಗಲೂ ಸಣ್ಣ ಕಟ್ಟೆಯೊಂದನ್ನು ಕಾಣಬಹುದು.

ಚಿತ್ರದುರ್ಗ ಸಂಸ್ಥಾನದ ಪತನಾನಂತರ, ಕ್ರಿ.ಶ. ೧೮೦೩ರಲ್ಲಿ, ಓಬವ್ವೆಯು ಮೊಮ್ಮಕ್ಕಳಲ್ಲಿ ಹಿರಿಯವನಾದ ದೊಡ್ಡಹನುಮಪ್ಪನು ಈ ದೇವರ ಪೆಟ್ಟಿಗೆಯನ್ನೂ ದೇವಾಲಯದ ಎದುರಿಗೆ ನಿಲ್ಲಿಸಲಾಗಿದ್ದ ಕಂಬ(ಕಂಬದ ದೇವರು-ಕಂಬದ ನರಸಿಂಹಸ್ವಾಮಿ)ವನ್ನೂ ತೆಗೆದು ಕೊಂಡು ಹೋಗಿ ಚಳ್ಳಕೆರೆ ತಾಲ್ಲೂಕು ಬೆಳಗೆರೆಯಲ್ಲಿ ಸ್ಥಾಪಿಸಿದನು.[8] ತುಂಗಭದ್ರೇಶ್ವರ ದೇವಾಲಯದ ಎಡಬದಿಯ ಬೃಹತ್ ಬಂಡೆಗಳ ಅಡಿಯಲ್ಲಿರುವ ನಿಸರ್ಗದತ್ತ ಗುಹೆಯಲ್ಲಿ ನಿರ್ಮಿಸಿರುವ ಕಟ್ಟೆಯನ್ನು ಹಿಂದೆ 'ಯಜಮಾನನ ಕಟ್ಟೆ' ಹಾಗೂ 'ಪಂಚಾಯಿತಿ ಕಟ್ಟೆ'ಯೆಂದು ಕರೆಯುತ್ತಿದ್ದರು. 'ಉಗ್ರಾಣದ ಕಟ್ಟೆ' ಯೆಂತಲೂ ಕರೆದಿರುವ ಸಾಧ್ಯತೆಯಿದೆ. ಇಲ್ಲಿ ಚಲವಾದಿ ಮತಾಚಾರಕ್ಕೆ ಸಂಬಂಧಿಸಿದಂತೆ ಚರ್ಚಿಸಿ ತೀರ್ಮಾನ ಗಳನ್ನು ಕೈಗೊಳ್ಳಲಾಗುತ್ತಿದ್ದಿತು.

೩

ಈ ಮೇಲೆ ಪ್ರಸ್ತಾಪಿಸಲ್ಪಟ್ಟಿರುವ ಸಂಗತಿಗಳ ಹಿನ್ನೆಲೆಯಲ್ಲಿ ಓಬವ್ವೆಯ ಘಟನೆಯನ್ನು ಕುರಿತ ಕೆಲವಂಶಗಳನ್ನು ಇಲ್ಲಿ ವಿವೇಚಿಸಬಹುದಾಗಿದೆ:

೧. ಓಬವ್ವೆಯ ಚಾರಿತ್ರಿಕತೆಯನ್ನು ಸಮರ್ಥಿಸಲು ಚಿತ್ರದುರ್ಗ ನಾಯಕ ಅರಸರಿಗೆ ಸಂಬಂಧಿಸಿದ ದಾಖಲೆಗಳಲ್ಲಿ ಒಂದಾದ ಹಾಗೂ ಭಿನ್ನ ಸಂಪ್ರದಾಯದ ದಾಖಲೆಯಲ್ಲಿ (ಇದನ್ನು 'ಕೈಫಿಯತ್' ಎಂದು ಸಂಬೋಧಿಸಿದೆ) ಮಾತ್ರ ಪ್ರಸ್ತಾಪಿಸಲಾಗಿದೆ. ಇತರ ದಾಖಲೆಗಳಲ್ಲಿ ಓಬವ್ವೆಯ ಘಟನೆಯಾಗಲೀ ಈಕೆಯ ಮತ್ತು ಈಕೆಗೆ ಸಂಬಂಧಿಸಿದವರ ಹೆಸರು ಗಳಾಗಲೀ ಕಂಡುಬರುವುದಿಲ್ಲ. ಪ್ರಸ್ತುತ 'ಕೈಫಿಯತ್' ನಲ್ಲಿಯಾದರೂ ಓಬವ್ವೆಯ ಹೆಸರನ್ನು ನೇರವಾಗಿ ಪ್ರಸ್ತಾಪಿಸದೆ ದಿಡ್ಡಿಬಾಗಿಲ ಪಹರೆಗೆ ನೇಮಿಸಿದ ಹೊಲೆಯರವನ ಹೆಂಡತಿ ಎಂದಷ್ಟೆ ಗುರುತಿಸಲಾಗಿದೆ. ನಾಯಕ ಅರಸರ ವಂಶೀಕರು ಓಬವ್ವೆಯ ವಂಶಜರಿಗೆ ನೀಡಿರುವ ರಹದಾರಿ ಪತ್ರಗಳಲ್ಲಿ ಈಕೆಯನ್ನು 'ವನಕೆಕಿಂಡಿ ಓಬವ್ವ'ಳೆಂದು ನೇರವಾಗಿಯೇ ಹೆಸರಿಸಿರುವರು. ಈ ವ್ಯತ್ಯಾಸ ಗಮನಾರ್ಹ.

'ವನಕೆಕಿಂಡಿ ಬಾಗಿಲು' ('ಓಬವ್ವನಕಿಂಡಿ ಬಾಗಿಲು' ಅಲ್ಲ) ನಿರ್ಮಾಣದ ಪ್ರಸ್ತಾಪವು ಈ ಎಲ್ಲ ಬರವಣಿಗೆಗಳಲ್ಲೂ ಒಂದೇ ತೆರನಾಗಿದೆ.

೨. 'ಕೈಫಿಯತ್' ಹೇಳುವಂತೆ, ದುರ್ಗ ವನ್ನಾಕ್ರಮಿಸಲು ಬಂದ ಶತ್ರುಗಳು ಪಶ್ಚಿಮದ ಕಡೆ ಮೊಕ್ಕಾಂ ಮಾಡಿದ್ದರಲ್ಲದೆ, ಸರಿಹೊತ್ತಿನಲ್ಲಿ (ಮಧ್ಯ ರಾತ್ರಿಯಲ್ಲಿ) ಹುಚ್ಚಂಗಮ್ಮನ ಹೊಂಡ (ಈಗಿನ ಸಿಹಿನೀರುಹೊಂಡ)ದ ಓಣಿ ಹಿಡಿದು ದಿಡ್ಡಿಯಲ್ಲಿ ಒಬ್ಬೊಬ್ಬರಾಗಿ ನುಸುಳಲು ಪ್ರಯತ್ನಿಸಿದರು. ಪ್ರೊ|| ಕೃಷ್ಣಯ್ಯ ಅವರೂ ಪ್ರಸ್ತಾಪಿಸಿರುವಂತೆ, ಉತ್ತರ ದಿಕ್ಕಿನ ಕೋಟೆಯಲ್ಲಿಯ ಕಳ್ಳಗಂಡಿಯಲ್ಲಿ ಮೊಸರಿನವಳು ನುಸುಳಿ ಕೋಟೆಯನ್ನು ಪ್ರವೇಶಿಸಿದಳು ಮತ್ತು ಶತ್ರುಗಳ ಪರವಾದ ಗೂಢಚಾರರು ಆ ಎಡೆಯನ್ನು ಪರಿಶೀಲಿಸಿದಾಗ ಅವರಿಗೆ ಸಣ್ಣ ದ್ವಾರವೊಂದು ಕಂಡು ಬಂದಿತು. ಈ ಎರಡು ಉಲ್ಲೇಖಗಳೂ ಕಳ್ಳಗಂಡಿ ಯೆಂದು ಸಂಬೋಧಿಸಲ್ಪಟ್ಟ ಮಾರ್ಗವು ಕೋಟೆಯ ಪ್ರಾಕಾರದಲ್ಲಿ ಅಳವಡಿಸಲ್ಪಟ್ಟ ದಿಡ್ಡಿಬಾಗಿಲಲ್ಲದೆ ಬೇರೆಯಲ್ಲವೆಂಬುದನ್ನು ಸೂಚಿಸುವಂತಿವೆ.

ಚಿತ್ರದುರ್ಗ ಬೆಟ್ಟ ಪರಿಸರದ ವಾಯುವ್ಯ ಮತ್ತು ಉತ್ತರದಿಕ್ಕಿನ ಕೋಟೆಯೆಂದರೆ ವನಕೆಕಿಂಡಿ ಬಾಗಿಲು (ಹನುಮನ ಬಾಗಿಲು) ಮತ್ತು ಸಿಹಿನೀರುಹೊಂಡದ ಬಾಗಿಲುಗಳ ನಡುವಣ ಹೊರಸುತ್ತು ಕೋಟೆಯೇ. ಈ ಹೊರಸುತ್ತು ಕೋಟೆಯ ಪ್ರಾಕಾರದ ಮಧ್ಯಭಾಗ ದಲ್ಲಿರುವ ಹಾಗೂ ಕೋಟೆಯ ಒಳಭಾಗದ

---

8 ಎ.ಡಿ. ನರಸಿಂಹಯ್ಯ ಅವರೇ ತಿಳಿಸಿರುವಂತೆ, ಕಂಬದ ನರಸಿಂಹ ಮತ್ತು ಲಕ್ಷ್ಮೀದೇವರುಗಳ ಪ್ರತಿಷ್ಠಾಪನೆಯು ಬೆಳಗೆರೆಯಲ್ಲಿ ಆಂಧ್ರದ ಪುತ್ತಲೂರು ಗುರು ರಂಗನಾಥಾಚಾರ್ ಅವರ ಅಧ್ಯಕ್ಷತೆಯಲ್ಲಿ ನೆರವೇರಿತು. ಚಿತ್ರದುರ್ಗದಲ್ಲಿ ನಡೆಯಬೇಕಿದ್ದ ಈ ದೇವರ ಉತ್ಸವವು ಈಗ ಪ್ರತಿವರುಷವೂ ಬೆಳಗೆರೆಯಲ್ಲೆ ನಡೆಯುತ್ತಿದೆ. ದೊಡ್ಡಹನುಮಂತಪ್ಪ, ಚಿಕ್ಕಹನುಮಂತಪ್ಪ, ಸಂಜೀವಪ್ಪ, ಸಾಣೀಕೆರೆಯ ಹನುಮಂತಪ್ಪ, ಕೆಳಗಲಹಟ್ಟಿ ಪರಶುರಾಮಣ್ಣ ಮೊದಲಾದವರು ಇದಕ್ಕೆ ಸಂಬಂಧಿಸಿದ ಅಣ್ಣತಮ್ಮಂದಿರು.

ಫಲ್ಗುಣೇಶ್ವರ ದೇವಾಲಯಕ್ಕೆ ಸಮೀಪದಲ್ಲಿರುವ ದಿಡ್ಡಿ ಬಾಗಿಲು ಈ ಸಂಬಂಧದಲ್ಲಿ ಪರಿಗಣಿಸಲರ್ಹವಾದುದು. ಈ ಬಾಗಿಲಿನಲ್ಲಿ ಒಂದು ಬಾರಿಗೆ ಒಬ್ಬ ವ್ಯಕ್ತಿ ಮಾತ್ರ ಸಂಚರಿಸಲು ಸಾಧ್ಯ.

'ಕೈಫಿಯತ್'ನಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಸಂಗತಿಯು ಇದೇ ದಿಡ್ಡಿಬಾಗಿಲಿಗೆ ಸಂಬಂಧಿಸಿದುದೆನ್ನಬಹುದು. ಈ ದಾಖಲೆಯಲ್ಲಿ 'ಹುಚ್ಚಂಗಮ್ಮನ ಹೊಂಡದ ವೋಣಿ' ಎಂಬ ಸೂಚನೆಯಿರುವುದು ಗಮನಾರ್ಹ. ಈ ಹುಚ್ಚಂಗಮ್ಮನ ಹೊಂಡ ಮತ್ತು ಕೋಟೆಯ ಹೊರಸುತ್ತು ಪ್ರಾಕಾರದ ನಡುವೆ ಇರುವ ಪ್ರದೇಶವು ಭಾರಿ ಬಂಡೆಗಳಿಂದ ಕೂಡಿದ್ದು, ಅವುಗಳ ಮಧ್ಯೆ ಹಾದು ಹೋಗಲು ಜಾಗವೂ ಇರುವುದು. ಇದು ಕಂದಕ ಮತ್ತು ಕೋಟೆಯ ಪ್ರಾಕಾರಗಳ ಮಧ್ಯೆ ಇರುವುದರಿಂದ ಇಲ್ಲಿಯ ಓಡ್ಡಿಬಾಗಿಲನ್ನು ಈ ಮಾರ್ಗದಿಂದ ಸುಲಭವಾಗಿ ತಲುಪಬಹುದು. 'ಕೈಫಿಯತ್'ನ ವೃತ್ತಾಂತವನ್ನು ನಂಬುವುದಾದರೆ, ಶತ್ರುಸೈನಿಕರು ಈ ದಿಡ್ಡಿಬಾಗಿಲಿನಿಂದಲೇ ಕೋಟೆಯನ್ನು ಪ್ರವೇಶಿಸಲೆತ್ನಿಸಿದರೆಂದು ಭಾವಿಸಬೇಕಾಗುತ್ತದೆ.[9]

ಈ ದಿಡ್ಡಿಬಾಗಿಲು ಈ ಭಾಗದ ಕೋಟೆಯ ಬಹುಮುಖ್ಯ ಎಡೆಯಾಗಿದ್ದಿತೆಂದು ತೋರುತ್ತದೆ. ಕಾರಣವೇನೆಂದರೆ, ಕೋಟೆಯ ಹೊರಗಡೆಯವರಿಗೆ ಈ ಬಾಗಿಲು ಕಾಣಿಸದಂತೆ ಇದರ ಮುಂದೆ ಸ್ವಲ್ಪ ದೂರದಲ್ಲಿ ಅಡ್ಡಲಾಗಿ ಗೋಡೆಯನ್ನು ನಿರ್ಮಿಸಲಾಗಿದ್ದಿತು (ಈಗ ಇದು ನಾಶಗೊಂಡಿದೆ). ಬಾಗಿಲಿಗೆ ಹೊಂದಿಕೊಂಡಂತೆ ಕಂದಕಕ್ಕೆ ಅಭಿಮುಖವಾಗಿರುವ ಮೆಟ್ಟಲುಗಳಿರುವ ಮಾರ್ಗವನ್ನೂ ಮಾಡಲಾಗಿದ್ದಿತು (ಇದೂ ಮುಚ್ಚಿಹೋಗಿದೆ). ವನಕೆಕಿಂಡಿ ಬಾಗಿಲು ಸುತ್ತಿನ ಕಂದಕವು ಸಿಹಿನೀರುಹೊಂಡದ ಕಂದಕವನ್ನು ಕೂಡುವ ಎಡೆಯ ಮೇಲ್ಭಾಗದಲ್ಲಿರುವ ಈ ದಿಡ್ಡಿಬಾಗಿಲಿನ ರಕ್ಷಣೆಗಾಗಿ ಇಲ್ಲಿಯ ಕಂದಕದ ಗೋಡೆಯಲ್ಲಿಯೇ ೨ ಬುರುಜುಗಳನ್ನು ಅಳವಡಿಸಲಾಗಿದೆ. ಅಲ್ಲದೆ, ಈ ದಿಡ್ಡಿಬಾಗಿಲು ಮತ್ತು ಈ ಸುತ್ತಿನ ಕೋಟೆಯ ರಕ್ಷಣೆಗಾಗಿ ಪ್ರತ್ಯೇಕ ಕಾವಲು ವ್ಯವಸ್ಥೆಯೂ ಇದ್ದಿತೆನ್ನುವುದು ಗಮನೀಯ ಸಂಗತಿ.[10]

೩. ಓಬವ್ವೆಯು ತನ್ನ ಸಾಹಸವನ್ನು ತೋರಿಸಿದಳೆಂದು ನಂಬಲಾದ ಎಡೆಯೂ ಸಹಾ ಇದೇ ಹೊರಸುತ್ತು ಕೋಟೆಯ ವನಕೆಕಿಂಡಿ ಅಥವಾ ಹನುಮನ ಬಾಗಿಲಿಗೆ ಹೊಂದಿಕೊಂಡಂತೆಯೇ ಬೃಹತ್ ಬಂಡೆಯ ಅಡಿಯಲ್ಲಿದೆ. ಒಬ್ಬ ವ್ಯಕ್ತಿಯು ಬಾಗಿಕೊಂಡು ಸುಲಭವಾಗಿ ಒಳಹೋಗಿ ಬರಬಹುದಾದಷ್ಟು ಇರುವ ಈ ಕಲ್ಲುಪೊಟರೆಯು ಕೋಟೆಯ ಒಳಪಾರ್ಶ್ವದಲ್ಲಿ ಕಣ್ಣಿಗೆ ಸ್ಪಷ್ಟವಾಗಿ ಗೋಚರಿಸಿದರೂ ಹೊರಪಾರ್ಶ್ವದಲ್ಲಿ ಹಿಂದೆ ಇದಕ್ಕೆ ಅಡ್ಡಲಾಗಿ, ಅಂದರೆ ಈ ಪೊಟರೆಯ ಆಚೆಯ ಎರಡು ಬಂಡೆಗಳ ಮಧ್ಯದಲ್ಲಿ ಅಡ್ಡಲಾಗಿ ಗೋಡೆಯನ್ನು ನಿರ್ಮಿಸಿದ್ದ ಕುರುಹು ತೋರಿಬರುತ್ತದೆ. ಅಲ್ಲದೆ, ಈ ಭಾಗವು ಬೃಹತ್ ಬಂಡೆಗಳಿಂದಲೂ ಅಗಲವಾದ ಕಂದಕದಿಂದಲೂ

---

9 ೧೯೭೩ರಲ್ಲಿ ಸಂಶೋಧನ ಕಾರ್ಯನಿಮಿತ್ತ ನಾನು ಈ ಕೋಟೆಯ ಸರ್ವೇಕ್ಷಣೆಯನ್ನು ಕೈಗೊಂಡಿದ್ದಾಗ, ನನ್ನ ಹಿತೈಷಿ ಚಿತ್ರದುರ್ಗದ ಟಿ. ಎನ್. ಗಂಡುಗಲಿ ಅವರು, ಈ ದಿಡ್ಡಿಬಾಗಿಲಲ್ಲಿಯೇ ಓಬವ್ವೆಯು ತನ್ನ ಸಾಹಸವನ್ನು ತೋರಿದ್ದಳೆಂಬ ತಮ್ಮ ಹಿರಿಯರ ಹೇಳಿಕೆಯನ್ನು ಉಲ್ಲೇಖಿಸಿ ಅತಿ ವಿಶ್ವಾಸದಿಂದ ಹೇಳಿದ್ದುದುಂಟು. ಈ ಸಂದರ್ಭದಲ್ಲಿ ನಮ್ಮೊಡನಿದ್ದು ಸಹಕರಿಸಿದವರು ಮಿತ್ರರಾದ ಕೆಳಕೋಟೆಯ ರಾಜಶೇಖರಗೌಡ ಅವರು.

10 ಇಲ್ಲಿಯ ಕಂದಕದ ಬುರುಜಿನಿಂದ ದಿಡ್ಡಿಬಾಗಿಲಿಗೆ ಹೋಗುವ ಮೂಲಮಾರ್ಗದ ಎಡಬದಿಯ ಬೃಹತ್ ಬಂಡೆಯ ಅಡಿಯಲ್ಲಿ ಕಾವಲಿನವರ ಗುಹೆ ಇದ್ದುದು ಬೆಳಕಿಗೆ ಬಂದಿದೆ. ಈ ಗುಹೆಯ ಪಕ್ಕದ ಬಂಡೆಯ ಮೇಲೆ 'ಕುಮಾರ ಹೊರಿಕನಯಾಕನವರೂ ಗೂಎಯಾ ತಗಿದರೂ' ಎಂಬ ಒಂದು ಸಾಲಿನ ೧.೭೫ ಸೆಂ.ಮೀ. ಉದ್ದದ ಬರಹವೂ ಬೆಳಕಿಗೆ ಬಂದಿದ್ದು, ಈ ಗುಹೆಯನ್ನು ತೆಗೆಯಿಸಿದವನು ಕುಮಾರ ಹೊರಕೆನಾಯಕನೆಂಬುದು ಇದರಿಂದ ಸ್ಪಷ್ಟಪಡುತ್ತದೆ. ಈ ವ್ಯಕ್ತಿಯು ಯಾರೆಂಬುದು ಸದ್ಯಕ್ಕೆ ತಿಳಿಯದು. ಈತನು ಚಿತ್ರದುರ್ಗ ನಾಯಕ ಅರಸರ ಸಮೀಪ ಬಂಧುವೊ ಆಗಿದ್ದಿರಬಹುದು. ಈ 'ಹೊರಕೆನಾಯಕನ ಗವಿ'ಯ ಶೋಧದಲ್ಲಿ ನನ್ನೊಡನೆ ಸಹಕರಿಸಿದವರು ಚಿತ್ರದುರ್ಗದ ಲ. ನಾಗರಾಜ ಹೊಯ್ಸಳ ಮತ್ತು ಭೀ. ಉಮೇಶ್ ಅವರುಗಳು.

ಕೂಡಿದ್ದು, ಇಲ್ಲಿಂದ ಕೋಟೆಯನ್ನು ಪ್ರವೇಶಿಸುವುದು ಸುಲಭವೆಂದು ಹೇಳಲಿಕ್ಕಾಗುವುದಿಲ್ಲ.

೪. 'ವನಕೆಕಿಂಡಿ ಬಾಗಿಲು' ಎಂಬ ಹೆಸರು ಓಬವ್ವೆಯ ಘಟನೆಯೂ ನಡೆಯಿತೆನ್ನಲಾದ ಅವಧಿಯ ಸಾಕಷ್ಟು ಪೂರ್ವದಲ್ಲಿಯೇ ಇಲ್ಲಿಯ ಬಾಗಿಲಿಗೆ ಇದ್ದಿ ತೆಂಬುದನ್ನು ಚಿತ್ರದುರ್ಗ ನಾಯಕ ಅರಸರ ದಾಖಲೆಗಳು ಸೂಚಿಸಿರುವುದು ಗಮನಾರ್ಹ. ಉದಾಹರಣೆಗೆ, ಕ್ರಿ. ಶ. ೧೫೬೮ ರಿಂದ ೧೫೮೮ರವರೆಗೆ ಆಳ್ವಿಕೆ ನಡೆಸಿದ ದುರ್ಗದ ಮೊದಲನೆಯ ಕಾಮಗೇತಿ ಸಂತತಿಯ ಅರಸ ತಿಮ್ಮಣ್ಣ ನಾಯಕನು ಕ್ರಿ.ಶ.ಸು. ೧೫೭೫ ರಲ್ಲಿ ಚಿತ್ರದುರ್ಗ ಪರ್ವತದಲ್ಲಿ ಕಟ್ಟಿಸಿದ ಕೋಟೆಸುತ್ತುಗಳಲ್ಲಿ ನೆಲ್ಲಿಕಾಯಿ ಸಿದ್ದಪ್ಪನ ಗುಡ್ಡದ ಸುತ್ತಿನಕೋಟೆ, ರಣಮಂಡಲದ ಸುತ್ತಿನಕೋಟೆ ಮತ್ತು ವನಿಕೆಕಂಡಿ ಬಾಗಿಲು ಸುತ್ತಿನ ಕೋಟೆ-ಇವುಗಳು ಮುಖ್ಯವಾದುವು. ಹಾಗೆಯೇ, ಕ್ರಿ.ಶ. ೧೬೮೯ ರಿಂದ ೧೭೨೧ರ ವರೆವಿಗೆ ದುರ್ಗವನ್ನಾಳಿದ ಬಿಚ್ಚುಗತ್ತಿ ಭರಮಣ್ಣನಾಯಕನು ಮಾಡಿಸಿದ ಕಾಮಗಾರಿಗಳಲ್ಲಿ ವನಕೆಕಂಡಿ ಬಾಗಿಲಿನ ಪ್ರಸ್ತಾಪವೂ ಬರುತ್ತದೆ. ಈತನ ಅಧೀನದ ಅಧಿಕಾರಿಗಳಲ್ಲಿ ಒಬ್ಬ ನಾದ ಹಾಗೂ ಶಾಸನೋಕ್ತನಾಗಿರುವ ಪಂಡ್ರಳ್ಳಿಯ ಜೊಕ್ಕಸದ ತಿಮ್ಮಪ್ಪ ಎಂಬ ಪಾರುಪತ್ಯಗಾರನು[11] ವನಿಕೆಕಂಡಿ ಬಾಗಿಲು ಬಳಿಯ ಬಾವಿಯನ್ನೂ ಬಸವಣ್ಣನ ದೇವಸ್ಥಾನವನ್ನೂ ಮಾಡಿಸಿದನು. 'ವಂಶಾವಳಿ'ಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಚಿತ್ರದುರ್ಗ ನಾಯಕ ಅರಸರು ನಿರ್ಣಯಿಸಿದ ಆಯಗಾರರ ಪೈಕಿ, 'ಲಕ್ಕಿಮೇಲೋರ ಚಿನ್ನನಾಯ್ಕ । ಲಕ್ಕಿನಾಯ್ಕಗೆ ಸಲ್ಲತಕ್ಕ ಬಾಬು ಮರ್ಯಾದೆ' ವಿವರವು ತಿಳಿಸುವಂತೆ, ವನಿಕೆಕಂಡಿ ಬಾಗಿಲ ಪ್ರಾಣದೇವರ (ಹನುಮಂತ ದೇವರ) ಪೂಜಾರಿಕೆಯನ್ನೂ ವಹಿಸಲಾಗಿದ್ದಿತು.

'ವನಿಕೆ (ಒನಕೆ)' ಅಥವಾ 'ವನಿಕೆಕಂಡಿ (ಒನಕೆ ಗಂಡಿ)' ಎಂಬ ಪ್ರಯೋಗವು ಜನಪ್ರಿಯ ಜನಪದ ಆಶಯದಂತೆ ತೋರುತ್ತದೆನ್ನಲು ಇಲ್ಲಿ ಕೆಲವು ಉದಾಹರಣೆಗಳನ್ನು ಕೊಡಬಹುದು. 'ಒನಕೆಗಂಡಿ' ಎಂಬುದು ಬೆಂಗಳೂರು ಜಿಲ್ಲೆ, ನೆಲಮಂಗಲ ತಾಲ್ಲೂಕು ಶಿವಗಂಗೆ ಬೆಟ್ಟದಲ್ಲಿಯೂ 'ವನಕೆಕಿಂಡಿ ಬಾಗಿಲು' ಎಂಬುದು ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು ನುಂಕೇಮಲೆಗುಡ್ಡದಲ್ಲಿಯೂ 'ಒನಕೆ ಕಿಂಡಿ ಗುಡ್ಡ'ವೆಂಬುದು ರಾಯಚೂರು ಜಿಲ್ಲೆ, ಗಂಗಾವತಿ ತಾಲ್ಲೂಕು ಚಿಕ್ಕರಾಮಪುರದ ಬಳಿಯೂ 'ವೊನಕೆಮರಡಿ ಕಾವಲು' ಎಂಬುದು ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ತಾಲ್ಲೂಕಿನಲ್ಲಿಯೂ ಇರುವುದು ಗಮನಾರ್ಹ.

ಪ್ರಮುಖವೆನಿಸುವ ಇನ್ನೊಂದು ಅಂಶವೆಂದರೆ, ಬಳ್ಳಾರಿ ಜಿಲ್ಲೆ, ಸೊಂಡೂರು ತಾಲ್ಲೂಕು ಧರ್ಮಪುರಕ್ಕೆ ಸುಮಾರು ೨ ಕಿ.ಮೀ. ದೂರದಲ್ಲಿರುವ ನರಸಿಂಹಸ್ವಾಮಿ ದೇವಾಲಯವು ಸುಮಾರು ಒಂದು ನೂರು ಮೀಟರ್ ಗಿಂತಲೂ ಎತ್ತರದ ಎರಡು ಬಂಡೆಗಳ ಅಭಿಮುಖ ಸ್ಥಿತಿಯ 'ಓಬಳಗಂಡಿ'ಯ ಮೇಲ್ಭಾಗದಲ್ಲಿ ನಿಂತಿದೆ. 'ಅಹೋಬಳ ನರಸಿಂಹ'ನ ನೆಲೆಯಿಂದಾಗಿ ಈ ಎರಡು ದೊಡ್ಡ ಬೆಟ್ಟಗಳ ಮಧ್ಯದ ಹಾದಿಗೆ 'ಓಬಳಗಂಡಿ' ಎಂದು ಹೆಸರು ಬಂದಿರುವುದು ಇದರಿಂದ ವ್ಯಕ್ತಪಡು ತ್ತದೆ. 'ಅಹೋಬಳ' ಶಬ್ದದ ರೂಪಾಂತರವೇ 'ಓಬಳ' ಎಂದಾಗಿದೆ. ಇದೇ ರೀತಿಯಲ್ಲಿ ಚಿತ್ರದುರ್ಗ ಬೆಟ್ಟ ದಲ್ಲಿಯೂ ಈಗಿನ ತುಂಗಭದ್ರೇಶ್ವರ ದೇವಾಲಯದ ಮತ್ತು ಇದರ ಇನ್ನೊಂದು ಬದಿಯಲ್ಲಿ ದಕ್ಷಿಣದಿಕ್ಕಿನಲ್ಲಿ ರುವ ಕಾಶಿವಿಶ್ವನಾಥ ದೇವಾಲಯದ ಮೇಲ್ಭಾಗದ ಗುಡ್ಡಗಳ ನಡುವಣ ಕಣಿವೆಯಲ್ಲಿಯೇ 'ವನಕೆಕಿಂಡಿ ಬಾಗಿಲು' ಸಹಾ ನಿರ್ಮಾಣಗೊಂಡಿರುವುದನ್ನು ಗಮನಿಸ ಬಹುದು. ಮೇಲೆಯೇ ಪ್ರಸ್ತಾಪಿಸಿರುವಂತೆ, ತುಂಗಭದ್ರೇಶ್ವರ ದೇವಾಲಯವು ಮೊದಲಿಗೆ ಲಕ್ಷ್ಮೀ ನರಸಿಂಹಸ್ವಾಮಿಯ ನೆಲೆಯಾಗಿದ್ದಿತೆಂದು ತಿಳಿದಿದೆ. 'ವನಕೆಕಿಂಡಿ' ಬಾಗಿಲನ್ನು 'ಓಬವ್ವನ ಕಿಂಡಿ' ಬಾಗಿಲೆಂತಲೂ ಕರೆಯುವುದರಿಂದ ಹಾಗೂ 'ಓಬವ್ವ' ಎಂಬ ಹೆಸರಿನ ಮೂಲವು 'ಅಹೋಬಳ'ವೇ ಆಗಿರುವುದ ರಿಂದ ಇಲ್ಲಿಯ ಬಾಗಿಲಿಗೆ ಅಹೋಬಳದ ಲಕ್ಷ್ಮೀನರಸಿಂಹನ ಹೆಸರಿನಿಂದಲೇ ಕರೆಯುವ ರೂಢಿ ಬೆಳೆದು ಬಂದಿರ ಬಹುದು. ಹಾಗೆಯೇ, ನುಂಕೇಮಲೆಗುಡ್ಡದಲ್ಲಿ

11 *Epigraphia Carnatica*. Vol. 11, Challakere 58 (Gosikere), 1711 A.D.

ಎರಡು ಬಂಡೆಗಳ ನಡುವಣ ಮಾರ್ಗವನ್ನೇ 'ವನಕೆ ಕೆಂಡಿ ಬಾಗಿಲು' ಎನ್ನಲಾಗುತ್ತದೆಂಬುದನ್ನು ಗಮನಿಸ ಬಹುದು.

ಕ್ರಿಸ್ತಶಕ ೧೧ ಮತ್ತು ೧೨ನೆಯ ಶತಮಾನಗಳಲ್ಲಿ ಶೈವಧರ್ಮದ ಪ್ರಮುಖ ಕೇಂದ್ರವಾಗಿದ್ದ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು ಬಳ್ಳಿಗಾವೆಯಲ್ಲಿಯ 'ಒನಕೆಹೊಂಡ'ದ ಹಿನ್ನೆಲೆಯಲ್ಲಿ ಅಲ್ಲಿ ಪ್ರಬಲವಾಗಿದ್ದ ಕಾಳಾಮುಖ ಪಂಥದ ಪ್ರಭಾವ ಇರುವಂತೆ ಕಂಡು ಬರುತ್ತದೆ. ಇಲ್ಲಿಯ ಹಾಳುಬಿದ್ದ ಕೆರೆಯನ್ನು 'ಒನಕೆ ಹೊಂಡ'ವೆಂತಲೂ ಇದರ ಸಮೀಪವಿರುವ ಹಾಳಾಗಿರುವ ಈಶ್ವರ ದೇವಾಲಯುವನ್ನು 'ಒನಕೆಹೊಂಡದ ಈಶ್ವರ ದೇವಾಲಯ'ವೆಂತಲೂ ಕರೆಯಲಾಗುತ್ತದೆ.[12] ಚಿತ್ರದುರ್ಗ ಪರಿಸರದಲ್ಲಿಯೂ ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ಕಾಳಾಮುಖ ಪಂಥದ ಪ್ರಭಾವವು ಇದ್ದುದಕ್ಕೆ ಹಲವಾರು ಉದಾಹರಣೆಗಳಿರುವುದರಿಂದ, ಈ ದೃಷ್ಟಿಯಿಂದ ಇಲ್ಲಿಯ 'ವನಕೆಕೆಂಡಿ'ಯ ಉಗಮದ ಹಿನ್ನೆಲೆ ಮತ್ತು ಕಾಲನಿರ್ಧಾರದ ಬಗೆಗೆ ಆಳವಾಗಿ ಅಭ್ಯಸಿಸುವ ಅವಶ್ಯಕತೆಯು ಎದ್ದು ಕಾಣುತ್ತದೆ ಎನ್ನಬಹುದು.[13]

೫. ಓಬವ್ವೆಯ ಘಟನೆಯು ನಡೆದ ಕಾಲಮಾನವು ನಿರ್ದಿಷ್ಟವಾಗಿರದೆ ಗೊಂದಲಕ್ಕೆಡೆಮಾಡಿ ಕೊಟ್ಟಿದೆ. 'ಕೈಫಿಯತ್'ನಲ್ಲಿ ಈ ಘಟನೆಯು ಕ್ರಿ.ಶ. ೧೭೪೯ ರಿಂದ ೧೭೫೪ರ ವರೆಗೆ ದುರ್ಗವನ್ನಾಳಿದ (ಇಮ್ಮಡಿ) ಕಸ್ತೂರಿ ರಂಗಪ್ಪನಾಯಕನ ಅವಧಿಯಲ್ಲಿ, ಅಂದರೆ ಕ್ರಿ.ಶ.ಸು. ೧೭೫೦ರಲ್ಲಿ ಸಂಭವಿಸಿತ್ತೆನ್ನುತ್ತದೆ. ಈ ಕುರಿತು ಪ್ರೊ|| ಕೃಷ್ಣಯ್ಯ ಅವರು ಪ್ರಸ್ತಾಪಿಸಿರುವ ಕಾಲ ಕ್ರಿ.ಶ. ೧೭೬೬ರ ಅಕ್ಟೋಬರ್.

ಆದರೆ ನಾಯಕ ಅರಸರ ಇತರ ದಾಖಲೆಗಳಲ್ಲಿ, ಚಿತ್ರದುರ್ಗ ಸಂಸ್ಥಾನದ ಮೊದಲ ಅರಸ ಮತ್ತಿತಿಮ್ಮಣ್ಣನಾಯಕನ ಕಾಲದಲ್ಲಿ, ವಿಜಯನಗರದ ಸಾಳುವ ನರಸಿಂಗರಾಯನು ಚಿತ್ರದುರ್ಗದ ಬಳಿ ತನ್ನ ಸೇನೆಯೊಡನೆ ಬೀಡುಬಿಟ್ಟಿದ್ದನೆಂಬ ಉದಾಹರಣೆಯ ವಿನಾ ಕಡೆಯ ಅರಸ ರಾಜಾವೀರ ಮದಕರಿನಾಯಕನ ಕಾಲದವರೆಗೆ ದುರ್ಗವು ಯಾರ ದಾಳಿಗೂ ನೇರವಾಗಿ ಒಳಪಟ್ಟಿದುದರ ಪ್ರಸ್ತಾಪವಿಲ್ಲ.

ರಾಜಾವೀರ ಮದಕರಿನಾಯಕನ ಆಡಳಿತಾವಧಿಯಲ್ಲಿ ದುರ್ಗವನ್ನು ವಶಪಡಿಸಿಕೊಳ್ಳಲು ನಾನಾ ವಿಧದಲ್ಲಿ ಪ್ರಯತ್ನಿಸಿದವನು ಶ್ರೀರಂಗಪಟ್ಟಣದ ನವಾಬ ಹೈದರ್ ಅಲಿಖಾನ್ ಮಾತ್ರ. ಚರಿತ್ರೆಯಲ್ಲಿ ಗುರುತಿಸಲಾಗಿರುವಂತೆ, ಹೈದರ್‌ಅಲಿಯು ಒಟ್ಟು ನಾಲ್ಕುಬಾರಿ, ಅಂದರೆ ಕ್ರಿ.ಶ. ೧೭೬೩ ಜನವರಿ, ೧೭೭೪ ಮಾರ್ಚ್, ೧೭೭೭ ಜೂನ್ ಮತ್ತು ೧೭೭೯ ಫೆಬ್ರವರಿ–ಮಾರ್ಚ್‌ಗಳಲ್ಲಿ ಚಿತ್ರದುರ್ಗದ ಮೇಲೆ ದಾಳಿ ನಡೆಸಿ, ತನ್ನ ನಾಲ್ಕನೆಯ ಹಾಗೂ ಕಡೆಯ ದಾಳಿಯಲ್ಲಿ ದುರ್ಗವನ್ನು ಹಿಡಿಯುವಲ್ಲಿ ಸಫಲನಾದನು. ಅಧಿಕೃತ ದಾಖಲೆಯೆನಿಸಿರುವ 'ಚಿತ್ರದುರ್ಗದ ಬಖೈರು' ದಾಖಲಿಸಿರುವಂತೆ, ಈತನ ದಂಡು ಚಿತ್ರದುರ್ಗ ಪರಿಸರದ ಹೆಬ್ಬುಲಿ ಕಲ್ಲು, ಚೋಳಘಟ್ಟದ ಮುರುಗೀಮಠ ಮತ್ತು ತಮಟ ಕಲ್ಲು ಹಿಡಿದು ದಕ್ಷಿಣಕ್ಕೆ ಬುದ್ಧಿವಂತನ ಮರಡಿ ಮತ್ತು ಮಳಲಿಗುಡ್ಡದವರೆಗೂ ಆವರಿಸಿ ದುರ್ಗವನ್ನು ಸುತ್ತುವರಿದಿದ್ದಿತು. ಅಲ್ಲದೆ, ಹೀಗೆ ಸುತ್ತುವರಿದ ಸೇನೆಯ ಸಂಖ್ಯೆಯೂ ಸ್ಥೂಲವಾಗಿ ಪ್ರಸ್ತಾಪಿಸಲ್ಪಟ್ಟಿದೆ.

೬. ಚಿತ್ರದುರ್ಗ ಕೋಟೆಯ ಕಳ್ಳಗಂಡಿಯಲ್ಲಿ ತೂರಲೆತ್ನಿಸಿದವರನ್ನು 'ಶತ್ರು ಪಕ್ಷದವರು' ಎಂದಷ್ಟೆ ಸಂಬೋಧಿಸುತ್ತದೆ, 'ಕೈಫಿಯತ್'. ಆದರೆ 'ಚಿತ್ರದುರ್ಗದ ಬಖೈರು' ಸೂಚಿಸುವಂತೆ, ತನ್ನ ಪರವಾಗಿದ್ದ ಹರಪನಹಳ್ಳಿ ಮತ್ತು ರಾಯದುರ್ಗದ

12 ವಿವರಗಳಿಗೆ : ಡಾ|| ಅ. ಸುಂದರ : "ಬಳ್ಳಿಗಾವೆಯ ಒಂದು ಪ್ರಾಚೀನ ಶಿವ ದೇವಾಲಯ ಹಾಗೂ 'ಮಹಾಕಾಳಿ' ಮೂರ್ತಿ", ಶ್ರೀಕಂಠತೀರ್ಥ (ತೀ.ನಂ.ಶ್ರೀ. ಸ್ಮಾರಕ ಗ್ರಂಥ), ಬೆಂಗಳೂರು, ೧೯೭೬, ಪು. ೬೯೩-೬೯೪

13 ಶೈವ ಸಂಸ್ಕೃತಿಯ 'ಲಿಂಗ', ಅಂದರೆ 'ಜ್ಯೋತಿಸ್ತಂಭ' ಕಲ್ಪನೆಯ ಜನಪದೀಕರಣವೇ 'ಒನಕೆ' ಎಂದಾಗಿರಬಹುದೆಂದು ನನ್ನ ಹಿರಿಯ ಮಿತ್ರರಾದ ಎಂ.ಜಿ. ನಾಗರಾಜ್ ಅವರು ಅಭಿಪ್ರಾಯಪಟ್ಟಿರುವರು. ಗೆಳೆಯ ಡಾ|| ಎಚ್.ಎಸ್. ಗೋಪಾಲರಾವ್ ಅವರ ಪ್ರಕಾರ, ಕಾಳಾಮುಖ-ಲಾಕುಳ ಸಂಬಂಧದ ಹಿನ್ನೆಲೆಯಲ್ಲಿ ಲಾಕುಳದಂಡವು ಒನಕೆಯನ್ನು ಹೋಲಬಹುದಾದ್ದರಿಂದ ಒನಕೆ ಸಂಬಂಧಿಯಾದ ಸ್ಥಳಗಳು ಕಾಳಾಮುಖ ಸಂಬಂಧವನ್ನು ಹೊಂದಿರುವ ಸಾಧ್ಯತೆಗಳಿವೆ. ನನ್ನ ಈ ನಿಲುವನ್ನು ಸಮರ್ಥಿಸಿದ ಈ ಈರ್ವರು ಮಿತ್ರರಿಗೆ ನಾನು ಆಭಾರಿಯಾಗಿದ್ದೇನೆ.

ಪಾಳೆಯಗಾರರಿಗೆ ದುರ್ಗದ ಕೋಟೆಯ ರಹಸ್ಯವು ತಿಳಿದಿದೆಯೆಂಬುದನ್ನು ಹೈದರ್‌ಅಲಿಯು ಚೆನ್ನಾಗಿ ಅರಿತಿದ್ದನು. ಈ ಈರ್ವರು ಪಾಳೆಯಗಾರರ ಸೇನೆಯು ಚೋಳಘಟ್ಟ ಮತ್ತು ಆಗಸನಕಲ್ಲು ಪರಿಸರದಲ್ಲಿ ಗುಡ್ಡದ ಆಸರೆ ಹಿಡಿದು ಶಿಬಿರ ಹೂಡಿದ್ದಿತಲ್ಲದೆ, ಆಗಲೇ ದುರ್ಗದ ಪಶ್ಚಿಮ ಮತ್ತು ಉತ್ತರದಿಕ್ಕಿನ ಕೋಟೆ ಸಾಲಿನ ಮೇಲೆ ಫಿರಂಗಿ ದಾಳಿಯೂ ನಡೆಯಿತು.[14] ಹೀಗಿದ್ದರೂ ಈ ಯುದ್ಧ ಸಂದರ್ಭದಲ್ಲಿ ರಾಜಾವೀರ ಮದಕರಿನಾಯಕನ ಪಕ್ಷದಿಂದ ಹೊರಬಿದ್ದು ಹೈದರ್ ಅಲಿಯೊಡನೆ ಸೇರಿಕೊಂಡ ಜರಿಮಲೆ ಸಂಸ್ಥಾನದ ಸೈನಿಕರು, ದುರ್ಗದ ಮುಖ್ಯವಾದ ಐಬು ಜಾಗಗಳನ್ನು ಕಂಡಿದ್ದು ಅವುಗಳ ಬಗೆಗೆ ಹೈದರ್‌ಆಲಿಗೆ ಮಾಹಿತಿ ಒದಗಿಸಿದರೆಂಬುದು ಮಹತ್ವದ ಅಂಶವಾಗುತ್ತದೆ. ಕ್ರಿ.ಶ. ೧೭೭೯ರಲ್ಲಿ ನಡೆದ ಈ ಕಡೆಯ ಯುದ್ಧಾರಂಭದಲ್ಲಿ ದುರ್ಗದವರಿಗೆ ಜಯವು ದೊರೆತಾಗ ಮದಕರಿನಾಯಕನು ಅದನ್ನು ಸಂತೋಷದಿಂದ ಆಚರಿಸಲು ನಿರ್ಧರಿಸಿದನು. ಆ ಸಂದರ್ಭದಲ್ಲಿ ಒಂದು ಕಾರಣಕ್ಕಾಗಿ ನಾಯಕನ ಬಗೆಗೆ ಅಸಮಾಧಾನ ಹೊಂದಿದ ಜರಿಮಲೆ ಸೈನಿಕರು ಆ ನಂತರ ಹೈದರ್‌ಅಲಿಯೊಡನೆ ಸಹಕರಿಸಿ, ಹೆಬ್ಬುಲಿ ಕಲ್ಲು ಎಡೆಯ ಕಳ್ಳದಾರಿಯಿಂದ ೧೨,೦೦೦ ಸೈನಿಕರನ್ನು ತೆಗೆದುಕೊಂಡು ಕೋಟೆಯ ಒಳಗೆ ಇಳಿದು ದುರ್ಗದವರ ವಿರುದ್ಧ ಭೀಕರವಾಗಿ ಕಾದಾಡಿದರು.

ಓಬವ್ವೆಯ ಘಟನೆಯು 'ಫಿರಂಗಿ ಯುದ್ಧ'ದಂದು ನಡೆಯಿತೆನ್ನುವ ಮಾತನ್ನು ಪರಿಗಣಿಸುವುದಾದರೆ, ಹೈದರ್‌ಅಲಿಯು ದುರ್ಗವನ್ನು ಕಡೆಯ ಬಾರಿಗೆ ಮುತ್ತಿದ ಮೇಲಿನ ಸಂದರ್ಭವನ್ನು ಇದು ಸೂಚಿಸುವಂತೆ ತೋರುತ್ತದೆ.

'ಕೈಫಿಯತ್' ತಿಳಿಸುವಂತೆ, ಓಬವ್ವೆಯು ತನ್ನ ಸಾಹಸವನ್ನು ತೋರಿದುದು ನಟ್ಟಿರುಳಿನಲ್ಲಿ ; ಮಧ್ಯಾಹ್ನದ ಉರಿಬಿಸಿಲಿನಲ್ಲಿ ಅಲ್ಲ !

೭. ತನ್ನ ಸಾಹಸಕ್ಕಾಗಿ ದುರ್ಗದ ಅರಸನಿಂದ ಪುರಸ್ಕೃತಳಾದ ಓಬವ್ವೆಯ ಸಹಜ ಮೃತ್ಯುವಿನ ತರುವಾಯ ಈಕೆಯನ್ನು ಕೋಟೆಯ ತಣ್ಣೀರುದೋಣೆಯ ಬಳಿಯಲ್ಲಿ ಸಮಾಧಿ ಮಾಡಲಾಯಿತೆಂಬ ಹಾಗೂ ಸಮಾಧಿಯ ಮೇಲೆ ಚಿಕ್ಕ ಕಲ್ಲುಮಂಟಪವನ್ನು ನಿರ್ಮಿಸಲಾಯಿತೆಂಬ ಬಗೆಗೆ 'ಕೈಫಿಯತ್' ಮತ್ತು ನಾಯಕ ಅರಸರ ವಂಶಜರು ಓಬವ್ವೆಯ ವಂಶದವರಿಗೆ ನೀಡಿದ ರಹದಾರಿ ಪತ್ರಗಳು ಮೌನವಹಿಸಿವೆ. ಚಿತ್ರದುರ್ಗ ಚರಿತ್ರೆಗೆ ಸಂಬಂಧಿಸಿದ ಇತರ ದಾಖಲೆಗಳಲ್ಲಿಯೂ ಈ ಕುರಿತು ಸೂಚನೆಗಳಿಲ್ಲ.

೪

ಈ ಮೇಲಿನ ಚಾರಿತ್ರಿಕ ವಿಮರ್ಶೆಯ ಹಿನ್ನೆಲೆಯೊಡನೆ ಓಬವ್ವೆಯ ಘಟನೆ ಕುರಿತ ಕೆಲವು ಸಂಗತಿಗಳನ್ನು ಈ ಕೆಳಗಿನಂತೆ ಪ್ರಸ್ತಾಪಿಸಬಹುದಾಗಿದೆ :

೧. ಓಬವ್ವೆಯ ಚಾರಿತ್ರಿಕತೆಯನ್ನು ಅಧಿಕೃತವಾಗಿ ಸಮರ್ಥಿಸಲಾಗದಿದ್ದರೂ 'ಕೈಫಿಯತ್' ಮತ್ತು ಇತರ ಉದಂತಗಳು ಹಾಗೂ ಈ ವಂಶಸ್ಥರು ರಕ್ಷಿಸಿಕೊಂಡು ಬಂದಿರುವ 'ವಂಶವೃಕ್ಷ', ಇತ್ಯಾದಿಗಳ ಆಧಾರದಿಂದ, ಓಬವ್ವೆಯು ನಾಯಕ ಅರಸರ ಆಳ್ವಿಕೆಯಲ್ಲಿ ಜೀವಿಸಿದ್ದಳೆಂದು ಸದ್ಯಕ್ಕೆ ಒಪ್ಪಿಕೊಳ್ಳಬಹುದು.

೨. ಓಬವ್ವೆಯ ಘಟನೆಯು ಸಾಂದರ್ಭಿಕ ಸಂಗತಿ–ಸನ್ನಿವೇಶಗಳ ಪ್ರಯೋಜನ ಪಡೆದುಕೊಳ್ಳುವುದರೊಡನೆ ನಿರೂಪಿಸಲ್ಪಟ್ಟಿರುವುದು ಮೇಲ್ನೋಟಕ್ಕೇ ತೋರಿಬಂದರೂ ಇದು ತನ್ನ ಹಿನ್ನೆಲೆಯಲ್ಲಿ ಕೆಲವು ಸೂಕ್ಷ್ಮ ಚಾರಿತ್ರಿಕ ವಾಸ್ತವಾಂಶಗಳನ್ನೂ ಒಳಗೊಂಡಿದೆಯೆಂಬುದನ್ನು ದೃಢೀಕರಿಸಬಹುದು.

೩. ಓಬವ್ವೆಯು ತನ್ನ ಸಾಹಸವನ್ನು ತೋರಿದ ಎಡೆಯು ಈಗಾಗಲೇ ಪ್ರಸಿದ್ಧಿ ಪಡೆದಿರುವ 'ವನಕೆಕಿಂಡಿ

14 ಸಿಹಿನೀರುಹೊಂಡದ ಬಾಗಿಲಿನಿಂದ ಫಲ್ಗುಣೇಶ್ವರ ಗುಡಿಯ ಮುಂದಿನ ದಿಡ್ಡಿಬಾಗಿಲಿನವರೆಗಿನ ಕೋಟೆಯ ಹೊರಭಾಗದ ಬಂಡೆಗಳ ಮೇಲೆ ಫಿರಂಗಿಗಳ ಹೊಡೆತದಿಂದ ಮೂಡಿರುವ ಹಲವಾರು ಗುರುತುಗಳು ಇಂದಿಗೂ ಕಂಡುಬರುತ್ತವೆ. ಹೈದರ್‌ಆಲಿಯ ಪರವಾಗಿ ಹೋರಾಡಲು ಇಲ್ಲಿಗೆ ಬಂದಿದ್ದ ಫ್ರೆಂಚರ ಸೇನಾ ದಳಪತಿ ಲಾಲಿಯು ಈ ದಿಕ್ಕಿನ ಬರಗೇರಮ್ಮನ ದೇವಸ್ಥಾನದ ಬಳಿ ೧೨ ತೋಫುಗಳನ್ನು ಇಡಿಸಿ ಕೋಟೆಗೆ ಒಂದೇ ಬಾರಿಗೆ ಹೊಡೆಸಿದನೆಂದು 'ಚಿತ್ರದುರ್ಗದ ಬಖೈರು' ವರ್ಣಿಸುತ್ತದೆ.

ಬಾಗಿಲು' ಬಳಿಯ ಕಲ್ಲುಪೊಟರೆಯಾಗಿರದೆ, ಈ ಬಾಗಿಲು ಮತ್ತು ಸಿಹಿನೀರುಹೊಂಡದ ಬಾಗಿಲುವರೆಗಿನ ಕೋಟೆ ಸುತ್ತಿನಲ್ಲಿ ಅಳವಡಿಸಲ್ಪಟ್ಟಿರುವ ಹಾಗೂ ಫಲ್ಗುಣೇಶ್ವರ ಗುಡಿ ಮುಂದಿನ ಕೋಟೆಯಲ್ಲಿರುವ ದಿಡ್ಡಿ ಬಾಗಿಲೇ ಆಗಿದೆಯೆನ್ನಬಹುದು.

೪. ಓಬವ್ವೆಯ ಘಟನೆಯು ಹೈದರ್‌ಅಲಿ ಮತ್ತು ರಾಜಾವೀರ ಮದಕರಿನಾಯಕರ ನಡುವೆ ಕ್ರಿ.ಶ. ೧೭೭೯ರಲ್ಲಿ ನಡೆದ ಕಡೆಯ ಯುದ್ಧ ಸಂದರ್ಭದಲ್ಲಿ ಸಂಭವಿಸಿತೆನ್ನಬಹುದು.

೫. ಓಬವ್ವೆಯ ಘಟನೆಯನ್ನು ಇನ್ನೂ ಹೆಚ್ಚಿನ ದಾಖಲೆ, ಇತ್ಯಾದಿಗಳ ಬಲದಿಂದ ಅಧಿಕೃತವಾಗಿ ಸಮರ್ಥಿಸುವ ಹಾಗೂ ಚರಿತ್ರೆಯಲ್ಲಿ ಈಕೆಯ ಪಾಲಿನ ನ್ಯಾಯಯುತ ಸ್ಥಾನ-ಮಾನಗಳನ್ನು ನಿರ್ಧರಿಸುವ ದಿಸೆಯಲ್ಲಿ ಪ್ರತ್ಯೇಕ ಸಂಶೋಧನಾತ್ಮಕ ಅಧ್ಯಯನವನ್ನು ಕೈಗೊಳ್ಳಬೇಕಾದುದು ಅನಿವಾರ್ಯವೆನ್ನಬಹುದು.*

---

* ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೈಗೊಳ್ಳಲಾದ ಕ್ಷೇತ್ರಕಾರ್ಯದಲ್ಲಿ ನನ್ನೊಡನಿದ್ದು ಉತ್ಸಾಹದಿಂದ ಸಹಕರಿಸಿದ ನಮ್ಮ ಸಂಶೋಧನ ತಂಡದ ಸದಸ್ಯರುಗಳಾದ ಲ. ನಾಗರಾಜ್, ಹೊಯ್ಸಳ, ಛೀ. ಉಮೇಶ್, ನಾ. ಪ್ರಭಾಕರ್, ಹೆಚ್.ಎನ್. ಉಮೇಶ್, ನಾ. ವೆಂಕಟೇಶಭಟ್, ಎಂ. ಸಣ್ಣಹುಲಿಯಪ್ಪ, ಹೆಚ್. ಮಂಜುನಾಥ್, ಪಿ. ಆನಂದ ತೆಲಗಾವಿ, ಮೋಹನಮುರಳಿ ತಳಕು, ಯು. ವೆಂಕಟಾಚಲಶಾಸ್ತ್ರಿ, ಕೆಳಕೋಟೆಯ ರಾಜಶೇಖರಗೌಡ, ಹರಿಹರದ ಎಸ್.ವಿ. ಗೌಡೂರ್ ಮತ್ತು ಬೆಂಗಳೂರಿನ ಕೆ.ಎಲ್. ರಾಜಶೇಖರ್ ಅವರುಗಳಿಗೂ ಅಗತ್ಯ ಸಲಹೆಗಳನ್ನಿತ್ತು ಉಪಕರಿಸಿದ ದಿವಂಗತ ಎ.ಡಿ. ನರಸಿಂಹಯ್ಯ, ದಿವಂಗತ ಎಸ್.ಎನ್. ರುದ್ರೇಶ್ ಪೂಜಾರ್, ಪ್ರೊ! ಎ.ಡಿ. ಕೃಷ್ಣಯ್ಯ ಮತ್ತು ಟಿ.ಎಸ್. ಗಂಡುಗಲಿ ಅವರುಗಳಿಗೂ ನಾನು ಆಭಾರಿಯಾಗಿದ್ದೇನೆ.

# ಅನುಬಂಧ

## ಚಿತ್ರದುರ್ಗ ಸಂಸ್ಥಾನದ ಬಿರುದಿನ ಹದಿನೂರು ಗಡಿ ಕಹಳೆಯವರ ಹಾಗೂ ಓಬವ್ವಳ ಮೂಲ ವಂಶವೃಕ್ಷ : ಕ್ರಿ.ಶ. ೧೩೫೮ ರಿಂದ ೧೯೮೨ರ ವರೆಗೆ*

### ೧. ಒನಕೆ ಓಬವ್ವಳ ನೇರ ವಂಶವೃಕ್ಷ




ದೊಡ್ಡಹನುಮಪ್ಪ (೨)
(ಈತನು ಚಿತ್ರದುರ್ಗದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದ್ದ ಮಂದಲವರ ಕಟ್ಟೇಮನೆ ದೇವರುಗಳಾದ ಲಕ್ಷ್ಮೀದೇವರು ಮತ್ತು ಕಂಬದ ಲಕ್ಷ್ಮೀನರಸಿಂಹಸ್ವಾಮಿಯನ್ನು ಕಿತ್ತು ತೆಗೆದು ಚಳ್ಳಕೆರೆ ತಾಲ್ಲೂಕು ಬೆಳಗೆರೆ ಗ್ರಾಮದಲ್ಲಿ ಸ್ಥಾಪಿಸಿದನು)
ಬಾಲಪ್ಪ (೧)
(ಹೆಂಡತಿ ಸಂಜೀವಮ್ಮ)
ಏಕನಾಥಪ್ಪ (೧)
(ಮಕ್ಕಳಿಲ್ಲ)
ಚಿಕ್ಕಹನುಮಪ್ಪ (೧)
(ವಂಶಸ್ಥರು ಗುಡಿಬಂಡೆ, ಮಂದಲಹಳ್ಳಿ, ಉದುಗೂರು-ಮಡಕಶಿರಾ ತಾಲ್ಲೂಕುಗಳಲ್ಲಿರುವರು)
ಏಕನಾಥಪ್ಪ (೨)
ಸಿದ್ದೋಜಪ್ಪ
ಆನೆಪ್ಪ (೨)
ಕಹಳೆ ಹನುಮಪ್ಪ (೧)
ಪರಶುರಾಮಪ್ಪ
(ಮದುವೆಯಿಲ್ಲ)
ಏಕನಾಥಪ್ಪ (೩)
ಉಗಾದಪ್ಪ
ಸಿದ್ದಪ್ಪ
ಕಹಳೆ ಗೋಡಪ್ಪ
ಕರೇ ಹನುಮಪ್ಪ
(ಮಕ್ಕಳಿಲ್ಲ)
ಏಕನಾಥಪ್ಪ (೪)
ಕಹಳೆ ತಿಪ್ಪಯ್ಯ
ಬಸಪ್ಪ
ಮಾದಪ್ಪ
ಶ್ರೀಕಂಠಪ್ಪ
(೪ ಮಕ್ಕಳು)
ಕೈಲಾಸಪ್ಪ
(೨ ಮಕ್ಕಳು)
ತಿಪ್ಪೇರುದ್ರಯ್ಯ
(ಒಬ್ಬನೇ ಮಗ)
ರಾಮಯ್ಯ
(೩ ಮಕ್ಕಳು)
ಕೃಷ್ಣಯ್ಯ
(ಪ್ರೊ|| ಎ. ಡಿ. ಕೃಷ್ಣಯ್ಯ)
(೩ ಮಕ್ಕಳು)
ಬಾಲಚಂದ್ರರಾವ್
(ಒಬ್ಬಮಗ)
ನರಸಿಂಹಯ್ಯ
(ಎ. ಡಿ. ನರಸಿಂಹಯ್ಯ)
(ಒಬ್ಬಮಗ)
ಶ್ರೀನಿವಾಸಪ್ಪ
(೩ ಮಕ್ಕಳು)

## ೧. ಓಬವ್ವಳ ಮೂರುಜನ ಭಾವಂದಿರು ಮತ್ತು ಒಬ್ಬ ನೈದುನನ ವಂಶವೃಕ್ಷ




ಹನುಮಪ್ಪ (ಮಕ್ಕಳಿಲ್ಲ)
ಮರಕೆಂಚಪ್ಪ
ಯಕನಾಥಪ್ಪ (ಲಗ್ನವಿಲ್ಲ)
ಹನುಮಪ್ಪ (೨)
ವಕೀಲ್ ಕೆಂಚಪ್ಪ
ಬಾಲಪ್ಪ
ಸಣ್ಣ ಕೆಂಚಪ್ಪ
ಕೆಂಚಪ್ಪ (ಪೋಸ್ಟಲ್)
ದೊಡ್ಡ ಕೆಂಚಪ್ಪ
ರಾಮಣ್ಣ
ದೊಡ್ಡ ಹನುಮಪ್ಪ (೧)
ಸಣ್ಣ ಹನುಮಂತಪ್ಪ (೧)
ದೊಡ್ಡ ಕೆಂಚಪ್ಪ (೧)
(ವಿವರವಿಲ್ಲ)
ಸಣ್ಣ ಹನುಮಪ್ಪ (೨) (ಗಂಡು ಸಂತಾನವಿಲ್ಲ)
ಭೀಮಪ್ಪ (೧) (ಮಕ್ಕಳಿಲ್ಲ)
ಹನುಮಪ್ಪ (೩) (ಅತ್ತಿಗೆರೆ)
ಬಸಪ್ಪ
ಹನುಮಪ್ಪ (೩)
ಕೆಂಚಪ್ಪ
ಭೀಮಪ್ಪ (೨)
ರಾಮಪ್ಪ
ರಂಗಪ್ಪ

ನಗಾರಿ ಬಾಲಪ್ಪನ ಮನೆತನದವರು ಮತ್ತು ಅವರ ವಂಶಸ್ಥರು ಭರಮಪುರ, ಕೊಳಹಾಳು, ರಾಮಗಿರಿ, ಚಿಲ್ಡೋಣಿ, ಪಾಂಡುಮಟ್ಟಿ, ಅಬ್ಬಾಯಕನಹಳ್ಳಿ, ಬಸಾಪುರ, ಅಲಟ್ಟಿ, ಬ್ಯಾಡಿಗೆರೆ, ಕಂಚೆನಹಳ್ಳಿ, ಬೊಮ್ಮನಹಳ್ಳಿ, ಹುಲೇಮಳಲಿ, ಬೂದಾಳು (ಶಿವಪುರ), ಕುನುಗಲು, ಸಮುದ್ರದಹಳ್ಳಿ, ಮ್ಯಾದನಹೊಳೆ, ಚನ್ನಾಪುರ, ದೊಡ್ಡಘಟ್ಟ, ನೆಹರೂನಗರ ಮೊದಲಾದೆಡೆಗಳಲ್ಲಿ ವಾಸಿಸುತ್ತಿರುವರು.



## ಮೂರನೆಯ ಗಡ್ಡದ ಹುಚ್ಚಪ್ಪನ ಸಂತತಿ

ಗಂಡು ಸಂತಾನವಿಲ್ಲ–ಇಬ್ಬರು ಹೆಣ್ಣು ಮಕ್ಕಳು

೧. ಸಣ್ಣ ಬಾಲವ್ವ → ದುಮ್ಮಿಯಲ್ಲಿರುವ ಪರುಸಪ್ಪನ ಸಂತತಿ

೨. ದೊಡ್ಡ ಬಾಲವ್ವ




---

* ಎ. ಡಿ. ನರಸಿಂಹಯ್ಯ ಮತ್ತು ಸಿ. ತಿಪ್ಪೇರುದ್ರಯ್ಯ ಅವರುಗಳು ಸಂಗ್ರಹಿಸಿ ಸಿದ್ಧಪಡಿಸಿದ (ದಿ. ೨-೯-೧೯೪೮) 'ಚಿತ್ರದುರ್ಗ ಸಂಸ್ಥಾನದ ಬಿರುದಿನ ಹದಿಮೂರು ಗಡಿ ಕಹಳೆಯವರ ವಂಶವೃಕ್ಷದ ನಕ್ಷೆ: ಕ್ರಿ.ಶ. ೧೫೬೮ ರಿಂದ ೧೯೮೦' – ಇದನ್ನು ಪರಿಷ್ಕರಿಸಿ ಪ್ರೊ। ಎ. ಡಿ. ಕೃಷ್ಣಯ್ಯ ಅವರು ಪ್ರತ್ಯೇಕವಾಗಿ ಸಿದ್ಧಪಡಿಸಿರುವ ಕ್ರಿ.ಶ. ೧೫೬೮ ರಿಂದ ೧೯೭೨ರ ವರೆಗಿನ ಮೇಲ್ಕಂಡ ವಂಶವೃಕ್ಷವನ್ನು ಇಲ್ಲಿ ಯಥಾವತ್ತಾಗಿ ಕೊಟ್ಟಿದೆ. ಇದನ್ನು ವಿಶ್ವಾಸದಿಂದ ಒದಗಿಸಿ ಪ್ರಕಟಣೆಗೂ ಅವಕಾಶ ನೀಡಿದ ಪ್ರೊ। ಕೃಷ್ಣಯ್ಯ ಅವರಿಗೆ ನಾನು ಋಣಿಯಾಗಿದ್ದೇನೆ.

ಕರ್ನಾಟಕ ಇತಿಹಾಸ ಅಕಾದೆಮಿ

# ನಾಲ್ಕನೇಯ ವಾರ್ಷಿಕ ಸಮ್ಮೇಳನ : ಸ್ವಾಗತ ಭಾಷಣ

ಪ್ರೊ॥ ಜಿ. ಎಸ್. ದೀಕ್ಷಿತ್

ಶ್ರೀ ಚಿತ್ರದುರ್ಗದ ಜಗದ್ಗುರು ಮಹಾಸ್ವಾಮಿಗಳೆ, ಡಾ : ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿಯವರೆ, ಶ್ರೀ ಎಸ್ ನಿಜಲಿಂಗಪ್ಪನವರೆ, ಶ್ರೀ ಎಸ್. ಶಿವಶಂಕರಪ್ಪನವರೆ, ಡಾ. ಎಸ್. ಆರ್. ರಾವ್ ಅವರೆ, ಸ್ವಾಗತ ಸಮಿತಿಯ ಅಧ್ಯಕ್ಷರೆ, ಪ್ರತಿನಿಧಿಗಳೇ ಮತ್ತು ಸಭಿಕರೆ, ಕರ್ನಾಟಕ ಇತಿಹಾಸ ಅಕಾದೆಮಿಯ 4ನೇ ವಾರ್ಷಿಕಸಮ್ಮೇಳನಕ್ಕೆ ತಮ್ಮೆಲ್ಲರಿಗೂ ಸ್ವಾಗತ.

ಈ ಸಮ್ಮೇಳನದ ವೈಶಿಷ್ಟ್ಯಗಳು ಅನೇಕ. ಮೊದಲನೆಯದು, ಪರಮಪೂಜ್ಯ ಚಿತ್ರದುರ್ಗದ ಜಗದ್ಗುರು ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಯಲ್ಲಿ ನಡೆಯುತ್ತಿರುವುದು ಮುಖ್ಯವಾದುದು. ಶ್ರೀ ಜಗದ್ಗುರುಗಳು ತಮ್ಮ ಮಠದ ಭವ್ಯವಾದ ಇತಿಹಾಸವನ್ನು ಬರೆಯಿಸುವುದರ ಕಡೆ ಲಕ್ಷ್ಯಹಾಕಿದ್ದಾರೆನ್ನುವುದು ಇಲ್ಲಿ ಸೇರಿರುವ ಇತಿಹಾಸಕಾರರಿಗೆಲ್ಲಾ ಆನಂದದ ಸಂಗತಿ. ಇತರ ಮಠಗಳು ಈ ಮಹಾಸ್ವಾಮಿಗಳ ಉಪಕ್ರಮವನ್ನು ಅನುಸರಿಸಿ ತಮ್ಮಲ್ಲಿರುವ ದಾಖಲೆಗಳನ್ನು ಇತಿಹಾಸ ಸಂಶೋಧಕರಿಗೆ ಉಪಯೋಗಿಸಲು ಕೊಡಬೇಕು. ಹಾಗೆ ಮಾಡಿದರೆ ಮಠಕ್ಕೂ ಶ್ರೇಯಸ್ಸು ಮತ್ತು ಇತಿಹಾಸಕ್ಕೂ ಹೊಸವಿಷಯಗಳು ಲಭ್ಯವಾಗುತ್ತವೆ. ಜಗದ್ಗುರುಗಳಂತಹ ಇತಿಹಾಸಪ್ರೇಮಿಗಳ ಆಶೀರ್ವಾದ ಇಲ್ಲಿ ಸೇರಿರುವ ಸಂಶೋಧಕರಿಗೆ ಸ್ಫೂರ್ತಿದಾಯಕ.

ಎರಡನೇಯ ವಿಶೇಷ, ನಮ್ಮ ಸಮ್ಮೇಳನದ ಕಾರ್ಯಕಲಾಪಗಳ ಉದ್ಘಾಟನೆಯನ್ನು ಶ್ರೀ ಎಸ್. ನಿಜಲಿಂಗಪ್ಪನವರು ಮಾಡುತ್ತಿರುವುದು. ಅವರಿಗೂ ಇತಿಹಾಸಕ್ಕೂ ಸಂಬಂಧ ಹೇಗೆ ಅಂದರೆ, ಅವರು ಇತಿಹಾಸವನ್ನು ಮಾಡಿದವರು, ಮಾಡುತ್ತಿರುವವರು ! ಕರ್ನಾಟಕದ ಕೆಲವೇ ಕೆಲವರಿಗೆ ಇಂದಿನ ಭಾರತದ ಇತಿಹಾಸದಲ್ಲಿ ಮೇಲಿನ ಸ್ಥಾನ ದೊರಕುತ್ತದೆ. ಅಂತಹವರಲ್ಲಿ ಶ್ರೀ ನಿಜಲಿಂಗಪ್ಪನವರು ಪ್ರಮುಖರು. ಕರ್ನಾಟಕದಲ್ಲಿ ಅವರ ಹೆಸರು ಮನೆಮಾತು. ಭಾರತದ ರಾಜಕಾರಣದಲ್ಲಿಯೂ ಅವರ ಮಾತಿಗೆ ಬಹಳ ಬೆಲೆಯಿರುತ್ತದೆ. ಇದು ನಮ್ಮೆಲ್ಲರಿಗೂ ಹೆಮ್ಮೆಯ ವಿಷಯ. ಇಂತಹ ಉಚ್ಚಮಟ್ಟದ ಮುತ್ಸದ್ದಿಗಳು ನಮ್ಮ ಸಮ್ಮೇಳನವನ್ನು ಉದ್ಘಾಟಿಸುತ್ತಿರುವುದು ಅಕಾದೆಮಿಯ ಇತಿಹಾಸದಲ್ಲಿ ಬರೆದಿಡತಕ್ಕ ವಿಷಯ.

ಮೂರನೇಯ ವಿಶೇಷ, ನಮ್ಮ ನಿಯತಕಾಲಿಕ 'ಇತಿಹಾಸ ದರ್ಶನ'ದ ಹೊಸ ಸಂಚಿಕೆಯ ಬಿಡುಗಡೆಯನ್ನು ಶ್ರೀ ಶಾಮನೂರು ಶಿವಶಂಕರಪ್ಪನವರು ಮಾಡುತ್ತಿರುವುದು. ಅವರನ್ನು ದಾವಣಗೆರೆಯವರಿಗೆ

ಪರಿಚಯಿಸುವುದು ಅನವಶ್ಯಕ. ಆದರೂ ಒಂದೊಂದು ಸಲ ನಮ್ಮವರ ಯೋಗ್ಯತೆ ನಮಗಿಂತ ಹೊರಗಡೆಯವರಿಗೆ ಎದ್ದು ಕಾಣುತ್ತದೆ. ದಾವಣಗರೆ ಮೊದಲಿನಿಂದಲೂ ವ್ಯಾಪಾರಕ್ಕೆ ಪ್ರಸಿದ್ಧಿ. ಆಮೇಲೆ ಉದ್ಯಮಗಳಿಗೆ ಅಥವಾ ಕೈಗಾರಿಕೆಗಳಿಗೆ ಪ್ರಸಿದ್ಧಿಯಾಯಿತು. ಶ್ರೀ ಶಿವಶಂಕರಪ್ಪನವರು ದಾವಣಗೆರೆಗೆ ಇನ್ನೆರಡು ಹೊಸ ಕ್ಷೇತ್ರಗಳಲ್ಲಿ ಪ್ರಸಿದ್ಧಿಯನ್ನು ತಂದುಕೊಟ್ಟಿದ್ದಾರೆ. ಒಂದು ಶಿಕ್ಷಣ, ಇನ್ನೊಂದು ವೈದ್ಯಕೀಯ. ಇವೆರಡೂ ಅತ್ಯಂತ ಜನೋಪಯೋಗಿ ಕ್ಷೇತ್ರಗಳು. ಇಂತಹ ಶ್ರೇಷ್ಠ ಕಾರ್ಯಕರ್ತರ ಉದಾರ ಆಶ್ರಯ ಮತ್ತು ಹಾರ್ದಿಕ ಬೆಂಬಲಗಳಿಂದ ಈ ಸಮ್ಮೇಳನವು ಇಲ್ಲಿ ಅಪೂರ್ವವಾದ ರೀತಿಯಲ್ಲಿ ನಡೆಯುತ್ತಿದೆ.

ಕೊನೆಯ ವಿಶೇಷ, ಈ ಸಮ್ಮೇಳನಕ್ಕೆ ಡಾ|| ಎಸ್. ಆರ್. ರಾವ್ ಅವರು ಅಧ್ಯಕ್ಷರಾಗಿರುವುದು. ಡಾ|| ರಾವ್ ಇವರ ಖ್ಯಾತಿ ಭಾರತದೊಳಗೆ ಹೇಗೋ ಹಾಗೆಯೇ ಹೊರಗೂ ಹಬ್ಬಿದೆ. ಅವರಸಾಧನೆಗಳು ಅನೇಕ. ಅವುಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ಹೇಳಬಹುದು. ಪ್ರಪಂಚದ ಬೇರೆ ದೇಶಗಳಲ್ಲಿ ವಿದ್ವಾಂಸರು ಸಿಂಧೂಲಿಪಿಯನ್ನು ಓದುವ ಪ್ರಯತ್ನ ನಡೆಸಿದ್ದಾರೆ. ಕೆಲವೇ ಕೆಲವರು ಸ್ವಲ್ಪ ಮಟ್ಟಿಗೆ ಯಶಸ್ವಿಯಾಗಿದ್ದಾರೆ. ಅಂಥವರ ಸಾಲಿಗೆ ಡಾ|| ರಾವ್ ಅವರು ಸೇರಿದ್ದಾರೆ. ಅವರ ರೋಮಾಂಚಕಾರಿ ಶೋಧನೆಗಳಲ್ಲಿ ದ್ವಾರಕೆಯ ಹತ್ತಿರ ಸಮುದ್ರದಲ್ಲಿ ಮಧ್ಯಯುಗದ ಕೃಷ್ಣನ ದೇವಸ್ಥಾನವನ್ನು ಪತ್ತೆ ಮಾಡಿದ್ದು ಒಂದು. ಇದರಿಂದ ಸಮುದ್ರಕ್ಕೂ ಡಾ. ರಾವ್ ಅವರಿಗೂ ಸಂಬಂಧಶುರು ಆಯಿತು. ಕೃಷ್ಣನ ಕಾಲದ ದ್ವಾರಕೆ ಸಮುದ್ರದ ತಳದಲ್ಲಿರುಬಹುದೆನ್ನುವ ಅಂಶಗಳನ್ನು ಇವರು ಪತ್ತೆ ಮಾಡಿದ್ದಾರೆ. ಈ ಶೋಧನೆಯಿಂದ ಭಾರತದಲ್ಲಿ ಒಂದು ಹೊಸಶಾಸ್ತ್ರದ ಅಭ್ಯಾಸವನ್ನು ಆರಂಭಿಸಿದ ಶ್ರೇಯಸ್ಸು ಅವರದು. ಅದಕ್ಕೆ ಸಾಗರ ಪುರಾತತ್ವಶಾಸ್ತ್ರವೆನ್ನುತ್ತಾರೆ. ಎಸ್. ಆರ್. ರಾವ್ ಎಂದರೆ ಎಲ್ಲಿಯವರು ಎಂದು ತಿಳಿಯುವ ಕುತೂಹಲ ಉಂಟಾಗುತ್ತದೆ. ಪೂರ್ತಿ ಹೆಸರನ್ನು ಹೇಳಿದರೆ ಈ ಕುತೂಹಲ ಮಾಯವಾಗುತ್ತದೆ. ಮತ್ತು ಅವರು ನಮಗೆ ತೀರ ಹತ್ತಿರದವರಾಗುತ್ತಾರೆ. ಅವರ ಪೂರ್ತಿ ಹೆಸರು ಶಿಕಾರಿಪುರದ ರಂಗನಾಥರಾಯರು. ಭಾರತದಾದ್ಯಂತ ಅವರನ್ನು ಭಾಷಣ ಮಾಡುವುದಕ್ಕೆ ಕರೆಯುತ್ತಾರೆ. ಅಂಥವರು ಸಿಗುವುದು ದುಸ್ತರ. ಅದರೆ ಡಾ|| ಸದ್ಯೋಜಾತ ಸ್ವಾಮೀಜಿಯವರು ಇವರೇ ಅಧ್ಯಕ್ಷರಾಗಬೇಕೆಂದು ಪಟ್ಟು ಹಿಡಿದರು. ಅದೃಷ್ಟವಶಾತ್ ನಮಗೆ ಬೇಕಾದಾಗ ಅವರಿಗೆ ಬಿಡುವಿತ್ತು.

ಇನ್ನು ಕರ್ನಾಟಕ ಇತಿಹಾಸ ಅಕಾದೆಮಿಯ ಬಗೆಗೆ ನಾಲ್ಕು ಮಾತು ಹೇಳಬಯಸುತ್ತೇನೆ. ಇದು ಐದನೇ ವರ್ಷ ನಡೆಯುತ್ತಿರುವ ಶಿಶು. ಅದರೂ ಈ ಐದು ವರ್ಷಗಳಲ್ಲಿ ಅದರ ಸಾಧನೆಗಳು ಅಗಾಧ.

ಮೊದಲನೆಯದು, ಮೂರು ವಾರ್ಷಿಕ ಸಮ್ಮೇಳನಗಳನ್ನು ಬೆಂಗಳೂರು, ತುಮಕೂರು ಮತ್ತು ಗದಗಗಳಲ್ಲಿ ನಡೆಯಿಸಿದೆ. ನಾಲ್ಕನೆಯದು ಈಗ ಇಲ್ಲಿ ಸೇರಿದೆ.

ಎರಡನೆಯದು, ಪದವಿಪೂರ್ವ ವಿದ್ಯಾರ್ಥಿಗಳಿಗೆ ಕರ್ನಾಟಕ ಇತಿಹಾಸದಲ್ಲಿ ಪ್ರತಿ ವರ್ಷವೂ ಅವರ ಪರೀಕ್ಷೆಯ ಮೊದಲು ಒಂದು ಪರೀಕ್ಷೆಯನ್ನು ನಡೆಸಿದೆ. ಉತ್ತೀರ್ಣರಾದವರಲ್ಲಿ ಮೊದಲಿನ ಮೂವರಿಗೆ ಬಹುಮಾನಗಳನ್ನು ಇತರರಿಗೆ ಪ್ರಶಸ್ತಿಪತ್ರಗಳನ್ನು ಕೊಟ್ಟಿದೆ. ಈ ಪರೀಕ್ಷೆ ಬಹಳ ಜನಪ್ರಿಯವಾಗುತ್ತಿದೆ. 2500ಕ್ಕೆ ಮೇಲ್ಪಟ್ಟು ವಿದ್ಯಾರ್ಥಿಗಳು ಕೂಡುತ್ತಿದ್ದಾರೆ. ಮೊದಲು ಬೆಂಗಳೂರು ಮಾತ್ರ ಇದರ ಕೇಂದ್ರವಾಗಿತ್ತು. ಈಗ ಬೆಂಗಳೂರು, ಮೈಸೂರು, ಧಾರವಾಡ, ಗುಲ್ಬರ್ಗಾಗಳು ಕೇಂದ್ರಗಳು. ಬರುವ ವರ್ಷದಿಂದ ಈ ಪರೀಕ್ಷೆಯ ಜತೆಗೆ ಸಾರ್ವಜನಿಕರಿಗೂ ಕರ್ನಾಟಕ ಇತಿಹಾಸದಲ್ಲಿ ಒಂದು ಪರೀಕ್ಷೆಯನ್ನು ನಡೆಯಿಸಬೇಕೆನ್ನುವ ಯೋಜನೆಯಿದೆ. ಈ ಸವಲತ್ತಿನಿಂದ ಯಾರು ಬೇಕಾದರೂ ಕರ್ನಾಟಕ ಇತಿಹಾಸವನ್ನು

ಅಭ್ಯಾಸಮಾಡಿ ಆ ವಿಷಯದಲ್ಲಿ ಒಂದು ಪ್ರಶಸ್ತಿಯನ್ನು ಪಡೆಯಬಹುದು. ಪದವಿಪೂರ್ವ ಇತಿಹಾಸ ಶಿಕ್ಷಕರಿಗೆ ಪದವಿಪೂರ್ವ ಬೋರ್ಡಿನವರ ಸಹಕಾರದಿಂದ ಒಂದು ಕಾರ್ಯಾಗಾರವನ್ನು ನಡೆಸಿದ್ದೇವೆ.

ಇವೆಲ್ಲಕ್ಕೂ ಮಿಗಿಲಾಗಿ 'ಇತಿಹಾಸ ದರ್ಶನ'ವೆಂಬ ಶ್ರೇಷ್ಠ ದರ್ಜೆಯ ಸಂಶೋಧನೆಗೆ ಮೀಸಲಾಗಿರುವ ನಿಯತಕಾಲಿಕವನ್ನು ಪ್ರಕಟಿಸುತ್ತಿದ್ದೇವೆ. ಈಗ ಮೂರು ಸಂಪುಟಗಳು ಹೊರಬಂದಿವೆ. ನಾಲ್ಕನೇ ಸಂಪುಟ ಇಂದು ಹೊರಬರಲಿದೆ. ಈ ನಿಯತಕಾಲಿಕ ಸಂಶೋಧಕರಿಗೆ ಶಾಶ್ವತವಾಗಿ ಉಪಯೋಗವಾಗತಕ್ಕ ಪ್ರಕಟಣೆ. ಇವೆಲ್ಲಾ ಕರ್ನಾಟಕದವರಿಗೆ ಮಾತ್ರ ಉಪಯೋಗ. ಭಾರತವನ್ನು ನಾವು ಮರೆತಿಲ್ಲ.

ಬಿಜಾಪುರದ ಆದಿಲ್‌ಷಾಹಿಗಳ ಆಳ್ವಿಕೆಯನ್ನು ಕುರಿತು ರಾಷ್ಟ್ರಮಟ್ಟದಲ್ಲಿ ಒಂದು ವಿಚಾರ ಸಂಕಿರಣ ವನ್ನು ಏರ್ಪಡಿಸಿದ್ದೆವು. ಅದಕ್ಕೆ ಅಹಮದಾಬಾದ್, ಬೊಂಬಾಯಿ, ಪುಣೆ ಮತ್ತು ಕರ್ನಾಟಕದ ಬೇರೆ ಬೇರೆ ಕಡೆಗಳಿಂದ ವಿದ್ವಾಂಸರು ಬಂದಿದ್ದರು.

ಈ ಸಂಸ್ಥೆಯನ್ನು ಡಾ|| ಸದ್ಯೋಜಾತ ಶಿವಚಾರ್ಯ ಸ್ವಾಮೀಜಿಯವರ ನೇತೃತ್ವದಲ್ಲಿ ದಾವಣಗೆರೆಯ ನಾಗರಿಕರು ಬರಮಾಡಿಕೊಂಡಿದ್ದಾರೆ. ಅತ್ಯುತ್ತಮ ರೀತಿಯ ವ್ಯವಸ್ಥೆ ಮಾಡಿದ್ದಾರೆ. ಇಂತಹ ಅವಕಾಶ ನಮಗೆ ಒದಗಿಸಿ ಕೊಟ್ಟಿದ್ದಕ್ಕೆ ಅವರಿಗೂ ಅವರೊಡನೆ ಸಹಕರಿಸಿ ದುಡಿಯುತ್ತಿರುವ ಮಹನೀಯರಿಗೂ ನಾವು ಋಣಿ.

# ಸಮ್ಮೇಳನಾಧ್ಯಕ್ಷರ ಭಾಷಣ

ಡಾ|| ಎಸ್.ಆರ್. ರಾವ್

ಸಾವಿರಾರು ವರ್ಷಗಳ ಸುದೀರ್ಘ ಇತಿಹಾಸ ಸಂಪತ್ತು ನಮ್ಮದಾಗಿದ್ದರೂ ಬಗೆದಷ್ಟೂ ಮುಗಿಯದ ಇತಿಹಾಸ ಸಾಮಗ್ರಿ ನಮ್ಮಲ್ಲಿದ್ದರೂ ಇತಿಹಾಸ ಪ್ರಜ್ಞೆ ಭಾರತೀಯರಲ್ಲಿ ಎಷ್ಟು ಇರಬೇಕಿತ್ತೋ ಅಷ್ಟು ಇರಲಿಲ್ಲ ಎಂಬ ಮಾತನ್ನು ಎಲ್ಲರೂ ಒಪ್ಪಲೇಬೇಕು. ಇತಿಹಾಸವೆಂದರೆ ಹಿಂದೆ ನಮ್ಮ ನಾಡನ್ನು ಆಳಿದ ರಾಜಮನೆತನಗಳ ಕಾಲಾನುಕ್ರಮಣಿಯನ್ನು ಹೇಳುವ ಒಂದು ರಾಜಕೀಯ ಪಟ್ಟಿ ಎಂಬ ಭಾವನೆ ಬಹಳ ಕಾಲದವರೆಗೆ, ಬಹುಶಃ ಪಾಶ್ಚಾತ್ಯರ ಪ್ರಭಾವದಿಂದ ನಮ್ಮಲ್ಲಿತ್ತು. ಇಂದಿಗೂ ಇದೆ. ಒಂದು ನಾಡಿನ ಧರ್ಮ, ಸಂಸ್ಕೃತಿ, ಸಾಹಿತ್ಯ, ಕಲೆ, ಜನಜೀವನ, ವಿಜ್ಞಾನ, ನಂಬಿಕೆ, ಮೌಲ್ಯಗಳು ಇತ್ಯಾದಿಗಳ ಅಧ್ಯಯನ ದಾಖಲೆ ವಿಶಾಲಾರ್ಥದಲ್ಲಿ ಇತಿಹಾಸವಾಗುತ್ತದೆ. ಈ ಎಲ್ಲಾ ವಿಷಯಗಳ ಕೂಲಂಕಷ ಅಧ್ಯಯನಕ್ಕೆ ನೆರವಾಗುವ ಅಂಶಗಳು ನಮಗೆ ಶಾಸನಗಳಲ್ಲಿ, ಕಡತಗಳಲ್ಲಿ, ತಾಡವೋಲೆಗಳಲ್ಲಿ, ತಾಮ್ರಪತ್ರಗಳಲ್ಲಿ, ಆ ಕಾಲದ ಸಾಹಿತ್ಯ ಕೃತಿಗಳಲ್ಲಿ ದೊರೆಯುತ್ತವೆ. ಈ ದೃಷ್ಟಿಯಿಂದ ಇಂತಹ ಇತಿಹಾಸ ಸಾಮಗ್ರಿಗಳನ್ನು ಅವು ಪೂರ್ತಿಯಾಗಿ ನಶಿಸಿ ಹೋಗುವುದಕ್ಕೆ ಮೊದಲು ರಕ್ಷಿಸಿ, ಅಧ್ಯಯನ ನಡೆಸುವ ಕಾರ್ಯ ತುಂಬ ಮಹತ್ವದ್ದಾಗುತ್ತದೆ.

ಆದರೆ ಇಂತಹ ಮಹತ್ತ್ವದ ಕಾಲನ ಪರೀಕ್ಷೆಯಲ್ಲಿ ಗಟ್ಟಿಯಾಗಿ ನಿಲ್ಲುವ ಕಾರ್ಯವನ್ನು ಕೈಗೊಳ್ಳುತ್ತಿರುವ ಬೆರಳೆಣಿಕೆಯಲ್ಲಿರುವ ಸಂಸ್ಥೆಗಳಿಗೆ ದೊರೆಯುತ್ತಿರುವ ಉತ್ತೇಜನ, ಸಹಕಾರ, ತುಂಬ ಅತೃಪ್ತಿಕರವಾಗಿದೆ. ಈ ಸಂದರ್ಭದಲ್ಲಿ ಹುಬ್ಬಳ್ಳಿಯ ಮೂರುಸಾವಿರ ಮಠ ಮತ್ತು ಕೆಳದಿ ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನ ಸಂಸ್ಥೆಯ ಕಾರ್ಯವನ್ನು ಸ್ಮರಿಸಬಹುದು. ಈ ಎರಡೂ ಸಂಸ್ಥೆಗಳು ತಮ್ಮಲ್ಲಿರುವ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಗಳನ್ನು ತಮ್ಮ ಸ್ವಪ್ರಯತ್ನದಿಂದ ಪ್ರಕಟಿಸಿವೆ. ಇತರ ಧಾರ್ಮಿಕ ಸಂಸ್ಥೆಗಳೂ ಮಠಾಧಿಪತಿಗಳೂ ನಾಡಿನ ಸಾಂಸ್ಕೃತಿಕ ಇತಿಹಾಸವನ್ನು ಕಾಪಾಡುವಲ್ಲಿ ಇದೇ ಮಾರ್ಗದರ್ಶಕರಾಗುವುದು ಸ್ವಾಗತಾರ್ಹ.

ಕೇವಲ ಬೆರಳೆಣಿಕೆಯ ವ್ಯಕ್ತಿಗಳ ನಿರಂತರ ದುಡಿತ, ಶ್ರಮ, ಸಾಹಸ ಮತ್ತು ಸಾಧನೆಯ ಫಲವಾಗಿ ಕೆಳದಿಯ ಸಂಗ್ರಹಾಲಯದಲ್ಲಿಂದು ಅತ್ಯಂತ ಉಪಯುಕ್ತವಾದ ಹಸ್ತಪ್ರತಿಗಳ ಬೃಹತ್ ಸಂಗ್ರಹ, ತಾಮ್ರಪತ್ರಗಳ, ಕಡತಗಳ ಮತ್ತು ಇತರ ಐತಿಹಾಸಿಕ ಮಹತ್ತ್ವದ ದಾಖಲೆಗಳನ್ನು ದೊರಕಿಸಿಕೊಡುವ ಸಂಗ್ರಹ ಶೇಖರಿಸಲ್ಪಟ್ಟಿವೆ. ಅವುಗಳಲ್ಲಿ ಹಸ್ತಪ್ರತಿಗಳನ್ನು ಸಂಶೋಧಿಸಿ ಪ್ರಕಟಿಸುವ ಕಾರ್ಯ ಕೂಡ ನಡೆಯುತ್ತಿದೆ. ಇಂತಹ ಒಂದು ಶ್ಲಾಘನೀಯ ಕಾರ್ಯವನ್ನು ಪ್ರೋತ್ಸಾಹಿಸುವುದಕ್ಕೆ ನಾನು ಕರ್ನಾಟಕ ಸರ್ಕಾರವನ್ನು ಒತ್ತಾಯಿಸುತ್ತಿದ್ದೇನೆ. 'ದೇವರು ವರ ಕೊಟ್ಟರೂ ಪೂಜಾರಿ ಕೊಡ' ಎಂಬ ಗಾದೆಯಂತೆ ರಾಜ್ಯ ಸರ್ಕಾರದಿಂದ ವಾರ್ಷಿಕ ಸಹಾಯ ಧನ ಮಂಜೂರಾದರೂ ಅದು ಸಂಸ್ಥೆಯನ್ನು ತಲುಪುವಲ್ಲಿ ಅಡ್ಡ

ಗಾಲು ಹಾಕುವ ಸಂಶೋಧಕರೆಂದು ತಮ್ಮನ್ನು ತಾವೇ ಕರೆದುಕೊಳ್ಳುವ ಅಧಿಕಾರಿಗಳ ಕಾರ್ಯ ಎಂತಹ ಹೇಯವಾದುದೆಂದು ನಾನಿಲ್ಲಿ ಬಿಡಿಸಿ ಹೇಳಬೇಕಾಗಿಯೇ ಇಲ್ಲ.

ಈ ಸಂದರ್ಭದಲ್ಲಿ ರಾಜ್ಯ ಸರ್ಕಾರವನ್ನು ನಾನಿಲ್ಲಿ ಕೇಳಿಕೊಳ್ಳುವುದು ಇಷ್ಟೇ. ಸಾವಿರಾರು ವರ್ಷಗಳ ಪರಂಪರೆ ಮಣ್ಣುಪಾಲಾಗಿ ನಶಿಸಿ ಹೋಗುವುದಕ್ಕೆ ಮೊದಲು, ಖಾಸಗಿ ವ್ಯಕ್ತಿಗಳ ವಶದಲ್ಲಿರುವ ಐತಿಹಾಸಿಕ ಸಾಮಗ್ರಿಗಳ ಸಂಗ್ರಹ, ಸಂಶೋಧನೆ ಮತ್ತು ಕಾಪಾಡುವಿಕೆಗೆ ಬೇಕಾಗಿರುವ ಸಮಸ್ತ ಸೌಲಭ್ಯಗಳನ್ನೂ ಇಂತಹ ಸಮರ್ಥ ಖಾಸಗಿ ಸಂಸ್ಥೆಗಳಿಗೆ ಸರ್ಕಾರ ಒಪ್ಪಿಸಿ, ಅವರಿಗೆ ಎಲ್ಲಾ ರೀತಿಯ ಸಹಾಯ, ಉತ್ತೇಜನ ಮತ್ತು ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕು. ಇಲ್ಲವಾದಲ್ಲಿ ಮುಂದೆ ಬರುವ ಪೀಳಿಗೆಗೆ ಉತ್ತರಿಸುವ ಜವಾಬ್ದಾರಿ ಇಂದಿನ ಇಡೀ ಜನಾಂಗದ್ದಾಗುತ್ತದೆ.

ಇತಿಹಾಸವನ್ನು ಇನ್ನೂ ವಿಶಾಲಾರ್ಥದಲ್ಲಿ ಒಳಪಡಿಸುವ ದೃಷ್ಟಿ ಬೆಳೆಯಬೇಕಾಗಿದೆ. ಸಾಹಿತ್ಯ, ಕಲೆ, ವಿಜ್ಞಾನ, ತಂತ್ರಜ್ಞಾನ ಇತ್ಯಾದಿ ವಿಷಯಗಳ ಇತಿಹಾಸ ಮತ್ತು ತತ್ತ್ವ ವಿಭಾಗದಲ್ಲಿ ಪುನರ್ ಅಧ್ಯಯನ ನಡೆಯಬೇಕಾಗಿದೆ. ಈ ಗತಿಯಲ್ಲಿ 'ಆಕಾಶವಾಣಿ'ಯವರು ಮಾನವನ ಪ್ರಗತಿ–'ಎವೊಲ್ಯುಶನ್ ಆಫ್ ಮ್ಯಾನ್' ಎಂಬ ಒಂದು ಬೃಹತ್ ಸರಣಿಯಲ್ಲಿ ಇಂದಿನ ೧೨ ರಿಂದ ೧೮ ವರುಷದೊಳಗಿನ ಯುವಕ ಯುವತಿಯರಿಗಾಗಿ ನಿರ್ಮಿಸುತ್ತಿರುವ ಕಾರ್ಯಕ್ರಮ ತುಂಬಾ ಸ್ಮರಣೀಯವಾದುದು. ಸುಮಾರು ೧೦೪ ಭಾಗಗಳಲ್ಲಿ ೮–೧೦ ಸೆಗ್ಮೆಂಟ್‌ಗಳಲ್ಲಿ ಮೂಡಿಬರಲಿರುವ ಈ ಕಾರ್ಯಕ್ರಮಕ್ಕಾಗಿ ತಜ್ಞರ ಸಮಿತಿಯೊಂದು ಈಗಾಗಲೇ ರಚನೆಯಾಗಿದ್ದು ಅದರಲ್ಲಿ ನನ್ನ ಅಳಿಲು ಸೇವೆಯೂ ಸೇರಿದೆ. ಕಲೆ, ಇತಿಹಾಸ, ಸಂಸ್ಕೃತಿ, ವಿಜ್ಞಾನ, ತಂತ್ರಜ್ಞಾನ, ಕುಶಲಕಲೆ, ಇತ್ಯಾದಿ ವಿಭಾಗಗಳಲ್ಲಿ ಪ್ರಾರಂಭದಿಂದ ಇಂದಿನವರೆಗೆ ಮನುಷ್ಯನ ಪ್ರಗತಿ ಹೇಗೆ ಸಾಗಿಬಂದಿದೆ. ಅದನ್ನು ಇತಿಹಾಸ ಹೇಗೆ ಗುರುತಿಸಿದೆ. ಮುಂತಾದವುಗಳನ್ನು ಯುವ ಪೀಳಿಗೆಗಾಗಿ ದಾಖಲಿಸುವ ಈ ಕಾರ್ಯ ಅತ್ಯಂತ ಸ್ತುತ್ಯಾರ್ಹವಾದುದು.

ಇದೇ ರೀತಿಯಲ್ಲಿ ಮಧ್ಯಪ್ರದೇಶದ ಭೂಪಾಲ್‌ನಲ್ಲಿ ಸ್ಥಾಪಿತವಾಗಿರುವ 'ರಾಷ್ಟ್ರೀಯ ಮಾನವ ಸಂಗ್ರಹಾಲಯ' ಸ್ಮರಣೀಯವಾದುದು. ಶಿಲಾಯುಗದಿಂದ ಹಿಡಿದು, ಹರಪ್ಪ ಸಂಸ್ಕೃತಿಯ(ಲೋಥಲ್) ವರೆಗಿನ ಮಾನವ ಪ್ರಗತಿಯನ್ನು ಯಥಾವತ್ತಾಗಿ ಚಿತ್ರಿಸುವ ಅಂದರೆ ವಿಜ್ಞಾನ, ವ್ಯಾಪಾರ, ಕಲೆ, ಉದ್ಯೋಗ, ಸಾಹಿತ್ಯ, ತಂತ್ರಜ್ಞಾನ, ನಗರ ರಚನೆ, ಲಿಪಿ, ಇತ್ಯಾದಿಗಳ ಬಗ್ಗೆ ಆಯಾಯ ಕಾಲದಲ್ಲಿ ಅವನ ತಿಳುವಳಿಕೆ ಹೇಗಿತ್ತು ಎಂಬುದನ್ನು ಒಂದು ಸುಂದರ ಬಯಲು ಸಂಗ್ರಹಾಲಯದಲ್ಲಿ ಶೇಖರಿಸಲಾಗುತ್ತಿದೆ. ಇದೊಂದು ಅತ್ಯಪೂರ್ವ ಸಂಗ್ರಹಾಲಯವಾಗುವುದರಲ್ಲಿ ಅನುಮಾನವೇ ಇಲ್ಲ. ಇದೇ ಜಾಡಿನಲ್ಲಿ ಕರ್ನಾಟಕದ ಹಂಪಿಯಲ್ಲಿ ಒಂದು 'ಮಾನವ ಪ್ರಗತಿ ಸಂಗ್ರಹಾಲಯ'ವನ್ನು ಸ್ಥಾಪಿಸಬಹುದು. ನೂತನ ಶಿಲಾಯುಗದಿಂದ ಪ್ರಾರಂಭಿಸಿ ೧೧ನೇ ಶತಮಾನದವರೆಗಿನ ಮಾನವನ ಇತಿಹಾಸವನ್ನು ತಿಳಿಸುವ ಒಂದು ಬಯಲು ಸಂಗ್ರಹಾಲಯವನ್ನು ಸ್ಥಾಪಿಸುವಂತೆ ಸರ್ಕಾರವನ್ನು ಒತ್ತಾಯಿಸಬಹುದೆಂದು ತೋರುತ್ತದೆ.

ಇದೇ ಸಂದರ್ಭದಲ್ಲಿ ಪ್ರಾಚೀನ ಸ್ಮಾರಕಗಳ ಅಧ್ಯಯನ ಮತ್ತು ಸಂರಕ್ಷಣೆ ಬಗ್ಗೆ ಮಾತನಾಡಿದರೆ ತಪ್ಪಾಗಲಾರದು. ಸುಮಾರು ೩೨ ವರುಷಗಳ ಕಾಲ ರಾಷ್ಟ್ರೀಯ ಸ್ಮಾರಕಗಳನ್ನು ಜೀರ್ಣೋದ್ಧಾರಗೊಳಿಸುವ, ಸಂರಕ್ಷಿಸುವ ಒಂದು ಉದಾತ್ತ ಕಾರ್ಯದಲ್ಲಿ ಭಾಗಗೊಳ್ಳುವ ಭಾಗ್ಯ ನನ್ನದಾಗಿದೆ. ತಾಜ್ ಮಹಲ್, ಅಜಂತ, ಎಲ್ಲೋರಗಳಲ್ಲದೇ ಕರ್ನಾಟಕದ ಐಹೊಳೆ, ಪಟ್ಟದಕಲ್ಲು, ಬಾದಾಮಿ, ಲಕ್ಕುಂಡಿ, ಬನವಾಸಿ, ಶ್ರೀರಂಗಪಟ್ಟಣ, ಬೇಲೂರು. ಬಳ್ಳಿಗಾವೆ, ಕೆಳದಿಗಳಲ್ಲಿಯ ದೇವಾಲಯಗಳು, ಬಿಜಾಪುರದ ಗೋಲ್‌ಗುಂಬಜ್ ಮತ್ತು ಬೀದರ್‌ನ ಸ್ಮಾರಕಗಳ ಜೀರ್ಣೋದ್ಧಾರ ನಡೆಯುತ್ತಿರುವಾಗ ಸುಮಾರು ಸಾವಿರಕ್ಕೂ ಹೆಚ್ಚಿನ ಶಿಲ್ಪಗಳು ಬೆಳಕಿಗೆ ಬಂದವಲ್ಲದೇ ಆಗಿನ ಕಾಲದ ಕೌಶಲ, ಎಂಜನಿಯರಿಂಗ್ ತಂತ್ರ

ಪಾಂಡಿತ್ಯ ಇವುಗಳನ್ನು ಸಾಕ್ಷಾತ್ ದರ್ಶಿಸುವ ಭಾಗ್ಯ ನನ್ನದಾಯಿತು. ಭಾರತೀಯ ತಾಂತ್ರಿಕ, ವೈಜ್ಞಾನಿಕ ಮತ್ತು ಕಲೆಯ ಇತಿಹಾಸಕ್ಕೆ ಕರ್ನಾಟಕದ ಕೊಡುಗೆ ಏನು ಎಂಬುದನ್ನು ಸ್ಪಷ್ಟವಾಗಿ ಚಿತ್ರಿಸುವ ಅಧ್ಯಯನ ಇನ್ನೂ ನಡೆಯಬೇಕಾಗಿದೆ. ಇಂತಹ ಅಧ್ಯಯನಗಳನ್ನು ಉತ್ತೇಜಿಸಲು ವಿಶ್ವ ವಿದ್ಯಾಲಯಗಳು, ಇತಿಹಾಸ ಮತ್ತು ಪುರಾತತ್ವ ಸಂಸ್ಥೆಗಳು, ಎಂಜಿನಿಯರಿಂಗ್ ಮಹಾವಿದ್ಯಾಲಯಗಳು ಮುಂದೆ ಬರಬೇಕು. ಶ್ರೀರಂಗಪಟ್ಟಣ, ಬಾದಾಮಿ, ಪಟ್ಟದಕಲ್ಲು, ಲಕ್ಕುಂಡಿ, ಹಂಪಿ, ಬಿಜಾಪುರ, ಬಳ್ಳಿಗಾವೆ, ಬನವಾಸಿ, ಕೋಲಾರ, ಚಿತ್ರದುರ್ಗ, ಹರಿಹರ, ಬೆಳಗಾಂವಿ, ಇತ್ಯಾದಿ ಸ್ಮಾರಕಗಳ ಶಾಸನ, ಕಲೆ, ತಂತ್ರಜ್ಞಾನ, ಮುಂತಾದುಗಳನ್ನು ವಿಶೇಷವಾಗಿ ಗಮನದಲ್ಲಿಟ್ಟುಕೊಂಡು, ಪ್ರತ್ಯೇಕ ಮೋನೊಗ್ರಾಫ್ ಅನ್ನು ತಯಾರಿಸಬೇಕು. ಈ ಬೃಹತ್ ಕೆಲಸಗಳಿಗೆ ರಾಜ್ಯ ಮತ್ತು ಕೇಂದ್ರ ಸರ್ಕಾರ ಗಳ ಸಂಸ್ಕೃತಿ ವಿಭಾಗಗಳೂ ಮತ್ತು ಯು.ಜಿ.ಸಿ.ಯ ಸಹಾಯೂ ಕಲ್ಪಿಸಬೇಕು.

ನಾಡಿನ ಇತಿಹಾಸವನ್ನು ಅರಿಯುವಲ್ಲಿ ಸಾಧಾರಣ ಮನುಷ್ಯನಿಗೆ ನೆರವಾಗುವ ಕಲೆ ಹಾಗೂ ಸಂಸ್ಕೃತಿಯ ಮೇಲೆ ಬೆಳಕು ಹರಿಸುವ 'ಗೈಡ್ ಬುಕ್' ಅಥವಾ ಸ್ಥಳ ಕೈಪಿಡಿಗಳು ಇಲ್ಲದಿರುವುದು ಮತ್ತೊಂದು ಕೊರತೆಯಾಗಿದೆ. ಶೇಕಡ ೯೯ ಸ್ಮಾರಕಗಳಿಗೆ ಸೂಕ್ತ ಕೈಪಿಡಿಗಳೇ ಇಲ್ಲ. ಸರಿಯಾದ ತಜ್ಞರಿಂದ ಸಾಮಾನ್ಯ ಪ್ರವಾಸಿ ಜನಗಳಿಗಾಗಿ ಕರಾರುವಾಕ್ ಆದ ಮಾಹಿತಿಯನ್ನು ಸೂಕ್ತರೂಪದಲ್ಲಿ ಕನ್ನಡ ಮತ್ತಿತರ ಭಾಷೆಗಳಲ್ಲಿ ಕೊಡುವ ಕೈಪಿಡಿಗಳನ್ನು ತಯಾರಿಸಲು ಸರ್ಕಾರಿ/ಖಾಸಗಿ ಸಂಸ್ಥೆಗಳಿಗೆ ಧನಸಹಾಯವನ್ನು ಕೊಡಬಹುದಾಗಿದೆ. ಪ್ರಾಚೀನ ಸ್ಮಾರಕಗಳು, ಶಾಸನಗಳು, ತಾಡಓಲೆಗಳು, ಕಡತಗಳೇ ನಮ್ಮ ಇತಿಹಾಸಕ್ಕೆ ಮೂಲ ಆಧಾರಗಳು. ಇವುಗಳ ಸಂಗ್ರಹಣ, ಅಧ್ಯಯನ ಮತ್ತು ಉಪಯೋಗ ಮಾಡಿಕೊಳ್ಳುವುದು ಅತ್ಯವಶ್ಯಕವಾದುದರಿಂದ ಇಷ್ಟೊಂದು ಒತ್ತಿ ಹೇಳಬೇಕಾಗಿದೆ.

ಭಾರತೀಯ ಇತಿಹಾಸದ ಪ್ರಖ್ಯಾತವಾದ ಸಂಸ್ಕೃತಿ ಎಂದರೆ ಸಿಂಧು ಸಂಸ್ಕೃತಿ. ಈ ಸಂಸ್ಕೃತಿಯ ಲಿಪಿ ಯನ್ನು ಓದಲು ಸಾಧ್ಯವಾಗಿದೆ. ನಾನು ಬಿಡಿಸಿದ ಈ ಜಟಿಲ ಪ್ರಶ್ನೆಗೆ ಇತಿಹಾಸಕಾರರು ಮನ್ನಣೆ ಕೊಟ್ಟು 'ಇಂಡಿಯನ್ ಹಿಸ್ಟರಿ ಅಂಡ್ ಕಲ್ಚರ್' ಎಂಬ ಪಠ್ಯಪುಸ್ತಕವನ್ನು ಹೈಸ್ಕೂಲ್ ಹಾಗೂ ಇತರ ತರಗತಿಗಳಲ್ಲಿಟ್ಟಿದ್ದಾರೆ. ಇದು ಅತಿ ಮುಖ್ಯವಾದ ಸಾಧನೆ ಎಂದರೆ ಉತ್ಪ್ರೇಕ್ಷೆಯಾಗಲಾರದು. ಇತ್ತೀಚೆಗೆ ಸಮುದ್ರೀಯ ಪುರಾತತ್ವ ಎಂಬ ಒಂದು ನೂತನ ಅಧ್ಯಯನಕ್ಕೆ ಪ್ರಪಂಚದಲ್ಲೆಲ್ಲಾ ಗಮನ ಕೊಡಲಾಗು ತ್ತಿದ್ದು, ೧೯೮೧ರಿಂದ ಭಾರತದಲ್ಲಿ ಕೂಡ ಈ ಅಧ್ಯಯನ ಗೋವೆಯಲ್ಲಿರುವ ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಓಸಿಯಾನೋಗ್ರಫಿ (ರಾಷ್ಟ್ರೀಯ ಸಮುದ್ರೀಯ ವಿಜ್ಞಾನ) ಸಂಸ್ಥೆಯಲ್ಲಿ ನಡೆಯುತ್ತಿದೆ. ಸಮುದ್ರ ದಲ್ಲಿ ಮುಳುಗಿಹೋದ ಹಡಗು ಮತ್ತು ರೇವುಪಟ್ಟಣಗಳ ಉತ್ಖನನದಿಂದ ಇತಿಹಾಸಕ್ಕೂ ಸಮುದ್ರ ವ್ಯಾಪಾರಕ್ಕೂ ಅನೇಕ ದಾಖಲೆಗಳು ದೊರಕುತ್ತವೆ. ಉದಾ : ಮಹಾಭಾರತದಲ್ಲಿ ಉಲ್ಲೇಖಿಸಿದಂತೆ ದ್ವಾರಕಾನಗರವು ಸಮುದ್ರದಲ್ಲಿ ಮುಳುಗಿ ಹೋಗಿರುವುದು ಸತ್ಯಾಂಶ. ಊಹಾಪೋಹೆಯಲ್ಲ ಎಂದು ಈಗ ನಾವು ನಡೆಯಿಸಿದ ಉತ್ಖನನದಿಂದ ಖಚಿತವಾಗಿ ತಿಳಿಯಲ್ಪಟ್ಟಿದೆ. ಇಷ್ಟಲ್ಲದೆ ಮಹಾಭಾರತ, ಹರಿವಂಶ ಮತ್ತು ವಿಷ್ಣು ಹಾಗೂ ಭಾಗವತ ಪುರಾಣಗಳಿಂದ ತಿಳಿದುಬರುವ ದ್ವಾರಕಾನಗರದ ರಚನೆ ಉತ್ಪ್ರೇಕ್ಷೆಯಲ್ಲ ವೆಂದು ಹೇಳಬಹುದು. ಮಹಾಭಾರತ ಮತ್ತು ಹರಿವಂಶದಲ್ಲಿ ತಿಳಿಸಿದಂತೆ ದ್ವಾರಕಾನಗರಿಯನ್ನು ರಚಿಸುವ ಮುನ್ನ ಯಾದವರು ನಿರ್ಮಿಸಿದ ಕುಶಸ್ಥಲೀ ನಗರಿಯು ಕೂಡ ನಾಶವಾಗಿತ್ತು ಎಂಬ ವಿಷಯವು ಕೂಡ ಸತ್ಯವೆಂದೇ ಹೇಳಬಹುದು. ಏಕೆಂದರೆ ಬೇಟ್ ದ್ವಾರಕಾ ದ್ವೀಪದಲ್ಲಿ ಪ್ರಾಚೀನ ಅವಶೇಷಗಳು ದೊರಕಿವೆ. ಅಲ್ಲಿ ಮಹಾಭಾರತ ಕಾಲೀನ ಎಂದರೆ ಕ್ರಿ.ಪೂ. 15ನೇ ಶತಮಾನಕ್ಕೂ ಮೊದಲಿನ ಅವಶೇಷ ಗಳಿವೆ.

ಸಮುದ್ರಯಾನ, ಸಮುದ್ರ ವ್ಯಾಪಾರ, ಬಂದರು ಇತ್ಯಾದಿಗಳ ಬಗ್ಗೆ ಕರ್ನಾಟಕದ ಕೊಡುಗೆ ಏನು ಎಂಬ ಬಗ್ಗೆ ಇತಿಹಾಸಕಾರರು ತಿಳಿಸುವುದಿಲ್ಲ. ಸಮುದ್ರ ಮಾರ್ಗದ ವ್ಯಾಪಾರಿ ನಾವೆಗಳನ್ನು ನಿರ್ಮಿಸುವ ಕಲೆ ಕರ್ನಾಟಕದಲ್ಲಿ ಹಿಂದಿನಿಂದಲೂ ತಿಳಿದಿತ್ತು ಎನ್ನಲು ದಾಖಲೆಗಳಿವೆ. ಪಶ್ಚಿಮ ತೀರದ ಹೊನ್ನಾವರ, ಭಟ್ಕಳ, ಮಲ್ಪೆ, ಮಂಗಳೂರು ಮತ್ತು ಕಾರವಾರಗಳಿಂದ ಪಶ್ಚಿಮಘಟ್ಟಗಳಲ್ಲಿ ಬೆಳೆಯುತ್ತಿದ್ದ ಸಾಂಬಾರು ಪದಾರ್ಥಗಳನ್ನು, ಹಡಗು ಕಟ್ಟಲು ಉಪಯೋಗಿಸುತ್ತಿದ್ದ ತೇಗದ ಮರವನ್ನು ಪರದೇಶಗಳಿಗೆ ರಫ್ತು ಮಾಡಲಾಗುತ್ತಿತ್ತೆಂದು ಪೆರಿಪ್ಲಸ್ ಗ್ರಂಥದಿಂದಲೂ ಟಾಲಮಿ ಮತ್ತು ಅರಬ್ಬಿ ಚರಿತ್ರಕಾರರಿಂದಲೂ ತಿಳಿದುಬರುತ್ತದೆ. ಗ್ರೀಕ್ ಹಡಗೊಂದು ಮಲ್ಪೆ ಬಂದರಿನ ಹತ್ತಿರ ನಾಶವಾಯಿತೆಂದು ಆಕ್ಸಿರಿಂಖಸ್ ಪೆಪಿರೈನಲ್ಲಿರುವ ಹೇಳಿಕೆಯು ಸತ್ಯಾಸತ್ಯತೆಯ ಪರೀಕ್ಷೆಗಾಗಿ ಉದ್ಯಾವರದ ಸಮೀಪ ನಾನು ಅನ್ವೇಷಣೆ ನಡೆಸಿದ ಫಲವಾಗಿ 'ಬಾಳೆದ ಗುಡ್ಡೆ' ಎಂಬ ಪ್ರಾಚೀನ ಬಂದರು ಕೋಟೆಯ ಬಳಿ ಕ್ರಿ. ಪೂ. 3ನೇ ಶತಮಾನಕ್ಕೆ ಸೇರಿದ ಮೃತ್‌ಪಾತ್ರೆ ಇತ್ಯಾದಿಗಳು ದೊರೆತವು. ಇಲ್ಲಿಯು ಪ್ರಾಚೀನ ಬಂದರು ಮುಳುಗಿರುವ ಸಾಧ್ಯತೆಗಳಿವೆ. ಇದೇರೀತಿ ಎರಡನೇ ಪುಲಿಕೇಶಿ, ಪುರಿ (ಘಾರಾಪುರಿ)ಯ ಸಮೀಪ ಮೌರ್ಯರನ್ನು ನೌಕಾ ಯುದ್ಧದಲ್ಲಿ ಸೋಲಿಸಿದ್ದು, ಸಮುದ್ರಮಧ್ಯದ ಎಲಿಫಂಟಾ ದ್ವೀಪಗಳಲ್ಲಿ ಕ್ರಿ.ಶ. ೧-೨ ರಿಂದ ೬-೭ನೇ ಶತಮಾನದವರೆಗಿನ ಬಂದರಿನ, ನಗರದ ಅವಶೇಷಗಳು ಸಿಗುತ್ತವೆ. ಅವುಗಳ ಉತ್ಖನನ, ಅಧ್ಯಯನ ದಿಂದ ಚಾಲುಕ್ಯರ ಕಾಲದ ನಗರ, ನೌಕಾಪಡೆ, ಇತ್ಯಾದಿಗಳ ಮೇಲೆ ಬೆಳಕು ಬೀಳುವ ಸಾಧ್ಯತೆ ಇದೆ.

ಕಾರವಾರ ಮತ್ತು ಹೊನ್ನಾವರದ ಸಮೀಪ ಮುಳುಗಿದ ಹಡಗಿನ ಅವಶೇಷಗಳು ಸಿಗುವುದಕ್ಕೆ ದಾಖಲೆ ಗಳಿವೆ. ಹೊನ್ನಾವರ ಕದಂಬರ ಕಾಲದ ಪ್ರಮುಖ ಬಂದರಾಗಿತ್ತು. ವಿಜಯನಗರದ ಅರಸರ ಕಾಲದ, ಟಿಪ್ಪು ಸುಲ್ತಾನ್, ಬಿಜಾಪುರದ ಸುಲ್ತಾನರು, ಕೆಳದಿ ಅರಸರು, ಪೋರ್ಚುಗೀಸರು ಮತ್ತು ಬ್ರಿಟಿಷರ ಕಾಲದ ಹಡಗುಗಳು ಮಂಗಳೂರು, ಹೊನ್ನಾವರ, ಭಟ್ಕಳ ಮುಂತಾದ ಕಡೆಗಳಲ್ಲಿ ಮುಳುಗಿರುವುದಕ್ಕೆ ಹಳೆಯ ದಾಖಲೆಗಳಲ್ಲಿ ನಮಗೆ ಪುಷ್ಟಿ ಸಿಗುತ್ತದೆ. ಕೆಳದಿ ಅರಸರು ಪೋರ್ಚುಗೀಸರ ಸುಗ್ರೀವಾಜ್ಞೆಗೆ ಒಳಗಾಗದೇ ಸಮುದ್ರ ವ್ಯಾಪಾರದ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು ಬಂದಿದ್ದರೆಂದು ತಿಳಿಸುವ ದಾಖಲೆಗಳು ಸಿಕ್ಕಿವೆ. ಶಾತವಾಹನರು, ಶಿಲಾಹಾರರು ಕೂಡ ಪ್ರಖ್ಯಾತ ನೌಕಾಬಲವನ್ನು ಹೊಂದಿದ್ದರು. ಆ ಕಾಲದ ಸಮುದ್ರ ವ್ಯಾಪಾರದ ಬಗ್ಗೆ ಕೂಡ ಅಧ್ಯಯನ ನಡೆಯಬೇಕಾಗಿದೆ.

ಇದೇ ರೀತಿ ಗಣಿ ಮತ್ತು ಅದಿರುಗಳ ಬಗ್ಗೆ ಕರ್ನಾಟಕದ ಕೊಡುಗೆ ಎಂತಹದು ಎಂಬುದರ ಬಗ್ಗೆ ಕೂಡ ಅಧ್ಯಯನ ಶಾಸ್ತ್ರೀಯವಾಗಿ ನಡೆಯಬೇಕಾಗಿದೆ. ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಬಳ್ಳಾರಿಯ ನಿಟ್ಟೂರು, ರಾಯಚೂರು ಜಿಲ್ಲೆಯ ಮಾಸ್ಕಿ, ಗುಲ್ಬರ್ಗ ಜಿಲ್ಲೆಯ ಸನ್ನತಿಗಳಲ್ಲಿ ಅಶೋಕನ ಕಾಲದ ಶಾಸನಗಳು ದೊರೆತಿವೆ. ಚಿತ್ರದುರ್ಗ ನಗರದ ಸಮೀಪ ತಾಮ್ರದ ಗಣಿಗಳಿದ್ದು, ತಾಮ್ರ ವ್ಯಾಪಾರದಿಂದ ನಗರವೂ ಪ್ರಸಿದ್ಧವಾಗಿರಬೇಕು. ಇಲ್ಲಿ ನಾನು ನಡೆಸಿದ ಉತ್ಖನನದಲ್ಲಿ ಕ್ರಿ.ಶ. ೧-೨ ಶತಮಾನಕ್ಕೆ ಸೇರಿದ ತಾಮ್ರವನ್ನು ಶುದ್ಧೀಕರಿಸುವ ಭಟ್ಟಿಗಳು ದೊರೆತಿವೆ. ಇದೇ ರೀತಿ ಹಾಸನದ ಸಮೀಪ ಕಲ್ಯಾಡಿಯಲ್ಲಿ ಕೂಡ ತಾಮ್ರದ ಭಟ್ಟಿಗಳ ಅವಶೇಷ ದೊರೆತಿವೆ. ಹಂಪಿಯ ಸಮೀಪದ ಬೂದಿಹಾಳದಲ್ಲಿಯ ದಿಣ್ಣೆಗಳು ಕೂಡ ಕಬ್ಬಿಣವನ್ನು ಕರಗಿಸುವ ಸ್ಥಳಗಳೆಂದು ಕೆಲವು ತಜ್ಞರ ಅಭಿಪ್ರಾಯ. ಇದೇರೀತಿ ಗಟ್ಟಿ ಹೊಸ ಹಳ್ಳಿಯ ಉಕ್ಕು, ಕೋಲಾರದ ಚಿನ್ನ, ಲಕ್ಕುಂಡಿಯ ಬೆಳ್ಳಿ ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾಗಿತ್ತು. ಆದರೆ ಶುದ್ಧ ಮತ್ತು ಮಿಶ್ರಲೋಹಗಳ ತಯಾರಿಕೆಯ ತಂತ್ರಜ್ಞಾನದ ಇತಿಹಾಸ ನಮಗಿನ್ನು ತಿಳಿದು ಬಂದಿಲ್ಲ. ಈ ಸ್ಥಳಗಳಲ್ಲಿ ದೊರಕುವ ಐತಿಹಾಸಿಕ ಸಾಮಗ್ರಿಗಳ ಸರಿಯಾದ ಅಧ್ಯಯನ ನಡೆದಲ್ಲಿ ಇನ್ನೂ ಅನೇಕ ವಿಷಯಗಳ ಮೇಲೆ ಬೆಳಕು ಬೀಳುವ ಸಾಧ್ಯತೆ ಇದೆ.

ಕರ್ನಾಟಕಕ್ಕೆ ಎರಡನೆಯ ಪುರಾತತ್ವ ವಿಭಾಗವನ್ನು (ಸೆಕೆಂಡ್ ಆರ್ಕಿಯಾಲಾಜಿಕಲ್ ಸರ್ಕಲ್) ಧಾರವಾಡದಲ್ಲಿ ಆದಷ್ಟು ಬೇಗನೆ ಸ್ಥಾಪಿಸುವಂತೆ ರಾಜ್ಯ ಸರ್ಕಾರ ಕೇಂದ್ರ ಸರ್ಕಾರವನ್ನು ಒತ್ತಾಯ ಪಡಿಸುವುದು ಅತ್ಯವಶ್ಯಕ. ಏಕೆಂದರೆ ಗುಲ್ಬರ್ಗ, ರಾಯಚೂರು ಮತ್ತು ಬೀದರ್ ಜಿಲ್ಲೆಗಳಲ್ಲಿರುವ ಸ್ಮಾರಕಗಳ ಜೀರ್ಣೋದ್ಧಾರವನ್ನು ಬೇರೆ ವಿಭಾಗದಿಂದ ನಡೆಯಿಸಲು ಸಾಧ್ಯವಾಗಿಲ್ಲ. ೧೯೭೫ರಲ್ಲಿ ಕರ್ನಾಟಕದ ಕೇಂದ್ರ ಪುರಾತತ್ವ ಶಾಖೆಯನ್ನು ಬೆಂಗಳೂರಿನಲ್ಲಿ ಸ್ಥಾಪಿಸುವಾಗ ಈ ವಿಷಯವನ್ನು ನಾನು ಕೇಂದ್ರ ಸರ್ಕಾರದ ಗಮನಕ್ಕೆ ತಂದಿದ್ದೆ. ಆದರೆ ಮೊದಲೇ ನಿರ್ಧರಿಸಿದ್ದಂತೆ ಮೇಲ್ಕಂಡ ಮೂರು ಜಿಲ್ಲೆಗಳ ಸ್ಮಾರಕಗಳು ಹೈದರಾಬಾದ್ ಸರ್ಕಲ್‌ಗೆ ಸೇರಿಸಲ್ಪಟ್ಟವು. ಇವುಗಳನ್ನು ಕರ್ನಾಟಕದ ಎರಡನೇಯ ಸರ್ಕಲ್‌ಗೆ ಸೇರಿಸಿ ಧಾರವಾಡ, ಬೆಳಗಾವಿ, ವಿಜಾಪುರ, ರಾಯಚೂರು ಮತ್ತು ಬೀದರ್ ಜಿಲ್ಲೆಗಳ ಐತಿಹಾಸಿಕ ಸ್ಮಾರಕಗಳ ಜೀರ್ಣೋದ್ಧಾರಕ್ಕೂ ಮತ್ತು ಪ್ರವಾಸೋದ್ಯಮ ಅಭಿವೃದ್ಧಿಗಾಗಿಯೂ ರಾಜ್ಯ ಸರ್ಕಾರ ಪ್ರಯತ್ನಿಸುವುದೆಂದು ನನಗೆ ಭರವಸೆ ಇದೆ. ಇದೇ ಸಂದರ್ಭದಲ್ಲಿ ಬನವಾಸಿ ಮೊದಲಾದ ಮಲೆನಾಡು ಪ್ರದೇಶಗಳಲ್ಲಿರುವ ರಾಜ್ಯ ಮತ್ತು ಕೇಂದ್ರ ಸ್ಮಾರಕಗಳ ರಕ್ಷಣೆಗೆ ಹೆಚ್ಚು ಗಮನ ಕೊಡಬೇಕು. ಕೇಂದ್ರದ ಬೆಂಗಳೂರಿನಲ್ಲಿರುವ ಪುರಾತತ್ವ ಶಾಖೆಯು ಕೆಳದಿ-ಇಕ್ಕೇರಿ ದೇವಾಲಯಗಳ ಜೀರ್ಣೋದ್ಧಾರ ಕೈಗೊಂಡಿರುವುದು ಶ್ಲಾಘನೀಯವಾಗಿದೆ. ಭಟ್ಕಳದಲ್ಲಿರುವ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸುವ ಯೋಜನೆಯೊಂದು ಕಾರ್ಯರೂಪಕ್ಕೆ ಬರುವಂತೆ ಮಾಡುವುದು ಅವಶ್ಯಕ.

ಒಟ್ಟಿನಲ್ಲಿ ಹೇಳುವುದಾದರೆ, ಇತಿಹಾಸವನ್ನು ವಿಶಾಲದೃಷ್ಟಿಯಿಂದ ನೋಡಿ ಕಲೆ, ತಂತ್ರಜ್ಞಾನ, ವಿಜ್ಞಾನ, ತತ್ವ, ಸಾಹಿತ್ಯ ಇವೇ ಮೊದಲಾದವುಗಳಿಗೆ ರಾಜಕೀಯ ವಿಷಯದಷ್ಟೇ ಪ್ರಾಮುಖ್ಯತೆಯನ್ನು ಕೊಟ್ಟು ಇತಿಹಾಸವು ಜನಾಂಗಗಳ ಅಭಿವೃದ್ಧಿಗೆ ಸಹಾಯಕಾರಿಯಾಗುವಂತೆ ಮಾಡಬೇಕು. ಹೀಗೆ ಮಾಡಲು ಮತ್ತು ಸತ್ಯಾಂಶಗಳು ಹೊರಬೀಳಬೇಕಾದರೆ ಎಲ್ಲಾ ತರಹೆಯ ಐತಿಹಾಸಿಕ ಆಧಾರಗಳ ಸಂಗ್ರಹಣೆ, ಅಧ್ಯಯನ ಮತ್ತು ಪ್ರಕಾಶನ ಅವಶ್ಯಕ.

# Summaries of Articles

## Antiquities of Jattingarameshwara : An Analysis

**Dr. A. Sundara**

The site in Molakalmuru tq. where Rice had located an Ashokan edict in 1884 has many antiquities of importance. M. H. Krishna in 1930 located a Ganesh shrine at the foot of the hill, and the Jattinga Rameshwara temple and also temples of Ganapati, Pampapathi, Veerabhadra, Janardana, Surya, Jambukeshwara, Arkeshwara, Chandikeshwara, etc. and some epigraphs on the hill. I discovered in 1978 a line drawing resembling a deer on a rock near the Ganesha shrine and some pre-historic pottery pieces near the Ashokan edicts. The place has been identified as a Neolithic site dating back to 2000 to 800 B.C., and it could have been a major neolithic centre like Inamagon near Pune. The place might have been inhabited by people who worshipped huge birds, and thus was called as the place of Jatayu of Ramayana fame. Near the stone burials of the place huge figures of stone slabs resembling humans or birds are engraved. They are also seen at Aihole, Hirebenakal, and in Andhra Pradesh. These figures look like human figures, trying to fly with their arms stretched. These have been clearly identified as of birds. About 120 km. away from Jattinga Rameshwar, at Hirebenakal one such figure is clearly seen. Thus, the sites of Jattingarameshwara, Brahmagiri, Sanganakallu, Maski, Tekkalakota, Hirebenakal, etc. indicate that during the pre-Ashokan times there were sufficiently flourishing urban Neolithic and Megalithic sites with people leading civilized life with noble values. There is no room for doubt that the region round Hampi and Jattingarameshwara, there lived people associating themselves with the traditions of Ramayana. Though Jattingarameshwara is to the south of Hampi (Kishkindha), people from the north of Hampi connected with Jatayu tradition might have migrated to this place to the south of Hampi.

## A Note on some Roman Antiquities at Banavasi

**Dr. H. R. Raghunath Bhat**

The excavations at Banavasi in 1970-71 unearthed russet-coated kaolin

painted pottery and pieces of rouletted pottery, patterned on Roman pottery. The discovery of these in a Shatávahana site was very meaningful. A mould to produce coins (pendants) in imitation of Roman ones was unearthed in 1975-76 by M. C. Wodeyar. The mould was used for producing Roman dinars locally to help people have necklaces of the dinars. This could be possible only when local people knew and liked Roman gold coins. Not far away from Banavasi, at Akki Alur Roman coins dating from the second century to the sixth century have been found. At nearby Hulekal in Sirsi tq. too and also at Vadgaon-Madhavpur in the neighbouring Belgaum dt. Roman coins including dinars have been unearthed.

Inside Banavasi fort, the remains of a Roman 'Cameo' was located. It is a small semi-precious stone with two layers in oval shape, and such items were got engraved by Emperor Augustus in Chalcidoni. The Banavasi Cameo has the figure of Roman VIP in profile, wearing a Roman galea, and decorated chest band. The art work is highly realistic and artistic. Banavasi's close connections with Rome is proved beyond doubt, and more evidence may come to light to support this.

## Invocatory Shlokas in Kadamba Inscriptions

**Dr. Mandakini Purohit**

The Kadambas founded an independent indigenous kingdom and the founder earnestly followed the Vedic religion and he was well conversant in the study of the Vedas. Amongst the inscriptions of the Kadambas in some, the invocatary *shlokas* start with the word *siddham*, e.g : Kudigeri inscription of Shiva Mandhatavarma or the copper plate of Mrigesh Varma's second year of rule or the copper plate of Harivarma of his fourth year of rule. Some begin with the word as in the case of the Halsi *Swasti* or the copper plates written during the fifth year of rule of Harivarma, and the one of Vijaya Shiva Mrigeshavarma of his eighth year of rule.

The invocation *shlokas* reflect the religious conditions of those days. God Shiva and Vishnu are praised in Talgunda inscription of Kakusta and Halmidi inscriptions respectively. God Vishnu is invoked in the Banavasi pillar inscription of Mrigeshavarma, the copper plate of Krishnavarma II at Banahalli, inscription of Bhogivarma at Tageri, inscription of Herbat of the fifth year of rule of Vishnuvarma.

God Brahma is praised in inscriptions of Vijaya Shiva Mrigeshavarma. The Trimurtis are praised in the copper plate of Birur of Vishnuvarma. God *Manmatha* is also praised in inscription of Ravivarma's Gudnapur record.

Buddha is praised in the copper plate of Devagiri of Ravivarma. Jina Stuti is found in the copper plate at Ravivarma. These two copper plates give ample information about Jainism.

The Kadambas who followed Vedic religion also encouraged Jainism and

Buddhism. These invocatory *slokas* on Shiva, Vishnu, Brahma, Jaina or Buddha gives us an idea of the tolerant attitude of the State.

## Some recent inscriptions of the Chalukyas of Badami

**N. Havalaiah**

In recent years some inscriptions of the Chalukyas of Badami have been published. But most of them are fragmentary and hence they have not attracted the attention of the historians. It is attempted in this paper to comment on some of them.

The first inscription is the Devageri inscription of Vikramaditya I, assignable to 6th Century A.D. on palaeographical grounds. It mentions a subordinate Kalisinda, obviously of the Sinda family. This is the earliest reference to a member of the Sinda family discovered so far. The second inscription is from Bannikopa of the 8th Century, and it refers to a person from Uttarapatha giving a grant to Arjunesvara temple. This throws light on the people migrating from North India and also on an early temple for Arjunesvara. The Halavaddageri inscription, also of the 8th Century mentions a feudatory by name Sirisagara. Most probably he was an Alupa prince and when he tried to become independent, the Chalukya king sent a force against him.

The other inscriptions from Devageri refer to a subordinate Erincholarasa. From the name he has to be identified as a Chola from Renadu. The Siruguppa inscription mentions two chiefs Vanasatti and Kundasatti. From their names the former can be identified with Bhanusatti of the Sendraka family. This inscription for the first time mentions, the fact that he had a son by name Kundasatti or Kundashakti. He was also a feudatory of the Chalukyas of Badami. The epigraph also mentions his queen Vakkatakanadevi, who perhaps belonged to the Vakataka family. This relationship is highly interesting. Thus these inscriptions throw important light on the political history of the Chalukyas of Badami.

## Two inscriptions from Somanathapur

**M. P. Mahadeviah**

The two inscriptions from Somanathapura belonging to the time of Hoysala King Narasimha III dated 1269 and 1276 A. D. are very important for understanding the economic and social life of the Hoysala period. These two inscriptions furnish information on the following aspects which have been discussed in this paper. 1) Agricultural land such as *thota, gadde, beddalu* etc. 2) Taxes and revenue like Suvarnadaya, Siddhaya, 3) Coin terms like Gadyana, Hana, Haga and Bele, 4) Food items like ghee, rice, curds, salt, pepper, jaggery, etc.,

5) Cloth-*sire*, silk, etc., and 6) Employees of the temple and their salaries and the festivals and special rituals. Thus the two inscriptions throw good light on some of economic aspects including the prices and wages of the times.

## Inscribed Tirthankara Images from Gundabala

Ganapati Gauda

About 19 km. from Honavar is the village Gundabala (Uttara Kannada District). Inscriptions, temple ruins, sculptures and herostones in this place are live testimony of the fact that Gundabala was a politico-cultural centre of considerable importance during 10th-14th centuries A. D. It is called *Rajadhani* Vijayapura in an inscription of the place.

As a part of the field study of my M. Phil. course, I happened to visit this place along with my guide Dr. S. V. Padigar, when a couple of new short inscriptions came to our notice while examining the Tirthankara images in the Jaina Basadi of the place. They are of significance for studying 1) Sculptural style and 2) Royal patronage to Jainism in the region.

Both the images are of seated Tirthankaras and it is difficult to identify them in the absence of necessary iconographic details, such as Yaksha, Yakshi, *lanchhana*, etc. Physical details of the images like broad shoulders and their overall proportion to remaining parts of the body and the decorative pattern of *prabhavali* etc. should make one assign them to a period of transition from the Rashtrakuta to the Kalyana Chalukya art style. But the inscriptions on their pedestals would place them in the 40s of the 12th century A.D.

The three-line inscription on the first image informs that the image was got installed by Mallideva, son of Nagaladevi who was the daughter of Haivaladevi. The last mentioned is stated to be the disciple of Charukirti Siddhantideva of Soorasthagana of Mulasamgha. We know from other inscriptions that this Mallideva was the great grandson of Kamadeva II of the Pandya family of Sisugali. Description of Haivaladevi, the daughter of Kama II, as the *guddi* (lay disciple) of a Jaina muni is interesting because it suggests royal patronage to Jainism. The sculptural style, on the other hand, implies that in this region artists continued to retain earlier style for longer period than elsewhere. The other Tirthankara image bears a single-line inscription mentioning the Megha Pashana gachchha of Kanurgana of the Mulasamgha. Thus the inscriptions show that both Soorasthagana and Kanurgana, branches of the Mulasamgha had their hold in this region during 12th century A.D.

